ದುಷ್ಟಮಾತ್ಮನಾ' (೬೪–ವ). (37) ಇಂಗಡಲ್ಗ ಮರ್ದಿಸೊಡನೆ ವಿಷಮುದಯಿಪಂದ ದಿಂದಂ (೬೪–೧೫). (38) ಜನಿಯಿಸಲಾರ್ಕರ್ಗಮೆ ಸಿಡಿಲದು ಘನಸಂಭವಮೆನಿಸಿ ಹರ್ಷಮಂ ವರ್ಷದವೋಲ್ (೬೪–೧೬). (39) ವನಮಂ ಸುಡುವಗ್ನಿಗೆ ವಾಯು ನಂಟ (೬೫–೨೩). (40) ಮನೆಯೊಳಗಣ ಪಾವಂ ನೆಟ್ಟನೆ ಕಳೆವಂತೆ (೬೮–೪೨). (41) ಮಿಟ್ತುವನಱಿಸಿಯೆ ಪೋಪ ತೆಱನಂತೆ (೬೮–೪೩). (42) ಅರಸಿ ತಿಂಬ ದೈವಕ್ಕೆ ಪೋಗಿ ಪಾಲಂ ಬಿಡುವಂತೆ (೬೯–೪೪). (43) ಶುನಕಂ ಕೂರ್ತುಂ ಮುಳಿದುಮುಪಕಾರಮಂ ನೆಕ್ಕಿ ಕರ್ಚಿ ಮಾಡದುದುಂಟೇ ? (೬೯–೪೭). (44) ಅತಿಮೋಹಂ ಗತಿಯಂ ಕರಂ ಕಿಡಿಕುಂ (೬೯–೪೮). (45) ಪೊಡೆವಡಲ್ ಪೋಗೆ ದೇಗುಲಂ ಮೇಲೆ ಕೆಡೆದುದೆಂಬಂತೆ (೭೦–ವ). (46) ಭಸ್ಮಾಂತರಿತ ಹುತಾಶನಂಬೊಲ್ (೭೦–೫೪). (47) ಬೇವಿನಮರನಂ ಕೈಪೆಸೊರೆ ಪೊರ್ದುರ್ವಂತೆ (೭೧–ವ). (48) ತಾನಱಿಸಿಪೋಗಲಿರ್ಪ ನಿಧಾನಮೆತನ ಗಿದಿರ್ಗೆವಂದುದು (೭೪–೭೮). (49) ಅಭೋಜ್ಯಮಂ ಸಚ್ಚರಿತಂ ಪರಿಹರಿಪಂತೆ (೭೬–ವ). (50) ರಾಜ್ಯಾಂತಂ ನರಕಂ (೭೬–೯೧). (51) ಮಂತ್ರಸಿದ್ಧಂ ಪಿಡಿದ ಮಹಾಮುದ್ರೆಯಂ ಕಂಡು ದುಷ್ಟಗ್ರಹಮೂದಂ ಶಾಂತಿಯಂ ತಾಳ್ದುವ ತೆಱದೆ (೮೪–೧೪೮). (52) ರವಿ ರುಚಿಯಿಂದೆ ಬೆಂದಚಳಮಾಗಳೆ ನೀಳ ಘನಂಗಳಿಂದಮೂಱುಮವೋಲ್ (೮೪–೧೪೯). (53) ಅವಿವೇಕಮೆ ಸುಖಘಾತಕಂ ಅಱಿವೊಂದೆ ದೇಹಿಗಪ್ಪುದು ಸುಖದಂ (೮೫–೧೫೩). (54) ಸಜ್ಜನರ್ಗನುಚಿತವರ್ತನಮೆ ಲಜ್ಜೆಯಂ ಮಾಟ್ಪುದೆ ದಲ್ (೮೫–೧೫೫). (55) ಪೋದ ತೊರೆಯಂ ಪಿಂದಕ್ಕಟ್ಟುವರೆ (೮೫–೧೫೬). (56) ಉಣಕಲ್ತ್ತಲ್ಲಿಯೆ ಹಸಿವಾದುದು (೮೬–೪). (57) ಕರ್ಪೂರಂ ಸತತಂ ತೈಲದೊಳೆ ಕೂಡೆ ವಿಷಮೆನಿಸುವವೋಲ್ (೯೦–೨೨). (58) 'ಗುರುತ್ವಾದಧಃಪಾತ' (೯೪–ವ). (59) ಸುವರ್ಣಕಗ್ನಿ ಸಂಯೋಗ ವರ್ಣೋತ್ಕರ್ಷಮಂ ಪಡೆವಂತೆ (೯೪–ವ). (60) ಚಂದ್ರಮನಂ ತಮಂ ಪೀಡಿಪಂತಿರೆ (೯೪–೪೮). (61) 'ಯದ್ಭಾವ್ಯಂ ತದ್ಭವತಿ' (೧೦೫–೭). (62) ನಚ್ಚಿನೆರ್ಮೆಕೋಣನ ನೀಂದತ್ತೆಂಬವೊಲ್ (೧೧೦–೪೩). (63) ಪರಿಪಕ್ವಕ್ಷೇತ್ರಮನುಟಿದರಣ್ಯಮಂ ಉಟುವ ಮರುಳಂತೆ (೧೧೧–೪೫). (64) ಮೃಗತೃಷ್ಣಿಕೆಯಂ ನೀರೆಂದತಿತೃಷಿತನೀಂಟುವಂತೆ (೧೧೧–೫೦). (65) 'ಪರಿಚ್ಛೇದೋಹಿ ಪಾಂಡಿತ್ಯ' (೧೧೩–೫೮), (66) ಕನಕಂ ಶಿಖಿಯೋಗಮದೆನಿತನಿತನೆ ನಿರ್ಮಳಿನ ವೃತ್ತಿಯಂ ತಾಳ್ವುವವೋಲ್ (೧೩೨–೧೬). (67) ಘೋರತಮಮಾದೊಡಂ ಮಾರ್ಜಾರಂ ಕಾಣ್ಬುಂದದಿಂದೆ (೧೧೫–೭೭). (68) ಬಿಣ್ಣುಂಡನಿಕ್ಕಿದ ಚೈತ್ರಕ್ಕೆಣೆಯಾಗಿ (೧೨೭–೩೯). (69) "ಯಸ್ಯಾಶ್ವಸ್ತಸ್ಯಮೇದಿನಿ" (೧೨೯–೪೯). (70) ಬೇಡಿದ ಕಾಡೊಳ್ ಮಱಿಕೊಂಡುದೆಂಬ ತೆಱದಿಂ (೧೩೩–೭೩). (71) ಸಹಕಾರ ಭೂರುಹಕ್ಕೆ ಮಧುಸಮುಯಪವನಸಂಸ್ಪರ್ಶದಂತೆ (೧೩೮–ವ). (72) ಜಡಹೃದಯರನಾಶ್ರಯಿಸಿದೊರ್ಡೆ ಮೂಲೋಚ್ಛಿತ್ತಿಯಪ್ಪುದು (೧೪೨–೧೮). (73) ವಿನುತಾಚರಣಯುತರ್ಮಳಿನಹೃದಯರಂ ಪೊರ್ದುರ್ವರೇ (೧೪೨–೧೯). (74) ಗುಣ ಸಮನ್ವಿತಮುಪುತ್ತಮಜಾತಿಯನಾರಾದೊಡಮಾದರಿಸುವರೆಂಬುದಂ ಪ್ರಕಟಿಸುವಂತೆ (೧೪೪–ವ). (75) ದೀಪವರ್ತಿ ನಿಧಿಗೆಱಗುವವೋಲ್ (೧೪೭–೪೭). (76) ಕೆಱೆಯ ನಗಟ್ಟಿಡೆ ಕೊರಡಂ ಕಡಿಯಲ್ಪೇಟ್ಕುಮೆ? (೧೫೪-೯೮). (77) ಒಪ್ಪುವ ಪತಿಯ ಹಾನಿ ವೃದ್ಧಿಯೆ ಯುವತಿಯರೊಳಮಕ್ಕುಮೆಂಬುದದು ತಕ್ಕುದೆ ದಲ್ (೧೫೫–೧೦೮). (78)

ಕಾಂತರಬರವಾರ್ಗೆ ಹರ್ಷಮಂ ಪುಟ್ಟಿಸದೋ (೧೬೯-೬೫). (79) ಕುಜಾತಕುಲದ ಲಕ್ಷ್ಮಿ ಬಳೆವುದೇಂ ವಿಸ್ಮಯಮೋ? (80) ಸಶಂಕಿತರಲ್ತೆ ದೋಷಿಗಳ್ (ಪು. ೧೮೪-ಪ. ೧೯). (81) ಆಶೆಯನುಳಿದಂದುತ್ತಮರ್ಗೆ ಅಖಿಳಕಳಾಸಂಪತ್ತಿಯುಮತಿ ವಿಶದಮೆಂದಱಿಪುವವೋಲ್ (೧೮೪-೨೪). (82) "ರಾಜಾಸನ್ನಃ ಕೋನಾಮ ಸಾಧು" (೧೮೬-೩೬). (83) ಸಂಸರ್ಗಜಾ ದೋಷ ಗುಣಾ ಭವಂತಿ (೧೯೦-ವ). (84) ಮೊಲದ ಜವ್ವನಂ ಗಿಡುವಿನೊಳಳ್ಕಾಡುವವೊಲ್ (೧೯೦-೫೯). (85) ಪೂವಿಲ್ಲದೆಯುಂ ಪಲಸು ಫಳಾವಳಿಯಂ ತಳೆವ ತೆಱದೆ (೧೯೦-೬೧). (86) ಪುಣ್ಣಿಲ್ಲದೆಯುಂ ಪೂವಿಲ್ಲನ ಶರಹತಿಯಿಂ ನೋವನೆ ತಳೆದಪುದೆನ್ನ ಹೃದಯಂ (೧೯೦-೬೧). (87) ವಿಷಸಂಗಮದಿಂ ಪಾಲುಂ ವಿಷಮಪ್ಪವೊಲ್ (೧೯೧-೬). (88) ಅಯಃ ಪಟಃ ಸಂವೃತಮೇವ ಶೋಭತೇ (೧೯೨-ಗ). (89) ಅರ್ಥಿಗೆ ನೆನೆದರ್ಥದಿನಧಿಕಮಿತ್ತ ದಾನಿಯ ತೆಱದಿಂ (೨೦೭-೩೩). (90) ಮದಾಂಧಸಿಂಧುರಕ್ಕೆ ಕಿಡಿಯಂ ತೋರಿದಂತೆ (೨೧೩-ಗ). (91) ಬಲ್ಲಿದನೊಳೆಡರುವುದು ನಯಮಲ್ಲ (೨೧೩-೭೨). (92) "ಸಹೇಂದ್ರಾಯ ತಕ್ಷಕಾಯ" (೨೧೬-ಗ). (93) ಅಂಬು ತಪ್ಪಿತಭಿವಾದೆಯೆನಿಪ್ಪೀಡೊಂಬ (೨೧೬-೯೦). (94) ಬಡವಂ ಪೆತ್ತ ಧನಂಬೊಲಿರ್ದ (೨೧೬-೯೨). (95) "ಸ್ವಸಾಧ್ಯಂ ಪ್ರಸಾಧ್ಯಾತ್ರಿತೋಽಪಿ ದೋಷಾಭಾವ (೨೨೦-ಗ). (96) ಅರ್ಥಸಂವರಣೆಯನರ್ಥಮಂ ಪಡೆಗುಮಲ್ಲದೆ ಸೌಖ್ಯಮನೀಯಲಾರ್ಕುಮೇ? (೨೩೦-೪೦). (97) "ಯಥಾರಾಜಾತಥಾಪ್ರಜಾ (೨೩೨-೫೧). (98) ಮುಳ್ಕರದ ಕೆಲದ ಮೂಲತಿ (೨೩೪-೬೭). (99) ಮೂರ್ಖನ ಕೆಯ್ಯ ರತ್ನ (೨೩೪-೬೭). (100) ಮುತ್ತುಂ ಮೆಣಸುಂ ಪೆಡೆವಣಿಯುಂ ಫಣಿಯುಂ ಇರ್ದ ತೆಱದಿಂ (೨೩೫-ಗ). (101) ಗಿಡುವಿಂದಂ ತೊಲಗಿದಲರ್ಪಡೆದು ಗುಣಮನುತ್ತಮಾಂಗದೊಳ್ ಸೊಗಯಿಪವೋಲ್ (೨೩೮-೯೦). (102) ಸುಜನಸಂಸರ್ಗಮಾರ್ಗೆಮಾಡದೊ ಸುಖಮಂ (೨೪೪-೩೧). (103) ಧರ್ಮಾರ್ಥಕಾಮಫಳಾಯ ರಾಜ್ಯಾಯ ನಮಃ (೨೪೫-ವ). (104) ತನ್ನಯ ಮೊಗಮಂ ನೋಡಲ್ ತನ್ನಯೆ ಕಣ್ ನಾಚಿದಪ್ಪುದು (೨೪೫-೪೧). (105) "ಅನುಕೂಲರಸಾ ಭಾರ್ಯಾ" (೨೪೬-೪೪). (106) ಪೂಜ್ಯಪದರನಾರಾಧಿಪಜನಕ್ಕೆ ಪೂಜ್ಯತೆಯರಿದೇ (೨೭೯-೧೦). (107) ಸ್ವಸಾಧ್ಯ ಪ್ರಸಾದ್ಯ ನೃತ್ಯತಾಪ್ಯದೋಷಾ (೨೮೫-ವ). (108) ಉಮಿಗುಟ್ಟಿ ಕಯ್ಪುಗುಳನಾಂತುದು (೨೮೯-೧೯). (109) ಸಸಿಯುಂ ಬಿಸುಟ್ಟು ಬೆಳೆಯಿಸಿ ಕಸಮಂ ಸತ್ಫಳಮನರಸುವವನೆಸಕಂ (೨೮೯-೨೦). (110) ತಪದೊಳಱಿವೆಯುಳ್ಳೊಡೆ ದೋಷಂ (೨೮೯-೨೩). (111) ಈ ಕೈನೀರೆ ಸಂಸಾರವಲ್ಲಿಗೆ ಪೊಯ್ನೀರೆನಿಸಿರ್ಕುಂ. (112) ತೃಷೆಯಿಲ್ಲದೊಡುದಕಮೊಳ್ಳಿತೆನೆ ಕುಡಿದಪರೇ (೨೯೭-೬೭). (113) ಒರ್ವನ ಪುಣ್ಯದ ಫಲಮಂ ಪಲರನುಭವಿಸುವರ್ (೩೦೨-೯). (114) ಅತ್ಯುತ್ಕಟೈಃ ಪುಣ್ಯಪಾಪೈರಿವ ಫಲಮಸ್ನುತೇ (೩೦೩-ಗ). (115) ಅಪಸ್ಮಾರಮನೂನ ವಾರಿಯನೆ ಕಂಡು ಕೆರಳ್ವವೊಲ್ (೩೦೩-೧೦೩). (116) ಕೇಡಡಸುವರ್ಗಕ್ಕುಂ ಪ್ರಕೃತಿ ವಿಕೃತಿ (೩೦೩-೧೦೫). (117) ಆತನ ಕೋಪವಹ್ನಿಯಾತನನೆ ಕರುತ್ತು ಸುಟ್ಟುದು (೩೦೬-೧೨೬).

## ಈ ಗ್ರಂಥದಲ್ಲಿ ಕವಿಯು ಪ್ರಯೋಗಿಸಿರುವ ಕೆಲವು ಅಪೂರ್ವ ಶಬ್ದಗಳನ್ನು ಈ ಕೆಳಗೆ ಕೊಟ್ಟಿದೆ.

(1) ತೂಳ್ದು (ಪು. ೨-ಪ. ೭). (2) ಅಳುರ್ಕೆ (೩-೧೪). (3) ಜಾವಳಿಗೆ (೫-೩೩). (4) ಉಪ್ಪರವಟ್ಟೆ (೧೭-೧೨೪). (5) ಮಮ್ಗಿ (೧೯-೬). (6) ತೂಂತು (೨೧-೧೯). (7) ಒಡ್ಡಣ (೨೨-೨೪). (8) ಅಡ್ಡಣ (೨೨-೨೪). (9) ಬಂಬಲ್ (೨೨-೨೪). (10) ಬೆಸರ್ಪೆ (೨೮-೫೫). (11) ಡಾಣೆ (೨೯-೬೪). (12) ಒಣರ್ (೩೦-೭೭). (13) ತೀವು (೩೮-೧೮). (14) ಪಡಲಿಗೆ (42-ವ). (15) ತೀಂಟೆ (೪೨-೭೧). (16) ಜೊತ್ತಿಸು (೪೫-೫೬). (17) ಕುಮಿ (೪೭-ವ). (18) ಕಂಟಣಿಸು (೪೭-೭೧). (19) ಕುಂಟಣಿ (೪೭-೭೧). (20) ಕಿತವ (೪೭-೭೧). (21) ಬೆಗಡು (೪೯-೮೫). (22) ತಳರು (೫೦-೮೭). (23) ಬಿಡಾಳ (೫೩-೧೧೦). (24) ತೆಱಪು (೫೪-೧೧೪). (25) ಮುಮ್ಮಳಿ (೫೪-೧೨೦). (26) ಪೆಟ್ಟೆ (೫೫-ವ). (27) ಬಿಸುಗೆ (೫೫-೧೨೨). (28) ಕಟಿಲೆ (೫೫-೧೨೨). (29) ದಸಿ (೫೬-೧೩೦). (30) ಮಂಚಿಗೆ (೫೬-೧೩೧). (31) ಡೆಂಕಣಿ (೫೭-ವ). (32) ಪೆಡ್ಡಿ (೫೭-ವ). (33) ಗೆಗ್ಗ (೫೮-ವ). (34) ಮಗ್ಗು (೫೮-೧೪೪). (35) ಡಿಳ್ಳಿಸು (೬೦-ವ). (36) ತೆಂಟೆ (೬೫-೨೦). (37) ಮಿಟ್ಟೆ (೬೬-ವ). (38) ಅಸೆಯಿಸು (೬೬-ವ). (39) ಕೆರೆಹ (೬೬-೨೪). (40) ಬುಗುಟು (೬೬-೨೬). (41) ದಡ್ಡು (೬೬-೨೬). (42) ಪಡಣ (೬೮-೪೩). (43) ಅವಚತರ್ತ (೭೩-೭೪). (44) ಅಳಱಿಸು (೭೬-೮೯). (45) ಜೊಕ್ಕಳ (೭೬-೯೫). (46) ಬರಗು (೭೭-೯೮). (47) ಇಡುವು (೮೧-೧೨೬). (48) ಕೊಕ್ಕರಿಸು (೮೭-೩). (49) ಗಂಪಲ್ (೯೬-೬೧). (50) ಕುಳಿವೊಗು (೧೩೪-೮೫). (51) ಅಳ್ಕಿಸು (೧೪೧-೧೦). (52) ಉಂಡಿಗೆ (೧೪೫-ವ). (53) ಜಾಂಗಳ (೧೪೭-ವ). (54) ಸರವಳಿಗೆ (೧೪೭-೫೦). (55) ಒಟ್ಟೆಯುಸ್ಸು (೧೫೦-೬೬). (56) ಕದಳಿಕೆ (೧೫೧-೭೪). (57) ಪೊಂಕ (೧೬೦-೧೨). (58) ಪೆಳ್ಕು (೧೭೯-೧೩೩). (59) ಪರಿಯಳ (೧೮೧-ವ). (60) ಏವ (೧೮೨-೮). (61) ಮಂಡವಿಗೆ (೧೮೩-೧೮). (62) ಬಳ್ಳವಳ್ಳಿ (೧೯೩-೭೩). (63) ಕುರುಂಬು (೧೯೫-೮೯). (64) ಕುಳುಂಪೆ (೧೯೮-೧೦೮). (65) ಓರಂಡಲ (೨೦೫-ವ). (66) ಬೈಸಿಕೆ (೨೦೭-೩೨). (67) ಪೆಳಱ್ (೨೦೮-೪೨). (68) ಕಟಾರ (೨೨೫-ಗ). (69) ಸಂಗಳಿಸು (೨೨೫-೯). (70) ಗೊರಿಪ (೨೩೬-೭೭). (71) ಎಕ್ಕಲಾವಣ (೨೩೬-೮೦). (72) ಜಾಳರ (೨೩೭-೮೩). (73) ಬಾಚಿಸು (೨೪೩-೭೩). (74) ಸಿಪ್ಪು (೨೫೧-೭೯). (75) ಇಟ್ಟಳ (೨೫೪-೧೦೩). (76) ಹರಿಗೆ (೨೫೮-೧೨೭). (77) ಕೊಲ್ಲಟಿ (೨೮೯-೨೧). (78) ಗರಾಟ (೨೮೯-೨೧). (79) ಅಱಿಪೆ (೨೮೯-೨೩). (80) ಏಗೊಳ್ಳು (೨೯೪-೪೬). (81) ಚಿಕ್ಕಳ (೩೦೫-೧೧೯). (82) ಚಳ್ಗಿಸು (೩೦೪-೧೧೪).

ಅಂತೂ ಕವಿಯು ಈ ಗ್ರಂಥವನ್ನು ಉತ್ತಮವಾದ ಭಾಷಾಶೈಲಿಯಲ್ಲಿ ರಚಿಸಿದ್ದಾನೆ. ಈ ಕಾವ್ಯದ ಹಲವು ಪದ್ಯಗಳು ಮಧುರವಾಗಿಯೂ, ಲಲಿತವಾಗಿಯೂ ಇವೆಯೆಂಬುದನ್ನು ಹಿಂದಿನ ಕೆಲವು ದೃಷ್ಟಾಂತಗಳಿಂದ ತಿಳಿಯಬಹುದು. ಆದುದರಿಂದ ಪಾರ್ಶ್ವನು ಪ್ರೌಢಕವಿಯೆನ್ನುವುದಕ್ಕೆ ಯಾವ ಅಡ್ಡಿಯೂ ಇಲ್ಲ.

ಸಂಪಾದಕರು.

॥ ಶ್ರೀರಸ್ತು ॥

|| ವೀತರಾಗಾಯ ನಮಃ ||

# ಪಾರ್ಶ್ವನಾಥ ಪುರಾಣಂ

## ಪ್ರಥಮಾಶ್ವಾಸಂ

ಸ್ರ ॥ ಶ್ರೀವಾಚಾಸಿದ್ಧಿಗಂ ನಿರ್ಮಳನಿಖಿಳಕಳಾವೃದ್ಧಿಗಂ ಶುದ್ಧಚಾರಿ ।
ತ್ರಾವಷ್ಟಂಭಕ್ಕಮಾದರ್ಪಿತ ಮದನಲಸನ್ಮೂರ್ತಿಗಂ ತನ್ನೊಳೇಕೀ ॥
ಭಾವಕ್ಕಂ ಮೆಚ್ಚಿ ಮುಕ್ತ್ಯಂಗನೆ ವರಿಯಿಸೆ ಸತ್ಸೌಖ್ಯದೊಳ್ ನಿಂದನೆಂದುಂ ।
ದೇವೇಂದ್ರಾಹೀಂದ್ರವಂದ್ಯಂ ಕುಡುಗೆ ನಮಗಭೀಷ್ಟಾರ್ಥಮಂ ಪಾರ್ಶ್ವನಾಥಂ ॥೧॥

ಮ ॥ ಪರವಾಗಿರ್ದಘಮೆಯ್ದೆ ಪಿಂಗೆ ನಿಜಮಾದಾತ್ಮೀಯ ನಾನಾಗುಣಂ ।
ಪರಮಾನಂದದೊಳೊಂದಿ ನಿಂದಖಿಳಲೋಕೋತ್ತಂಸರಾಗಿರ್ದ ಸಿ ॥
ದ್ಧರ ಸಂಯೋಗವಿದೇಹಸಿದ್ಧಿಗೆ ನಿಜಾದ್ಯಾನಂದವೆಂಬೀ ಪ್ರಸಿ ।
ದ್ಧರಸಂಖ್ಯರ್ ನಮಗೀಗೆ ಸಿದ್ಧರನಘರ್ ಶ್ರೀಸಿದ್ಧಸಂಸಿದ್ಧಿಯಂ ॥ ೨ ॥

ಸ್ರ ॥ ಮಾರಂಗಂ ಕಾಮಚಾರಂ ನಡೆಗಿಡೆ ವಿಷಯೇಭಂಗಳಂ ಗೆಲ್ದು ಪಂಚಾ ।
ಚಾರಂ ಪಂಚಾಸ್ಯದಂತೊಪ್ಪಿರೆ ಧೃತಿವೀರ್ಯಂ ನಾರ್ದು ಶಿಷ್ಯರ್ಕಳಂ ಸ ॥
ಚ್ಚಾರಿತ್ರೋದ್ಯುಕ್ತರಪ್ಪಂತಿರೆ ನಿಯಮಿಸುವಾಚಾರ್ಯರತ್ಯುನ್ನತರ್ ಸಂ ।
ಸಾರಾಂಭೋರಾಶಿಯಂ ದಾಂಟಿಸುಗೆ ಚರಣನತ್ಪೋತದಿಂ ಕ್ಷಾತರೆಮ್ಮಂ ॥ ೩ ॥

ಶಾ ॥ ನ್ಯಾಯಂ ಸ್ಯಾತ್ಪದಯುಕ್ತ ಸೂಕ್ತಮಿತರೇಕಾಂತಪ್ರಯುಕ್ತೋಕ್ತಮಂ ।
ನ್ಯಾಯಂ ಭಾವಿಪೊಡೆಂದು ಭವ್ಯನಿಕರಕ್ಕಾದೇಯ ನಿಶ್ರೇಯಸೋ ॥
ಪಾಯಂ ನೋಟಿಪ್ಪೊಡದೊಂದು ಸಂಸೃತಿಗುಪಾಯಂ ನಂಬಿದಂದೆಂಬುಪಾ ।
ಧ್ಯಾಯರ್ ನ್ಯಾಯಪಥಾಗ್ರದೊಳ್ ನಿಱಿಸುಗೆಮ್ಮಂ ತಮ್ಮ ಕಾರುಣ್ಯದಿಂ ॥ ೪ ॥

ಮ ॥ ಸಮಪೀಯೂಷ ಕಳಾಭಿವೃದ್ಧಿತಮಮಂ ನಿರ್ಮೂಳನಂ ಮಾಳ್ಪವೃ ।
ತ್ತಮನುಜ್ಜೀವಿಸೆ ಸಜ್ಜನಪ್ರಕರ ಸಮ್ಯಗ್ದರ್ಶನಶ್ರೀಯನೀ ॥
ಯೆ ಮುನಿಪ್ರಸ್ತುತಮಾದ ಸಾಧುನಿವಹೋದ್ಯಚ್ಚಂದ್ರ ಪಾದಂಗಳೆ ।
ಮ್ಮ ಮನೋನಿರ್ಮಳಕೈರವಕ್ಕೆ ಪಡೆಯುತ್ತಿರ್ಕೆಂದುಮಾನಂದಮಂ ॥ ೫ ॥

ಕಂ ॥ ಮಳವಿರಹಿತರತಿಶಯ ಕೇ ।
ವಳಿಗಳ ನಿರತಿಶಯ ಪೂರ್ಣಸಂಪೂರ್ಣರ ಕೇ ॥
ವಳಿಗಳ ವಿತತ ಶ್ರುತಕೇ ।
ವಳಿಗಳ ಚರಣಂಗಳೆಮಗೆ ಶರಣಕ್ಕೆಂದುಂ ॥ ೬ ॥

ಉ ॥ ಧಾತ್ರಿಗೆ ಚಕ್ರರತ್ನಮಧಿಪತ್ವಮನೀಶನೊಳಿಂತುಮಾಳ್ಕುಮಂ ।
ತೀತ್ರಿಜಗತ್ಪತಿತ್ವಮುಮನಾತ್ಮನೊಳುದ್ಭವಿಸುತ್ತೆ ಮಾಳ್ಪರ ॥
ತ್ನತ್ರಯಮೆಮ್ಮ ಚಿತ್ತಗೃಹದೊಳ್ ನೆಲಸಿರ್ದು ಸಮೀಹಿತಾರ್ಥಮಂ ।
ಸೂತ್ರಿಸುತಿರ್ಕೆ ದುಷ್ಟದುರಿತಾರಿ ಸಮೂಹಮನೆಯ್ದೆ ತೂಳ್ದುತುಂ ॥ ೭ ॥

ಭಾವಿಸೆ ಕುಂಕುಮೋಪಮ ತನುಪ್ರಭೆ ಸೂಚಿಸೆ ರಾಗಸಾಗರ ।
ಶ್ರೀವಧುವೀಕೆಯೆಂದು ಪುರುಷಾರ್ಥಚತುಷ್ಟಯಮಂ ಪದಾನತ ॥
ಗ್ರೀವುದನೆಯ್ದೆ ಸೂಚಿಸೆ ಚತುರ್ಭುಜವೊಪ್ಪುವ ಪುಣ್ಯಮೂರ್ತಿ ಪ ।
ದ್ಮಾವತಿದೇವಿ ಮಾಳ್ಕೆಮಗೆ ಸೌಖ್ಯಸಮಾಗಮಧರ್ಮರಾಗಮಂ ॥ ೮ ॥

ಚಂ ॥ ಅಗಣಿತ ಸಾಹಸೈಕನಿಧಿ ಸಜ್ಜನಪೂಜ್ಯ ಗುಣಪ್ರಕಾಶಕಂ ।
ಮಿಗೆ ಕಮಠೋಪಸರ್ಗಮನಡಂಗಿಸಿ ಪಾರ್ಶ್ವಜಿನ ಪ್ರಬೋಧಸಿ ॥
ದ್ಧಿಗೆ ನೆರಮಾದ ಮಾಳ್ಕೆಯೊಳೆ ತಜ್ಜಿನನಾಥ ಕಥಾಪ್ರಬಂಧಸಿ ।
ದ್ಧಿಗೆ ನೆರಮಕ್ಕೆ ನಾಗಪತಿ ಮಾಡಿ ಮದೀಯ ಮನಃಪ್ರಶಸ್ತಿಯಂ ॥ ೯ ॥

ಉ ॥ ಶ್ರೀವಧು ವಿಶ್ವವಿಶ್ರುತ ಯಶೋವಧು ನಿರ್ವೃತಿಲಕ್ಷ್ಮಿಯೆಂಬಿವರ್ ।
ಮೂವರುಮಾವನಂ ವಿಶದವಾಗ್ವಧು ಪೊರ್ದಿದಳಾತನಂ ಸಮಂ ॥
ತಾವಗಮೋಲಗಿಪ್ಪರೆನಿಪಳ್ಜಿನವಾಣಿಯೆನಿಪ್ಪ ಭಾರತೀ ।
ದೇವಿಯತಿಪ್ರಸನ್ನೆ ನೆಲಸಿರ್ಕೆ ಮದೀಯ ಮುಖಾರವಿಂದದೊಳ್ ॥ ೧೦ ॥

ಕಂ ॥ ವಿರಚಿಸಿ ಕೃತಿಯೊಂದಂ ಕವಿ ।
ವರರೆನಿಸುವರೆಂದೊಡಪರಿಮಿತಮಂ ಶ್ರುತಮಂ ॥
ವಿರಚಿಸಿದ ಗಣಧರರ್ ಕವಿ ।
ಪರಮೇಷ್ಠಿಗಳೆನಿಸಿ ನೆಗಳ್ವುದೊಂದಚ್ಚರಿಯೇ ॥ ೧೧ ॥

ದುರಿತಾಭವತಿಖಿಯಿಂ ನೆಗೆ ।
ದುರಿ ತಮ್ಮಂ ಪೊರ್ದದಂತು ಕಿಡೆ ಶಾನ್ತರಸಂ ॥
ಕರಮೆಸೆಯೆ ಬುಧರ ಮುಕುಳಿತ ।
ಕರಮೆಸೆದಿರೆ ಪೊಗಟ್ವೆ ಗುಣಿಗಳೀಗೆಮಗಱಿವಂ ॥ ೧೨ ॥

ಅನುಪಮ ತತ್ವಾರ್ಥಂ ಪು ।
ಣ್ಯನಿಬಂಧನಮಪ್ಪುದೆಂದು ಮನಮನದೊಳ್ ನೆ ॥
ಟ್ಟನೆ ನೆಲಸಿದಂತೆ ನೆಲಸಿ ।
ಕ್ಕನಿಮಿಷಮಾಸ್ವಾತಿಪಾದ ಯತಿಪಾದಯುಗಂ ॥ ೧೩ ॥

ಕಂ ॥ ಬಿದಿರಪೊದರ್ ತೊಲೆಯೆನೆ ತೂ ।
ಗಿದೊಡೆ ಬಿದಿರ್ ಜೈನಮುನಿಜಟಾಚಾರ್ಯರ್ಣನಧ್ವೈ ॥
ರ್ಯದ ಪೆಂಪು ಗೆಲ್ವುದುಪಸ ।
ರ್ಗದಳುರ್ಕೆಯನೆನಿಸಿ ನೆಗೆದು ಮಿಗೆ ಸೊಗಯಿಸಿದಂ ॥ ೧೪ ॥

ಮುನಿರಾಜಹಂಸರೆನಿಸಿಯು ।
ಮನುಪಮ ಸುಚರಿತ್ರ ಕೊಂಡಕುಂದಾಚಾರ್ಯರ್ ॥
ಘನಚರಣ ಗ್ರಂಥಸ್ಮಿತ ।
ವನರುಹಷಟ್ಚರಣರೆನಿಪ[ರೆ] ನಗಿದು ಚಿತ್ರಂ ॥ ೧೫ ॥

ಉ ॥ ಜಿತ್ವರಸಾತ್ರವೇದಿ ಗಮಕಿತ್ವಮುಮಂ[ಪರವಾ]ದಿ ಭೇದಿ ವಾ ।
ದಿತ್ವಮುಮಂ ರಸಾವಹಕವಿತ್ವಮುಮಂ ಬುಧಚಿತ್ತಹಾರಿ ವಾ ॥
ಗ್ಮಿತ್ವಮುಮಂ ನೃಪಾಲಸಭೆ ಮೆಚ್ಚೆ ಸಮರ್ಥಿಸಿ ರಂಜಿಪಂ ಮಹಾ ।
ಸತ್ವ ಸಮಂತಭದ್ರನುರುಶೀಲಸಮುದ್ರನಿಳಾತಳಾಗ್ರದೊಳ್ ॥ ೧೬ ॥

ಕಂ ॥ ನಿಷ್ಠಾಪರತ್ವದಿಂ ಪರ ।
ಮೇಷ್ಠಿಸ್ತವನಮನನೂನಮಂ ಮಾಡಿ ಗುಣ ॥
ಜ್ಯೇಷ್ಠನೆನಿಸಿರ್ದ ಕವಿಪರ ।
ಮೇಷ್ಠಿಗುಣಸ್ತವನಮೆಮಗೆ ದಲ್ ಕರಣೀಯಂ ॥ ೧೭ ॥

ಮ ॥ ಸಕಳೋರ್ವೀನುತ ಪೂಜ್ಯಪಾದ ಮುನಿಪಂ ತಾಂ ಪೇಳ್ದ ಕಲ್ಯಾಣಕಾ ।
ರಕದಿಂ ದೇಹದ ದೋಷಮಂ ವಿತತವಾಚಾದೋಷಮಂ ಶಬ್ದಸಾ ॥
ಧಕ ಜೈನೇಂದ್ರದಿನಾ ಜಗಜ್ಜನದ ಮಿಥ್ಯಾದೋಷಮಂ ತತ್ವಬೋ ।
ಧಕ ತತ್ವಾರ್ಥದ ವೃತ್ತಿಯಿಂದೆ ಕಳೆದಂ ಕಾರುಣ್ಯದುಗ್ಧಾರ್ಣವಂ ॥ ೧೮ ॥

ಸುಕರಶ್ರೀನಯಶಾಸ್ತ್ರವಿಶ್ರುತ ವಚಶ್ಚಂದ್ರಾಂಶುವಿಂ ದುಃಖದಾ ।
ಯಕ ಮಿಥ್ಯಾತ್ವಕಳಂಕಮಂ ಕಿಡಿಸಿ ಸನ್ಮಾರ್ಗಪ್ರವೃತ್ತಿಪ್ರಭಾ ॥
ವಕರಾಗಿರ್ದಕಳಂಕದೇವರೆಮಗಾತ್ಮೀಯಾಖ್ಯೆಯಂ ನನ್ನಿಮಾ ।
ಡಿ ಕವೀಂದ್ರಸ್ತುತರಾದರೀಗೆಮಗೆ ಸಮ್ಯಗ್ದರ್ಶನಪ್ರಾಪ್ತಿಯಂ ॥ ೧೯ ॥

ಶಾ ॥ ಶ್ರೀನಿಷ್ಪನ್ನ ಸಮಂತಭದ್ರತೆಯನೆಮ್ಮೊಳ್ ಮಾಡುತಿರ್ಕೆರ್ಮೆಯುಂ ।
ಜ್ಞಾನಾಂಭೋಧಿ ಸಮಂತಭದ್ರನಕಳಂಕಂ ನಿಷ್ಕಳಂಕತ್ವಮಂ ॥
ನಾನಾವಾದಿವಿಭೇದಿ ಭೂವಿದಿತವಿದ್ಯಾನಂದಮಂ ಹೃದ್ಯ ವಿ ।
ದ್ಯಾನಂದಪ್ರಭು ಪೂಜ್ಯಪಾದಮುನಿಪಂ ಸತ್ಪೂಜ್ಯಸಂಪತ್ತಿಯಂ ॥ ೨೦ ॥

ಕಂ ॥ ರತಿಪತಿಯಂ ಬೆದಱಿಪ ಸುಚ ।
ರಿತದಿಂದಂ ವೀರನೆನಿಸುಗಚ್ಚರಿಗಣಿತಾ ॥
ನ್ವಿತ ಬುದ್ಧಿಯೆನಿಸಿ ಮತ್ತಗ ।
ಣಿತ ಬುದ್ಧಿಯೆನಿಪ್ಪನಿಳೆಗೆ ವೀರಾಚಾರ್ಯಂ ॥ ೨೧ ॥

ಕಂ ॥ ಶುದ್ಧಾಂತರಂಗನಾ ವಾ ।
ಕ್ಸಿದ್ಧ ಶ್ರೀವೀರಸೇನ ಮುನಿಪೋತ್ತಮನಂ ॥
ಸಿದ್ಧಾಂತಕರ್ತೃವೆನೆ ಸಮ ।
ಯೋದ್ಧಾರಕನೆಂದು ಪೊಗೞದಿರ್ಪರೆ ವಿಬುಧರ್ ॥ ೨೨ ॥

ಉ ॥ ಶ್ರೀನರಪಾಳಮೌಳಿಮಣಿದೀಪ್ತಿವೃತಾಂಘ್ರಿನಖಾಳಿಕಾಂತಿಸಂ ।
ತಾನರನನ್ವಿತಾರ್ಥರ ಸಭಾವನಿಶೇಷಕವಿತ್ವರಂ ಜಿತಾ ॥
ಸ್ಥಾನರನಾರು ಬಣ್ಣಿಸರೊ ಶೀಲನಿಧಾನರನತ್ಯನೂನವಿ ।
ಜ್ಞಾನರನಾತ್ತವೃತ್ತ ಜಿನಸೇನರನಾರ್ಯಗಣಪ್ರಧಾನರಂ ॥ ೨೩ ॥

ಮ ॥ ವಿನುತಶ್ರೀಗುಣಭದ್ರದೇವಮುನಿಪರ್ ದುರ್ಮೋಹಸಂದೋಹನಾ ।
ಶನಮಂ ಧರ್ಮಗುಣಪ್ರಕಾಶನಮನಾತ್ಮೀಯೋದ್ಧವೈರಾಗ್ಯಶಾ ॥
ಸನಮಂ ಸಚ್ಚರಿತಪ್ರಭಾಸನಮನತ್ಯಾನಂದರಾತ್ಮಾನುಶಾ ।
ಸನಮಂ ಪೇೞ್ದು ವಿನೇಯರಲ್ಲಿ ಮೆಱೆದರ್ ತಮ್ಮೊಂದು ಕಾರುಣ್ಯಮಂ ॥ ೨೪ ॥

ಶಾ ॥ ಸ್ಯಾದ್ವಾದಾಚಳಸಿಂಹನೆನ್ನತಪಗೋವಿನ್ಯಾಸದಿಂ ನ್ಯಾಯಸಂ ।
ಪದ್ವಜ್ರಾಭನಖಂಗಳೀಮಹಿಭೃದುದ್ಧ್ಯಾನಸ್ಥಾನದೊಳ್ ನಿಚ್ಚಲುಂ ॥
ವಿದ್ಯುಷ್ಪಾಖಿಳ ದುಷ್ಟವಾದಿಗಜಮಂ ನಿರ್ಭೇದನಂ ಮಾಡುವಂ ।
ಸ್ಯಾದ್ವಾದೀಶ್ವರ ಸೋಮದೇವ ಮುನಿಪಂ ಸಾಹಿತ್ಯವಿದ್ಯಾಧಿಪಂ ॥ ೨೫ ॥

ಕಂ ॥ ಶ್ರೀವಾದಿರಾಜದೇವ ವ ।
ಚೋವಿನ್ಯಾಸಕ್ಕೆ ಭಾರತೀಶನೆ ದೊರೆಯೆಂ ॥
ದೀ ವಸುಧೆ ನುಡಿವುದೆನೆ ಪರಿ ।
ಭಾವಿಸುವಂದಪರವಿದ್ಯಬುಧಜನಹೃದ್ಯಂ ॥ ೨೬ ॥

ಸೂತ್ರಿಸಿದ ಸದುತ್ತರತ ।
ರ್ಕತ್ರಯದಿಂ ವಾದಿರಾಜನೆನಿಸಿದ ತೆಱದಿಂ ।
ಚಿತ್ರಮೆನೆ ವಿರಚಿಸಿದ ಕಾ ।
ವ್ಯತ್ರಯದಿಂ ಸುಕವಿರಾಜನಾ ಮುನಿರಾಜಂ ॥ ೨೭ ॥

ಯಾವಂತಿ ಗಣಿತಭಾಸ್ಕರ ।
ಪಾವನ ಮುನಿಚಂದ್ರನುದಯನಮಳಿನಗುಣ ಸ ॥
ದ್ಭಾವ ದಿಗಂಬರಕುಳರುಂ ।
ಭಾವಿಸೆ ಬೆಳಗುವುದು ಯುಕ್ತಮವನೀವ್ಯಕ್ತಂ ॥ ೨೮ ॥

ಶ್ರುತದಿಂದಮುಪಾರ್ಜಿಸಿ ವಿ ।
ಶ್ರುತಕೀರ್ತಿಯನಾತ್ಮನಾಮವಂ ಶ್ರುತಕೀರ್ತಿ ॥
ವ್ರತಿ ಕಟಕೋಪಾಧ್ಯಾಯಂ ।
ಪ್ರತೀತನೆನೆ ಮೆಱೆದನಿಳೆಗೆ ಸಿದ್ಧಾಂತೇಶಂ ॥ ೨೯ ॥

ಕಂ ॥ ಅತನುಪಟುಭಟನನದಟಲೆ ।
ದತನುತಪಃಶ್ರೀಯನಾಂತು ತತ್ಪತಿಮೋಹ ॥
ಕ್ಷಿತಿಪತಿಯುಮನಲೆದವರಂ ।
ಸ್ತುತಿಯಿಸರಾರ್ ನೇಮಿಚಂದ್ರಭಟ್ಟಾರಕರಂ ॥ ೩೦ ॥

ಭಾವತಪದಿಂದೆ ಬೆದಱಿಸಿ ।
ಭಾವಜನಂ ಪರಮಸಂಯಮೋಪಾಯಮನು ।
ಜ್ಜೀವಿಸಿದ ವಾಸುಪೂಜ್ಯ ।
ತ್ರೈವಿದ್ಯಪದಂಗಳಲ್ತೆ ಲೋಕನುತಂಗಳ್ ॥ ೩೧ ॥

ಏವೊಗೞ್ವೆ ವಾಸುಪೂಜ್ಯ ।
ತ್ರೈವಿದ್ಯರ ವಿದ್ಯೆಯೇೞ್ಗೆಯುಂ ಶ್ರುತಕೀರ್ತಿ ॥
ತ್ರೈವಿದ್ಯರ್ ಸಕಳಕಳಾ ।
ಕೋವಿದರೆನೆ ನೆಗೞ್ದ ಗುಣಿಗಳವರ್ಗಳ ಶಿಷ್ಯರ್ ॥ ೩೨ ॥

ಉ ॥ ಮುಂ ತಿಳಿವಂದು ಚಕ್ರಧರನಂದನರಾದವರುಂಟೆ ಚಕ್ರಿಗಳ್ ।
ಕಂತುವಿರೋಧಿ ಜಾವಳಿಗೆಯಾ ಮುನಿಚಂದ್ರಮಹೀಪ್ರಸಿದ್ಧ ಸೈ ॥
ದ್ಧಾಂತಿಕ ಚಕ್ರವರ್ತಿಯ ಸುತಂ ಬುಧವಂದಿತ ವೀರನಂದಿ ಸೈ ।
ದ್ಧಾಂತಿಕ ಚಕ್ರವರ್ತಿಯೆನಿಪಂದದಿನಂದಿಳೆ ಕೂರ್ತು ಕೀರ್ತಿಕುಂ ॥ ೩೩ ॥

ಭ್ರಾಂತಿವಿಹೀನ ಜೈನಸಮಯ ಪ್ರವಿತಾಸನದಿಂ ಸುಖಪ್ರದಾ ।
ನಂತಗುಣಾಬ್ಧಿ ಧರ್ಮರಥವರ್ತನದಿಂ ಬುಧಸಸ್ಯವೃದ್ಧಿಯಿಂ ॥
ಕಾಂತಸುಬೋಧದಿಂ ನಿಜಸಮಾಖ್ಯೆಯನನ್ವಿತಮಾಗೆ ಮಾಡಿ ಸೈ ।
ದ್ಧಾಂತಿಕ ನೇಮಿಚಂದ್ರಮುನಿಪಂ ಪೆಸರ್ವೆತ್ತನಶೇಷಧಾತ್ರಿಯೊಳ್ ॥ ೩೪ ॥

ಕಂ ॥ ಶ್ರೀಶಾರದೇಂದು ಕೈರವ ।
ಕಾಶ ಸಮುತ್ಫುಲ್ಲ ಮಲ್ಲಿಕಾಸಂಕುಳಸಂ ॥
ಕಾಶ ವಿಶುದ್ಧಯಶೋಗಂ ।
ಗೇಶಂ ಮುನಿ ನೇಮಿಚಂದ್ರಸೈದ್ಧಾಂತೇಶಂ ॥ ೩೫ ॥

ಉ ॥ ಆರ ಗಭೀರಮುಂ ತನಗೆ ಕಾಲ್ವೊೞೆಯೆಂಬಸಮಾಸ್ತ್ರನಂ ಬಲಾ ।
ತ್ಕಾರದೆ ಗೆಲ್ದು ಸಂದುದಯಚಂದ್ರಮುನೀಂದ್ರನೊಳೊಪ್ಪದೆಂಬಲೋ ॥
ತ್ಕಾರಗಣಾಗ್ರಗಣ್ಯನೆನಿಪುನ್ನತಿಯಂದು ತಪೋಭಮುರ್ವರಾ ।
ವಾರುಧಿಯಂ ದಯಾತುಳಸುಖಾನಿಧಿಯಂ ಪೊಗೞ್ಗಂ ಜಗಜ್ಜನಂ ॥ ೩೬ ॥

ಕಂ ॥ ನಿರತಿಶಯ ಪಾದಸೇವಾ ।
ಪರಿಣತ ಪುಣ್ಯಾಂಬುರಾಶಿಯಂ ಪೆರ್ಚಿಸುಗ ॥
ಚ್ಚರಿಯಲ್ತು ರಾಗದಿಂದಂ ।
ಪೊರೆಯನಿದಚ್ಚರಿ ದಲುದಯಚಂದ್ರಮುನೀಂದ್ರಂ ॥ ೩೭ ॥

ಉ ॥ ಚಾರುಚರಿತ್ರ ನಿರ್ಮಳಿನ ದರ್ಶನವಿಶ್ರುತಬೋಧಶಸ್ತ್ರದಿಂ ।
ಮಾರನನಿಕ್ಕಿ ಮಾರನುರುಮೋಹಮನಿಕ್ಕಿ ವಿಮೋಹನಾದ ಭ ॥
ಟ್ಟಾರಕ ನೇಮಿಚಂದ್ರಮುನಿಪಾದ ಚಕೋರರ ವಾಸುಪೂಜ್ಯ ಭ ।
ಟ್ಟಾರಕರಂಘ್ರಿಪದ್ಮಮಿರೆ ಮಾನಸಮೆನ್ನಯದೊಪ್ಪದಿರ್ಪುದೇ ॥ ೩೮ ॥

ಕಂ ॥ ಏನಿದು ಚೋದ್ಯಮೊ ಬುಧರು ।
ರ್ವೀನುತ ಮಧ್ಯಾಹ್ನ ಕಲ್ಪವೃಕ್ಷಮಿದೆಂಗುಂ ॥
ಭೂನಾಥ ಪೂಜ್ಯ ಪರಮ ತ ।
ಪೋನಿಧಿಯಂ ವಾಸುಪೂಜ್ಯ ಭಟ್ಟಾರಕನಂ ॥ ೩೯ ॥

ಮ ॥ ಸಮತಾಭಾವನೆ ತನ್ನೊಳೊಪ್ಪೆ ಪರಮಧ್ಯಾನಾರ್ಥಿಯಷ್ಟೋಪವಾ ।
ಸಮುಮಂ ಪಕ್ಷದಿನೋಪವಾಸಮುಮನಂತೋರಂತೆ ಮಾಸೋಪವಾ ॥
ಸಮುಮಂ ಮಾಡಿಯುಮೇನೊ ಮತ್ತತನುಪೀಡಾಪ್ರೌಢಿಯಿಂ ರಾಮಚಂ ।
ದ್ರಮುನೀಂದ್ರಂ ದೊರೆವೆತ್ತನಚ್ಚರಿ ಕರಂ ಚಾರಿತ್ರಚಕ್ರೇಶ್ವರಂ ॥ ೪೦ ॥

ಮ.ಸ್ರ॥ ನಿಯತಂ ಯೋಗೀಂದ್ರರೇಕೇಂದ್ರಿಯಮುಮನೆನಸುಂ ಬಾಧಿಸಲ್ಕಾಗದೆಂಬು ।
ಕ್ತಿಯನೆಲ್ಲಾಶಿಷ್ಯವರ್ಗಕ್ಕನುಪಮ ದಯೆಯಿಂ ಶಿಕ್ಷಿಪರ್ ತಾವೆ ಪಂಚೇಂ ॥
ದ್ರಿಯಮಂ ನಿರ್ವಂದದಿಂ ನಿಗ್ರಹಿಸಿಯುಮತುಳ ಸ್ವಾಂತರಾಂತರ್ ಕರಂ ಶಾಂ ।
ತಿಯನಾಶ್ರೀನಂದಿಯೋಗೀಶ್ವರರವರ ಚರಿತ್ರಂ ಧರಿತ್ರೀವಿಚಿತ್ರಂ ॥ ೪೧ ॥

ಕಂ ॥ ಶ್ರೀನಂದಿಮುನೀಂದ್ರಂ ಸು ।
ಜ್ಞಾನ ತಪೋವಿಭವದಿಂದೆ ಭಟ್ಟಾರಕನೆಂ ॥
ಬೀನಾಮಕ್ಕನುಗುಣಮೆನೆ ।
ನಾನಾನೃಪಪೂಜ್ಯನೆನಿಸಿ ನೆಗಟ್ದಂ ಜಗದೊಳ್ ॥ ೪೨ ॥

ಶುಭಚಂದ್ರತ್ರೈವಿದ್ಯರ ।
ನಭಿನವ ಗಣಧರರನಖಿಳಶಾಸ್ತ್ರಜ್ಞತೆಯಿಂ ॥
ತ್ರಿಭುವನ ವಿದ್ಯಾಗುರುಗಳ ।
ನಭಿವರ್ಣಿಪ ಭಕ್ತಿವೆತ್ತ ಕೃತಿಯೆ ಕೃತಾರ್ಥಂ ॥ ೪೩ ॥

ಸೂರಿಪ್ರಭು ಶುಭಚಂದ್ರೋ ।
ದಾರಯಶಶ್ಚಂದ್ರದೀಪ್ತಿ ಸತ್ಪಥದೊಳ್ ವಿ ॥
ಸ್ತಾರಿಸುತಿರೆ ಪರದರ್ಶನ ।
ಮೋರಂತಿರೆ ಮುಂದುಗೆಡುವುದೆನಗಿದು ಚಿತ್ರಂ ॥ ೪೪ ॥

ಉ ॥ ಸ್ತ್ರೀಜಿತರಾರುಮಂ ತೊಱೆವರೆಂಬಿದು ನಿಶ್ಚಯಮಾದುದೀ ಜಗ ।
ತ್ಪೂಜಿತವೃತ್ತನಿಂ ಕುಮುದಚಂದ್ರ ಮಹಾಮುನಿನಾಥನಿಂತತಿ ॥
ಸ್ತ್ರೀಜಿತನಾಗಿಯುಂ ನಿಜಪರಿಗ್ರಹಮಂ ತೊಱೆದೆಯ್ದೆ ತೂಳ್ದಿದೀ ।
ರಾಜಿಸುತಿರ್ಪ ತನ್ನ ಹೃದಯಂಗಮನಂ ವಿದಿತಾಂಗಜನ್ಮನಂ ॥ ೪೫ ॥

ಕಂ॥ ಅತಿಚಿತ್ರಕರಂ ಗುಪ್ತಿ ।
ತ್ರಿತಯಮುಮಿರೆ ಕುಮುದಚಂದ್ರಯತಿಪತಿ ತತ್ವಾ ॥
ನ್ವಿತಮತಿ ಎಟ್ಟಿತ್ತಿರೆಯುಂ ।
ರತಿವೆರಸಿರದೋಡಿದಂ ಮನೋಜಂ ಮನದಿಂ ॥ ೪೬ ॥

ಚಾರುಗುಣನಿಳಯರಂ ವಿ ।
ಸ್ತಾರಿಯಶಃಪೂತ ಭುವನವಳಯರನೊಲವಿಂ ॥
ದಾರಭಿವರ್ಣಿಸರಯನಿ ।
ಸ್ತಾರಕರಂ ಕಮಳಸೇನಭಟ್ಟಾರಕರಂ ॥ ೪೭ ॥

ಮ.ಸ್ರ॥ ಅಕಳಂಕಾಕಾರಜಾತಂ ತ್ರಿಭುವನವಳಯವ್ಯಾಪ್ತ ಬೋಧಪ್ರಭೂತಂ ।
ಸಕಳತ್ಯಾಗಪ್ರಸೂತಂ ವಿಧುವಿಹರತೆಯುಂ ತಾಳ್ದಿ ಮೂಲೋಕಮಂ ಸು ॥
ತ್ತಿಕರಂ ಸರ್ವೋರ್ವರಾಸಂಸ್ತುತಮೆನಿಸಿದುದೇಂ ಚೋದ್ಯಮೋ ಮಾಧವೇಂದು ।
ಪ್ರಕಟ ತ್ರೈವಿದ್ಯವಿದ್ಯಾಧಿಪ ವಿಶದಯಶಂ ಶಂಭುಹಾಸಪ್ರಕಾಶಂ ॥ ೪೮ ॥

ಮ ॥ ಎನಸುಂ ಕಾಮನಧರ್ಮಮಂ ನಿಜಸುಧರ್ಮಂ ಬಾಣಮಂ ಬಾಣಮಂ ।
ತೆನೆ ಬಿಲ್ಲೊಳ್ಗುಣಮಂ ಗುಣಂಗಿಡಿಸೆ ಪೆಂಪಂ ತಾಳ್ದಿದಂ ಭಾವಜಾ ॥
ತನನಾಭಾವ ತಪಃಪ್ರಭಾವಮನಿಶಂ ನಿರ್ಮೂಳನಂ ಮಾಡೆ ಭೂ ।
ವಿನುತಂ ಮಾಧವಚಂದ್ರ ದಿವ್ಯಮುನಿಪಂ ತ್ರೈವಿದ್ಯವಿದ್ಯಾಧಿಪಂ ॥ ೪೯ ॥

ಉ ॥ ಚಾರುಚರಿತ್ರ ಕೈರವವಿಕಾಸಿ ವಿನಿರ್ಮಳವರ್ತಿ ಚಂದ್ರಿಕಾ ।
ಶ್ರೀರುಚಿ ಸತ್ಪಥೋಚಿತ ಕಳಾವಿಳಸರ್ ಶುಭಚಂದ್ರದೇವ ಭ ॥
ಟ್ಟಾರಕ ಗೌರವೋನ್ನತಿ ಶರತ್ಸಮಯರ್ ಸಮಯಾಬ್ಧಿಚಂದ್ರಭ ।
ಟ್ಟಾರಕರೊಪ್ಪುವರ್ ಲಲಿತಕೀರ್ತಿಗಳಾಶ್ರಿತ ಪುಣ್ಯಮೂರ್ತಿಗಳ್ ॥ ೫೦ ॥

ಶಾ ॥ ಶ್ರೀನಂದಿವ್ರತಿನಾಥಶಿಷ್ಯತಿಳಕಂ ಪ್ರಸ್ತುತ್ಯ ಸಾಹಿತ್ಯವಿ ।
ದ್ಯಾನಿಸ್ತಾರಕ ದೇವನಂದಿ ಪರವಿದ್ಯಾಪ್ರೌಢಿಯಿಂ ಭೂನುತ ॥
ಖ್ಯಾತಶ್ರೀಪ್ರಭು ಪೂಜ್ಯಪಾದನೆನಿಪಂದಾಶ್ಚರ್ಯಮೇನರ್ಕವಿ ।
ದ್ಯಾನಂದಪ್ರಭುವಾದನಚ್ಚರಿ ಕರಂ ತ್ರೈವಿದ್ಯಚಕ್ರೇಶ್ವರಂ ॥ ೫೧ ॥

ಸ್ರ ॥ ಪವೇೞ್ವೆಂ ವಾಕ್ಯವಜ್ರಾಂಕುಶವಿದಳಿತ ವಾದಿದ್ವಿಪಂ ಸುಪ್ರಮೇಯ ।
ಪ್ರಾವೀಣ್ಯಶ್ರೀಯಸಾರ್ಯಪ್ರತತಿ ಪೊಗೞ್ವಿಸಂ ತಾಳ್ದಿಯುಂ ಮತ್ತಮೇಯ ॥
ಪ್ರಾವೀಣ್ಯಂ ಶ್ರೀಯನಾಂತಂ ಸ್ವಪರಸಮಯ ತರ್ಕಂಗಳೊಳ್ ಭಾವಸೇನ ।
ತ್ರೈವಿದ್ಯಂ ಚೋದ್ಯಮಾದ್ಯಪ್ರತಿಮ ಪೃಥುಯಶಂ ಹೃದ್ಯಸಾಹಿತ್ಯವಿದ್ಯಂ ॥ ೫೨ ॥

ಉ ॥ ತತ್ವವಿಚಾರಮಾಚರಣಮುಂ ಸುಕವಿತ್ವಮತಿಪ್ರಸನ್ನ ವಾ ।
ಗ್ಮಿತ್ವಮನಪ್ರತರ್ಕ್ಯ ಬಹುತರ್ಕವಿವೇಕ ವಿಶೇಷಬುದ್ಧಿವಾ ॥
ದಿತ್ವಮನೊಂದಿನಿಂದೆಸೆಯೆ ಸಜ್ಜನವಂದಿತ ವೀರನಂದಿ ಸಾ ।
ಧುತ್ವಮನೊಂದಿದಂ ಕುಮುದಚಂದ್ರಮುನೀಂದ್ರ ಸಮಗ್ರನಂದನಂ ॥ ೫೩ ॥

ಕಂ ॥ ಕ್ಷೋಣಿನುತ ಧರ್ಮಜಾತ ।
ಪ್ರೀಣಂ ಗುಣಧಾರಿ ಧೀರನತಿಶಯ ಲಕ್ಷ್ಮಾ ॥
ಕ್ಷ್ಮಾಣಂ ಪರಹೃದಯಾಗಮ ।
ಬಾಣಾಳಿ ಧನಂಜಯಂ ಧನಂಜಯನೆ ವಲಂ ॥ ೫೪ ॥

ಭೂಪಾಳವಂದ್ಯ ಚರಿತಂ ।
ಭೂಪಾಳಾಸ್ಥಾನ ಹೃದ್ಯವಿದ್ಯಾಸ್ಥಾನಂ ॥
ಜ್ಞಾಪಿಸಿದನಿಂತು ಕೃತಿಕುಳ ।
ದೀಪಂ ಭೂಪಾಳದೇವನೆಂಬೀ ಪೆಸರಂ ॥ ೫೫ ॥

ಶ್ರೀಗುಣಗರ್ಭಂ ಕೀರ್ತಿಕ ।
ಳಾಗರ್ಭಂ ಸೂಕ್ತಿ ಸಂಗತಾಧ್ಯಾತ್ಮಂ ಜೈ ॥
ನಾಗಮಗರ್ಭಮಿದೆನೆ ಜಗ ।
ತೀಗುರು ನೆಗಳ್ದಂ ಪ್ರಸನ್ನಗುಣನಾಚಣ್ಣಂ ॥ ೫೬ ॥

ನವರಸದೊಳಮಿತರರಸ ।
ಕ್ಕವಕಾಶಂಗುಡದೆ ತಳೆಯೆ ಶಾಂತರಸಮನಂ ॥
ತವಿಚಳನಮವುಂ ಕರೆಗ ।
ಣ್ಮುವುವೆನೆ ಪೃಥುಹೃದಯನಾದನೆಂತಾಚಣ್ಣಂ ॥ ೫೭ ॥

ಗುಣವರ್ಮಂ ಸತ್ಕವಿತಾ ।
ಗುಣಮುಂ ಭವ್ಯತ್ವಗುಣಮುಮಾತ್ಮಯಶೋರ ।
ಕ್ಷಣಮೆನೆ ಮೆಱೆದಂ ಪೆಸರಂ ।
ಪ್ರಣೂತಮೆನೆ ಪೇಳ್ದಿ ನೇಮಿನಾಥಾನ್ವಯಮಂ ॥ ೫೮ ॥

ಚದುರರೆನಿಸಿದರಚಿತ್ತ ।
ಕ್ಕಿದು ಪೊಸತೆನಿಸಿರ್ದ ರೀತಿಯಂ ನಿರ್ವಹಿಪ ॥
ಗ್ಗದ ಬಲ್ಮೆ ಬಗೆಯೆ ತನಗ ।
ಲ್ಲದೆ ಪೆಱರ್ಗಿಲ್ಲೆನಿಪ ಪೊನ್ನನಂ ಪೊಗಳದರಾರ್ ॥ ೫೯ ॥

ಚತುರ ಚಮತ್ಕೃತಿಯುದ್ಧಾ ।
ಟಿತರಮಣೀಯಂ ದಿಟಕ್ಕೆ ಪಂಪನ ಕೃತಿ ಮಿ ॥
ಕ್ಕಿತರರ ಕೃತಿತತಿಯವಿಚಾ ।
ರಿತ ರಮಣೀಯಂ ವಿದಗ್ಧರಂ ಮೆಚ್ಚಿಕುಮೇ ॥ ೬೦ ॥

ರನ್ನನ ಕೃತಿಪದಕಮುಮಂ ।
ಸನ್ನುತನೂತ್ನಾರ್ಥವ್ಯಕ್ತಮಂ ಸತ್ಕೃತಿಯಂ ॥
ಯತ್ನದೆ ಸುಜನರ್ ವಿಜಿತಸ ।
ಪತ್ನಮನತಿ ಪೃಥುಳಹೃದಯದೊಳ್ ತಳೆಯದರಾರ್ ॥ ೬೧ ॥

ಕಂ॥ ವಾಸ್ತವ ಭಕ್ತಿಯುತಂ ರೂ ।
ಪಸ್ತವನ ಮಣಿಪ್ರವಾಳಮಂ ಜಿನನಾಥ ॥
ಸ್ಥಾಸ್ತವನಮನೊದವಿಸಿ ಭುವ ।
ನಸ್ತುತನಾದಗ್ಗಳಂಗಮಗ್ಗಳರೊಳರೇ ॥ ೬೨ ॥

ಇಂಪೆಸೆಯೆ ವಿಪಂಚಿಯುದನಿ ।
ಯಂ ಪೋಲ್ತಿರೆ ಸುಕರ ಸರಸ ಸೂಕ್ತಿವಿಳಾಸಂ ॥
ಪಂಪಂ ನುಡಿದಂ ಅಭಿನವ ।
ಪಂಪನೆ ನುಡಿದಂ ಬೞಿಕ್ಕೆ ಕಳಕಂಠನವೋಲ್ ॥ ೬೩ ॥

ಘನಕಳೆಗೆ ಮಾಣಿಕಮನೀ ।
ವನ ತೆಱದಿಂ ಪೆಱರ್ಗೆ ಕಾವ್ಯಮಂ ಕುಡದೆ ಯಶೋ ॥
ಧನಕೆ ಬುಧಜನಕೆ ಕೊಟ್ಟೊ ।
ರ್ವನೆ ಸುಜನೋತ್ತಂಸನೆನಿಸಿದಂ ಬೊಪ್ಪಣ್ಣಂ ॥ ೬೪ ॥

ಅಂಹಮನಪಹರಿಸುವ ಗುಣ ।
ಸಂಹತಿಯುಂ ತಳೆದ ಕೇಸಿಯಣ್ಣನ ಬುಧವೃಂ ॥
ದಂ ಪೊಗೞೆ ಸುಕೃತ ಸಿಂಹಂ ।
ಸಿಂಹಪ್ರಾಯೋಪಗಮನಮಂ ವಿರಚಿಸಿದಂ ॥ ೬೫ ॥

ಕಾಮನ ಬಾಣಕ್ಕಂ ಕವಿ ।
ಕಾಮನ ಬಾಣಕ್ಕಮಿಲ್ಲ ಭೇದಂ ಸುಮನೋ ॥
ರಾಮತೆಯಿಂ ಸ್ತನತತಕೋ ।
ದ್ದಾಮತೆಯಿಂ ಭುವನಮಂ ವಶಂ ಮಾೞ್ಪುದಱಿಂ ॥ ೬೬ ॥

ಜಿನವೃಂದ ಸ್ತವನದೆ ಪಾ ।
ವನಮೆನಿಸುವ ಸೂಕ್ತಿ ಕೀರ್ತಿ ದೀಪಿಕೆಗುಜ್ಜೀ ॥
ವನಕರಮೆನೆ ಕೌತುಕಮಂ ।
ಜನಿಯಿಸುಗುಂ ಕವಿಗಳೊಳಗೆ ನೆಗೞ್ದಗ್ಗಳನಾ ॥ ೬೭ ॥

ಸುಮನೋಧರ್ಮಗುಣಂಗಳೊ ।
ಳಮರ್ದಮರ್ದಂ ಕಱೆವ ನೇಮಿಚಂದ್ರನ ಬಾಣಂ ॥
ಭ್ರಮರಹಿತಂ ಮೃದುಹೃದಯಂ ।
ಗಮಮೆನಿಪುದಿದಾವ ಕೌತುಕಂ ಬುಧಜನದಾ ॥ ೬೮ ॥

ವಕ್ರೋಕ್ತಿ ಭವಯಶಃಜ್ಯೋ ।
ತ್ಸ್ನಾಕ್ರಾಂತ ಪರಾವಲೇಪತಿಮಿರಂ ಧರಣೀ ॥
ಚಕ್ರದೊಳತಿಚಿತ್ರಂ ಕವಿ ।
ಚಕ್ರಪ್ರಿಯನೆನಿಸಿ ಬಾಳಚಂದ್ರಂ ನೆಗೞ್ದಂ ॥ ೬೯ ॥

ಕಂ॥ ಶ್ರುತಿಸೂತ್ರಾರ್ಥೋತ್ಪಾದನ ।
ಚತುರತೆಯುಂ ವಿವಿಧಕೀರ್ತಿಲಕ್ಷ್ಮೀಸತಿಯುಂ ॥
ಕ್ಷಿತಿಯೊಳೆ ಕಾವ್ಯಕಳಾಪಂ ।
ಚತುರ್ಮುಖಂಗೆಸೆವ ವಾಸುದೇವಂಗರಿದೇ ॥ ೭೦ ॥

ನೂತನ ಕವಿಗಳುಮೆನಗೆ ಪು ।
ರಾತನ ಕವಿಗಳ್ಸಮಾನರನತಿಶಯಗುಣಾ ॥
ನ್ವೀತರೆನಿಸುವೊಡೆ ಗುಣಸಂ ।
ಪ್ರೀತಿಯಿನವರುಂ ವಿನಮ್ರರತಿವಿಖ್ಯಾತರ್ ॥ ೭೧ ॥

ಉ॥ ಪಂಪನ ನುಣ್ಪುವೆತ್ತನುಡಿ ಪೊನ್ನನ ಬಿನ್ನಣದೋಜೆ ರನ್ನನೊ ।
ಳ್ಪಿಂ ಪುದಿದಿರ್ದ ಲಕ್ಷಣವಿಚಕ್ಷಣದೋನ್ನತಿ ಕಣ್ಣಮಯ್ಯನಿಂ ॥
ಪಂ ಪುದಿದರ್ಥಗೌರವಗುಣಂ ಗುಣವರ್ಮನ ದೇಸೆವೆತ್ತ ಮಾ ।
ತಂ ಪರಿಕಿಪ್ಪೊಡೀಕೃತಿಯೊಳುಂಟೆನೆ ಪೇಱ್ವುದು ಪೇಱಲೊಲ್ವವಂ ॥ ೭೨ ॥

ಚಂ॥ ನುಡಿ ಪೊಸತಾಯ್ತು ದೇಸೆ ಪೊಸತಾಯ್ತು ನಯಂ ಪೊಸತಾಯ್ತು ರೇಖೆ ಸೋ ।
ರ್ಪೊಡೆ ಪೊಸತಾಯ್ತು ಕಾಕು ಪೊಸತಾಯ್ತು ಚಲಂ ಪೊಸತಾಯ್ತು ಜಾಣೊಡಂ॥
ಬಡೆ ಪೊಸತಾಯ್ತು ಕೊಂಕು ಪೊಸತಾಯ್ತು ರಸಂ ಪೊಸತಾಯ್ತು ತನ್ನಿನಂ ।
ದೊಡೆ ಕವಿಪೇಱ್ವುದಲ್ಲದೊಡೆ ಕಾವ್ಯಮದೆಂಬುದು ಸೇವ್ಯಮಕ್ಕುಮೇ ॥ ೭೩ ॥

ಕಂ॥ ಸಾರಪ್ರಸನ್ನತರಗಂ ।
ಭೀರ ಗುಣಾಧಾರ ಪದದೊಳಿರ್ಪಂದದೆ ಶೃಂ ॥
ಗಾರಾದಿ ರಸಸಮೃದ್ಧಿ ವಿ ।
ಚಾರಿಪೊಡುತ್ತಾನಪದದೊಳಿರಲಱಿದಪುದೇ ॥ ೭೪ ॥

ವಿರಳಂ ಕೃತಿವನಿತೆ ಮನೋ ।
ಹರೆಯೆನೆಯೆನೆ ಎಸೆವ ತೆಱದೆ ಕೃತಿಯುಚಿತಾಳಂ ॥
ಕರಣಪರಿವಿಗತಮಾಗು ।
ತ್ತಿರೆ ಚದುರರಸಂ ಸಹೃದಯಮಮಂ ಮೆಚ್ಚಿಕುಮೇ ॥ ೭೫ ॥

ಮಸೃಣ ಪ್ರಸನ್ನ ಪದಮಾ' ।
ಗಸವಳಿಕೆಂಕೆಡೆಯೊಳಿರ್ದುಮಿಲ್ಲದವೋಲ್ ತೋ ॥
ಱಿಸುವಂತಿರರ್ಥಮಂ ಪ್ರಕ ।
ಟಿಸುತುಂ ತಾಂ ಪೇಱದಿರ್ಪ ಕವಿಯುಂ ಕವಿಯೇ ॥ ೭೬ ॥

ಇದು ಚಿತ್ರಂ ಕವಿತಾಧ ।
ರ್ಮದೊಳೊಂದಿದ ಬಾಳಮಿನಿತು ತಿರ್ದಿದೊಡಂ ಕೊಂ ॥
ಕಿದುದೆ ಬಗೆವಂದು ಬಲ್ಲರ ।
ಹೃದಯಮನದು ಪೋಗಿ ತಾಗಿ ತಲೆದೂಗಿಸುಗುಂ ॥ ೭೭ ॥

ಕಂ॥ ಪ್ರವಿರಳಮಣಿಯಿರೆ ವರ್ತಿಯ ।
ನವಿರಳಗುಣಸಹಜಕವಿಯ ಕಾವ್ಯಮದಿರೆ ಬ ॥
ಲ್ಲವರಿತರ ಕಾವ್ಯಮಂ ಮಾ ।
ಡುವನ್ನರಾರ್ ಕರ್ಣಹೃದಯ ನವಭೂಷಣಮಂ ॥ ೭೮ ॥

ಕನಕಂ ನಿಘರ್ಷಣಚ್ಛೇ ।
ದನಾದಿಯಿಂ ಕಾಂತಿವಡೆವವೋಲ್ ದೋಷಜ್ಞರ್ ॥
ಮುನಿದೊಸೆದು ಪರೀಕ್ಷಿಸಿದೊಡ ।
ಮನುಪಮಗುಣವೊಂದದಂದು ಕೃತಿಸಂದಪುದೇ ॥ ೭೯ ॥

ದೋಷಜ್ಞರಖಿಳಕಾವ್ಯವಿ ।
ಶೇಷಜ್ಞರ್ ಗುಣವಿಶೇಷಮಂ ಪ್ರಕಟಿಪೊಡಂ ॥
ದೂಷಣಪರರಪ್ಪೊಡವರ್ ।
ದೋಷಜ್ಞರೆನಿಪ್ಪರೊಪ್ಪುವನ್ವರ್ಥತೆಯಿಂ ॥ ೮೦ ॥

ಪರಮಾಣುಪ್ರಾಯಂ ಗುಣ ।
ಮಿರೆ ಮೆಚ್ಚುವ ಸುಜನರಿಂದೆ ದುರ್ಜನರೆಮಗಿಂ ॥
ಗುರುಗಳ್ ದೋಷಲವಮುಮಿರೆ ।
ಪರಿಹರಿಪಂತೂಱಿ ತೋಱಿ ನುಡಿವುದರಿಂದಂ ॥ ೮೧ ॥

ಮಾನಿತ ಕವಿಕೃತಿ ಬುಧಸಂ ।
ತಾನಕ್ಕುತ್ಸವಮನೊದವಿಪಂತಿರಸೂಯಾ ।
ಧೀನಂಗೊದವಿಸದಂತೆ ಕ ।
ಳಾನಿಧಿಯುದಯಂ ಖಳಂಗೆ ಸುಖದಾಯಕಮೇ ॥ ೮೨ ॥

ಉ॥ ಇಂದುಮರೀಚಿ ಮಾವು ಪೊಸಮಲ್ಲಿಗೆ ಪಾದರಿ ಜಾದಿ ಚಂಪಕಂ ।
ಕುಂದಮಿವಾದಿಯಾದ ಕುಸುಮಂ ಕಳಕಂಠವಿಪಂಚಿಯಿಂಚರಂ ॥
ಚಂದನದಣ್ಪು ಕರ್ಪುರದ ತಂಬುಲಮೆಂಬಿವಗಲ್ದವರ್ಗೆ ಕಾ ।
ವ್ಯಂ ದೊರೆಗೆಟ್ಟ ದುರ್ಜನಗಸಹ್ಯಮೆ ಪಾಲ್ ಜ್ವರಿತಂಗೆ ಪಥ್ಯಮೇ ॥ ೮೩ ॥

ಕಂ॥ ಪೊನ್ನೊಳೊಡಗೂಡಿ ಯುವಲೋ ।
ಹನ್ನಾಶಮನೆಯ್ದಿ ತಾಪಮಂ ಪಡೆದುಮದ ।
ರ್ಕುನ್ನತಿಯನಿತ್ತುದಂತೆ ಗು ।
ಣೋನ್ನತಿಯೊಳ್ ಖಳನ ಮುಳಿಸು ಗುಣಮನೆ ಪಡೆಗುಂ ॥ ೮೪ ॥

ಮುಂದುಗಿಡೆ ಗೂಗೆ ಬೆಳಗದೆ ।
ನಿಂದನೆ ರವಿ ಜಗಮನಂತೆ ಕವಿ ದುರ್ಜನನೇಂ ॥
ಮುಂದುಗಿಡೆ ಬುಧರ್ಗೆ ಪರಮಾ ।
ನಂದಂಬಡೆವಂತು ಪೇೞದಿರ್ಕುಮೆ ಕೃತಿಯಂ ॥ ೮೫ ॥

ಕಂ ॥ ಇನಿದೆನಿಸುವ ವಸ್ತುಗಳಱ್ ।
ವನನಱಿಯದ ನರರನೊಲಿಸುವಂತೆವೊಲಿಂಪಂ ॥
ಜನಿಯಿಸುವೆನ್ನಯಕೃತಿ ಸ ।
ಜ್ಜನರುಮನಿತರರುಮನೊಲಿಸುವುದು ವಿಸ್ಮಯಮೇ ॥ ೮೬ ॥

ಶಾ ॥ ಸತ್ಕೀರ್ತಿಪ್ರಮದಾವಶೀಕರಣಮಂತ್ರಂ ಕಾಂತಿಯುಕ್ತಂ ಮನ ।
ಕ್ಕುತ್ಕೀಳಪ್ರಭವಂ ಪ್ರಸಿದ್ಧಮತಿದುಷ್ಪತ್ವಂ ಪರೀಕ್ಷಾಕ್ಷಮಂ ॥
ಮತ್ಕಾವ್ಯಂ ಗುಣರತ್ನಶೋಭಿ ಸರಸಂ ಸಾರಂ ಸುವರ್ಣಪ್ರಿಯಂ ।
ಹೃತ್ಕರ್ಣಾಭರಣಂ ಸಮಸ್ತಬುಧವೃಂದಕ್ಕಪ್ಪುದೇನೊಪ್ಪದೇ ॥ ೮೭ ॥

ಮ.ಸ್ರ॥ ಘನಶಬ್ದಾಡಂಬರೋತ್ಪತ್ತಿಯಿನಖಿಳರಸೋತ್ಪಾದನಪ್ರೌಢಿಯಿಂ ಸ ।
ಜ್ಜನ ಚೇತಶ್ಚಾತಕಾಸ್ವಾದಿತ ವಚನಸುವಾರ್ಬಿಂದುಸಂದೋಹದಿಂ ಭೂ ।
ವಿನುತ ಶ್ರೀಕೀರ್ತಿವಲ್ಲೀ ಜನನ ವಿಭವದಿಂ ನಿಟ್ಟಿಸಲ್ನೆಟ್ಟನಿಂತೀ ।
ತನೆ ಸಂಪಚ್ಚಾರುಮೇಘಂ ಸುಕವಿಜನಮನೋಹರ್ಷಸಸ್ಯಪ್ರವರ್ಷಂ ॥ ೮೮ ॥

ಪ್ರಕಟಪ್ರಜ್ಞೋದಯಂ ವ್ಯಾವೃತವಿಪುಳಪದಾರ್ಥತ್ವದಿಂ ದುಷ್ಟಹೃತ್ಕಾ ।
ಶಿಕ ದೃಕ್ಸಂಪಾದಿತಾಂಧತ್ವದಿನಮಳತೆಯಿಂ ಲೋಕದೀಪಪ್ರರೂಪಾ ॥
ಧಿಕ ವಿಖ್ಯಾತತ್ವದೀತಂ ಬಗೆಯೆ ಜಗದೊಳಾನಮ್ನ ಭವ್ಯರ್ಗೆ ಚಕ್ರಾ ।
ಹ್ವಕುಳಕ್ಕೊಲ್ದೀವ ಪೆಂಪಿಂ ವಿಬುಧಜನಮನಃಪದ್ಮಿನೀಪದ್ಮಮಿತ್ರಂ ॥ ೮೯ ॥

ಕಂ ॥ ಘನಚಂದನ ರಸರುಚಿರಂ ।
ಸುನಿರ್ಮಳಂ ಶೀತಳಂ ಜಗನ್ಮಂಗಳಮು ॥
ಖ್ಯನಶೇಷ ಸುಜನಮುಖಮಂ ।
ಡನನೆನಿಸುವ ವಿಭವದಿಂದೆ ಕವಿಕುಳತಿಳಕಂ ॥ ೯೦ ॥

ಎಂಬನುಪಮ ನಿಜಗುಣನಾ ।
ಮಂ ಬುಧನಿಕರಕ್ಕೆ ರತ್ನಕಂಠಿಕೆಯವೊಲೊ ॥
ಪ್ಪಂಬೆತ್ತಿರೆ ಕೀರ್ತಿಸುಧಾ ।
ಬಿಂಬೋದಯದಿಂದೆ ಬೆಳಗಿದಂ ಕುಲಗಿರಿಯಂ ॥ ೯೧ ॥

ಉ ॥ ಲೋಕಗಣನಾಯಕಂ ವಿಬುಧಲೋಕನುತಂ ಪಿತೃ ಕಾಮಿಯಕ್ಕನ ।
ವ್ಯಾಕುಳಶೀಲೆ ತಾಯ್ ತನಗೆ ನಾಗಣನುತ್ತಮಭೋಗನಗ್ರಜಂ ॥
ಶ್ರೀಕುಮುದೇಂದುನಿರ್ಮಳಯಶಃಪ್ರಸರಂ ಗುರು ವಾಸುಪೂಜ್ಯನಾ ।
ತ್ಮೀಕೃತ ತತ್ವನಾಗಿ ನೆಗಳ್ದಿಂ ಗುಣಮಂಡನ ಪಾರ್ಶ್ವಮಂಡನಂ ॥ ೯೨ ॥

ಕಂ ॥ ತನ್ನೊಳ್ಪನೀವ ಗುಣಸಂ ।
ಪನ್ನನನೊಲ್ದಱಸಿ ಪೊಗಳ್ವುದೀ ಗುಣದಿಂ ಸಂ ॥
ಪನ್ನಂ ಜಿನೇಂದ್ರನದಱಿಂ ।
ತನ್ನಱಿವಂದದೊಳೆ ಭಕ್ತಿಯಿಂ ಬಣ್ಣಿಸುಗುಂ ॥ ೯೩ ॥

ಕಂ ॥ ವಾಸ್ತವಗುಣಯುತನಖಿಳಮ ।
ಹೀಸ್ತುತ ತೀರ್ಥಕರಚರಿತಮಂ ಸುಕೃತಜನ ॥
ಪ್ರಸ್ತುತಮಂ ಸ್ತುತಿಯಿಸದ ।
ಪ್ರಸ್ತುತಮಂ ಸ್ತುತಿಯಿಪಂದು ಪಡೆಗುಮೆ ವಿಬುಧರ್ ॥ ೯೪ ॥

ಚಂ ॥ ಪುರುಜಿನಪಾರ್ಶ್ವದೊಳ್ ವೃಷಭಸೇನಗಣಾಗ್ರಣಿ ತಜ್ಜಿನೋಕ್ತಮಂ ।
ಭರತನೃಪಂಗೆ ವೀರಜಿನಪಾರ್ಶ್ವದೊಳಾಜಿನಸೂಕ್ತಮಂಗಳಂ ॥
ಗುರುಗುಣಗೌತಮರ್ ಮಗಧಮಂಡಳಿಕಂಗೊಲವಿಂದೆ ಪೇೞ್ದುದಂ ।
ನಿರುಪಮ ವಿಶ್ರುತಶ್ರುತಧರೌಘಪರಂಪರೆಯಿಂದೆ ಬಂದುದಂ ॥ ೯೫ ॥

ಕಂ ॥ ಪಾರ್ಶ್ವಜಿನಪತಿಯ ನಿಜಪದ ।
ಪಾರ್ಶ್ವಾನತ ಭುವನಪತಿಯ ಚರಿತಮನೊಲವಿಂ ॥
ಪಾರ್ಶ್ವಬುಧಂ ಸತ್ಕೃತಿ ಕೃತಿ ।
ಪಾರ್ಶ್ವದೊಳತಿ ಚದುರರೋದುವಂತಿರೆ ಪೇೞ್ವೆಂ ॥ ೯೬ ॥

ರಸಭಾವಂ ಪೊಸತೆನೆ ನ ।
ಡೆಸಲಱಿವಳ್ ಬೞಿಕೆ ನಡೆಪಂತೀಕೃತಿಯಂ ॥
ಪೊಸಯಿಸಿದಂ ಮುನ್ನುಳ್ಳೊಡ ।
ಲಸಮ ರಸಪ್ರಸರಮೆಸೆಯೆ ಕವಿಕುಳತಿಳಕಂ ॥ ೯೭ ॥

— ಇಂತು ಪೀಠಿಕಾಪ್ರಕರಣಂ —

॥ ಶ್ರೀ ವೀತರಾಗಾಯ ನಮಃ ॥

ವ ॥ ಅದೆಂತೆಂದೊಡೆ—

ಕಂ ॥ ಎಡೆಗೊಟ್ಟು ದೇವಸಮಿತಿಗೆ ।
ಬಿಡದನಿಲತ್ರಿತಯವೃತ್ತಿಯಿಂದೆ ತ್ರಿಜಗಂ ॥
ಕಡೆದೋಱದಿರ್ಪ ಗಗನದ ।
ನಡುವಿರ್ಪುದು ನೂಲಸೆಜ್ಜೆಯಂ ನೇಱಿದವೋಲ್ ॥ ೯೮ ॥

ಪದಿನಾಲ್ಕು ರಜ್ಜು ನೆಗೞ್ದುದ ।
ಯದೆ ಮತ್ತನುಹಾನಿಯೆಂದು ಮೇಣಯ್ದೆಂ ॥
ದದರಜ್ಜುವ ಪವಣೆಂದೆನೆ ।
ಮೊದಲಿಂ ತುದಿವರೆಗಮಗಲದಗಲದ ಚೆಲ್ವಿಂ ॥ ೯೯ ॥

ಅವ್ಯಾಬಾಧಮಕೃತ್ರಿಮ ।
ಮವ್ಯಾಹತಮುಕ್ತಿ ಚಿತ್ತವಲ್ಲಭ ಜಿನ ಬೋ ॥
ಧವ್ಯಾಪ್ತಂ ಸಂಚಿತ ಷ ।
ಡ್ದ್ರವ್ಯಮಧಸ್ತಿರ್ಯಗೂರ್ಧ್ವಭೇದಂ ಭುವನಂ ॥ ೧೦೦ ॥

ವ ॥ ಆ ಭುವನತ್ರಯದ ನಟ್ಟನಡುವೆ—

ಕಂ ॥ ಉತ್ತಮಗುಣ ಭುವನಪ್ರಭು ।
ಗೆತ್ತಿದ ಸತ್ತಿಗೆಯನಿಳಿಸೆ ಗಗನಸ್ಥಳಿ ತಾ ॥
ಳ್ದಿತ್ತದಱ ಕಾವಿನೊಳ್ಪನು ।
ದಾತ್ತ ತ್ರಸನಾಳಮೇಕರಜ್ಜುವಿಶಾಳಂ ॥ ೧೦೧ ॥

ಶೋಭಿಪ ಭುವನತ್ರಯ ಲ ।
ಕ್ಷ್ಮೀಭಾಸುರಮಧ್ಯಮೆನಿಸಿ ಮಧ್ಯಮಲೋಕಂ ॥
ಶ್ರೀಭೃತಜಂಬೂದ್ವೀಪಂ ।
ನಾಭಿವಳಿತ್ರಿತಯಮೆನಿಸೆ ಪವನತ್ರಿತಯಂ ॥ ೧೦೨ ॥

ವ ॥ ಅಲ್ಲಿ

ಕಂ ॥ ತತ್ತದ್ವಿಗುಣಕ್ರಮದಿಂ ।
ದೆತ್ತಂ ದ್ವೀಪಾಬ್ಧಿಗಳ್ ಸ್ವಯಂಭೂರಮಣೋ ॥
ದಾತ್ತಾಂಬುಧಿಪರ್ಯಂತಂ ।
ಸುತ್ತಿರ್ದುವಸಂಖ್ಯಮೆನಿಸಿ ವಳಯಾಕೃತಿಯಿಂ ॥ ೧೦೩ ॥

ವ ॥ ಅವಱೊಳಗೆ

ಮ॥ ಅವಿಲಂಘ್ಯಂ ನಿಜತೇಜಮೊಪ್ಪೆ ಶರಣಾಯಾತಂ ಕುಭೃದ್ವಾಹಿನೀ ।
ನಿವಹಂ ಕೂಡಿರೆ ಪೆಂಪುವೆತ್ತವನಿಯಂ ತನ್ನಂತೆ ಮರ್ಯಾದೆಯಿಂ ॥
ಭುವನಪ್ರಸ್ತುತರಾಗಿ ಪಾಳಿಪುದು ಧಾತ್ರೀಪಾಳರೆಂದೊಲ್ದು ಪೇ ।
ಳ್ವವೊಲುತ್ತುಂಗತರಂಗಘೋಷದೆ ಕರಂ ವಾರಾಶಿ ಕಣ್ಗೊಪ್ಪುಗುಂ ॥ ೧೦೪ ॥

ವ ॥ ಅಂತುಮಲ್ಲದೆಯುಂ

ಮ॥ ಉರಗೇಂದ್ರಾಭಿಮತಾಂತರಂಗ ಬಹಿರಂಗಶ್ರೀಯುತಂ ವ್ಯಕ್ತರ ।
ತ್ನರುಚಿ ವ್ಯಾಪೃತ ನಿಷ್ಕಳಂಕಹೃದಯಂ ನಿತ್ಯಂ ಗಭೀರಂ ಸುರಾ ॥
ಸುರಸೇವ್ಯಂ ಕಮಠಪ್ರಣೂತವಿಭವಂ ಶ್ರೀಪಾರ್ಶ್ವತೀರ್ಥೇಶನಂ ।
ತಿರೆ ಪೂರ್ಣಂ ಲವಣಾರ್ಣವಂ ಸೊಗಯಿಕುಂ ನೀಲಪ್ರಭಾಡಂಬರಂ ॥ ೧೦೫ ॥

ವ ॥ ಆಜಳನಿಧಿಯಿಂದೊಳಗೆ

ಕಂ ॥ ಜಂಬೂವೃಕ್ಷದಿನೆಸೆವುದು ।
ಜಂಬೂದ್ವೀಪಂ ಸುಧಾಂಶುವಟವೃಕ್ಷದಿನಿಂ ॥
ತೆಂಬುದೆ ಭೇದಮುವೆರಡ ।
ಕ್ಕಂ ಬಗೆವೊಡೆ ಭೇದಮಿಲ್ಲ ಕಡುಚೆಲುವಿಂದಂ ॥ ೧೦೬ ॥

ವ ॥ ಅದರ ಮಧ್ಯಪ್ರದೇಶಕ್ಕಳಂಕಾರಮೆನಿಸಿ—

ಮ ॥ ಪುದಿದಿಂದ್ರಾಚಳದೊಂದು ಚೆಲ್ವನದನಿನ್ನೇವಣ್ಣಿಪೆಂ ನಾಗಲೋ ।
ಕದ ಚೆಲ್ವಂ ಬಿಡದಿಕ್ಕಿಮೆಟ್ಟಿದುದು ರತ್ನಶ್ರೇಣಿಯಿಂ ಮಧ್ಯಲೋ ॥
ಕದ ಚೆಲ್ವಂ ಗೆಡೆಗೊಂಡುದಿಂದ್ರ ಮಹಿಜಾತವ್ರಾತದಿಂ ನಾಗಲೋ ।
ಕದ ಚೆಲ್ವಂ ಸಲೆ ತಾಳ್ದಿ ನಿಂದುದದು ಚಂಚಚ್ಚೂಳಿಕಾಲೀಲೆಯಿಂ ॥ ೧೦೭ ॥

ವ ॥ ಅದಲ್ಲದೆಯುಂ—

ಕಂ ॥ ಜಂಬೂದ್ವೀಪದ ನಡುವೆ ನಿ ।
ತಂಬದ ಮಣಿಕಾಂತಿ ನಿಮಿರೆ ದೆಸೆದೆಸೆಗೆ ದಿಶಾ ॥
ಸ್ತಂಬೇರಮಕ್ಕೆ ಬಿರುದಿನ ।
ದೆಂಬಿನ ಪೊಂಗಂಭಮೆನಿಸಿ ಮಂದರಮೆಸೆಗುಂ ॥ ೧೦೮ ॥

ತುಂಬಿದ ತಿಳಿಗೊಳನೆನೆ ಲವ ।
ಣಾಂಬುಧಿಯಂಬುರುಹಮೆನಿಸಿ ಜಂಬೂದ್ವೀಪಂ ॥
ಪೊಂಬೆಟ್ಟಮದಱ ಕರ್ಣಿಕೆ ।
ಯೆಂಬಂದದೆ ಮಧ್ಯದಲ್ಲಿ ಕಣ್ಗೆಸೆದಿರ್ಕುಂ ॥ ೧೦೯ ॥

ಆ ಗಿರಿಯಿಂ ದಕ್ಷಿಣದಿ ।
ಗ್ಭಾಗದೊಳಿರ್ಪುದು ಶುಭರತ ಭರತಂ ಚೆಲುವಿಂ ॥
ಗಾಗರಮದಱೊಳಗೆಸೆವುದು ।
ರಾಗಾಮೃತ ಮಣಿಕರಂಡಮಾರ್ಯಾಖಂಡಂ ॥ ೧೧೦ ॥

ವ ॥ ಅಲ್ಲಿ—

ಉ ॥ ಸೌಮ್ಯನವೀನ ಯೌವನವಧೂಜನದಿಂ ಭರತೇಂದ್ರವಾಹಿನೀ ।
ಹೇಮ್ಯನಗೋಪಮಾನ ಮಯನೀಯಕಳಾಗಮ ಕೋವಿದರ್ಕಳಿಂ ॥
ಭ್ರಾಮ್ಯದಳಿಪ್ರಸೂನ ಸಹಕಾರ ಸರೋರುಹದಿಂದೆ ಕಾಮ್ಯಮ ।
ಗ್ರಾಮ್ಯಮತೀವರಮ್ಯಮೆನೆ ಬಣ್ಣಿಸರಾರೊ ಸುರಮ್ಯದೇಶಮಂ ॥ ೧೧೧ ॥

ವ ॥ ಆ ಸಕಳಜನಸುಖನಿವಾಸ ದೇಶವಿಳಾಸಿನಿಯ ಭಾಸುರಮಧ್ಯಪ್ರದೇಶಕ್ಕೆ ಶೋಭಾನಾಭಿಯೆನಿಸಿ—

ಚಂ ॥ ಧನದನಿವಾಸದಿಂ ಮಣಿಮಯೋಜ್ವಳ ದೇವಕುಲಂಗಳಿಂದೆ ನಂ ।
ದನವನದಿಂ ಸುಧರ್ಮಸಭೆಯಿಂ ಸುಮನಃ ಪರಿಶೋಭೆಯಿಂದೆ ಭೂ ॥
ವಿನುತ ಜಿನಾರ್ಚನಾಭಿಷವರರ್ಣನ ಶಕ್ರ ನಿಜೇಶನಿಂದೆ ಪೌ ।
ದನ ಪುರಮೊಪ್ಪುತಿರ್ಪುದಮರಾವತಿಯಂತೆ ಸುವರ್ಣಗೋಪುರಂ ॥ ೧೧೨ ॥

ಕಂ ॥ ಏಮಾತೊ ಬಲುಪಿನಿಂ ಬಹು ।
ಸಾಮಗ್ರಿಯಿನೊಳ್ಪುವೆತ್ತ ಚೆಲುವಿಂದಂ ರ ॥
ಕ್ಷಾ ಮಣಿ ಚಿಂತಾಮಣಿ ಚೂ ।
ಡಾಮಣಿಯೆನೆ ಜನಪದಕ್ಕೆ ನಗರಮದೆಸೆಗುಂ ॥ ೧೧೩ ॥

ಅರವಿಂದನೆನಿಸಿಯುಂ ತ ।
ತ್ಪುರನೃಪತಿ ಜಡಪ್ರಸಂಗರಹಿತಂ ರಜದಿಂ ॥
ಪೊರೆದುಂ ಮಧುಪೋತ್ಕರದಿಂ ।
ಪರಿವೇಷ್ಟಿತನಲ್ಲನಿಂತು ಚಿತ್ರಚರಿತ್ರಂ ॥ ೧೧೪ ॥

ಧರಿಯಿಸಿದಂ ವಿಶದಗುಣೋ ।
ತ್ಕರ ಕಳಿತಂ ರಾಜಹಂಸ ಸಂಕುಳ ಸೇವ್ಯಂ ॥
ಸಿರಿಯಂ ಪ್ರತಾಪದಿಂದಂ ।
ಧರಿಯಿಸಿ ತನ್ನೃಪತಿ ತನ್ನ ಪೆಸರ್ಗನುಗುಣವಂ ॥ ೧೧೫ ॥

ಉತ್ತಮ ಸಚಿವಾಯತ್ತನು ।
ದಾತ್ತಾತ್ಮಾಯತ್ತನವನೀವಲ್ಲಭನುಭಯಾ ॥
ಯತ್ತನೆನಿಸಿರ್ದು ನಿತ್ಯಾ ।
ಯತ್ತಂ ತಾನೆನಿಸಿ ನೆಗಟ್ಟನೇಂ ಗುಣನಿಧಿಯೋ ॥ ೧೧೬ ॥

ಅಸಮ ಪ್ರಜ್ಞಾನಿಧಿ ರಣ ।
ರಸಿಕಂ ತನ್ನೃಪನ ಮಂತ್ರಿ ಪರಹಿತನಧಿಪಂ ॥
ಗೆಸೆವ ನಿಜಮಂತ್ರದಿಂ ಸಾ ।
ಧಿಸಿ ಕೊಟ್ಟಂ ವಿಶ್ವಭೂತಿ ವಿಶ್ವಾವನಿಯಂ ॥ ೧೧೭ ॥

ಏಕಪ್ರಧಾನನೆಂಬುದ ।
ನೇಕಚ್ಛತ್ರಮನೆ ಮಾಡಿ ಮೆಱೆದಂ ಪತಿಗೇ ॥
ಲೋಕಾಧಿಪತ್ಯಮುಂ ವಿ ।
ದ್ಯಾಕುಶಲಂ ವಿಶ್ವಭೂತಿ ವಿಶ್ವಂಭರೆಯೊಳ್ ॥ ೧೧೮ ॥

ಧರಿಯಿಸಿದಳ್ ಚೆಲ್ವನನುಂ ।
ಧರೆ ರತಿಯುಂ ಗೆಲ್ದಳೆಂಬಿನಂ ಬಂಧೂಕಾ ॥
ಧರೆ ಗುಣಮಣಿ ಜನನವಸುಂ ।
ಧರೆ ಗುರುಕುಚೆ ವಿಶ್ವಭೂತಿರಮಣೀರತ್ನಂ ॥ ೧೧೯ ॥

ಕಮಠಂ ಪಿರಿಯುಮಗಂ ಕಿಱಿ ।
ಯುಮಗಂ ಮರುಭೂತಿಯವರ್ಗೆ ಕಮಠನ ಚೇತೋ ॥
ರಮೆ ವಾರುಣಿ ಮರುಭೂತಿಯ ।
ರಮಣಿ ಲತಾ ಲಲಿತತನು ವಸುಂಧರೆಯೆಂಬಳ್ ॥ ೧೨೦ ॥

ಕಂ ॥ ಕಮಠಂ ಕಠಿನನಧೋಗಮ ।
ನಮನಂ ಜಡಸಂಗತಂ ಮಹಾದುರ್ದಮಕ ॥
ರ್ದಮಲೋಲನೆನಿಪವಂ ಭವ ।
ಸಮುದ್ರದೊಳ್ ಮಗ್ನನಪ್ಪುದೇಂ ವಿಸ್ಮಯಮೇ ॥ ೧೨೧ ॥

ಮರುಭೂತಿಯೆನಿಸಿ ವಿತರಣ ।
ಸುರಭೂಜ ವಿರಾಜಿತಂ ವಿಶುದ್ಧಯಶೋವ ॥
ಲ್ಲರಿಯಂ ಪರಿಶೋಭಿಪನ ।
ಚ್ಚರಿ ಬಗೆವೊಡೆ ಸರಸಹೃದಯನಾ ಮಂತ್ರಿಸುತಂ ॥ ೧೨೨ ॥

ವ ॥ ಅಂತಾವಿಶ್ವಭೂತಿ ವಿಶ್ವಭೂತಿಪ್ರದಾಯಕ ಸ್ವಕೀಯನಯೋಪಾಯ ಪ್ರಮುದಿತಹೃದಯಸ್ವಾಮಿಪ್ರಸಾದಾಸಾದಿತಪ್ರಹ್ಲಾದನುಂ, ಮನುಕುಲಕಾನ್ತಾಸಂಭೋಗಸಂಭೂತರಸಾಸ್ವಾದನುಂ ನಯವಿನಯಸಮಾಜತನೂಜಮುಖಾವಳೋಕನ ಸಂಜಾತಪುಳಕನುಂ, ನಿಜಕುಳತಿಳಕನುಂ ದಾನಸನ್ಮಾನಸಂತರ್ಪಿತ ಸುಜನಜನಸಂತಾನನುಂ, ದಿಗ್ವಳಯವರ್ತಿಕೀರ್ತಿಲತಾವಿತಾನನುಂ ಎನಿಸಿ ಸಂಸಾರಸುಧಾರಸಮಂ ಪಲವುಕಾಲಮತಿಲೋಲತೆಯಿನನುಭವಿಸುತ್ತುಮಿರೆ

ಚಂ ॥ ಪಳಿತದುಕೂಲವಸ್ತ್ರ ವಳಿ ಚಂದನಚರ್ಚಿತೆ ನಿಚ್ಚಲುಂ ಮನೋ ।
ಬಳಮೊಳಸೋರೆ ಕಾಯಬಳಮೋಸರಿಸುತ್ತಿರೆ ಮುಂದುಗಾಣದಂ ॥
ತಳವಱಿದಾರಮಾತುಗಳನಾಲಿಸದಂತು ಜರಾಲತಾಂಗಿ ತ ।
ನ್ನೊಳೆನಿಲೆ ಲಕ್ಷ್ಮಶಕ್ತಿ ಮಿಗೆಪೇಸಿದಳುಂ ನೆರೆದಾಪ್ರಧಾನನಂ ॥ ೧೨೩ ॥

ಕಂ ॥ ನೆಟ್ಟನೆ ಬಲವಱಿಯೆ ಜವಂ ।
ಗೆಟ್ಟರೆ ತನು ಶಿಥಿಲಮಾಗೆ ಕಾಯಂ ಸಲೆದಾ ॥
ಱಿಟ್ಟೋಡಿಪ ಜವನುಪ್ಪರ ।
ವಟ್ಟಮನನುಕರಿಸಿ ನರೆಗಳೊಗೆದುವು ಶಿರದೊಳ್ ॥ ೧೨೪ ॥

ಚಂ ॥ ಅವಿರಳ ಕೋಪದಿಂ ಪಗೆಯನೊರ್ಮೆಯೆ ಕೊಲ್ಲದೆ ನಿಂದು ನಿಂದು ತ ।
ಳ್ತವಯವಮಂ ವಿಭೇದಿಸುವನಂದದೆ ಪಲ್ಗಳನೊರ್ಮೆಪೂರ್ಣ್ಕೆಯಿಂ ॥
ಕಿವಿಗಳನೊರ್ಮೆ ಕಣ್ಗಳನದೊರ್ಮೆ ಪದಂಗಳನೊರ್ಮೆ ಭೇದಿಸು ।
ತ್ತವಯವದಿಂದೆ ಕೊಲ್ವ ಯಮಕಿಂಕರನೀಪಿರಿದಪ್ಪಮುಪ್ಪಿನೊಳ್ ॥ ೧೨೫ ॥

ಕಂ ॥ ಒಸೆದೆನ್ನನಧೀಶ್ವರನೀ ।
ಕ್ಷಿಸಿ ನಡೆಯಿಸಿಕೊಂಡತೆಱದಿನೀತನುವಂ ಶಿ ॥
ಕ್ಷಿಸಿ ನಡೆಯಿಸಿಕೊಳ್ವುದೆನು ।
ತ್ತ ಸಚಿವನಪ್ಪಯಿಸಿದಂ ನೃಪಂಗಾತ್ಮಜನಂ ॥ ೧೨೬ ॥

ವ ॥ ಅಂತು ತನೂಜನಂ ನಿಜರಾಜಂಗಪ್ಪಯಿಸಿ ದುಷ್ಕರ್ಮಬಂಧನಮಂ ಬಿಡಿಸುವಂತೆ ಬಂಧುಜನಮಂ ಬಿಡಿಸಿ ಮೋಕ್ಷಲಕ್ಷ್ಮಿಯನಪ್ಪುಕೆಯ್ವಂತೆ ಬಾಹ್ಯಾಭ್ಯಂತರ ಪರಿಗ್ರಹನಿವೃತ್ತಿಲಕ್ಷಣಮಪ್ಪ ತಪೋಲಕ್ಷ್ಮಿಯಂ ವಿಶ್ವಭೂತಿಯನಶ್ವರಸುಖಸಮರ್ಪಕಮನಪ್ಪುಕೆಯ್ದನಿತ್ತಲ್

ಮ॥ಸ॥ ಗುರುಭಾರಕ್ಕಿನ್ನದೆಂತುಂ ನೆಱಿಯೆನೆನುತ ನಿರಿಯಜ್ಜರಾಜರ್ಧುರ್ರಾಂಗಂ ।
ಗುರುತನ್ನೊಳ್ ಕೂರ್ಮೆಯಿಂದಂ ನಿಱಿಪೆ ನಿಜಮಹಾಮಾತ್ಯಸಂಪೂರ್ಣಸಂಪ ॥
ದ್ಭರಮಂ ನಿರ್ವ್ಯಗ್ರನಾದಂ ದೃಢನಯನಿಪುಣಸ್ವಾಂತನಾಜ್ಞಾನಿದಾನಂ ।
ಮರುಭೂತ್ಯಾಖ್ಯಪ್ರಧಾನಂ ಸುಕವಿಜನಮನೋಹರ್ಷಸಸ್ಯಪ್ರವರ್ಷಂ ॥ ೧೨೭ ॥

— ಗದ್ಯಂ —

ಇದು

ವಿದಿತವಿಬುಧಲೋಕನಾಯಕಾಭಿಪೂಜ್ಯವಾಸುಪೂಜ್ಯಮುನಿ
ಪ್ರಸಾದಾಸಾದಿತನಿರ್ಮಳವರ್ಮವಿನುತವಿನೇಯಜನವನಜ
ವನವಿಳಸಿತಕವಿಕುಳತಿಳಕಪ್ರಣೀತಮಪ್ಪ
ಪಾರ್ಶ್ವನಾಥಪುರಾಣದೊಳ್
ಕಥಾವತಾರವರ್ಣನಂ

**ಪ್ರಥಮಾಶ್ವಾಸಂ**



॥ ಶ್ರೀಃ ॥

# ದ್ವಿತೀಯಾಶ್ವಾಸಂ

ಕಂ ॥ ಶ್ರೀಪರಿಹೃದಯಂಗಮನಭಿ ।
ರೂಪಂ ಶುಭವೃತ್ತನೊಪ್ಪಿದಂ ಪಿತೃತೇಜೋ ॥
ವ್ಯಾಪೃತಯಶನಾಸ್ಥಾನ ಸು ।
ದೀಪಂ ಕೌಸ್ತುಭವಿಭಾಸಿ ಕವಿಕುಳತಿಳಕಂ ॥ ೧ ॥

ಚಂ ॥ ಅತುಳಪರಾಕ್ರಮಕ್ಕೆ ಸುನಯಂ ವಿಭವಕ್ಕೆ ಪರೋಪಕಾರಮು ।
ನ್ನಿತವಚನಕ್ಕೆ ಸತ್ಯಮಱಿವಿಂಗೆ ಸದಾಚರಣಂ ಕುಲಕ್ಕೆ ಪೆಂ ॥
ಪತಿಶಯಪುಣ್ಯದೇಟ್ಗೆ ನಿಜೋದ್ಯಮಮೊಯ್ದು ಸಹಾಯಮಪ್ಪವೋಲ್ ।
ಪತಿಗೆ ಸಹಾಯನಾಗಿ ಪಡೆದಂ ಮರುಭೂತಿ ಮಹಾವಿಭೂತಿಯಂ ॥ ೨ ॥

ಮ ॥ ಪತಿಯಾಶಾಪತಿಕೌಶಿಕಂ ಹತಬಳಂ ತನ್ನಾಖ್ಯೆಯುಂ ನೋಡೆ ಗೋ ।
ಪತಿ ಎಂದಂದು ಸುಮಂತ್ರಿಯಪ್ಪನೆ ದಿಟಕ್ಕೆಂದೇಳಿಕುಂ ಸ್ವಾಮಿಗಾ ॥
ಶ್ರಿತ ಚಿನ್ತಾಮಣಿ ರಾಜಹಂಸನಕುಳೋದ್ಯತ್ತಂತ್ರನೆಂಬೀ ಮಹೋ ।
ನ್ನತಿಯಂ ಮಾಡುವ ಮಂತ್ರಿಮುಖ್ಯನನಯೋದ್ಯೋಗಂ ಗುರುದ್ಯೋಗಮಂ ॥ ೩ ॥

ಕಂ ॥ ಉದರಪತಿಸ್ಫೂರ್ತಿಯುಳಿಂ ।
ಗದ ಪುಟ್ಟಿ ನಿಮಿತ್ತಮಕ್ಕುಮಂತವನಿಪಸಂ ॥
ಪದಮಂ ನಿಖಿಳಾಂಗದೆ ಸಂ ।
ಪದಕ್ಕೆ ಮೊದಲಾಗೆ ಮಾಡಿದಂ ಮಂತ್ರಿವರಂ ॥ ೪ ॥

ವ ॥ ಅಂತು ಮರುಭೂತಿ ನಿಜನಾಥಂಗೆ ನೀತಿನಿಧಾನಂ ಪ್ರೀತಿಯನೊದವಿಸುತ್ತ ಬೆಸಕೆಯ್ಯುತ್ತಮಿರೆ—

ಕಂ ॥ ಕೊಟ್ಟೆಯ್ದೆ ಕಪ್ಪಮಂ ಮುಗು ।
ಳ್ದಿಟ್ಟಿದ ಬಱಿಕೊಲ್ದು ಪೇಳ್ದು ತಾಣಕ್ಕೆ ನೃಪರ್ ॥
ಬಿಟ್ಟು ಭುಜಗರ್ವಮಂ ಮೂ ।
ವಿಟ್ಟಿಗೆ ಬರೆ ನೆಗಳ್ದು ನಿಳೆಯೊಳರವಿಂದನೃಪಂ ॥ ೫ ॥

ಮ ॥ ಮುಳಿಸಿಂದೀಕ್ಷಿಸೆ ಸಾರ್ದುವೆಮ್ಮ ಧನಮುಂ ದೇಶಂಗಳುಂ ನಿನ್ನನ ।
ಗ್ಗಳಮಿನ್ನೆಮ್ಮಯ ಜೀವಮೆಂದಸಿಲತೋದ್ಯತ್ಪತ್ರಮಂ ನೆತ್ತಿಯೊಳ್ ॥
ತಳೆದಾ ವೈರಿಗಳಂಬುದಿವ್ಯಮನೆ ಪೊಕ್ಕಂದುದ್ಧಕೌಕ್ಷೇಯಕೋ ।
ಜ್ಜ್ವಳಧಾರಾಜಳದಲ್ಲಿ ಮುಳ್ಗುವುದು ನಿಚ್ಚಂ ತದ್ಧರಾಧೀಶನಾ ॥ ೬ ॥

ವ ॥ ಅಂತಖಿಳಧರಾವಳಯಮುಮಂ ವಳಯದನ್ತೆ ಭುಜಮಂಡಳಕ್ಕಳವಡೆ ವಿಜಯಲಕ್ಷ್ಮಿಯುಮಂ ವಶಂಮಾಡಿ ರೂಢಿವಡೆದತಿಪ್ರಾಜ್ಯಸಾಮ್ರಾಜ್ಯಸುಖಮನನುದಿನ ಮನುಭವಿಸುತ್ತುಮೊಂದುದೆವಸಂ—

ಕಂ ॥ ನವಯುವತೀಲೋಚನದ್ಯುತಿ ।
ಧವಳಿಸೆ ಮಣಿಭೂಷಣಾಂಶು ಚಿತ್ರಿಸೆ ನೇತ್ರೋ ॥
ತ್ಸವಮೆನಿಪೋಲಗಶಾಲೆಯೊ ।
ಳವನೀಶ್ವರನಿಂದ್ರಲೀಲೆಯಿಂ ತಳೆದಿರ್ದಂ ॥ ೭ ॥

ಮ ॥ ನಗೆಗಣ್ಗಳ್ ನಗೆ ನೆಯ್ದಿಲಂ ನಗೆಮೊಗಂ ಸಸ್ನೇಹನೀರೇಜಮಂ ।
ನಗೆ ದನ್ತಾವಳಿ ಕುಂದಮಂ ನಗೆ ಶಿರೀಷೋದ್ದಾಮದಾಮಂಗಳಂ ॥
ನಗೆ ತೋಳ್ಗಳ್ ದಶನಚ್ಛದಂ ವಿಕಸಿತಶ್ರೀಬಂಧುಬಂಧೂಕಮಂ ।
ನಗೆ ಪುಷ್ಪಾಸ್ತ್ರಕುಲಾಧಿದೇವತೆಯರೆಂಬಂತೊಪ್ಪಿದರ್ ಕಾನ್ತೆಯರ್ ॥ ೮ ॥

ಕಂ ॥ ತೊಣೆ ತಮಗಿಲ್ಲೆನಿಪರ್ ಕಣ್ ।
ತಣಿಯದ ಚೆಲ್ವಿಂದೆ ಚತುರಜನಚೇತೋಗ್ರಾ ॥
ಹಿಣಿಯರನಂಗ ಶ್ರೀ ಗ್ರಾ ।
ಹಿ[ಣಿ]ಯೆನುತ ನೃಪನ ಚಾಮರಗ್ರಾಹಿಣಿಯರ್ ॥ ೯ ॥

ವ ॥ ಅಂತು ಸಮಸ್ತಾಂತಃಪುರಪುರಂಧ್ರೀ ನೀರಂಧ್ರ ಘನಸ್ತನೋದ್ದಾಮಹಾರ ವಾರವಿಳಾಸಿನೀಸಮೇತಂ ನೀತಿನಿಧಾನ ಪ್ರಧಾನಪ್ರಮುಖ ನಿಖಿಳಪರಿವಾರಪರೀತನುತ್ತುಂಗ ಸಿಂಹಾಸನಾಸೀನನಾಸ್ಥಾನಮಂಡಳ ಮಧ್ಯಮನಳಂಕರಿಸಿ—

ವಂ ॥ ಸ್ರ ॥ ಎನಸುಂ ಕಾಮಂಗೆ ಕಾಂತಾಭಿನಯತತಿಷಡಂಗಂಷಡಂಗಂ ಬಳಂ ನ ।
ರ್ತನಭಾವಂ ತತ್ತ್ವಭಾವಂ ಲಯಗತಿಗತಿ ನೃತ್ಯಾನುಗಂ ಹೃದ್ಯವಾದ್ಯ ॥
ಸ್ವನಮುದ್ಯತ್ ಜೈತ್ರಭೇರೀಘನರುತಿ ಕಳಗೀತಾರವಂ ಪುಷ್ಪಚಾಪಾ ।
ಭಿನವಜ್ಯಾರಾವಮೆಂಬಂತಿರೆ ನೃಪನೆಸೆದಂ ಸಾರಸಂಗೀತದಿಂದಂ ॥ ೧೦ ॥

ವ ॥ ಅನ್ತು ಕನ್ತುರಾಜನಂತೆ ರಾಜಾಧಿರಾಜಂ ರಾಗಸಾಗರದೊಳ್ ನೀಡುಂ ವೋಲಾಡುತ್ತುಮಿರೆ—

ಮ ॥ ಚರನೊರ್ವಂ ಪರಿತಂದು ಭೂಪತಿಗೆ ಬೇಗಂ ಕಾರ್ಯವಿಜ್ಞಾಪನಾ ।
ತುರಚಿತ್ತಂ ಪೊಡೆವಟ್ಟು ಬಿನ್ನವಿಸಿದಂ ನಿಮ್ಮಾಜ್ಞೆಯಂ ಮೀಱಿ ದೇ ॥
ವರ ಠಾಣಾಂತರಮಂ ತಿರಸ್ಕರಿಸಿ ನಾಡಂ ವಜ್ರವೀರಂ ಧುರೋ ।
ದ್ಧುರ ಶೌರ್ಯಂ ಬಿಡೆ ಕಾಡಿಗೋಳಿಡಿಸಿದಂ ಸ್ತ್ರೀಬಾಲರಂ ವೃದ್ಧರಂ ॥ ೧೧ ॥

ಕಂ ॥ ಅನುಕೂಲ ಜನಕ್ಕಿಂದ್ರನ ।
ನನುಕೂಲ ಜನಕ್ಕೆ ಯಮನೆ ನೀನೆಂಬುದನಿಂ ॥
ತಿನಿತಂ ಬಗೆಯದೆ ವಿಘಟಿಸಿ ।
ದನುದಗ್ರಂ ವಜ್ರವೀರ್ಯನತಿ ದುರ್ವಾರಂ ॥ ೧೨ ॥

ಕಂ ॥ ಸಂದ ನಿಜಸ್ನೇಹಭರಂ ।
ಕುಂದಿದೊಡಿನನುದಯದಲ್ಲಿ ತನಗಪದೆಸೆಯೊಳ್ ॥
ಮುಂದಱಿಯದತಿಮದಾಂಧಂ ।
ನಂದುವ ಸೊಡರುದ್ಧಮುರಿವಮಾೞ್ಕೆಯಿನುರಿದಂ ॥ ೧೩ ॥

ಶಲಭಂ ಪ್ರದೀಪತೇಜ ।
ಕ್ಕಲಘುತರಕ್ಕಿರದೆ ಕಾಯ್ದು ತೆಱದಿ ನಿನ್ನೀತೇಜೋ ॥
ಬಲದಸಮೃದ್ಧಿಗೆ ಕಾಯ್ದಂ ।
ಚಲಪಕ್ಷೋದ್ವೃತ್ತನನಧಿಗತ ನಿಜಸತ್ವಂ ॥ ೧೪ ॥

ವ ॥ ಅನ್ತು ಶೃಂಗಾರರಸವಿರುದ್ಧ ವೀರರಸಾಭಿನಯವಿಶಾರದ ಸೂತ್ರಧಾರನೆನಿಪ ದೂತನ ಮಾತಿಂಗೆ ಸಭೆಗಂ ಸಭಾಪತಿಗಂ ರೌದ್ರರಸಂ ಪಸರಿಸೆ—

ಕಂ ॥ ಕಡೆಗಣ್ಗಳ್ ಕೆಂಪಿಡಿದಿರೆ ।
ಕಡೆ ಸೋರ್ದಿರೆ ಬೆಮರಬಿಂದು ಗಂಡಸ್ಥಳದೊಳ್ ॥
ಬಿಡದೊಪ್ಪುವ ವೀರಾಂಗನೆ ।
ಯೊಡೆಗೂಡಿದ ತೆಱದಿನವನಿಪತಿ ಸೊಗಯಿಸಿದಂ ॥ ೧೫ ॥

ಅರವಿನ್ದಾಧಿಪನುದಯಿಸು ।
ವರವಿನ್ದಾಧಿಪನನಿೞಿಸಿ ಕೋಪೋದಯದಿಂ ॥
ದರುಣೋದಯಮುಖನೆಸೆದಂ ।
ನಿರುಪಮಸಿಂಹಾಸನೋದಯಾದ್ರಿಯನಾಗಳ್ ॥ ೧೬ ॥

ವ ॥ ಅದಂ ಕಂಡು ಒರ್ವ ದೋರ್ವಳಶಾಲಿಯಿಂತೆಂದಂ—

ಚಂ ॥ ಪುದಿದಿರೆ ಕೆಂಪು ನಿನ್ನ ನಯನಂಗಳೊಳನ್ಯರರಕ್ತದಿಂದೆ ಮೀ ।
ಯದೆ ತುದಿ ಕಿಳ್ತಿ ಶಸ್ತ್ರಕುಳವಂ ಕಿಱಿದುಣ್ಕೆ ಬೆಮರ್ ಕಪೋಳದೊಳ್ ॥
ಮದವದರಾತಿಕಾನ್ತೆಯರ ಲೋಚನವಾರಿಗಳಿಂ ಕಪೋಳ ಪ ।
ತ್ರದ ಸಿರಿಯಂ ವಿಮರ್ದಿಸದೆ ಮಾಣ್ಬವನಲ್ತೆ ರಸಾಧಿನಾಯಕಾ ॥ ೧೭ ॥

ಉ ॥ ಏಂ ಧರಣೀಶ ನೀಂ ಮುಳಿದು ಕಾದಲೊಡರ್ಚುವೊಡೇನವಂ ಸಮ ।
ಸ್ಕಂಧನೆ ವಜ್ರವೀರನೆನಗೀ ಬೆಸನಂ ಬೆಸಸಾತನಂ ಗಜ ॥
ಸ್ಕಂಧಕಳಾವಿರೂಢನನಗುರ್ವಿಪ ಮಾರ್ಪಡೆ ನೋಡೆ ನೋಡೆ ಕೊ ।
ಲ್ವೆಂ ಧುರದಲ್ಲಿ ನಿಂದೊಡೊಳಸಾರ್ದೊಡೆ ಕೋಡಗಗಟ್ಟಕಟ್ಟುವೆಂ ॥ ೧೮ ॥

ಉ ॥ ಆರಿದಿರಾಂತೊಡಂ ಯಮಮುಖಾಂತರದೊಳ್ ಮಿಗೆ ತೂಂತಿದೇವಕೆ ।
ಯಾರ್ಸದ ವಜ್ರವೀರನನುಪಾಶ್ರಿತವೀರನನಿಕ್ಕುವೆಂ ಗೃಹೇ ॥
ಶೂರನೆನಿಪ್ಪ ನಾಲ್ನುಡಿಗೆ ಕೇಳಿಡೆಯಪ್ಪವನಲ್ಲನೆಂದು ದು ।
ರ್ವಾರ ಪರಾಕ್ರಮಂ ನುಡಿದನೀಕ್ರಮದಾಹವಲಂಪಟಂ ಭಟಂ ॥ ೧೯ ॥

ಶಾ ॥ ಸಿಂಗಂ ತುಂಗಕರೀಂದ್ರ ಕುಂಭತಟಮಂ ಸೀೞ್ದಿಕ್ಕುವಂ ತಳ್ಕಿದ ।
ಷ್ಟಾಂಗ ದ್ರೋಹನನಾಹವಾಂಗಣದೊಳತ್ಯುಗ್ರಾಸಿಯಿಂ ಸೀೞ್ದುದೋ ॥
ರ್ಭಂಗಂ ಚಿತ್ತನ ವಜ್ರವೀರನ ದಳತ್ಖಂಡಂಗಳಿಂದಷ್ಟದಿ ।
ಕ್ಕಿಂಗಂ ಕೇಳ್ ಬಲಿಗೊಟ್ಟು ದೇವ ಮೆಱೆವೆಂ ದುರ್ವಾರಮಂ ವೀರಮಂ ॥ ೨೦ ॥

ಮ ॥ ಕದನಕ್ರೂರನ ವಜ್ರವೀರನ ಸಮುಗ್ರೋತ್ತುಂಗ ಮಾತಂಗದು ।
ನ್ಮದವತ್ಕುಂಜರದುಗ್ರದನ್ತಯುಗಮಂ ಸಂಘುಟ್ಟದಿಂದೆನ್ನ ಖ ॥
ಙ್ಗದ ಬಲ್ಪೊಯ್ಲಡೆಯಾದ ತನ್ನೃಪಶಿರಃ ಪ್ರೋದ್ಭಾಳದಿಂದುಣ್ಕಿಪೊ ।
ಣ್ಮಿದ ಕಿಚ್ಚಿಂದಮೆಕಾಸಿ ತುಚ್ಚಿ ಕಳೆವೆಂ ದೋರ್ದಂಡಕಂಡೂಯಮಂ ॥ ೨೧ ॥

ಉ ॥ ತುಂಗಪರಾಕ್ರಮೈಕನಿಧಿ ನೀಂ ಬೆಸಸೆನ್ನನಧೀಶ ಪಿಂಗದೇ ।
ಕಾಂಗದಿನಾಜಿರಂಗದೊಳಿದಿರ್ಚಿದುದಂ ಚತುರಂಗಸೈನ್ಯಮಂ ॥
ಭಂಗಿಸಿವಜ್ರವೀರನ ವಿರೋಧಿಕಠೋರನ ಸಾರಮಪ್ಪಸ ।
ಪ್ತಾಂಗಮನೀೞ್ದುತಂದು ನಿನಗಿತ್ತಪೆನೇವುದಿದರ್ಕೆಮಂತಣಂ ॥ ೨೨ ॥

ಚಂ॥ ಮಣಿಯೆಮಹೋಗ್ರ ಖಙ್ಗಹತಿಯಿಂದಸುಹೃಚ್ಚತುರಂಗಸೈನಿಕಂ ।
ತಣಿಯೆ ವಿರೋಧಿ ಭೂಪರುಧಿರಾಸವ ಪಾನದೆ ರಾಕ್ಷಸೀಕುಳಂ ॥
ಕುಣಿಯೆ ಕಬಂಧಕೋಟಿಯೊಡನೆಯ್ದೆ ಪಿಶಾಚಸಮೂಹ ಪಾಂ ।
ಗಣದೊಳೆ ಕೊಂದಪೆಂ ಕದನಧೀರನನಗ್ಗದ ವಜ್ರವೀರನಂ ॥ ೨೩ ॥

ಉ ॥ ಬಿಲ್ವಡೆಯೊಡ್ಡಿದೊಡ್ಡಣಮನಡ್ಡಣದಾ ರಥಮಂ ರಥೋತ್ಕರಂ ।
ಸಾಲ್ವಿನಮಶ್ವಮಂ ತುರಗಮಾನೆಯ ಸೇನೆಯನಟ್ಟಿ ಪೊರ್ದಿಬಂ ॥
ಬಲ್ವರಿದೆನ್ನ ದನ್ತಿ ತುೞಿವಾತನ ದನ್ತಿಯನೆಯ್ದೆ ಕೊಲ್ವಿನಂ ।
ಕೊಲ್ವೆನುದಗ್ರಖಙ್ಗಮುಖದಿಂದೆ ವಿದಾರಿಸಿ ವಜ್ರವೀರನಂ ॥ ೨೪ ॥

ಈಗಳೆ ದೇವ ನೀಂ ಬೆಸಸು ಶತ್ರುನೃಪಾಳಕ ಕಂಠರಕ್ತ ಧಾ ।
ರಾಗಣದೊಳ್ ವಿರೋಧಿಕರಿಮಸ್ತಕಮೌಕ್ತಿಕರಮ್ಯಖಙ್ಗ ಧಾ ॥
ರಾಗ್ರಹದೊಳ್ ಜಯಪ್ರಮದೆ ಮುಂನಿನ ವೀರವಿಯೋಗ ವೇಗದು ।
ದ್ವೇಗಮನಾಱಿಸಲ್ ನೆಲಸುವಂತಿರೆ ಮಾಡುವೆನಾಜಿರಂಗದೊಳ್ ॥ ೨೫ ॥

ಶ್ರೀಪರಿಪೂರ್ಣ ನೀನೊಸೆದೊಡಿಂದ್ರನೊಳಿಂದ್ರ ಸಮಾಖ್ಯೆ ವೈರಿಸಂ ।
ತಾಪಕರೂಪನೀಂ ಪಡೆದೊಡಾ ಯಮನೊಳ್ ಯಮಸಂಜ್ಞೆ ಶೋಭಿಕುಂ ॥
ಜ್ಞಾಪಿಪೊಡಂತೆ ನೀಂ ಮುನಿಯದಿರ್ದುದಱಿಂದಮೆ ವಜ್ರವೀರನೆಂ ।
ಬೀಪೆಸರಿರ್ದುದಾಖಳನೊಳಲ್ಲದೆ ನೀಂ ಮುಳಿದಂದದಿರ್ಕುಮೇ ॥ ೨೬ ॥

ಕರ್ಕಶಗಂಧಸಿಂಧುರಕರಪ್ರಕರಂ ನಿಶಿತಾಸಿಘಾತದಿಂ ।
ದಿರ್ಕಡಿಯಾಗಿ ಜೀರ್ಕೊಳವಿಯಾಗಿರೆ ವೈರಿವಿರೋಧಿರಕ್ತದಿಂ ॥
ಸೊರ್ಕಿದ ಶಾಕಿನೀನಿವಹಮೋಕುಳಿಯಾಡೆ ಪಿಶಾಚಸಂಕುಳಂ ।
ಪೊೞ್ಕುಳಿಯಾಡೆ ಪಂದಲೆಗೆ ಕೊಲ್ವೆನಿದಿರ್ಚಿದ ವಜ್ರವೀರನಂ ॥ ೨೭ ॥

ವ ॥ ಎಂದಿಂತು ವೀರರಸಾರ್ಣವಂ ಘೂರ್ಣಿಸುವಂತೆ ತಮತಮಗೆ ವೀರಭಟರಾರಭಟೆಯಿಂ ಘೂರ್ಣಿಸುವುದುಂ ನಿರೂಢಾಹಂಕಾರನುಂ ಧೀರೋದಾತ್ತ ವಚನಾಧಾರನುಮದಂ ನಿವಾರಿಸಿ—

ಕಂ ॥ ಮುನಿಸೊಸಗೆಗಳಂ ರಿಪು ।
ಜನವಿನಾಶದಿಂ ಮಿತ್ರಜನಸಮೊಹಿತಸುಖವ ॥
ರ್ಧನದಿಂದುಪಲಕ್ಷಿಸುವಂ ।
ತೆ ನೆಗಬ್ಬುದಿತರರವೊಲಾಚರಿಪ್ಪಂಪ್ರಭುವೇ ॥ ೨೮ ॥

ಬೆಸನಂ ಬೇೞ್ಪುದಱಿಂ ಭಟ ।
ರುಸಿರ್ವುದು ಗುಣಮಲ್ಲಮಧಿಪನುಂ ಮಾಮಸಕಂ ॥
ಮುಸಗಿ ನುಡಿದಂದು ಪೆಂಪಂ ।
ತೆಸೆದಪುದದಱಿಂದೆ ಮಾಡಿತೋರ್ಪೆಂ ಕೂರ್ಪಂ ॥ ೨೯ ॥

ವ ॥ ಎಂಬಿದಂ ಬಗೆಯೊಳ್ ಬಗೆದು ಬೞಿಕ್ಕಮಿಂತೆಂದಂ—

ಕಂ ॥ ಇನ್ನೆವರಂ ಪರಚಕ್ರ ।
ಕ್ಕೆನ್ನಯ ದೆಸೆಯಿಂದೆ ಭೀತಿಯಲ್ಲದೆ ಪೆಱರಿಂ ॥
ದೆನ್ನ ಜನಪದಕೆ ಭಯಮಿ ।
ಲ್ಲೆನ್ನದು ವಿಪರೀತಮಾದೊಡಾಂ ಸೈರಿಪೆನೆ ॥ ೩೦ ॥

ಪಗೆವಂ ದೂರದೊಳಿರೆ ಗ ।
ದ್ದಿಗೆ ವೊಯ್ವೊಡೆ ತೀವುದೆಂದುಂಟೆ ವಿಜಯಪ್ರಸ್ಥಾ ॥
ನ ಗಭೀರ ಭೇರಿಯಂ ಪೊ ।
ಯ್ಯುಗಡೆಂದು ಬಳಾಧಿಪಂಗೆ ವಿಭು ನೇಮಿಸಿದಂ ॥ ೩೧ ॥

ವ ॥ ಅಂತು ಬಳಾಧ್ಯಕ್ಷನಂ ಬರಿಸಿ ನಿಯಮಿಸುವುದುಮದಂ ನಿವಾರಿಸಲೆಂದು ಸಹಜ ಪ್ರಜ್ಞನುಮಶೇಷ ನೀತಿ ಶಾಸ್ತ್ರಜ್ಞನುಮಪ್ಪ ಮರುಭೂತಿಮುಖ್ಯರಪ್ಪ ಮಹಾಪ್ರಧಾನರ್ "ಮಂತ್ರಪೂರ್ವಕ ಸ್ಸರ್ವಾರ್ಪ್ಯಾರಂಭಃ ಕ್ಷಿತಿಪತಿನಾ"ಮೆಂಬ ನೀತಿಯಂ ದೇವರ್ ಪರಿಭಾವಿಸುವುದೆಂಬುದುಮದಂ ಮನದೆಗೊಂಡು ಸಮಸ್ತ ರಾಜನ್ಯಕಮಂ ಬೀಡಿಂಗೆ ತಾಂಬೂಲದಾನ ಪುರಸ್ಸರಂ ವಿಸರ್ಜಿಸಿ ಮಂತ್ರಿಮಂಡಳಿವೆಱಸು.

ಕಂ ॥ ಅಪರಿವರಾ ಪ್ರತಿಶಬ್ದಮ ।
*ನಪಸಾರಿತ ಕೀರಸಾರಿಕಾ ಸಂಕುಳಮಂ ॥
ನೃಪಚೂಡಾಮಣಿ ಹಿತಚರ ।
ಸುಪರೀಕ್ಷಿತ ಮಂತ್ರಶಾಲೆಯಂ ಪುಗುತಂದಂ ॥ ೩೨ ॥

---

*ನಪವಾರಿತ[?]

ವ ॥ ಅಂತು ಮಂತ್ರಶಾಲೆಯಂ ಪೊಕ್ಕು

ಕಂ ॥ ಬೆಸಗೊಳ್ಳದೊಡಂ ಕಾರ್ಯಮ ।
ನುಸಿರ್ಗ್ಗಂ ಪರಿಣಾಮ ಪಥ್ಯಮಂ ಪತಿಹಿತಮಂ ॥
ಬೆಸಗೊಳೆ ನಿರ್ಭಯದಿಂ ನೀ ।
ತಿ ಸಾರಮಂ ನುಡಿಯದಿರ್ಪರೇ ನೀತಿವಿದರ್ ॥ ೩೩ ॥

ಉಚಿತಮನುಸಿರಲ್ವೇಟ್ಟುದು ।
ಸಚಿವಂ ವಿಭುವದನೆ ನೆಗೞಿವೇಟ್ಟುದು ಭಯದಿಂ ॥
ಸಚಿವನುಸಿರದೊಡೆ ವಿಭುವಚ ।
ನಚಿರಂ ನೆಗೞದೊಡೆ ಮೂರ್ಖರಾಜ್ಯಮದಕ್ಕುಂ ॥ ೩೪ ॥

ಆಗಳೆ ಪುಟ್ಟಿದ ಕಾರ್ಯಮ ।
ನಾಗಳೆ ನಿರ್ಣಯಿಸುವಂದು ದುಷ್ಕರಮದಱಿಂ ॥
ಬೇಗಂ ತ್ರಿಕಾಲದರ್ಶಿದ ।
ಲಾಗಲೆವೇಟ್ಕುಂ ನಿಯೋಗಿ ಯೋಗಿಯ ತೆಱದಿಂ ॥ ೩೫ ॥

ವ॥ ಎಂದು ಸುಪ್ರಸನ್ನಮುಖೇಂದು ನಿಸ್ಸದನ್ನಯ[?] ಪ್ರಚುರಪ್ರಶ್ನವಚೋಮೃತ ರಶ್ಮಿಗಳಿಂ ಮಂತ್ರಿ ಜನದ ಮಾನಸ ಕುಮುದಿನಿಗೆ ಮುದಮನೊಡರಿಸುವುದುಮಾ ಪ್ರಭಾ ವಿಭೂತಿ ಮರುಭೂತಿ ಮುಕುಳಿತಾಂಜಲಿಪುಟನಾಗಿ

ಕಂ ॥ ಅಂಬುಜ ಸಖನಿರ್ದಂತಿರೆ ।
ಮೊಂಬುೞು ಖದ್ಯೋತಮೆನಿಪವೊಲ್ ಮಂತ್ರಿವೆಸರ್ ॥
ನೀಂ ಬಹುನಯವಿದನಿರೆ ಬೇ ।
ಳಂಬಮಿದೆಮ್ಮಂದಿಗರ್ಗೆ ವಸುಧಾಧಿಪತೀ ॥ ೩೬ ॥

ನಯಶಾಸ್ತ್ರದ . . . . . . ಮನಿ ।
ನಯ ನಡವಳಿ ಜಡರ್ಗಮೞಿಯೆಕನ್ನಡಿಸುವುದೆಂ ॥
ದಯನಯನಿಧಿ ನೀಂ ಮಾಡಿದ ।
ನಿಯೋಗಿಗಳವೆಂದು ದೇವ ನೀಂ ಬೆಸಸಿದಪ್ಪೈ[?] ॥ ೩೭ ॥

ಉಕ್ಕೆವಮಿದಲ್ಲ ಶಕುನದ ।
ಪಕ್ಕಿಗಳಂ ನುಡಿಸಿ ನಯವಿದರ್ ನಯಮಂ ಕೈ ॥
ಮಿಕ್ಕುದನಱಿವವೊಲಱಿದಪೆ ।
ಯುಕ್ಕುಮದರ್ಕಾಳ್ದಧಿಪ ಬಿನ್ನವಿಸಿದಪೆಂ ॥ ೩೮ ॥

ನಯನಿಪುಣರುಪಾಯ ಚತು ।
ಷ್ಟಯದೊಳ್ ಸಾಮಮನಗಣ್ಯ ಷಾಡ್ಗುಣ್ಯದೊಳಾ ॥
ರಯೆ ಸಂಧಿಯಂ ಮೊದಲ್ ಮಾ ।
ಡಿಯೆ ಪೇೞ್ದಿರ್ ನಾಮುಮಂತೆ ನೆಗೞಲೆವೇಟ್ಕು ॥ ೩೯ ॥

ಕಂ ॥ ಸಾಮದೊಳಳವಡುವಡೆ ಸಂ ।
ಗ್ರಾಮಂ ರಿಪುನೃಪರೊಳೇಕೆ ಪಾಲ್ಸಕ್ಕರೆಯಿಂ ॥
ದಾಮಯಮುಪಶಮಿಪೊಡೆ ವಿ ।
ದ್ಯಾಮಯ ಸೇವಿಸಲದೇಕೆ ಕಟುಕೌಷಧಮಂ ॥ ೪೦ ॥

ವ ॥ ಎಂಬುದುಮರಸನಿಂತೆಂದಂ—

ಕಂ ॥ ಇವನಕ್ಕದೆ ನಮ್ಮೊಳ್ ಕಾ ।
ದುವ ಭರದಿಂ ನಾಡನಿರಿದೊಡಂ ಕಾದಪೆ ಮ ॥
ತ್ತವನೊಳ್ ಸಾಮಮನಾಚರಿ ।
ಸುವುದೆಂಬುದು ನೋಡೆ ನಾಡೆ ನಗೆಗೆಡೆಯಲ್ತೆ ॥ ೪೧ ॥

ನಯವಿದನಂ ಸಾಮದಿನಪ ।
ನಯನಂ ದಂಡದೊಳೆ ಗೆಲುವುದೆಂತೆನೆ ಕಟುಕ ॥
ತ್ರಯದಿಂದಲ್ಲದೆ ಮಧುರ ।
ಪ್ರಯೋಗದಿಂ ಕಫಮನಾವನುಪಶಮಿಯಿಸಿದಂ ॥ ೪೨ ॥

ವ ॥ ಎಂಬುದುಮಾ ಭೂಪತಿಯ ಮಾತಿಂಗೆ ಮರುಭೂತಿಯಿಂತೆಂದಂ—

ಕಂ ॥ ಜನಿಯಿಸಿದಶೋಷಮನುಲೀ ।
ಪನದಿಂ ಪೋಗದೊಡೆ ಶಸ್ತ್ರಕರ್ಮಮನೆಸಪಂ ॥
ತನುನಯಕೊಳಗಾಗದನಂ ।
ಮೊನೆಯೊಳ್ ದಂಡಿಪುದು ನಯಪರಾಕ್ರಮಯುಕ್ತಂ ॥ ೪೩ ॥

ವ ॥ ಎಂಬುದುಂ ಪುರುಭೂತಿನಿಮಿತ್ತಂ ಮರುಭೂತಿಸಮರ್ಪಿತಮಂತ್ರರತ್ನಮುಂ ಮುನ್ನಮೆ ತನ್ನ ಮನೋಮುದ್ರೆಯನಳಂಕರಿಸಿದೊಡಂ ತತ್ಪರೀಕ್ಷಾವ್ಯಾಜದಿಂದವರ ನಯ ವಿಚಕ್ಷಣತೆಯಂ ಪರೀಕ್ಷಿಸಲೆಂದಿತರಮಂತ್ರಿಗಳ ಮೊಗಮನೀಕ್ಷಿಸುವುದುಂ ಅವರ್ ವಿನಯವಿನಮಿತೋತ್ತಮಾಂಗರಾಗಿ,

ಕಂ ॥ ಆನನಸನ್ನಿಧಿಯಿಂ ಪಂ ।
ಚಾನನಪಾದಕ್ಕಮಾನನವ್ಯಪದೇಶಂ ॥
ತಾನೆಸೆವ ತೆಱದಿನೀತನ ।
ಧೀನತೆಯಿಂದಂ ಪ್ರಧಾನವೆಸರೆಮಗೆಸೆಗುಂ ॥ ೪೪ ॥

ವ ॥ ಎಂಬುದು ನಿರ್ಮಳಚಿತ್ತರುಂ ಗುಣವತ್ಸಲಾನುವೃತ್ತರುಮಪ್ಪುದಱಿಂ ಮರುಭೂತಿ ದೃಷ್ಟಮಂತ್ರಮೆಗುಣಗರಿಷ್ಠಮುಮನುಷ್ಠೇಯಮುಮೆಂದದನೆ ಪುರಸ್ಸರಿಸಿ ಯಿಂತೆಂಗುಂ—

ಕಂ ॥ ಅನುವರ್ತನೆನಿಸಿರ್ದಂ ಭೋಂ ।
ಕೆನೆ ಸಂಖೆಯನುಱಿದು ಕಲಹಮಂ ಮಾಡುವುದಾ ॥
ತನ ಗರ್ವದುರ್ವೊ ಮೇಣ ।
ನ್ಯನೃಪೋದ್ಭಳಬಳಮೊ ತಿಳಿಯವೇೞ್ಪುದು ನೃಪತಿ ॥ ೪೫ ॥

ರಾಯಸಮಂ ಪೆಸರ್ವೆತ್ತ ಪ ।
ಸಾಯಂ ಬೆರಸಟ್ಟಿ ದೂತನಿಂ ಪಗೆವನಭಿ ॥
ಪ್ರಾಯಸಮರ್ಜುಗಮನವಂ ।
ಗಾಯತ್ತರನಹಿತರಂ ವಿಚಾರಿಪುದುಚಿತಂ ॥ ೪೬ ॥

ಎನಲೊಡಮಖಿಳಾಮಾತ್ಯೇಕಮತ್ಯನಿಶ್ಚಿತಮಂತ್ರಮೆಕೃತ್ಯಮೆಂದು

ಮ ॥ ಸಹಜಪ್ರಜ್ಞನಶೇಷದೇಶಲಿಪಿಸದ್ಭಾಷಾವಿಶೇಷಜ್ಞ ನಿ ।
ಸ್ಪೃಹಿತಂ ನೀತಿವಿನೂತಸೂಕ್ತಿಸಹಿತಂ ದಕ್ಷಂ ಜಿತಾಕ್ಷಂ ನಿರಾ ॥
ಗ್ರಹನುದ್ಯದ್ಗುಣರತ್ನಸಂಗ್ರಹನೆನಿಪ್ಪಂಗಾ ಮಹಾಸಂಧಿವಿ ।
ಗ್ರಹಿಗಾಳೋಚಿಸಿದಂದದಿಂದೆಸೆಗು ಸೀನೆನ್ಸಂಧರಾಧೀಶ್ವರಾ ॥ ೪೭ ॥

ವ ॥ ಅನ್ತು ಸಮಯೋಚಿತವಾದಿಯುಂ, ಪದೇಕವಾದಿಯುಮಪ್ಪಸಂಧಿವಿಗ್ರಹಿಗನೆಗಲ್ಚಿ ರಾಜಕಾರ್ಯಮಂ ನಿಯೋಜಿಸಿ

ಉ ॥ ಸಾಧಿತಮಂತ್ರನುಂನತಗಿರೀಂದ್ರಗುಹಾಂತರದಿಂ ಪ್ರಸಿದ್ಧವಿ ।
ದ್ಯಾಧರನಾತ್ಮಮಂದಿರಕೆವರ್ಪವೊಲೊಪ್ಪುವ ಮಂತ್ರಶಾಲೆಯಿಂ ॥
ವಾಧರಣೀಶ್ವರಂ ಸೊಗಯಿಪೋಲಗಶಾಲೆಗೆ ಸಿದ್ಧಮಂತ್ರನಾ ।
ಜ್ಞಾಧರನಲ್ಕಱಿಂದೆ ನಡೆತಂದು ವಿನೋದದೊಳಿರ್ದನೂರ್ಜಿತಂ ॥ ೪೮ ॥

ವ ॥ ಅಂತಿರ್ಪುದುಮತ್ತಿತ್ತಲಾಪ್ರಧಾನೋತ್ತಮಂ—

ಕಂ ॥ ಬೆಸಗೊಳ್ಳದೆಡಪದನುಮಾ ।
ನಿಸದುಚಿತಮೆನಿಪ್ಪ ವಚನದಿಂದೆಸೆದಿರೆ ರಾ ॥
ಯುಸಮಂ ಬರೆದಾಗಳೆ ಮು ।
ದ್ರಿಸಿ ಕಟ್ಟಿ ಪಸಾಯಮಂ ನೃಪೋಕ್ತಕ್ರಮದಿಂ ॥ ೪೯ ॥

ದೃಷ್ಟಂ ವರವಕ್ರೋಕ್ತಿ ವಿ ।
ಶಿಷ್ಟಂ ನಿಶ್ಶಂಕನನ್ವಿತಂ ನಯನಿಪುಣಂ ॥
ಸ್ಪಷ್ಟಪರಚಿತ್ತವೃತ್ತಿನಿ ।
ಸೃಷ್ಟಾರ್ಥನೆನಿಪ್ಪದೂತಮುಖ್ಯನನಾಗಳ್ ॥ ೫೦ ॥

ವ ॥ ಕರೆದು ಬರೆದ ರಾಯಸಮುಮಂ ಕಟ್ಟಿ ಮುದ್ರಿಸಿದಪಸಾಯಮುಮಂ ಕೊಟ್ಟು ವಿಜಯಕಾರ್ಯಸಿದ್ಧಿಯಕ್ಕೆಂದು—

ಕಂ ॥ ಇರದೆ ನಿಜಾಂತರ್ಗತಮಂ ।
ನಿರವಿಸಿ ಕಳುಪಿದೊಡೆ ಕೞಿದು ಬಹುಜನಪದಮಂ ॥
ತ್ವರಿತಗತಿಯಿಂದೆ ಪದ್ಮನ ।
ಗರಮಂ ಕಡುಚೆಲ್ವಿನಾಗರಮನೆಯ್ದುಂದಂ ॥ ೫೧ ॥

ವ ॥ ಅನ್ತು ಬರುತ್ತುಮನತಿದೂರಾನ್ತರದೊಳ್—

ಮ ॥ ಅವೆ ತೋಱುತ್ತೆ ಕಱಂಗಿ ಸುತ್ತಿದ ವನಾನೀಕಂ ವನಾನೀಕಮ ।
ಧ್ಯದೊಳಾತೋರ್ಪುದೆ ಹೇಮಗೋಪುರಮದಾ ತೋಱುತ್ತೆ ಜೈನೇಂದ್ರಗೇ ॥
ಹದುದಂಚತ್ಕನಕೋಜ್ಜ್ವಳತ್ಕಳಶಮಾತೋಱುತ್ತೆ ಭೂಪಾಳನ ।
ಗ್ಗದಸೌಧಾಗ್ರಮೆನುತ್ತೆ ದೂತನಿರದೆಯ್ದುಂದಂ ಪುರೋಪಾಂತಮಂ ॥ ೫೨ ॥

ವ ॥ ಅನ್ತೆಯ್ದಿವನ್ದು ಕನ್ತುರಾಜನ ರಾಜಧಾನಿಯನ್ತೆ ವನರಾಜಿಯಿಂ ವಿರಾಜಿಸುವ ಪೊಱವೊೞಲ ಸಿರಿಯಂ ನಿರೀಕ್ಷಿಸುತ್ತುಂ ಪುರಗೋಪುರಮಂ ಪೊಕ್ಕು ವಾರಾಂಗನಾಸಮುತ್ತುಂಗ ಸೌಂದರಕುಧರಸಮುತ್ಪನ್ನ ಪ್ರಸನ್ನಶೃಂಗಾರರಸತರಂಗಿಣೀ ಸಂಗಮಾಭಿನವಖೇಟಮೆನಿಪ ವೇಶ್ಯಾವಾಟಮುಮಂ, ನಿಜಕಾನ್ತಿವಿಜಿತ ಫಣಿಪತಿಫಣಾಮಣಿ ಗಳಮರೀಚಿಮೇಚಕಿತ ಮರುನ್ಮಾರ್ಗಮುಮಂ ನೋಡಿ ನೀಡುಂ ಕೌತುಕಂಬಡುತ್ತುಂ ನಯನೋತ್ಸವಕಾರಣ ಮಣಿತೋರಣಯೂಥಸನಾಥಮಪ್ಪ ರಾಜವೀಥಿಯೊಳಗನೆ ರಾಜಮಂದಿರಕ್ಕೆ ಬಂದು ದೌವಾರಿಕ ನಿವೇದಿತನಿಜಾಗಮನ ವೃತ್ತಾಂತಮನಾಗಿ ಪೋಗಿ—

ಮ ॥ ಸಮರೋದಗ್ರಭಟಪ್ರತಾನಮನುದಾರೋರ್ವೀಶಸಂತಾನಮಂ ।
ಪ್ರಮದಾಸ್ಯಾಂಬುಜಗನ್ಧಮಗ್ನ ಮಧುಪಪ್ರಧ್ವಾನಮಂ ನೃತ್ಯವಾ ॥
ದ್ಯಮಿಳದ್ಗಾನಮನಾರ್ಯವರ್ಯವಚನಃ ಪಿಯೂಷದತ್ತಾವಧಾ ।
ನಮನೈಶ್ವರ್ಯ ನಿಧಾನಮಂ ಪದಪಿನಿಂ ಪೊಕ್ಕಂ ನೃಪಾಸ್ಥಾನಮಂ ॥ ೫೩ ॥

ವ ॥ ಅಂತಾಸ್ಥಾನಮಂಟಪಮಂ ಪೊಕ್ಕು ಸ್ವಕೀಯಾಜ್ಞಾಮಾತ್ರಸ್ವೀಕೃತಾನೇಕಭೂಕಾಂತದೇಶಕೋಶನೆನಿಪ್ಪ ಮದೀಶನಾದೇಶಮಿದೆಂದು ತನ್ನ ತಂದುಪಾಯನರತ್ನಕರಂಡಕಮಂ ಪ್ರಚಂಡಮಂಡಳಾಧೀಶನಪ್ಪ ವಜ್ರವೀರನಮುಂದಿೞಿಪಿ ನಿಜೋಚಿತಸ್ಥಾನದೊಳಿರ್ಪುದುಂ ಅದಂ ಸಮಗ್ರಸಂಧಿವಿಗ್ರಹಗುಣಾಗ್ರಣಿ ಕಳೆದುಕೊಂಡುನ್ಮುದ್ರಿತಂಮಾಡಿಯುನ್ಮಯೂಖಲೇಖಾಮುದ್ರಿತ ಸಭಾವಳಯವಳಯಾದಿ ನೂತ್ನರತ್ನಾಭರಣಂಗಳಂ ಬೇಱುವೇಱು ತೋಱಿ ತದನಂತರಂ—

ಕಂ ॥ ಅವಧಾರಿಸುವುದು ದೇವರ್ ।
ಭುವನೇಶಾದೇಶಮೆಂದು ಬಿನ್ನವಿಸಿ ಸಭಾ ॥
ಶ್ರವಣರಸಾಯನಮೆನಿಪಂ ।
ತವಿರಳಗಂಭೀರ ರಾವದಿಂ ಬಾಜಿಸಿದಂ ॥ ೫೪ ॥

ಉ ॥ ಸ್ವಸ್ತಿಸಮಸ್ತರಾಜಗುಣರಾಜಿತರಾಜಸಮಾಜಮಸ್ತಕ ।
ನ್ಯಸ್ತಪದಾರವಿಂದನರವಿಂದ ಮಹೀಪತಿ ವಜ್ರವೀರನಂ ॥
ವಾಸ್ತವ ಭಕ್ತಿಯುಕ್ತನನನಾಗ್ರಹದಿಂದೆ ಬೆಸರ್ವೆನೆಂಬುದುಂ ।
ದುಸ್ತರಕೋಪವಹ್ನಿಗೆ ಘೃತಾಹುತಿಯಾಯ್ತುದು ತನ್ನೃಪಾಳನಾ ॥ ೫೫ ॥

ವ ॥ ತತ್ತ್ವತ್ರಾಕರ್ಣನಾನಂತರಂ—

ಚಂ ॥ ಕುಡುವುದು ಕಪ್ಪಮಂ ನಡೆವುದಾಳ್ವೆಸದಿಂದಮೆ ಮುನ್ನಿನಂದದಿಂ ।
ಬಿಡುವುದು ದರ್ಪಮಂ ಪಡೆವುದಾಳ್ದನದೊಂದುಮನಃಪ್ರಸಾದಮಂ ॥
ತಡೆವುದು ಬುದ್ಧಿಯಲ್ಲಧಿ[ಕ]ನಪ್ಪವನೊಳ್ ಬಲಹೀನನಪ್ಪವಂ ।
ತೊಡರ್ದೊಡೆ ಕೇಡು ತಪ್ಪದೆನುತುಂ ನುಡಿದಂ ನಯಶಕ್ತಿಕೋವಿದಂ ॥ ೫೬ ॥

ಕಂ ॥ ಎಱಗಿದನಿತಱೊಳೆ ಮಱೆವಂ ।
ಪೆಱರಱಿಯಮೆಗಳನೆನಿತ್ತನಾದೊಡಮದಱಿಂ ॥
ದೆಱಗಿಪತಿಗಾತ್ಮಪದದೊಳ್ ।
ನೆಱದಿರು ನೃಪರೊಳಗೆ ಧರ್ಮವಿಜಯಮಧೀಶಂ ॥ ೫೭ ॥

ನಿನ್ನಾಚರಿಸಿದ ತಪ್ಪಂ ।
ಮುನ್ನಂ ಬೆಸಕೆಯ್ವುದರ್ಕೆ ಮನ್ನಿಪೆನಾನೆಂ ॥
ಬುನ್ನತಿಗೆ ನೃಪತಿ ಕಳಿಪಿದ ।
ನೆನ್ನನಿದಂ ಬಗೆದು ಪತಿಗೆ ವಿನಮಿತನಾಗಾ ॥ ೫೮ ॥

ವ ॥ ಎಂದು ತನ್ನನಧಃಕರಿಸಿದ ದೂತನ ಮಾತಂ ಕೇಳ್ದು—

ಮ ॥ ಘನದೂತೋಕ್ತಿ ಸಮೀರಣಪ್ರಚಳಿತ ಸ್ಥೂಳಾಯತ ಶ್ಮಶ್ರುಲೇ ।
ಖೆ ನವೀನೋದ್ಧತಧೂಮಲೇಖೆ ನಯನೋದ್ಯಚ್ಛೋಣಿಮಜ್ವಾಲೆಸಂ ॥
ಜನಿತಸ್ವೇದಜಲಂ ಘೃತಾಹುತಿಯೆನಿಪ್ಪನ್ನಂ ಸ್ವವಂಶಪ್ರಣಾ ।
ಶನದಾವಾಗ್ನಿವೊಲುರ್ವಿ ಕೊರ್ವಿದುದು ತದ್ಭೂಪಂಗೆ ಕೋಪಾನಳಂ ॥ ೫೯ ॥

ವ ॥ ಅನ್ನು ಮುನಿಸಂ ಮೊಗಕ್ಕೆ ತಂದಿಂತೆಂದಂ—

ಕಂ ॥ ಅಹಿತಹಿತನಿಗ್ರಹಾನು ।
ಗ್ರಹವಿಧಿದಕ್ಷಂಗೆ ವಿಹಿತಮಂ ನೀಂ ನಿನ್ನಾ ॥
ಮಹಿಪಾಳನೊಳಾಂ ಕೋಪಿಸೆ ।
ಮಹತ್ವಮಂ ನುಡಿದೊಡಾರುಮೇಂ ಸೈರಿಪರೆ ॥ ೬೦ ॥

ವಸುಧೆಗಧೀಶ್ವರ ನಾನೆಂ ।
ಬೆಸಕಂ ಮಿಗೆ ನಿನ್ನನಟ್ಟಿದಂ ನೆಟ್ಟನೆ ಭಾ ॥
ವಿಸದಣಮೆ "ವೀರಭೋಜ್ಯಾ ।
ವಸುಂಧರಾ" ಎಂಬ ವಾಕ್ಯಮಂ ನಿನ್ನರಸಂ ॥ ೬೧ ॥

ಕಂ ॥ ಕಪ್ಪಮನೆನ್ನೊಳ್ ಬೇಡುವ ।
ತಪ್ಪಂ ಸಾಧಿಸುವ ಸುಭಟನೃಪನಾವನೊ ಮುಂ ॥
ತಪ್ಪವನಾಹವದೊಳ್ ಮುಂ ।
ತಪ್ಪವನೆಂದೆನೆ ಮದುಗ್ರಖಡ್ಗಾಹತಿಯಿಂ ॥ ೬೨ ॥

ಆಳ್ವೆಸನಂ ಬೇಱಿಪ್ಪೊಡದಂ ।
ಕೇಳ್ವುದು ನೀನೆಂಬುದುಚಿತಮಿದಿರಂ ಗೆಲ್ವೀ ॥
ತೋಳ್ವಲಮನೆನ್ನದುರ್ಗಮ ।
ನಾಳ್ವಲಮಂ ಗೆಲ್ವ ಬಲ್ಪದುಳ್ಳೊಡೆ ಧುರದೊಳ್ ॥ ೬೩ ॥

ಉ ॥ ತನ್ನ ಪೊಡರ್ಪಿನಿಂದಮೆ ಸಮಸ್ತಧರಿತ್ರಿಯ ದರ್ಪಮಪ್ಪುದಂ ।
ಮುನ್ನಮಡಂಗಿಪಾ ಸಿಡಿಲ ಡಾಣೆಗೆ ವಜ್ರದ ಕಟ್ಟುಗೊಟ್ಟವೋ ॥
ಲೆನ್ನಯ ತೋಳ್ವಲಕ್ಕೆ ನೆರಮಾದರನೇಕಧರಾಧಿನಾಥರ ।
ತ್ಯುನ್ನತ ಶೌರ್ಯರೆಂದೊಡಿದಿರಾಂಪವರಾರೆನಗಾಜಿರಂಗದೊಳ್ ॥ ೬೪ ॥

ಕಂ ॥ ವಾಹಿನಿ ಮೊದಲೊಳ್ ಕಿಱಿದೆಂ ।
ದಾಹದದೊಳ್ ದಾಂಟಿದಂತೆ ಬಹುವಾಹಿನಿಯಾ ॥
ದೀಹದದೊಳ್ ದಾಂಟುವರಾ ।
ರೀಹದನಂ ನಿನ್ನಧೀಶನವಧಾರಿಸನೆ ॥ ೬೫ ॥

ಬಿಡದೆನ್ನಕೋಂಟೆಯುಂ ನೆನೆ ।
ವೊಡೆ ಮನಮಿೞ್ಕ್ಷಿಸಿದ ದಿಟ್ಟಿಗೊಳ್ಳಮೆ ಕೇಳೆಂ ॥
ದೊಡೆ ಮುಳಿದುಕೊಳ್ವನಾವಂ ।
ಗಡೆನುತ್ತುಂ ನುಡಿದನಾಪ್ರ್ವಮಂ ದರ್ಪಮುಮಂ ॥ ೬೬ ॥

ಮಾರ್ಗವಿರೋಧಮನೊಡರಿಸಿ ।
ದುರ್ಗಮನಿದನಾರೊ ಕೊಳ್ವತೇಜಸ್ವಿಗಳಿಂ ॥
ನಿರ್ಗಹನದಿನಿನತೇರ್ಗಂ ।
ಮಾರ್ಗವಿರೋಧಮನೆ ಮಾಱ್ಪುದೆನೆ ತುಂಗತೆಯಿಂ ॥ ೬೭ ॥

ಆಶಂಕೆಯನುೞಿದು ನಿಜಾ ।
ಧೀಶಂ ನಯಹೀನನಟ್ಟಿದೊಡೆ ನೀಂ ತಂದಾ ॥
ದೇಶಮಿದು ನಿಮ್ಮ ದೇಶವಿ ।
ನಾಶಮನಾಂ ಮಾಡುವೆಡೆಗೆ ಸಿದ್ಧಾದೇಶಂ ॥ ೬೮ ॥

ಆದರಿಪರಲ್ಲಿಗಟ್ಟುವು ।
ದಾದೇಶಮನುಚಿತಮಲ್ಲದೆನಗಟ್ಟಿದ ನಿ ॥
ಮ್ಮಾದೇಶವೆಲವೊ[ಚ]ರನಿ ।
ಮ್ಮಾದೇಶವನೀವುದರ್ಕೆ ಸೂಚಕಮಲ್ತೆ ॥ ೬೯ ॥

ಕಂ ॥ ಅರಸಾವೃದ್ಧನ ಮಾತೇಂ ।
ಪರಿಕಿಸೆ ಶಿಶು ದೇಶಕಾಲಮಂ ಸ್ವಪರಬಳಾಂ ॥
ತರಮನಱಿವಂಶಕಿಂನಾಂ ।
ನಿರುಪಮಮತಿ ವಿಶ್ವಭೂತಿಯಿಲ್ಲಪ್ಪುದಱಿಂ ॥ ೭೦ ॥

ಉ ॥ ಅಲ್ಲದೊಡೇಕೆ ಸಿನ್ನನಿನಿತಂ ನುಡಿದಟ್ಟಿದನಟ್ಟಿದಂದದಿಂ ।
ನಿಲ್ಲದೆ ನಾಳೆ ಕಾಳೆಗಕೆ ಸಂಗರರಂಗದೊಳಟ್ಕಿದೊಡ್ಡವೇೞ್ ॥
ಬಲ್ಲಿದರಾರ್ ವಿಹೀನಬಲರಾರ್ ವಿಭುವಾರ್ ಗಳ ಭೃತ್ಯರಾರಿವಿಂ ।
ತೆಲ್ಲಮನಲ್ಲಿ ನಿನ್ನ ಪತಿಗಂ ನಿನಗಂ ನೆಱೆ ತೋಱಿದಪ್ಪೆನಾಂ ॥ ೭೧ ॥

ವ ॥ ಎನೆ ದೂತನಿಂತೆಂದಂ—

ಕಂ ॥ ವಿಕ್ರಮಜಸದೊಳ್ ಸೀಮಾ ।
ತಿಕ್ರಮಮಂ ಯುವತಿಕುಚದೊಳುದ್ವೃತ್ತತೆಯಂ ॥
ವಕ್ರೋಕ್ತಿಯನತಿಶಯ ಕವಿ ।
ಚಕ್ರದೊಳಲ್ಲದೊಡೆಯಧಿಪನೇಂ ಸೈರಿಪನೆ ॥ ೭೨ ॥

ಲೋಕಾಧಿಪತಿಯನೇಳಿಸು ।
ವೀಕುನಯಮನಿತ್ತು ಕೇಡನೊಡರಿಸುವ ನೃಪಾ ॥
ನೀಕದಪಕ್ಷಂ ಬಡೆದಿಂ ।
ತೇಕಿಱುಪೆಗೆಱಂಕೆ ಮೂಡಿದಪ್ಪೊಲಾದಪೆ ನೀಂ ॥ ೭೩ ॥

ಚಂ ॥ ಅಸಮಪರಾಕ್ರಮೈಕನಿಧಿ ಕೇಸರಿಯೊಳ್ ಸಮರಕ್ಕೆವರ್ಪ ಸಾ ।
ಹಸದಿನಿಭೇಂದ್ರವನ್ಯಮೃಗಜಾತಿಗಳೊಳ್ ನಿಜಜಾತಿವೈರಮಂ ॥
ಬಿಸುಟೊಡಗೂಡುವಂದದೊಳೆ ನಿನ್ನೊಡಗೂಡಿದ ಭೂಪರಂ ಮದ ।
ಪ್ರಸರದೆ ನೀನುಮಾಂತು ನಿಲೆ ಗೆಲ್ಲದೆ ನಿಲ್ಲನಧೀಶನಾಜಿಯೊಳ್ ॥ ೭೪ ॥

ಕಂ ॥ ಪೆಸರ ಗಿರಿದುರ್ಗಮೊಲೆಗ ।
ಲ್ಗೆಸರ್ಗಲ್ಲದುಮಿಂಧನಕ್ಕೆ ಮುಟ್ಟುವಗುರ್ವು ॥
ಬಿಸುವ ವನದುರ್ಗಮೆನೆ ಮ ।
ದ್ವಸುಧಾಧೀಶ್ವರನ ಬಲಮನಾಂಪವನಾವಂ ॥ ೭೫ ॥

ಜನಪತಿಯಸೇನೆಗಾಪೋ ।
ತನಕ್ಕೆ ಜಲದುರ್ಗಮಚಳದುರ್ಗಂ ಪದಘು ॥
ಟ್ಟನೆಗದಱ ಗುಡಿಯಗೂಂಟ ।
ಕ್ಕೆನಸುಂ ವನದುರ್ಗಮೆಯ್ದುವೆನೆ ಕಾದುವರಾರ್ ॥ ೭೬ ॥

ರಣಬಾಲಕನಪ್ಪೈ ನೀಂ ।
ರಣಪರಿಣತವಯಸನಪ್ಪನವನೀಪತಿ ನೀ ॥
ನೊಣರ್ದಂತೆ ತರುಣತರಣಿಯೊ ।
ಳೆಣೆ ಸಚಿವಂ ನಯಪಥಪ್ರಕಾಶನಗುಣದಿಂ ॥ ೭೭ ॥

ಕಂ ॥ ಪತ್ರಮನಿದನವನೀಪತಿ ।
ಸೂತ್ರಿಸಿದವೊಲುತ್ತಮಾಂಗದೊಳ್ ತಾಳ್ದಿ ಭವ ॥
ದ್ಧಾತ್ರಿಯನಾಳಲ್ಲದೊಡಸಿ ।
ಪತ್ರಂ ನಿಜಮಸ್ತಕಕ್ಕೆ ತಡೆಯದೆ ಬರ್ಕುಂ ॥ ೭೮ ॥

ವ ॥ ಎಂದು ನುಡಿದ ನುಡಿಗೆ ಕಿಡಿಕಿಡಿವೋಗಿ ಸಿಡಿಲಕಿಡಿಯಂ ತಳದೊಳೂರ ಸುವಂತೋಲೆಯಂ ಮುಱಿದೊರಸಿ ಕಳೆಯೆ ದೂತಂ ಯಮದೂತನಂತೆ ಕನಲ್ದಿಂತೆಂದಂ—

ಕಂ ॥ ಆಳೋಚಿಸದಿಂವೊಸೆವೀ ।
ವೋಲೆಯನಿದನುಱದೆ ಮುಱಿದು ಕಳೆದೈ ನಿನಗಂ ॥
ತಾಳನೆ ಕನಲ್ದು ನಿಜವಂ ।
ಶ್ಯಾಳಿಗಳೋಲೆಯನೆ ಮುಱಿದನೆಂದಱಿ ಪೆಱತೇಂ ॥ ೭೯ ॥

ನಯಮಂ ಕೆಯ್ಕೊಳ್ಳದ ನಿ ।
ನ್ನಯ ವಕ್ರತೆಯಂ ಮದೀಯನಿಶಿತಾಸಿಭವಾ ॥
ಗ್ನಿಯನೀಳ್ದು ತಿರ್ದುಗುಂ ಪು ।
ಳ್ಳಿಯಕೊಂಕಂ ಕಿರ್ಚುತಿರ್ದುವಂತಾಹವದೊಳ್ ॥ ೮೦ ॥

ಮೃದುನಯಯುತ ಜಾಳಂ ನಿಜ ।
ಹೃದಯಂಗಮಮಾಗದಿರ್ದೊಡಂ ರಿಪುಭಯದಿಂ ॥
ಮದವಿಶಸನ ಘನಬಾಣಂ ।
ಹೃದಯಂಗಮಮಾಗದಿನಿಸದೇಂ ನಿಂದಪುದೇ ॥ ೮೧ ॥

ಎನೆ ಮುನಿದು ವಜ್ರವೀರಂ ।
ಘನಪೀರದಿನೆೞ್ದು ವಜ್ರನಿರ್ಘೋಷದವೋ ॥
ಲನಯಪರಂ ಪೊಳೆವಸಿಮಿಂ ।
ಚನಿಳಿಸಿ ಪೊಯ್ಯಲ್ಕೆ ನಿಳ್ಕಿದಂ ನೃಪಚರನಂ ॥ ೮೨ ॥

ವ ॥ ಅನ್ತು ಕಲ್ಪಾನ್ತಕೃತಾನ್ತನನ್ತೆ ನಯಮನುೞಿದು ಬಾೞಿನೆಂಬುದಂ ಪೇೞ್ವಿಂತೆ ಬಾಳಂ ಕಿೞ್ತು ಪೊಯ್ಯಲೆೞ್ದಿನನಯದಿಂ ತತ್ಕಾರ್ಯಮಂ ದೂತನನೆಯ್ದು ಲೊಡಂ ಪ್ರಭುವೆನಿಪಂ ನೆಗೞಲಾಗದೆಂದು ನುಡಿದು ಕೆಯ್ಯಂ ಪಿಡಿದಾ ತನಗಾಪ್ತರೆನಿಪ ಮಾತ್ಯರ್ ನಯವಿದರ್ ನಿವಾರಿಸೆ ತದನಂತರಂ—

ಕಂ ॥ ಅವಿನಯಮಂ ಗಳಪಿದ ಚರ ।
ನವಧ್ಯನಾದೊಡಮಿವಿನಿತುಮಂ ಗಳಪಲ್ ಪೇ ॥
ೞ್ದಿವನೇನವಧ್ಯನೇಯಾ ।
ಹವದೊಳ್ ಚಂಡಾಸಿಯಿಂದೆ ಖಂಡಿಪೆನವನಂ ॥ ೮೩ ॥

ವ ॥ ಅಂತಾತನುದ್ಧತೆಯುಮನುನ್ನತ್ತತೆಯುಮಂ ಕಂಡು ದೂತಂ ಮತ್ತ ಮಿಂತೆಂದಂ—

ಮ ॥ ಪ್ರತಿಕೂಲೋಕ್ತಿಗಳೆನ್ನಮಾತುಗಳಿವ[ಜ್ಞಂಗಾ] ವಿವೇಕಾನ್ವಿತ ।
ಗರ್ತಿಪಥ್ಯಂಗಳೆನಿಕ್ಕುಮಿಂತಿನಿತುಮಂ ನೀನೀಗಳೆಂತುಂ ಮದೋ ॥
ದ್ಧತನ್ನೆ ಕಾಣೆ ಮದೀಶ್ವರಂ ಬರೆ ರಣಪ್ರಾರಂಭದೊಳ್ ನಾಳೆ ನಿ ।
ಶ್ಚಿತಮಾಗುತ್ತಿರೆ ಕಾಣ್ಬೆಯೆಂದು ನುಡಿದಂ ನಿರ್ಭೀತಚೇತಂ ಚರಂ ॥ ೮೪ ॥

ಚಂ ॥ ಅವನತನಾದೊಡಂ ವಿಭುಗೆ ಭೀತಿಯಿನಾಜಿಯೊಳೋಡಿಪೋದೊಡಂ ।
ವಿವಿಧಮೃಗೇಕ್ಷಣಾಳಿ ವಿಳಸದ್ಭುವನಾಶ್ರಯಮುದ್ಧಶಾಲಮೊ ॥
ಪ್ಪುವ ಕಟಕಂ ಸುವಂಶವಿಭವಂ ನೆಗೞ್ದೀ ಧನಮುಳ್ಳದೇಶಮೆಂ ।
ಬಿವು ದೊರೆಕೊಳ್ವುವೆಂಬ ಬಗೆಯಿಂದಮೆ ನೀಂ ನುಡಿವೈ ದುರುಕ್ತಮಂ ॥ ೮೫ ॥

ಕಂ ॥ ಇಂತುಱದಿಱಿದ್ದೈ ದೇಶವು ।
ನೆಂತೀಶಾದೇಶಮಂ ಸಮುಲ್ಲಂಘಿಸಿಯೆಂ ॥
ತಂತೆನ್ನೊಳೆಡಱಿನುಡಿದಂ ।
ತಂತೆ ರಣಾಂಗಣದೊಳೊಡ್ಡಿ ನಿಲ್ ನಿರ್ಭಯದಿಂ ॥ ೮೬ ॥

ವ ॥ ಅನ್ತು ನಯಾಕ್ರಾನ್ತಸ್ವಾನ್ತರ್ಗೆ ಸಂತೋಷಮುಮಂ ದುರಾಗ್ರಹಗ್ರಸ್ತರ್ಗೆ ವಿಗ್ರಹಾಗ್ರಹಮುಮಂ ಪುಟ್ಟಿಸುತ್ತುಮಾಸ್ಥಾನಮಂ ಪೊಱಮಟ್ಟು ಕತಿಪಯಪ್ರಯಾಣದಿಂ ನಿಜರಾಜಧಾನಿಯನೆಯ್ದೆವಂದು ಪುರಮುಮನರಮನೆಯುಮಂ ಪೊಕ್ಕು ಸಮುದ್ದಂಡ ಮಂಡಳಿಕಮಂಡಿತಾಸ್ಥಾನಮಂಡಪಮಧ್ಯಸ್ಥಿತ ಸಿಂಹಾಸನಾಸೀನನಾಗಿರ್ದರವಿಂದಮಹಾ ರಾಜಪಾದಾರವಿಂದಕ್ಕೆ ಸಾಷ್ಟಾಂಗಮೆಱಗಿ ಪೊಡಮಟ್ಟು ತನ್ನ ಪೋದ ಬಂದ ವೃತ್ತಾಂತ ಮೆಲ್ಲಮಂ ಮುಕುಳಿತಹಸ್ತನಯನಿಪುಣಂ ಬಿನ್ನವಿಸಿ ಮತ್ತಮಿಂತೆಂದಂ—

ಮ ॥ ಘನವಜ್ರೋದ್ಧದವಾಗ್ನಿಮತ್ಪತಿಯ ಕೋಪಾಟೋಪಮೆಂದಂದು ವೈ ।
ರಿನಿಕಾಯಕ್ಕೆ ಗಿರೀಂದ್ರವಾದಿವನದುರ್ಗಂ ನಿಷ್ಫಳಂ ದುರ್ಗಮಾ ॥
ತನಕಾರುಣ್ಯಮೆ ನೀನದಂ ಪಡೆವುದೆಂದಾನೆಂದೊಡಂ ವಜ್ರವೀ ।
ರನುದಗ್ರಂ ನಿಜದುರ್ಗಮಂ ಬಲಿದುಕೊಂಡಿರ್ಪಂ ರಣೋದ್ಯೋಗದಿಂ ॥ ೮೭ ॥

ಕಂ ॥ ಭೀತರನಭಿಮಾನತರಂ ।
ಮಾತೇನೊಡಗೂಡಿಕೊಂಡು ನಮ್ಮೊಳ್ ರಣಸಂ ॥
ಜಾತಪ್ರೀತಿಯೊಳಿರ್ದಪ ।
ನೇತೆಱದಿಂ ವಜ್ರವೀರನತಿದುರ್ವಾರಂ ॥ ೮೮ ॥

ಬವರಂ ನಮ್ಮೊಳ್ ಬೇಡೆಂ ।
ಬವರಂ ಕಡೆಗಣಿಸಿ ಜಡಿದು ಕಡುಪಿಂ ನುಡಿವಂ ॥
ಜವನುಂ ತೊಡರ್ದೆಡೆಯೊಳ್ ನಂ ।
ಜವನುಂ ನೀನಲ್ಲದುೞಿದರವಗಡಿಸುವರಾರ್ ॥ ೮೯ ॥

ವ ॥ ಎಂದಿಂತು—

ಶಾ ॥ ದೂತಂ ಸಂಗರಮಂ ನಿರೂಪಿಸೆ ಜಯಶ್ರೀಸಂಗಮಂ ತನ್ನೊಳೇ ।
ಮಾತಿಂದಾದಪುದೆಂಬ ವಾರ್ತೆಯುನೆ ಕೇಳ್ದಂತಾಹವಕ್ಷೋಣಿಸಂ ॥
ಕೇತಸ್ಥಾನಮೆನುತ್ತುಮಾದೊಲವಿನಿಂದೇಕಾಂಗದಿಂ ಪೋಪ ವಿ ।
ಖ್ಯಾತೋತ್ಸಾಹಮನಪ್ಪುಕೆಯ್ದನತಿಧೀರೋದಾತ್ತ ಭೂಪೋತ್ತಮಂ ॥ ೯೦ ॥

ಕಂ ॥ ಸ್ಪಷ್ಟಮೆನ"ಗಿಷ್ಟಮೇವ ಹಿ ।
ಚೇಷ್ಟಿತ"ಮೆಂಬುಕ್ತಿಯಾಯ್ತು ನೆರದರ್ ತಮ್ಮೊಳ್ ।
ದುಷ್ಟ ನೃಪರೆಂದು ಭೂಪಂ ।
ಹೃಷ್ಟತೆಯಂ ತಳೆದನೊರ್ಮೊದಲೆ ತವಿಪಾರ್ಪಿಂ ॥ ೯೧ ॥

ರಿಪುವೆನಿಪ ಚಂದ್ರನಂ ರಾ ।
ಹು ಪೂರ್ಣನಂ ಕಿಡಿಸುವಂತೆ ವಿಕ್ರಮಿಯೆನಿಪಾ ॥
ನೃಪನಂ ಪಗೆಯಂ ಲಕ್ಷ್ಮೀ ।
ಪ್ರಪೂರ್ಣನಂ ಕಿಡಿಸದಂದದೇಂ ಸಾಹಸಮೋ ॥ ೯೨ ॥

ವ ॥ ಎಂದು ತನ್ನುದಾತ್ತವೃತ್ತಿಯಂ ರಾಜಲೋಕಕ್ಕೆ ತಿಳಿಪಿ ಬಟಿಕಂ ಬಳಾಧ್ಯಕ್ಷನನಕ್ಷುಣ್ಣಸಮರದಕ್ಷನಂ ಬರಿಸಿ ಪ್ರಯಾಣಭೇರಿಯಂ ಪೊಯ್ಸೆಂದು ನಿಯಾಮಿಸೆ—

ಮ ॥ ಧರೆಯೊಳ್ ತುಂಗತರಂಗ ವಾರಿಧಿರವಂ ಶೈಳಂಗಳೊಳ್ ಸಿಂಹಶಂ ।
ಹರವಂ ನೀರದಮಾರ್ಗದೊಳ್ ಘನರವಂ ದಿಗ್ವ್ರಾತದೊಳ್ ದಿಕ್ಕರೀಂ ॥
ದ್ರರವಂ ಪೊಣ್ಮಿದುದೆಂಬಿನಂ ಭುವನಮಂ ತೀವಿತ್ತು ವಿಖ್ಯಾತನ ।
ಪ್ಪರವಿಂದ ಕ್ಷಿತಿನಾಥವಿಶ್ರುತಜಯಪ್ರಸ್ಥಾನ ಭೇರೀರವಂ ॥ ೯೩ ॥

ಜಯಸಂವಾದಕ ವಂದಿವೃಂದಕುಲವೃದ್ಧಾಸೀರ್ಣನಾದಂ ಸುಖೋ ।
ದಯಗೇಯಧ್ವನಿ ಪುಣ್ಯಪಾರಕರವಂ ತೂರ್ಯಸ್ವನಂ ತೀವೆ ದಿ ॥
ಕ್ಚಯಮಂ ಪುಣ್ಯವಧೂಜನಂ ಪರಸೆ ಮುಕ್ತಾನೀಕದಿಂ ತೀವಿ ಶೇ ।
ಷೆಯನುದ್ಯಚ್ಛುಭಲಗ್ನದೊಳ್ ವಿಜಯಯಾತ್ರೋದ್ಯುಕ್ತನಾದಂ ನೃಪಂ ॥ ೯೪ ॥

ವ ॥ ಅಂತಸಮಸಮರೋದ್ಯುಕ್ತಚಿತ್ತನಾಗಿ ಮುಹೂರ್ತಿಕ ಸಂಕೀರ್ತಿತ ಶುಭಮುಹೂರ್ತದೊಳುತ್ತುಂಗ ಮದಾಂಧಸಿಂಧುರಸ್ಕಂಧಾರೂಢವಿದ್ಯಾಪ್ರೌಢಂ ಪ್ರಬಳಬಳರಾಜಸಮಾಜಂ ಬೆರಸು ಮಣಿತೋರಣರಾಜಿವಿರಾಜಿತರಾಜವೀಧಿಯೊಳಗಾನೆಯ ಮೇಲೆ ಪೂರ್ವೋಪಕಂದರ್ಪನಂತೆ ಬರ್ಪಲ್ಲಿ—

ಕಂ ॥ ಅರವಿಂದರಾಜನಂ ಪುಂ ।
ಡರೀಕಮೋಲಗಿಸಲೆಂದು ಬರೆ ಹಂಸೆಗಳಾ ॥
ದರದಿನೊಡವಂದುವೆಂಬಂ ।
ತಿರೆ ಬೆಳ್ಗೊಡೆ ಚಾಮರಂಗಳೆಸೆದುವು ನಿಸದಂ ॥ ೯೫ ॥

ಕಂ ॥ ಕೂರಂಕುಶದಿಂದರಸಂ ।
ವಾರಣಮಂ ಪಿಡಿಯೆ ಹಾರಮುಬಳಬಳಾಚೇ ॥
ತೋರಣಮನಮರೆಪಿಡಿದುದು ।
ರೋರಂಗದೊಳಿಸೆಯೆ ನರ್ತಿಸುತ್ತಾಕ್ಷಣದೊಳ್ ॥ ೯೬ ॥

ಅರವಿಂದಮಹಾರಾಜನ ।
ಬರವಿಂ ಮುಖಕಮಲಮಲರೆ ನಲಿವನುರಾಗ ॥
ಕ್ಕಿರದೆ ಕದಕದಿಪ್ಪಕುಚಂ ।
ದೊರೆಯೆನೆ ಪರಿತಂದು ತರುಣಿ ನೋಡಿದಳೊರ್ವಳ್ ॥ ೯೭ ॥

ಮ ॥ ಅಲರಂಬಂ ಗೆಲೆ ಕಣ್ಮಲರ್ ಮದನಚಾಪಾಟೋಪಮಂ ಪುರ್ವುಗಳ್ ।
ಗೆಲೆ ಪೂರ್ಣೇಂದುವನಾನನಂ ಗೆಲೆ ಶಿರೀಷೋದ್ದಾಮದಾಮಂಗಳಂ ॥
ಗೆಲೆ ತೋಳ್ಗಳ್ ಗೆಲೆವಂದು ಕಾಮಸತಿಯಂ ಕಣ್ಗೊಪ್ಪುತಿರ್ಪಾಕೆ ಸೋ ।
ರ್ತ್ತೆಳೆಯಂ ಪಾಳಿಸುವಂಗೆ ವೈರಿಜಯಮಂ ಸೂಚಿಪ್ಪವೋಲ್ ನೋಡಿದಳ್ ॥ ೯೮ ॥

ವ ॥ ಅನ್ತು ಸಕಳ ಕಾನ್ತಾಜನಸ್ವಾಂತಮಂ ಕನ್ತುಶರಾಕ್ರಾನ್ತಮಂ ಮಾಡುತ್ತುಂ ರಾಜರಾಜಂ ರಾಜಧಾನಿಯಂ ಪೊಱಮಟ್ಟು—

ಕಂ ॥ ಎತ್ತಿದ ಗುಡಿಗಳೆ ಗೆಲವಿಂ ।
ಗೆತ್ತಿದಗುಡಿ ತೂರ್ಯರವಮೆ ಜಯತೂರ್ಯರವಂ ॥
ಮತ್ತೆನಿಸಿದಪ್ಪುದೆನೆ ಭೂ ।
ಪೋತ್ತಮನಾತ್ಮೀಯ ಶಿಬಿರಮಂ ಪುಗುತಂದಂ ॥ ೯೯ ॥

ವ ॥ ಅನ್ತು ಮುನ್ನಮೆ ತನ್ನ ನಿಯಮದಿಂ ಗೃಹಮಹತ್ತರಂ ಬಿತ್ತರಿಸಿದ ಬೀಡಿನ ಚೆಲ್ವಂ ನೀಡುಂ ಭಾವಿಸಿ ನೋಡಿ—

ಉ ॥ ಕೆಂಗುಡಿಗಳ್ ತಳಿರ್ತಶುಕೆಯೊಳ್ಗುಡಿ ಬಾಳತಮಾಳಮಾಪ ಸು ।
ರ್ಪಂ ಗೆಡೆಗೊಂಡು ತೋರ್ಪ ಗುಡಿ ತಳ್ತುಮಡಲ್ತೆಳಮಾವು ಬೆಳ್ಪನಾ ॥
ಲಿಂಗಿಸಿ ಚೆಲ್ವುವೆತ್ತ ಗುಡಿ ಮಲ್ಲಿಗೆಯಂದದಿನೊಪ್ಪೆ ಕನ್ತುರಾ ।
ಜಂಗಿರದೀವನಂದನವನಕ್ಕೆಣೆಯಾದುದು ಬೀಡು ಭೂಪನಾ ॥ ೧೦೦ ॥

ವ ॥ ಮತ್ತಮಲ್ಲಿ—

ಕಂ ॥ ಅಳಿರುತಿಯಂ ಗೆಲೆ ಲಲನಾ ।
ವಳಿ ಮಂಗಳಗೀತಕಳನಿನಾದಂ ಕ್ರೀಡಾ ॥
ಚಳಮಂ ಗೆಲೆ ಗೂಡಾರಂ ।
ಗೆಲೆವಂದುದು ಚಂಪೆಯಂ ಲತಾಮಂಟಪಮುಂ ॥ ೧೦೧ ॥

ವ ॥ ಅಂತು ಪೂರ್ಣೋಪಮೆಗಡಪಾರ್ಗಿರ್ಪುದುಂ—

ಮ॥ ಸ್ರ॥ ಅರವಿಂದಕ್ಷೋಣಿಪಾಳಂ ಪಟುಪಟಹರವಾಕ್ರಾನ್ತ ದಿಕ್ಚಕ್ರವಾಳಂ ।
ಪುರಸ್ಸೈನ್ಯಂ ಸದ್ವದಾನ್ಯಂ ಸಕಲ ಶಕುನಸಂಸೂಚಿತಾರಾತಿಜೈತ್ರಂ ॥
ಸ್ಥಿರಸತ್ಪ್ರೋದ್ಯಚ್ಚರಿತ್ರಂ ವಿಜಯಶಿಬಿರಮಂ ಬಂದು ಪೊಕ್ಕಂ ಯಶೋಮಂ ।
ದಿರವಂದಿಸ್ತೋತ್ರಪಾತ್ರಂ ಸುಕವಿಜನಮನಃಪದ್ಮಿನೀಪದ್ಮಮಿತ್ರಂ ॥ ೧೦೨ ॥

— ಗದ್ಯಂ —

ಇದು

ವಿದಿತವಿಬುಧಲೋಕನಾಯಕಾಭಿಪೂಜ್ಯವಾಸುಪೂಜ್ಯಜಿನಮುನಿ
ಪ್ರಸಾದಾಸಾದಿತನಿರ್ಮಳಧರ್ಮ ವಿನುತವಿನೇಯಜನ
ವನಜವನವಿಳಸಿತಕವಿಕುಳತಿಳಕಪ್ರಣೀತಮಪ್ಪ ಪಾರ್ಶ್ವ
ನಾಥಪುರಾಣದೊಳ್ ಅರವಿಂದಮಹಾರಾಜ
ವಿಜಯಯಾತ್ರೋತ್ಸವವರ್ಣನಂ

ದ್ವಿತೀಯಾಶ್ವಾಸಂ



॥ ಶ್ರೀಃ ॥

॥ ಶ್ರೀ ವೀತರಾಗಾಯ ನಮಃ ॥

# ತೃತೀಯಾಶ್ವಾಸಂ

ಕಂ ॥ ಶ್ರೀರಮಣಣನಂತುಮವನೀ ।
ರಾರಾಜಿತ ರಾಜಭವನಮಂ ಮಣಿವಿಳಸ ॥
ತ್ತೋರಣಮಂ ನಯನೋತ್ಸವ ।
ಕಾರಣಮಂ ಪೊಕ್ಕನೊಸೆದು ಕವಿಕುಳತಿಳಕಂ ॥ ೧ ॥

ಅರಸನೊಡವಂದ ಮಂತ್ರೀ ।
ಶ್ವರರಂ ಮಂಡಳಿಕರಂ ಮಹೀನುತ ಸಾಮಂ ॥
ತರನಖಿಳಪರಿಗ್ರಹಮಂ ।
ಪರಿವಿಡಿಯಿಂದಱಿದು ಬಿಡಿಸಿದಂ ಪಡೆವಳನುಂ ॥ ೨ ॥

ವ ॥ ಅಂತರಸಂ ಪೊಱಬೀಡಂ ಬಿಟ್ಟಿರೆ ಮರುಭೂತಿ ಭೂತಳಪತಿಯೊಡನೆ ನಡೆಯಲ್ವೇಡಿ ನಿಜ ಜನನಿಯಪ್ಪನುಂದರಿಯ, ನಿಜಾಗ್ರಜನಪ್ಪ ಕಮಠನ ಸಮೀಪಕ್ಕೆ ವಂದು—

ಕಂ ॥ ಅರಸಂ ವೈಹಾಳಿಗೆ ಸಂ ।
ಚರಿಸಲೊಡಂ ಪಿಂದೆ ನಿಲ್ವುದನುಚಿತಮೆನೆ ಸಂ ॥
ಗರದೆಡೆಗೆ ನಡೆಯೆ ತಡೆವುದು ।
ಪರಿಭಾವಿಸೆ ಸೇವಕಂಗೆ ಪಾಟಿಯೆ ಪೇೞಿಂ ॥ ೩ ॥

ವ ॥ ಅದುಕಾರಣದಿಂ ನೀಮುಂ ಮದಗ್ರಜನುಮೆನಗೆ ನಿಯಮಿಸುವುದಂ ತಡಮಿಲ್ಲದೆ ನಿಯಮಿಸಿ ಕಳಿವುವುದೆಂದುದಾತ್ತಮತಿ ನುಡಿದು ಮತ್ತಮಿಂತೆಂದಂ—

ಕಂ ॥ ನಿಮ್ಮ ಪರಿವಾರಮಂ ಸೊಸೆ ।
ಯುಮ್ಮುನ್ನಿನಮಾೞ್ಕೆಯಿಂದೆ ಬೆಸಕೆಯ್ಸಿಕೊಳು ॥
ತ್ತುಮ್ಮಳಿಸದಿರ್ಪುದಂಬಿಕೆ ।
ನಿಮ್ಮಾಶೀರ್ವಾದಮೆನಗೆ ವಜ್ರದ ಕವಚಂ ॥ ೪ ॥

ಎನ್ನಿಂದಮಧಿಕಮೆನೆ ಸೊಸೆ ।
ಯನ್ನಡಯಿಪ ಸೊಸೆಯನಗ್ಗಳಂ ಕೆಳದಿಯರಂ ॥
ಮನ್ನಿಸಿ ನಡೆಯಿಪ ಮೈಮೆ ನಿ ।
ಜನ್ನಿಮಗೆನೆ ಮಗುೞೆ ಜನನಿ ಬಿನ್ನವಿಸಲದೇಂ ॥ ೫ ॥

ವ ॥ ಎಂದು ಪರಿಜನಮಂ ಸಮರ್ಪಿಸುವ ನೆವದಿಂ ಚತುರವಚನವಿಚಕ್ಷಣಂ ಪ್ರಾಣೇಶ್ವರಿಯೆನಿಪ್ಪ ವಸುಂಧರಿಯುಂ ಸಮರ್ಪಿಸಿ—

ಕಂ ॥ ಭರದಿಂದೆಱಗಿದನನನುಂ ।
ದರಿ ಮಗನಂ ತೆಗೆದು ಬಿಗಿದು ತೞ್ಕೈಸಿ ಗುಣಾ ॥
ಭರಣ ನಿಜವಿಜಯಭುಜದೊಳ್ ।
ಧರಿಯಿಸು ಜಯವಧುವನೆಂದು ಪರಸಿದಳೊಲವಿಂ ॥ ೬ ॥

ವ ॥ ಅನ್ತು ತಾಯ ನಲ್ವರಕೆಗಳಂ ತಳೆದು ಬೞಿಯಂ ನಿಜಾಗ್ರಜಂಗೆ ಕೆಯ್ಗಳಂ ಮುಗಿದು—

ಕಂ ॥ ಗುರು ನಿಮ್ಮಂ ನಿಶ್ಚಿಂತದೊ ।
ಳಿರಿಸುವ ಭರದಿಂದೆ ಭಾರಮಪ್ಪುದನೆನ್ನೀ ॥
ಶಿರದೊಳ್ ತಳ್ದಿಟ್ಟೊಡಮಿೂ ।
ಗುರುಭಾರಂ ನಿಮ್ಮದೆನಗೆ ಗುರುವಪ್ಪುದಱಿಂ ॥ ೭ ॥

ಮ ॥ ನಿಯತಂ ಸೇವಕನಪ್ಪವಂಗೆ ಪಸಿವಂ ನೀರೞ್ಕೆಯಂ ನೋಡದ ।
ಪ್ರಿಯ ಶೀತಾತಪಬಾಧೆಗೊಡ್ಡಿ ತನುವಂ ದುಃಖಂ ಬಡಲ್ವೇೞ್ಕುಮಾ ॥
ರಯೆ ನೀಮಪ್ಪೊಡೆ ಸೌಖ್ಯಮೂರ್ತಿ ಸಲೆ ಪುಟ್ಟಿರ್ದಂತೆ ಕೆಯ್ಬೇಯಲೇ ।
ಕೆಯೊ ಪೇೞಿಂದಿದನಾಂತೆನೀಪದಕೆ ನೀಮಿರ್ದಂತಿರಾಂ ಯೋಗ್ಯನೇ ॥ ೮ ॥

ಕಂ ॥ ಜಗತೀಭಾರಮನಿತರೋ ।
ರಗನಹಿರಾಜಂಗೆ ನಿರವಿಪುದನನುಕರಿಕುಂ ॥
ನೆಗೞ್ದಿ ಗುರುಭಾರಮಂ ನೆ ।
ಟ್ಟಗೆ ನಿನಗಾನಗ್ರಜನ್ಮ ಬಿನ್ನವಿಪಂದಂ ॥ ೯ ॥

ತಂದೆಯ ಪರೋಕ್ಷದೊಳ್ ನೀಂ ।
ತಂದೆಯೆ ಎನಗದಱಿನಮಳಗುಣಸಂಪದದೊಳ್ ॥
ನಿಂದ ನಿನಗಾವ ತೆಱದಿಂ ।
ನಿಂದೆ ದಿಟಂ ಪೊರ್ದದಂತು ನಡೆ ನಿಯತತೆಯಿಂ ॥ ೧೦ ॥

ಜನನಿಗೆ ಬೆಸಗೆಯ್ವಂ ನಾ ।
ದುನಿಯಂ ಬೆಸಕೆಯ್ಸಿಕೊಳ್ವುದನವರತಂ ಸ ॥
ಜ್ಜನ ಗೋಷ್ಠಿಯೊಳಿರ್ಪುದು ದು ।
ರ್ಜನರಂ ಪರಿಹರಿಪುದುೞಿವುದಸದಾಗ್ರಹಮಂ ॥ ೧೧ ॥

ಭೋಗಮನನುಭವಿಸುವುದು ।
ದ್ವೇಗಂ ಪೆಱಗಾಗದಂದದಿಂ ತ್ಯಾಗಮನು ॥
ದ್ಯೋಗಿಸುವುದು ಯಶಮಂ ಪು ।
ಣ್ಯಾಗಮಮಂ ಮಾಡುತಿರ್ಕೆ ನಿಲೆಯನವರತಂ ॥ ೧೨ ॥

ವ ॥ ಅನ್ತು ಮಂತ್ರಿಮುಖ್ಯಂ ಕಮಠಂಗೆ ಸಮಸ್ತ ಭಾರಮಂ ಸಮರ್ಪಿಸುವಿನಂ ಪುರಸ್ಸರಂ ಬೀೞ್ಕೊಂಡಖಂಡಿತ ಪ್ರೇಮವಸುಂಧರಿಯೆನಿಸಿದ ವಸುಂಧರಿಯಂ ಸಾರಣ್ಗೆ ಕರೆದು—

ಕಂ ॥ ತಡೆಯದೆ ಬರ್ಪೆಂ ನೆನೆದಿರ್ದೆ ।
ಗಿಡದಿರು ಮಜ್ಜನನಿಯಲ್ಲಿ ನೀಂ ನಯವಿನಯಂ ॥
ಗಿಡದಿರು ದುಷ್ಟರ ನುಡಿಗೆಡೆ ।
ಗುಡದಿರು ಬಿಡದಿರು ಕುಲಕ್ರಮೋಚಿತ ಗತಿಯಂ ॥ ೧೩ ॥

ಮ ॥ ಇನಿಯಂ ಪೋದಪೆನೆಂದು ಬಂದಱಿಪೆ ದೀರ್ಘಶ್ವಾಸಮುಣ್ಮಿತ್ತು ಪಾ ।
ವ್ವನೆ ಪಾಱಿತ್ತಿರ್ದೆ ಗದ್ಗದಕ್ಕೆ ನುಡಿಗಳ್ ಪಕ್ಕಾದವಾಸ್ಯಂ ಹಿಮಂ ॥
ತನಿ ಸೋಂಕಿರ್ದ ಸರೋರುಹಕ್ಕೆ ಸರಿಯಾಯ್ತಂಗಂ ಗುರು ಗ್ರೀಷ್ಮತ ।
ಪ್ತನವೋದ್ಯಲ್ಲತೆಯಂತೆ ಕಂದಿತು ವಿಯೋಗೋದ್ವೇಗದಿಂ ಕಾಂತೆಯಾ ॥ ೧೪ ॥

ಕಂ ॥ ಇನನ ಬೞಿವಿಡಿದುಪೋಗ ।
ಲ್ಕನುಮಿಸಲಿನಿಯಂ ರಥಾಂಗಮಂ ಪೋಲೆ ಘನ ॥
ಸ್ತನಿ ಚಕ್ರವಾಕದಂಗನೆ ।
ಯೆನೆ ನಿರ್ಭರ ವಿರಹವಿಧುರೆ ವಿಹ್ವಳೆಯಾದಳ್ ॥ ೧೫ ॥

ದಂಡಿಂಗೆ ಪೋಪೆನೆಂದೆನೆ ।
ಗಂಡಂ ನವಯುವತಿ ಭೀತಿಗೊಂಡೞ್ಕೆೞ್ದು ॥
ದ್ದಂಡಲತಾಂತಾಯುಧ ಕೋ ।
ದಂಡನ ದಂಡಿರದೆ ಮೇಲೆವಂದಂತಾಗಳ್ ॥ ೧೬ ॥

ವ ॥ ಅದಂ ಕಂಡಿಂತೆಂದಂ—

ಕಂ ॥ ಕುಸುಮ ಸುಕುಮಾರ ತನು ।
ನಸುವಿಸಿಲೆಳಸಿದ ಗಾಳಿ ಸೋಂಕಿದೊಡಮಿದು ಪೂವಂ ॥
ಪೊಸೆದಂತೆ ಕಂದಿದಪುದೆಂ ।
ದಸಿಯಳೆ ಪೆಱಗಿರಿಪೆನಲ್ಲದಂದಿರಿಸುವೆನೆ ॥ ೧೭ ॥

ವ ॥ ಎಂದಿವು ಮೊದಲಾದ ಪಲವು ತೆಱದ ಸಾಂತ್ವವಚನಂಗಳಂ ನುಡಿದೆಂತಾನುಂ ಸಂತೈಸಿ—

ಮ ॥ ಪುರುಷಕ್ಷೇಮವಿಶೇಷಮಂ ಬಯಸಿ ತನ್ನಂ ತಾನೆ ಸಂತೈಸಿ ಚೆ ।
ಚ್ಚರಮಾದ್ರಾಕ್ಷತ ಪುಂಜಮಂ ಪಿಡಿಯೆ ಮೆಯ್ವೆತ್ತಂಗಸಂತಾಪದಿಂ ॥
ಪುರಿದಂತಾದುವು ಮತ್ತೆ ಘರ್ಮಜಳದಿಂದಂ ನಾಂದು ಸಾದ್ರಂಗಳಾ ।
ಗಿರೆ ಸಸ್ಮೇರ ಸರೋಜ ನೇತ್ರಭರದಿಂದಂ ಶೇಷೆಯಂ ತೀವಿದಳ್ ॥ ೧೮ ॥

ವ ॥ ಅನ್ತುಮಲ್ಲದೆ—

ಚಂ ॥ ಸಮಧಿಕದೇಹದಾಹಮನೆ ಸೈರಿಸಲಾಱದೆ ಮಂಗಳೋಪಚಾ ।
ರಮೆ ಶಿಶಿರೋಪಚಾರಮೆನಿಸುತ್ತಿರೆ ತನ್ನಯ ಮೆಯೆ ದೂರ್ವೆಯಿಂ ॥

ದಮೆ ಮೊಸರ್ವೊಟ್ಟನಿಟ್ಟು ಹಿಮುಚಂದನಗಂಧಮನಿಟ್ಟನಂತರಂ ।
ರಮಣಿ ಮನೋರಮಂಗೆ ಬಿಡುಮುತ್ತಿನ ಶೇಷೆಯನೊಲ್ದು ತೀವಿದಳ್ ॥ ೧೯ ॥

ವ ॥ ಅನ್ತು ನಿಜಪ್ರಿಯಕಾನ್ತಾಕೇಕರಕಾನ್ತಿಸನ್ತಾನ ನವೀನಮಾಳತೀಮಾಳೆಯೊಡನೆ ಬಿಡುಮುತ್ತಿನ ಸೇಸೆಯಂ ತಳೆದು ವಿಜಯರಮಣೀಪರಿಣಯನಮಹೋತ್ಸವಕ್ಕೆ ಪೋಱಮಡುವ ಪೊಸಮದವಣಿಗನನ್ತೆ ಶುಭಶಕುನಪುರಸ್ಸರಂ ಸಚಿವಾಗ್ರೇಸರಂ ಸಮಗ್ರಪರಿಗ್ರಹಂ ಬೆರಸು ಅರಸನಿರ್ದ ವಿಜಯಶಿಬಿರಕ್ಕೆ ನಡೆತಂದು ಮುನ್ನಮೆ ತನ್ನ ಪದವಿಗುಚಿತಮೆನಿಸಿದ ಪ್ರದೇಶದೊಳ್ ಸುರುಚಿರಮೆನೆ ರಚಿಯಿಸೆ ಚೆಲ್ವಿಂಗಾಲಯಮಾದ ವಸ್ತ್ರಾಲಯದೊಳ್ ಲೀಲೆವೆತ್ತಿರೆ ಮತ್ತಮಾ ಭೂಪೋತ್ತಮನ ಬೀಡಿನೊಳೊರ್ವಂ ವಿಪುಳಕಳಾಪ್ರವೀಣಂ ಪ್ರಾಣವಲ್ಲಭನಾತ್ಮೀಯಪ್ರಯಾಣಮಂ ಸೂಚಿಸುವ ಜಾಣಂ ಕಾಮಬಾಣದಂತಾಗೆ ತಾಗೆ ನಿಡುಸುಯ್ದೊಡನೆ ಕಾಂತೆಯಿಂತೆಂದಳ್—

ಕಂ ॥ ಪೋದಪೆನೆಂಬೀನುಡಿಯಂ ।
ಪೋದಪೆನಾಂ ಮುನ್ನಮೆಂದು ಮತ್ಪ್ರಾಣಂ ಚೇ ॥
ತೋದಯಿತ ಪೇೞ್ವ ತೆಱದಿಂ ।
ದಾದಮೆ ಸುಯ್ ನಿಮಿರ್ದುವೆಂತು ಪೇೞ್ವೆರಗಿರ್ಪೆಂ ॥ ೨೦ ॥

ವ ॥ ಮತ್ತೊರ್ವಂ ಚಿತ್ತಪ್ರಿಯೆಗೆ ನಿಜಗಮನವೃತ್ತಾಂತಮನಱಿಪೆ ಬಗೆಬೆದಱಿ ಮೃಗನಯನೆಯಿಂತೆಂದಳ್—

ಕಂ ॥ ಅಪ್ಪು ಸಡಿಲ್ದೊಡೆ ಕೇಳಿನಿ ।
ಸಪ್ಪೊಡಮಿಲ್ಲದೊಡೆ ಚುಂಬನಂ ನಲ್ಲನ ಕೆ ॥
ಯ್ತುಪ್ಪಂ ಸ್ಮರನೆನ್ನೊಳ್ ಬಾ ।
ಯ್ತುಪ್ಪಂ ಪೊರ್ದಿಸುವನೆನ್ನನೀನೆಂತಗಲ್ವೈ ॥ ೨೧ ॥

ವ ॥ ಮತ್ತೊರ್ವಂ ತನ್ನಗಲ್ಕೆಗೆ ತಲ್ಲಣಿಸುವ ನಲ್ಲಳಂ ತಡವಿಲ್ಲದೆ ಬರ್ಪೆನು ಮ್ಮಳಿಸದಿರ್ಪುದೆಂದೊಡಾಕೆ ಇಂತೆಂದಳ್—

ಕಂ ॥ ಕ್ಷಣದರ್ಶನ ವಿಘ್ನ ಸಮು ।
ರ್ಪಣ ಪಕ್ಷ್ಮಸ್ಪಂದನಕ್ಕಮುಗಿವ ಮದೀಯ ॥
ಪ್ರಣಯಕ್ಕೆ ಪಯಣಮಂ ಹೃ ।
ತ್ಪ್ರಣಯಿಣಿ ಪೇೞದಱ ಪೇೞ್ಕೆಯಿಂದಾನೆಸೆಪೆಂ ॥ ೨೨ ॥

ವ ॥ ಮತ್ತೊರ್ವಂ ತನ್ನ ಕನಸಿನೊಳಗಲ್ದೊಡಂ ಬೆಗಡುಗೊಳ್ವ ಸಾತ್ವಿಕಸ್ನೇಹ ಸಂಪನ್ನೆಗೆ ತನ್ನ ಪಯಣಮಂ ಕಲ್ಲೆರ್ದೆತನದಿಂ ನಿಲ್ಲದೆ ಪೇೞೆ ಬಾಲೆಯಿಂತೆಂದಳ್—

ಕಂ ॥ ಮನಮನೆ ಮನೆಮಾಡಿರ್ಪಿನಿ ।
ಯನೆ ನಿನ್ನುಮನಿಂತು ಬಂಚಿಸುತ್ತಿಸುವವನೀ ॥
ತನುವಂ ಬಂಚಿಸುತೆನ್ನಯ ।
ಮನಮಂ ಮನಸಿಶಯನಿಸುವುದೇಂ ವಿಸ್ಮಯಮೋ ॥ ೨೩ ॥

ವ ॥ ಮತ್ತೊರ್ವಂ ಚಿತ್ತವಲ್ಲಭೆಯಗಲ್ಕೆಗೆ ನಿತ್ತರಿಸಲಾಱದಾ ವೃತ್ತಸ್ತನೆಗಿಂತೆಂದಂ:—

ಕಂ ॥ ಪ್ರಾಣದಿನಧಿಕಮೆನಗೆ ನೀಂ ।
ಪ್ರಾಣಮಣಂ ತೃಣಮೆಗೆತ್ತು ನವೆಯುತ್ತಾನೀ ॥
ಕ್ಷೋಣಿಗೆ ನಿನ್ನವಿಯೋಗಮ ।
ನೇಣೇಕ್ಷಣೆ ಎನಿತು ಸೈರಿಸದ ಕಾರಣದಿಂ ॥ ೨೪ ॥
ಅಲರಂಬಿಂಗಳ್ಕದ ಮನ ।
ಮಲರಂಬಿಂಗಳ್ಕಿದಪ್ಪುದಸಿಯಳಿ ಮಸೆದಿ ॥
ರ್ಪಲರಂಬು ತನುವನಲ್ಲದೆ ।
ಅಲರಂಬಿನ ತೆಱದೆ ಮನಮನಿಂ ಭೇದಿಕುಮೇ ॥ ೨೫ ॥

ವ ॥ ಅಂತು ತಂತಮ್ಮ ಕಾಂತರ ಮನಕ್ಕೆ ಮನಂ ವಿಕಳಮಾಗೆ ತಳಮಳಿಸುವ ಕಾಂತೆಯರಗಲ್ಕೆಗೆ ಬಗೆಬೆದಱಿ ಮಱುಗುವ ಕಾಂತರ ಸಂತತಿಯಸ್ತಮಯ ಸಮಯದ ರಥಾಂಗಮಿಥುನಂಗಳೆನಿಸಿಯುಂ ಸುರತಸುಖಸುಧಾಸೇವನೆಗೆ ವಿಘ್ನಕಾರಿಯೆನಿಪ ಸೂರ್ಯೋದಯಕ್ಕೆ ಕಂಗನೆ ಕನಲ್ದು ಚಕೋರಮಿಥುನಂಗಳನಿಚಿಸಿಯುಂ ಕಣ್ಗೊಳಿ ಬೆಳಗಂ ಮಾಡುತ್ತುಮಿರೆ:—

ಮ॥ ಸ್ರ॥ ಸುರತಾಂತ ಶ್ರಾಂತಕಾನ್ತಾ ಶ್ರಮಜಳದಳನೋಪಾತ್ತ ಶೈತ್ಯಂ ತದಾಸ್ಯಾಂ।
ಬುರುಹಾಮೋದ ಪ್ರಮೋದಂ ತದಳಕಲತಿಕಾನರ್ತಕೀ ಸೂತ್ರಧಾರಂ ॥
ಸ್ಮರಚಕ್ರಾಧೀಶ ಚಂಚಚ್ಚಮರರುಹ ಸಮೀರೋಪಮಾನೈಕಪಾತ್ರಂ ।
ವಿರಹಾಗ್ನಿಪ್ರಾಣಮಿತ್ರಂ ಸುಟಿದುದು ಪವನಂ ಸುಪ್ರಭಾತಪ್ರಭೂತಂ ॥ ೨೬ ॥

ವ ॥ ಅನಂತರಂ—

ಮ ॥ ಪಿರಿದುಂ ಸೊಕ್ಕಿಪ ಕೋಕಸಂತತಿ ವಿಯೋಗೋದ್ವೇಗಮಂ ನೀಗೆ ನೀ ।
ರರುಹಕ್ಕುತ್ಸವಮಾಗೆ ಪರ್ವಿದ ತಮಂ ನಿರ್ವ್ಯಾಕುಳಂ ಪೋಗೆ ಭಾ ॥
ಸುರಪ್ರಾಭಾತಿಕ ಶಂಖತೂರ್ಯನಿನದಂ ರೋದೋಂತಮಂ ತಾಗೆ ಶೇ ।
ಖರನಾದಂ ರುಚಿತೋದಯಾದ್ರಿ ಶಿಖರಕ್ಕುದ್ಯತ್ಕರಂ ಭಾಸ್ಕರಂ ॥ ೨೭ ॥

ವ ॥ ಆ ಸಮಯದೊಳ್—

ಕಂ ॥ ಪರಿಪಾಂಡುರತನುಗೆ ನಿಶಾ ।
ಕರಕರ ಪೀಡಿತೆಗೆ ಸರಸಿಜಾಂಗನೆಗೆ ಸರೋ ॥
ವರಮುಗ್ಧೆಗೆ ವಿರಹಾರ್ತೆಗೆ ।
ಕರದಿಂ ರವಿಸೋಂಕಿ ಹರುಷಮಂ ಪುಟ್ಟಿಸಿದಂ ॥ ೨೮ ॥

ಮ ॥ ಘನತೇಜಸ್ಸ್ಮಿತ ಪುಂಡರೀಕನಕಳಂಕಂ ನೂತನಕ್ಷತ್ರವೇ ।
ಷ್ಟನ ವಿಭ್ರಾಜಿತ ರಾಜರಾಜಿತಮನಬ್ಜಾಹಾರಿ ಧಾತ್ರೀಪ್ರಸಿ ॥
ದ್ಧನಿಜೋದ್ಯತ್ಕರನಾಂತನಭ್ಯುದಯಮುಂ ನಿನ್ನಂದದಿಂ ದೇವಪಾ ।
ವನವೃತ್ತಂ ನಯಮಾರ್ಗದರ್ಶಿಯರವಿಂದಾಧೀಶ್ವರಂ ಭಾಸ್ಕರಂ ॥ ೨೯ ॥

ವ ॥ ಎಂದು ಪೊಗಟ್ವಿಗಣ್ಯಪುಣ್ಯಪಾಠಕನಿಕರಮೃದುಮಧುರಗಭೀರಾರಾವಮೆ ಕರ್ಣಾವತಂಸಮಾಗೆ ರಾಜಹಂಸನುಪ್ಪವಡಿಸಿ ಮಂಗಳಮಣಿದರ್ಪಣಾಜ್ಯಾವೇಕ್ಷಣಾದಿ

ಪ್ರಾಭಾತಿಕ ಕ್ರಿಯೆಯಂ ನಿರ್ವರ್ತಿಸಿ ಶುಚಿಜಳದಿಂ ಸ್ನಪನ ಪವಿತ್ರಿತಗಾತ್ರನಾಸಾದಿತ ಧೌತವಸ್ತ್ರಂ ನಾನಾಮಣಿವಿತಾನಾಂದಮಾನಿತ ಜ್ಯೋತಿರ್ಲೋಕಮನೇಕ ಪ್ರಕಾರಪೂಜಾ ವಿಶೇಷ ಸಂತೋಷಿತ ವಿನಯಾನೀಕಮಂ ನವ್ಯದಿವ್ಯೋಪಕರಣ ಪ್ರವ್ಯಕ್ತ ಸಮವಸೃತಿ ವ್ಯವಹಾರಮಂ ದೇಹಾರಮಂ ಪೊಕ್ಕು ವಿರಚಿತ ಪರಮೇಶ್ವರ ಶ್ರೀಮುಖದರ್ಶನಸ್ತವಂ ದೂರೀಕೃತ ಕೈತವಂ ಕೃತಯಿರ್ಯಾಪಥಶುದ್ಧಿ ವಿಶೋಧ್ಯತಿಶಯ ಬುದ್ಧಿಸಮಾಧಿರೂಢ ಸಾಮಾಯಿಕನನಂತೈಶ್ವರ್ಯ ಪ್ರಸಿದ್ಧಸಿದ್ಧಭಕ್ತಿಯಿಂ ಸಮುಪಕೃತ ಸಮೀಚೀನ ಸಮುಚಿತೋಪಕರಣ ದ್ರವ್ಯನವ್ಯಗ್ರಚಿತ್ತಂ ಸಪರಿವಾರಕ್ಕಿಂದ್ರನಿಂದ್ರಲೀಲೆಯಿಂ—

ಉ ॥ ಶ್ರೀವಿಳಸತ್ಕುಶಾದಿ ಮಹಿತೋಜ್ಜ್ವಳಪೀಠದೊಳಿಂದ್ರವಂದ್ಯನಂ ।
ದೇವನನೊಪ್ಪಿ ಪೂಜಿಸಿ ದಿಶಾಧಿಪರ್ಗಿತ್ತುಖಿಳೋಚಿತಾರ್ಘ್ಯಮಂ ॥
ಪಾವನವಾರಿಸಾರಘೃತದುಗ್ಧದಧಿಸ್ತುತ ಕಲ್ಕ ಸತ್ಕಷಾ ।
ಯಾವಿಳಗಂಧತೋಯದೊಳೆ ಮಜ್ಜನಮಂ ಜಿನಪಂಗೆ ಮಾಡಿದಂ ॥ ೩೦ ॥

ವ ॥ ಅನ್ತು ಮುಕ್ತಿ ಸ್ನಿಗ್ಧಾವಳೋಕನದುಗ್ಧಾಭಿಷೇಕಂಗೆ ಪುನರುಕ್ತಮಂ ಮಾೞ್ಪಂತಭಿಷೇಕಮಂ ಮಾಡಿ ಸುಗಂಧಬಂಧುರಗಂಧೋದಕಪವಿತ್ರೀಕೃತೋತ್ತಮಾಂಗನಾಗಿ—

ಶಾ ॥ ಆನಂದಾಶ್ರು ವಿಮಿಶ್ರನೇತ್ರನರಸಂ ರೋಮಾಂಚಸತ್ಕಂಚುಕಾ ।
ದಾನಾಳಂಕೃತಗಾತ್ರನಪ್ರತಿಮಸೇವಾಯುಕ್ತಚಿತ್ತಂ ಜಿನಾ ॥
ನೂನ ಸ್ತೋತ್ರಪವಿತ್ರಮಂಗಳಕಥಂ ಜಿಹ್ವಾನರ್ತಕೀನೃತ್ಯನ ।
ನ್ಯೂನ ಶ್ರೀಜಿನರಾಜನಂ ಸುರನರಸ್ತುತ್ಯಕ್ರಮಾಂಭೋಜನಂ ॥ ೩೧ ॥

ವ ॥ ವಿಕಸಿತ ಸಿತಾಂಬುಜಾತ ಪರಿಮಳವಿಳಿತ ಕಳಧೌತ ಕಳಶಕಳಿತ ಸಂಸಾರ ಕಾರಣ ಪಾಪಸನ್ತಾಪಾಪನೋದನ ಸಮಸ್ತತೀರ್ಥಜಳಂಗಳಿಂದಂ ॥ ೧ ॥

ಅರುಣಕಿರಣ ಶಂಕಾವಹ ಕುಂಕುಮಪಂಕಾಂಕಿಳಸಾರ ಘನಸಾರ ಸಾರಿಭೂತ ಶಾರದೇಂದು ನಯನಾನಂದನ ಚಂದನ ಚರ್ಚೆಗಳಿಂದಂ ॥ ೨ ॥

ಮುಕ್ತಿವಿಳಾಸಿನೀವಿಕಸಿತ ಮುಖಸರಸೀರುಹ ದರಹಾಸವಿಳಾಸ ಭಾಸುರಸುರಭಿ ಧವಳ ಕಳಮಾಕ್ಷತ ಪುಂಜಂಗಳಿಂದಂ ॥ ೩ ॥

ಬಂಧುರಗಂಧಪ್ರವಾಹಸವನ ಚಂಚಳಚಂಚರೀಕಾಂಚಿತವಿಕಚವಿಚಕಿಳೋನ್ಮೀಳಿತ ಮಾಳತೀವಕುಳಾದಿ ಕುಸುಮಸಂಕುಳಗಳಿಂದಂ ॥ ೪ ॥

ಸುಸ್ವಾದು ಸೌರಭಾಕರ ಶಾಕಾನೀಕ ಘೃತಪೂರಪೂರಿಕಾದಿ ವಿವಿಧ ಮಧುರ ಭಕ್ಷ್ಯಪರಿವೃತ ಸುರುಚಿರ ಪರಮಾನ್ನ ನಿರವದ್ಯ ನೈವೇದ್ಯಂಗಳಿಂದಂ ॥ ೫ ॥

ವಿಶದಕಳಾಕಳಾನುಕಾರಿ ಕರ್ಪೂರವಾರಿ ನಿರೂಪಿತದೀಪಪ್ರದೀಪಕಳಾಪಂಗಳಿಂದಂ ॥ ೬ ॥

ದಶದಿಶಾವಳಯವಳಯಿತ ನಿಜಾಮೋದಮತ್ತಚಿತ್ತಾಳಿಮಾಳಾದ್ವಿಗುಣಿತೋದ್ದಾಮಧೂಮಲೇಖಾನೀಕದಶಾಂಗಧೂಪಂಗಳಿಂದಂ ॥ ೭ ॥

ಪರಿಪಕ್ವ ಸರಸ ಸೌರಭಸಾರ ಸಹಕಾರ ಜಂಬೂ ಜಂಭೀರ ನಾರಂಗ ಮಾತುಳಂಗ ಕನಕಕದಳಿಕಾದಿ ವಿಪುಳಫಲಂಗಳಿಂದಂ ॥ ೮ ॥

ಗಂಗಾತರಂಗ ರುಚಿರಚಮರರುಹ ನಿಜಾತ್ಮನಂ ವೇದನ ಸಮರ್ಪಣ ಮಣಿ ದರ್ಪಣ ದುರಿತತಪವಾರಣಾತಪವಾರಣನೇತ್ರ ರಮಣೀಯ ನೇತ್ರಾದಿ ವಿಚಿತ್ರ ವಸ್ತ್ರ ಪ್ರಮುಖ ನಿಖಿಳಮಂಗಳದ್ರವ್ಯಂಗಳಿಂದಮಾರಾಧಿಸಿ ಪರಿಮಳಂ ಮತ್ತಾಳಿ ಕಳರುತಿ ಮಂಜುಳ ಪುಷ್ಪಾಂಜಳಿ ಪುರಸ್ಸರಂ ಸಕಲ ಶಾನ್ತಿಕರಧಾರೆಯುಂ ಸಂಗೀತ ಪ್ರಸಂಗಂ ಮನಂಗೊಳುತ್ತಮಿರೆ ಕೊಟ್ಟು ಮತ್ತಂ ವಿಶಿಷ್ಟಾಷ್ಟಮಹಾಪ್ರಾತಿಹಾರ್ಯೋಪೇತ ಗುಣಧರಣ ಪ್ರಣೂತಾಕ್ಷುಣ್ಣಾಷ್ಟಸಹಸ್ರಲಕ್ಷಣಲಕ್ಷಿತಾಮೇಯಕಾಯಸೌಂದರ್ಯಸಂಪನ್ನನಂ, ವಿನಮಿತ ವಿನೇಯಜನ ಪ್ರಸನ್ನನಂ, ಜಿನೇಂದ್ರಚಂದ್ರನನಗಣಿತಗುಣವಸ್ತುರೂಪಸ್ತವನಂ ರೂಪಾನವದ್ಯಹೃದ್ಯಪದ್ಯಂಗಳಿಂ ಸಹಜಸಾಹಿತ್ಯವಿದ್ಯಾಧರಂ ಚತುರ್ಭಕ್ತಿಪೂರ್ವಕಂ ಸ್ತುತಿಯಿಸಿ ಪ್ರಪಂಚಿತಾಂಚಿತ ಪಂಚೋಪಚಾರದಿಂ ನಿರ್ವರ್ತಿತ ದೇವತಾಭ್ಯರ್ಚನಂ ತ್ರಿಳೋಕಶೇಖರ ಚರಣಸರಸಿರುಹ ಸಮರ್ಚಿತ ಕುಸುಮಶೇಖರಂ ಜಗತ್ತಿಳಕಪದನಳಿನ ಮಳಯಜ ಲಲಿತಲಲಾಟತಿಳಕಂ ಪುನಃಪುನಃ ಪ್ರಾರ್ಥ್ಯಮಾನಂ ಪುನರ್ದರ್ಶನನಂತದರ್ಶನನಂ ಬೀಳ್ಕೊಂಡು ಪೊಱಮಡುವ ಸಮಯದೊಳ್—

ಚಂ ॥ ಪುರದ ಸಮಸ್ತ ಚೈತ್ಯನಿಳಯಂಗಳೊಳೆಯ್ದೆ ಜಿನೇಂದ್ರಪೂಜೆಯಂ ।
ನಿರುಪಮ ಭಕ್ತಿಯಿಂ ಹಿತಪುರೋಹಿತನೊಪ್ಪಿರೆ ತನ್ನ ಪೇಳ್ಕೆಯಂ ॥
ನಿರವಿಸಿ ಗಂಧಶೇಷೆಗಳನುತ್ಸವದಿಂ ಕುಡೆ ಕೊಂಡು ಹರ್ಷಮಂ ।
ಧರಿಯಿಸಿದಂ ಜಯಕ್ಕಿದುವೆ ಸೂಚಕರಂ ತನಗಾದುದೆಂಬಿನಂ ॥ ೩೨ ॥

ವ ॥ ಅನ್ತು ಸಿದ್ಧಶೇಷೆಯಂ ಅಶೇಷಗುಣಾಭರಣಂ ತಳೆದುಕೊಳ್ವನಂತರಂ ರನ್ನದ ಪಡಲಿಗೆಗಳೊಳ್ ತೀವಿದ ವಿಚಿತ್ರವಸ್ತ್ರಾಭರಣಂಗಳಂ ಭಂಡಾರಿಗಂ ಕೊಂಡು ಬಂದು ಮುಂದಿಟ್ಟಿಪೆ—

ಕಂ ॥ ಅಳವಡೆ ದುಕೂಲವಸನಮು ।
ನಿಳೀಶನುಟ್ಟುದಯರಾಗಮಂ ಕುಡೆ ಬೆಳ್ದಿಂ ॥
ಗಳನಿಳಿಕೆಯ್ದುದುತಪನೋ ।
ಜ್ಜ್ವಳರುಚಿಯೆಂಬೊಂದು ಶಂಕೆಗೇನೆಡೆಯಾಯ್ತೋ ॥ ೩೩ ॥

ಭಾವಭವಂಗೆಣೆಯಾದಂ ।
ಭೂವಲ್ಲಭನೊಪ್ಪೆ ಕುಂಡಳಂ ಕಂಕಣಮೇ ॥
ಕಾವಳಿ ಮುತ್ತಿನ ತಲೆಸು ।
ತ್ತಾವಗಮೆಸೆಯಲ್ಕೆ ಮುದ್ರಿಕಂ ಕೇಯೂರಂ ॥ ೩೪ ॥

ವ ॥ ಅನ್ತು ನೆಱೆಯ ಶೃಂಗಾರಮಂ ಮಾಡಿ ಮಣಿಮಯಶೃಂಗಾರಭವನದಿಂ ಗೃಹೀತತಾಂಬೂಳನಾಳೋಕಿತ ಮಂಗಳಮಣಿದರ್ಪಣಂ ದರ್ಪಕನಂತೆ ಪೊಱಮಟ್ಟು ಮುನ್ನಮೆ ಪಣ್ಣಿ ಬಂದಿರ್ದ—

ಉ ॥ ವಾರಣಮಂ ವಿರೋಧಿಮದವಾರಣಮಂ ಶುಭಚಿಹ್ನತೋಷಿತಾ ।
ಧೋರಣಮಂ ಲಸದ್ದ್ವಿಭವಕಾರಣಮಂ ಸಮದಪ್ರಭಾರಸಂ ।

ಧಾರಣಮಮಂ ವಿನಿರ್ಜಿತ ಮಹಾರಣಮಮಂ ನೃಪನೇೞ್ದಂ ನಯ ।
ಪ್ರೇರಣನೋಜೆಯಿಂ ಘನಗುಣಸ್ತವನ ಪ್ರತಿಪನ್ನಚಾರಣಂ ॥ ೩೫ ॥

ವ ॥ ಆ ಸಮಯದೊಳ್—

ಕಂ ॥ ಅರವಿಂದರಾಜತೇಜ ।
ಸ್ಫುರಿತಕ್ಕುಳ್ಳಿಕ್ಕಿ ಚಂದ್ರದೀಧಿತಿ ಚಂದ್ರಂ ॥
· ಭರದಿಂದೋಲಗಿಪಂತಿರೆ ।
ಕರಮೆಸೆದುವು ಚಾಮರಂಗಳುಂ ಬೆಳ್ಗೊಡೆಯುಂ ॥ ೩೬ ॥

ಚಂ ॥ ಮೃಗರಿಪು ವಿಕ್ರಮಾಕ್ರಮಿತ ವೈರಿಗಳುಜ್ವಳಹಾರ ಚಿತ್ರಹಾ ।
ರಿಗಳತಿದುಷ್ಟಚೇಷ್ಟಿತ ತುರಂಗಮ ಶಿಕ್ಷಣ ಸೂರ್ಯಜಾನುಕಾ ॥
ರಿಗಳಸಿಘಾತವಾರಿತವಿರೋಧಿಮತಂಗಜ ಪೀನದಾನವಾ ।
ರಿಗಳಧಿರಾಜಸನ್ನಿಧಿಯೊಳೊಪ್ಪಿದರಂದರಸಾಸಿವಾರಿಗಳ್ ॥ ೩೭ ॥

ಕಂ ॥ ಭದ್ರಗಜಂಗಳ್ ಸೈನ್ಯಸ ।
ಮುದ್ರದೊಳೊಪ್ಪಿದುವು ಹರಿಯ ಭಯದೆ ಶರಣ್ಬೊ ॥
ಕ್ಕದ್ರಿಗಳೆನೆ ಘನಮದಶ್ಯೆ ।
ಲದ್ರುತ ನಿರ್ಝರಂಗಳತಿತುಂಗಂಗಳ್ ॥ ೩೮ ॥

ಹರಿಯೊರ್ವನ ಚರಣದ ಸಂ ।
ಚರಣಕ್ಕೆಯ್ದುದ ಧರಿತ್ರಿ ಪರಿಭಾವಿಪೊಡೀ ॥
ಹರಿಸೇನೆಯ ಚರಣದ ಸಂ ।
ಚರಣಕ್ಕಿನ್ನೆಯ್ದದೆಂಬುದೊಂದಚ್ಚರಿಯೇ ॥ ೩೯ ॥

ತರದಿಂ ತೀವಿದ ಮೂವ ।
ತ್ತೆರಡಾಯುಧಮೆಸೆಯಲಂತದಂತರಿನ್ನಪರ ॥
ನ್ನಿಱಿವ ಕೃತಾಂತನಮುಖದಂ ।
ತರವಿಂದನ್ನಪಾಳರಥವಿತತಿ ಸೊಗಯಿಸುಗುಂ ॥ ೪೦ ॥

ಬಿತ್ತರಿಸಿದ ಪತ್ತಿಯ ಸಂ ।
ಪತ್ತಿಯನಾರ್ಪವಣಿಪನ್ನರಾಬಳದೊಳ್ ತ ॥
ಳ್ತಿತ್ತಿದ ಪಱಿಯಿಗೆಗಳುಮಂ ।
ಸತ್ತಿಗೆಯುಮನೆಣಿಸುವನ್ನರಿಲ್ಲೆನೆ ನಿರುತಂ ॥ ೪೧ ॥

ವ॥ ಅಂತು ನೆರೆದ ಸಮಸ್ತ ಮಕುಟಬದ್ಧವರ್ಗಾರಸು ಧರಣೀಶ್ವರಂ ನಡೆವಾಗಳ್—

ಕಂ ॥ ವಾರಣದುರಗನ ಗರುಡನ ।
ಭೇರುಂಡನ ಪುಲಿಯ ಸೂಕರದ ಮಕರದ ಕಂ ॥
ಠೀರವದ ಕಪಿಯು ಚಿಹ್ನದ ।
ಭೂರಮಣನ ಬೀಡು ಕೂಡೆ ನಡೆದತ್ತಾಗಳ್ ॥ ೪೨ ॥

ಕಂ ॥ ತುರಗರಥಗಜಪದಾತಿಯ ।
ಖುರಪುಟಪಟುಚಕ್ರರದನ ಪದಹತಿಯಿಂದಂ ॥
ಗಿರಿಗಳೊಡೆದವನಿಸಮಮಾ ।
ಗಿರೆ ನಡೆದುದೆ ಬಟ್ಟೆ ಎನಿಸಿ ನಡೆದುದು ಸೈನ್ಯಂ ॥ ೪೩ ॥

ವ ॥ ಆ ಸಮಯದೊಳ್—

ಉ ॥ ಸಂದಣಿಸಿರ್ದ ಮಲ್ಲಿಗೆಯ ಮೊಲ್ಲೆಯ ಜಾದಿಯೆಸಳ್ಗಳೊಳ್ಕರಂ ।
ಸಂದ ಸುಗಂಧಮಂ ಬಿಡದೆ ತಂದು ಸರೋವರ ಶೀಕರಂಗಳಿಂ ॥
ನಾಂದು ನವಪ್ರಸೂನತರುಶಾಖೆಗಳಲ್ಲಿಯೆ ನಿಂದು ಬಂದು ತಾಂ ।
ಮಂದಸಮೀರಣಂ ಕಳೆದುದಾಬಳದಧ್ವದೊಳಾದ ಖೇದಮಂ ॥ ೪೪ ॥

ಕಂ ॥ ಅಂತಕ ರಾಕ್ಷಸ ಚಾತು ।
ರ್ದಂತ ಬಳಂ ತನ್ನೃಪಾಳನುನ್ನತ ಚಾತು ॥
ರ್ದಂತ ಬಳಂ ನಡೆತಂದೋ ।
ರಂತಿರೆ ಮುತ್ತಿದುದು ವಜ್ರವೀರನ ಪುರಮಂ ॥ ೪೫ ॥

ಪಡೆಯಂ ಪವಣಿಸಲಱಿಯೆಂ ।
ಕಡುವಿರಿದೆನಿಸಿರ್ದ ವಜ್ರವೀರನ ದುರ್ಗಂ ॥
ಪಡೆಮುತ್ತಲೊಡಂ ಜಳಧಿಯ ।
ನಡುವಣ ಭೈತ್ರಂಬೊಲಿರ್ದುದೆಂಬಿದನಱಿವೆಂ ॥ ೪೬ ॥

ವ ॥ ಅನ್ತು ಮೂವಳಸಾಗಿ ಸುತ್ತಿ ಮುತ್ತಿರ್ಪುದುಮಿತ್ತಲ್—

ಕಂ ॥ ರವಿಶಶಿಗಳಗಲೆ ಗಗನ ।
ಕ್ಕವತಮಸಮಧೀಶನಪ್ಪವೊಲ್ ನೃಪಸಚಿವರ್ ॥
ಭುವನೇಕ್ಷಣರಗಲೆ ಪುರ ।
ಕ್ಕವಿನಯಪರನೆನಿಪ ಕಮಠನಧಿಪತಿಯಾದಂ ॥ ೪೭ ॥

ಪತಿಯೊಳ್ ಪತ್ತಿರಡುನಿಯೋ ।
ಗತತಿಗಳೊಳನೊಂದನಪ್ಪಡಂ ಕುಡದೊಡಮೇ ॥
ನತಿನಿರ್ಲಜ್ಜಂ ಪೆಱಗು ।
ದ್ಧತನಾಸ್ಥಾಪಿತ ಮಹತ್ವಮಂ ತಳೆದನವಂ ॥ ೪೮ ॥

ವ ॥ ಅದೆಂತೆನೆ—

ಚಂ ॥ ನೃಪನ ಲಸಲ್ಲತಾಂಗಿಯರೆ ತನ್ನ ಲತಾಂಗಿಯರಾವಗಂ ನೃಪ ।
ದ್ವಿಪಮೆ ನಿಜದ್ವಿಪಂ ನೃಪನ ಭೂಷಣರಾಜಿಯೆ ತನ್ನ ಭೂಷಣಂ ॥
ನೃಪನ ತುರಂಗಮಂ ನಿಜತುರಂಗಮಮಾಗೆ ನೃಪಾಳಲೀಲೆಯಂ ।
ಚಪಳ ಚರಿತ್ರನಾಂತು ನೃಪಮಂದಿರದೊಳ್ ನೆಲಸಿರ್ದನುದ್ಧತಂ ॥ ೪೯ ॥

ಕಂ ॥ ಇರುಳಾತಪವಾರಣಮಂ ।
ತರತರದಿಂ ಪಗಲೆ ಪಲವು ಕೆಯ್ದೀವಿಗೆಯಂ ॥

ತರಳತೆಯಿಂ ಪಿಡಿಯಿಸುವಂ ।
ನಿರರ್ಥಕಂ ತನ್ನ ಚರಿತಮೆಂದಱಿಪುವವೋಲ್ ॥ ೫೦ ॥

ಕುಂಕುಮದ ಕತ್ತುರಿಯಪುಡಿ ।
ಯಂ ಕನಕದ ಪುಡಿಯಿನಾದ ಪಿಷ್ಟಾತಕಮಂ ॥
ಬಿಂಕದೆ ಕೆದಱಿಸುತಂ ನಡೆ ।
ವಂ ಕಮಠಂ ಸಿರಿಯನಿರದೆ ತೋಱುವ ತೆಱದಿಂ ॥ ೫೧ ॥

ಪರಿಮಳಮಂ ಪರಪುತ್ತುಂ ।
ಪರಿಕಲಿಸಿಯೆ ನೆನೆವ ಧೂಪವರ್ತಿಯ ಪೊಗೆ ತ ॥
ನ್ನುರಿಗೊಳ್ಳಿತನಮನವನಿಗೆ ।
ನಿರವಿಸುತಿರೆ ಪೊೞಲ ಬೀದಿಯೊಳ್ ಸುೞಿವನವಂ ॥ ೫೨ ॥

ಪಿವೇಟ್ಟುದವನ ಸಿರಿಗು ।
ಜ್ಜೀವನಮಿಲ್ಲೆಂಬ ತೆಱದಿನಿರುಳುಂ ಪಗಲುಂ ॥
ಭಾವಿಪರೋವೋ ಎನೆ ಕೈ ।
ದೀವಿಗೆ ಕರ್ಪುರದ ತೈಲದಿಂ ಪೊತ್ತಿಸುಗುಂ ॥ ೫೩ ॥

ಉ ॥ ವಾರಣಮೇಱಿ ಬೆಳ್ಗೊಡೆಯನೆತ್ತಿಸಿ ಬರ್ಪುದದೊರ್ಮೆ ಮಲ್ಲರಂ ।
ಪೋರಿಪುದೊರ್ಮೆ ಕಂದುಕದ ಕೇಳಿಯೊಳಿರ್ಪುದದೊರ್ಮೆ ಸಾರಶ್ಯಂ ॥
ಗಾರವಿಳಾಸಮಂ ಮೆಱೆವುದೊರ್ಮೆ ಖಗೋದ್ಧತಮೇಷಯುದ್ಧಮಂ ।
ವಾರವಧೂಜನಂ ಬೆರಸು ನೋಡುವುದೊರ್ಮೆ ವಿನೋದಮಾತನಾ ॥ ೫೪ ॥

ಕಂ ॥ ಬಾಳಕನ ಕೆಯ್ಯ ಖಳ್ಗಂ ।
ಬಾಳಕನಂ ಕಿಡಿಸುವಂದದಿಂ ಮೂರ್ಖನ ದು ॥
ಶ್ಶೀಲನ ಧನಮವನನೆ ನಿ ।
ರ್ಮೂಲಿಸುಗುಂ ತಕ್ಕುದಱಿಯದಾಚರಿಪುದಱಿಂ ॥ ೫೫ ॥

ಚಂ ॥ ಪಲತೆಱದಿಂದೆ ಜೊತ್ತಿಸಿ ಪರಾಂಗನೆಯರ್ಕಳೊಳೊಯ್ದು ಕೂಡುವ ।
ಗ್ಗಲಿಸಿದ ಜೂದನಾಡಿಪತಿಧೂರ್ತ ವಿಟರ್ಗೆ ನಟರ್ಗೆ ಭಂಡಮಂ ॥
ಡಳಿಗೊಡನಾಡುವರ್ಗೆ ಗಣಿಕಾಳಿಗೆ ಬೇಡಿದನಿತ್ತಹರ್ನಿಶಂ ।
ಕುಲಧನಮಂ ಖಳಂ ಕಿಡಿಸಿ ಭಂಗಿಸಿದಂ ಕಮಠಂ ಮಹಾಶಠಂ ॥ ೫೬ ॥

ಕಂ ॥ ತೊಟ್ಟಂಗಿಗೆಯುಂ ತುಡದಿ ।
ನ್ನುಟ್ಟುದನುಡದೀವುದಾವ ಕೌತುಕಮಾತಂ ॥
ತೊಟ್ಟಾಭರಣಮನಾಗಳೆ ।
ನೆಟ್ಟನೆ ತುಡದೀವನರ್ತಿಗೆಂದೊಡೆ ಕಮಠಂ ॥ ೫೭ ॥

ವ ॥ ಅದಂ ಕಂಡು ಮಹೀಮಂಡಳದ ಜನಂಗಳೆಲ್ಲಮಿಂತೆಂಗುಂ—

ಕಂ ॥ ತನಗಂಜಿದ ತೆಱದೆ ಯಶೋ ।
ಧನಮಂ ಪಿತೃದೆಸೆಯ ಕಥೆಯೊಳಿರಿಸಿದೊಡಂ ನೆ ॥

ಟ್ಟನೆ ಕಿಡಿಸುವವಂ ಧನಮಂ ।
ಮನೆಯೊಳಗಿರಿಸಿದುದನಿರದೆ ಕಿಡಿಸುವುದರಿದೇ ॥ ೫೮ ॥

ಒಡೆಯರ ಕಣ್ತಪ್ಪುವುದೆನೆ ।
ತುಡುಗುಣಿ ನಾಯಳಿಪಿ ನೋಡುವಂತೆವೊಲೀತಂ ॥
ಜಡಮತಿ ತೆಱಪನೆ ಪಾರ್ದಿ ।
ರ್ದೊಡಿರ್ದೆಡೆಯೊಳ್ ಸ್ವೈತು ನಡೆಯಲೀನಱಿದಪನೆ ॥ ೫೯ ॥

ಕಲಿತರುಣಂ ಪ್ರಬಳಂ ಮದ ।
ಕಳಿತಸನಾರೋಹಕಂಗಡೆನೆ ಮಾತಂಗಂ ॥
ಬಳನಬಳನಧಿಪನುಚ್ಛೃಂ ।
ಖಳನಪನಯನೆಂದೊಡಿನ್ನವಂ ನೆಗಱಿದುದೇಂ ॥ ೬೦ ॥

ಶೂಲದ ಮೇಲಣ ತುಯ್ಯಲ ।
ನೀಲೋಲ ಚರಿತ್ರನುಣ್ಬ ತೆಱದಿಂದಂ ಭೂ ॥
ಪಾಳಕನ ತೀವ್ರತೇಜಮ ।
ನೇಳಿಸೆಮಿಗೆ ರಾಜಲೀಲೆಯಂ ತಳೆದಿರ್ದಂ ॥ ೬೧ ॥

ಭೂವಲ್ಲಭನಾಜ್ಞೆಯನುಱ ।
ದಾವನುಮಿಂತೆಸಗಲಣ್ಮನಿವನುಱದೆಸಪಂ ॥
ಜೀವನಮನೊಲ್ಲನಕ್ಕುಂ ।
ಸಾವಂಗೆ ಸಮುದ್ರದಗಲಮೇಂ ನೀಳಮದೇಂ ॥ ೬೨ ॥

ಸಿರಿಯಿಂದೊಗೆವ ಮದಂ ಬ ।
ಲ್ಲರುಮಂ ಬಗೆಗಿಡಿಸಿ ದುಶ್ಚರಿತ್ರದೊಳೆಸಪಂ ॥
ತಿರೆ ಮಾಱ್ಕುಮೆಂದೊಡಿವನಂ ।
ಮರುಳಂ ಮರುಳಾಗಿ ಮಾಱ್ಪುದೇಂ ವಿಸ್ಮಯಮೋ ॥ ೬೩ ॥

ತಲೆಗೆ ಪದರಕ್ಷೆಯಂ ನಾ ।
ಣಿಲಿ ಕಟ್ಟಿಸಿಕೊಂಡ ತೆಱದೆ ಲೋಕವಿರುದ್ಧಂ ॥
ದಲದೆನಿಸಿ ನಡೆದ ಕೀರ್ತಿಗೆ ।
ನೆಲೆಯಾದಂ ಪಾಪಕರ್ಮ ಕರ್ಮಂ ಕಮಠಂ ॥ ೬೪ ॥

ಜೋಕುವರಂ ನೆಗಟ್ದಂ ಸುರ ।
ಲೋಕವಿರುದ್ಧಮನೆ ಕಮಠನವನಿಂದಧಿಕಂ ॥
ಲೋಕವಿರುದ್ಧಮುಮಂ ಸುರ ।
ಲೋಕವಿರುದ್ಧಮುಮನಿರದೆ ನೆಗಱ್ದುದಱಿಂದಂ ॥ ೬೫ ॥

ಖಳನೆಂದು ತನ್ನ ಪದದೊಳ್ ।
ನಿಲಿಸಿದೊಡಂ ತಂದೆ ಮಗುೞ್ ಮುಖ್ಯತೆಯಿವನೊಳ್ ॥

ನೆಲಸಿರ್ದುದು "ನಿಯತಿಃ ಕೇ ।
ನಲಂಘ್ಯತೇ"ಯೆಂಬ ನೀತಿ ಸಂಭವಿಸುವಿನಂ ॥ ೬೬ ॥

ಸಿರಿಯುಂ ಪ್ರಭುತ್ವಮುಂ ಸ ।
ಚ್ಚರಿತಂಗಾದಂದು ತನಗಮಾಶ್ರಿತರ್ಗಮಿಹ ॥
ಪರಸುಖದಾಯಕಮುೞಿದಂ ।
ದೆರಡುಂ ಬಹುದುಃಖಜನಕಮೆನಿಕುಮಮೋಘಂ ॥ ೬೭ ॥

ವ ॥ ಎಂದಿಂತನೇಕರುಮನೇಕಪ್ರಕಾರದಿಂ ತನ್ನ ದೌರ್ಜನ್ಯದ ಮಾತಂ ನುಡಿವಿನ ಮಾತಂ ಸ್ವೀಕೃತಾಪನಯಾನೀಕನೇಕಪ್ರಭುವಾಗಿರೆ—

ಉ ॥ ಧೂರ್ತಜನಂ ನಿಜವ್ಯಸನಮಂ ಪರಿತಪ್ಪಿಸಲೆಂದಧರ್ಮದೊಳ್ ।
ವರ್ತಿಸುವಂತು ಯೋಜಿಸುಗುಮುಳ್ಳರನೆಂದೊಡವಂ ಸ್ವಭಾವದಿಂ ॥
ಕೀರ್ತಿಪ ನೀತಿಯೊಳ್ ನೆಗೞುತಿರ್ದೊಡೆ ನಾಗರಿಕಂ ವಿಟಂ ಮೃಷಾ ।
ಮೂರ್ತಿ ವಿದೂಷಕಂ ಪದೆದು ಪೊರ್ದದೆ ಮಾಣ್ಗುಮೆ ಪೀಠಮರ್ದನಂ ॥೬೮॥

ಕಂ ॥ ವ್ಯಸನಿಗಳುಮಧರ್ಮದೊಳೊಸೆ ।
ದೆಸಗುವರುಂ ಪಲಬರದಟನವಱೊಳ್ ನೆಗೞ್ವಂ ॥
ಗೆ ಸಹಾಯರಾಗದಿರ್ಪಂ ।
ನಿಸದಂ ಧರ್ಮದೊಳೆ ನೆಗೞ್ವವಂಗೆ ಸಹಾಯಂ ॥ ೬೯ ॥

ವ ॥ ಎಂಬಂತಾದುಷ್ಟಚತುಷ್ಟಯರಾದುರಾತ್ಮ ಚತುರ್ಗತಿ ವಿಭ್ರಮಣಕಾರಣ ಮಪ್ಪ ಚತುಷ್ಕಷಾಯದನ್ತೆಸಹಾಯರಾಗಿ ಮೂಗಿನೊಳುಱುವಂಗೆ ಕುಱುವಂ ಕುಡುವಸೆ ವಾತ್ಸ್ಯಾಯನಾದಿ ಕಾಮಕಳಾಶಾಸ್ತ್ರಮಂ ಕಲಿಸೆ—

ಕಂ ॥ ವ್ಯಸನಂ ಜೂದಿನೊಳೆ ರತಿ ।
ವ್ಯಸನಂ ಪರದಾರಗಮನದೊಳ್ ನಿಜದಿಂದಾ ॥
ವ್ಯಸನಂ ದುರ್ಜನರೊಳೆ ಪಸ ।
ರಿಸಿತು ಖಳಾನ್ವಿತರ್ಗೆ ಸದ್ಗುಣಂ ಸಮನಿಕುಮೇ ॥ ೭೦ ॥

ನಂಟರ್ ಕಿತವರೆ ಜೂದಿನ ।
ತೀಂಟೆಯೆ ನೆಲಸಿರ್ಪ ತಾಣಮನ್ಯಾಂಗನೆಯುಂ ॥
ಕಂಟಣಿಸದೆ ತಂದು ಕುಡುವ ।
ಕುಂಟಣಿಗಳವಂಗೆ ಮಾನ್ಯವಿನ್ನೇವೇೞ್ವೆಂ ॥ ೭೧ ॥

ನೋಡುವೊಡವನೇಕಾನ್ತದೊ ।
ಳಾಡುವಡದು ಪಾರದರಮೆ ದಿಟಮೆಲ್ಲರಮುಂ ॥
ತಾಡುವೊಡೆ ಸೂಳೆಯೆನೆ ಮೈ ।
ಮಾಡಿದನೀತೆಱದೆ ಪಾತಕಂ ಪಾತಕಮಂ ॥ ೭೨ ॥

ಸಂದೆಯುಮಿಲ್ಲದೆ ನಿಲ್ಲದೆ ।
ಮುಂದೆ ವಿಧಿ ತನಗೆ ಬಕ್ಕುಮೆಂದಱಿವುವವೋಲ್ ॥

ಮುಂದಱಿಯದೆ ಪೆಱಪೆಣ್ಗಳ ।
ಮುಂದಲೆಯಂ ಕೊಯ್ವನಂತವಂ ಕಾಮಾಂಧಂ ॥ ೭೩ ॥

ಮುದಯುತನನ್ಯವಧೂನಿವ ।
ಹದ ಮೆಯ್ಯೊಳ್ ದುರ್ಯಶಃಪ್ರಶಸ್ತಿಯ ತೆಱದಿಂ ॥
ಪುದಿದಿರೆ ವಿರಚಿಸುವಂ ನಖ ।
ಪದಮಂ ನಿಜಪದವಿನಾಶಮಂ ಪ್ರಕಟಿಪುದಂ ॥ ೭೪ ॥

ವ ॥ ಜನನಾಥಪ್ರಿಯನಪ್ಪನರ್ಘ್ಯಮಣಿ ಭೂಷಾವ್ರಾತಮಂ ತೊಟ್ಟು ವ ।
ಸ್ತ್ರನಿಕಾಯಂಗಳನುಟ್ಟು ವಾಹಮನಲಂಪಿಂದೇಱಿ ವಾರಾಂಗನಾ ॥
ಜನಮಂ ಭೋಗಿಸಿ ಮಾಣದಾಕುಮತಿ "ಗಂಡಸ್ಯೋಪರಿ ಸ್ಫೋಟವೆಂ" ।
ಬನಯುಜ್ಞೋಕ್ತಿಯನಾಂತು ನಾದುನಿಯೊಳಂ ಸಂಶಕ್ತಿಯಂ ಮಾಡಿದಂ ॥ ೭೫ ॥

ಕಂ ॥ ವಾರುಣಿಯುವಂಗೆ ಮದಮಂ ।
ತಾರಳಿ ನೆರೆದಿರ್ದು ಪೊಸತುಲಾವಣ್ಯಸುಧಾ ॥
ಧಾರೆ ವಸುಂಧರೆ ತಂದಳ್ ।
ದೂರದೊಳಿರ್ದಂಗದಿನ್ನವಘಟಿತಮೊಳವೇ ॥ ೭೬ ॥

ಸಿಂಧುರ ಬಂಧುರ ಗತಿಯ ವ ।
ಸುಂಧರಿಯ ವಿಳಾಸವಿಭ್ರಮಂ ಮನಮಂ ನಿ ॥
ರ್ಬಂಧದಿನಲೆಯೆ ಲತಾಂತಶ ।
ರಂ ಧೃತಿಯವೊಲೆಯ್ದೆ ತೂಳ್ದಿದಂ ವಿಕಳತೆಯಂ ॥ ೭೭ ॥

ವ ॥ ಅಂತು ವಿಕಳನಾಗಿ—

ಮ ॥ ಅಸಿಧಾರಾಗ್ರಹಮಿನ್ನು ಕಾನ್ತವಿಳಸದ್ಧಾರಾಗ್ರಹಂ ತಸ್ರತ ।
ಯ್ಯೆ ಸಮುತ್ಫುಲ್ಲಲತಾಂತಶಯ್ಯೆ ಮದನೋಗ್ರಾಗ್ನೀನ್ಧನಂ ಚಂದನಂ ॥
ನಿಸದಂ ನಂಜಿನಗಾಳಿ ಶೀತಳತೆಯಂ ತಾಳ್ದಿರ್ದ ತೆಂಗಾಳಿಯಂ ।
ದು ಸರೋಜಾಸ್ಯೆಯ ಚಿಂತೆಯಿಂದೆ ಪಿರಿದುಂ ವಿಭ್ರಾಂತಿಯಂ ತಾಳ್ದಿದಂ ॥ ೭೮ ॥

ವ ॥ ಅನ್ತು "ದುಃಖಿತೇ ಮನಸಿ ಸರ್ವಮಸಹ್ಯಮೆ"ಂಬ ನುಡಿಯೆ ದಿಟಮಾಗೆ—

ಮ ॥ ಮನದಿಂದಂ ಧೃತಿ ದೇಹದಿಂದೆ ಪಸಿವುಂ ನೀರಱ್ಕೆಯುಂ ನಿದ್ರೆ ಲೋ ।
ಚನದಿಂ ಪಿಂಗೆ ಮನೋಭವಾಗ್ನಿ ತನುವಂ ದಾವಾಗ್ನಿವೋಲಳುರೆನಂ ॥
ದನಮಂ ಚಂದನಮಂ ಸರೋಜವನಮಂ ಶೈತ್ಯೋರುಧಾರಾನಿಕೇ ।
ತನಮಂ ಪೊರ್ದುವನುಣ್ಕೆ ಪೊಣ್ಮಿದ ವಿಯೋಗೋದ್ವೇಗದಿಂದಾಗಳುಂ ॥ ೭೯ ॥

ಉ ॥ ಆವಳ ರೂಪುಮಾವಳವಿಳಾಸಮುಮಾವಳ ಕಾನ್ತಿಯೊಪ್ಪಮುಂ ।
ಆವಳ ಸೋಂಕುಮಾವಳನುರಾಗಮುಮಾವಳ ಜಾಣುಮಾವಳಾ ॥
ಭಾವಮುಮಾವಳೊಳ್ನುಡಿಯುಮಾವಳ ಯೌವನಮುಂ ಮನಕ್ಕೆರಾ ।
ಜೀವನಿಭಾಸ್ಯೆ ಬಂದಿರೆ ವಸುಂಧರಿ ಬಾರವೆಯಾದುರಾತ್ಮನಾ ॥ ೮೦ ॥

ವ॥ ಅಂತವನೆಂತುಂ ನಿಜಾಂತರಂಗಮಂ ಸಂತೈಸಲಾಱದೆ ತನ್ನಮನದನ್ನನಪ್ಪ ಕೆಳೆಯನಂ ಕರೆದು—

ಚಂ॥ ಪ್ರಿಯ ನಿನಗೆನ್ನವಸ್ಥೆಯನೆ ಪೇೞ್ವೊಡೆ ಚಂದನದಣ್ಪನೊಲ್ಲದಾ ।
ಕೆಯ ಕುಚಲಿಪ್ತ ಚಂದನಮನಲ್ಲದೆ ಮೆಯ್ ಮಿಗೆ ಕೇಳಲೊಲ್ಲವಾ ॥
ಕೆಯ ನುಡಿಯಿಂಪನಲ್ಲದೆ ಪಿಕಸ್ವನಮಂ ಕಿವಿ ನೋಡಲೊಲ್ಲವೆ ।
ನ್ನಯ ನಯನಂ ವಸುಂಧರಿಯ ಚಾರುಮುಖೇಂದುವನಲ್ಲದಿಂದುವಂ ॥ ೮೧ ॥

ಕಂ॥ ಕಳಹಂಸಲಲಿತಗತಿಯಂ ।
ಕಳಹಂಸಕ ನೆರವು ನೆರಪದಿರ್ದೊಡೆ ಕೇಳೀ ॥
ಕಳಹಂಸಚಕ್ರಸಮ್ಮದ ।
ಕಳಹಂಸಮೆನಿಪ ಸರಂ ದವಾಗ್ನಿಯ ಪೆಸರಂ ॥ ೮೨ ॥

ಉ॥ ಬಾಲೆಯ ಬಾಹುಶಾಖೆಗೆ ಮೃಣಾಳಮನಾನನಕಂಬುಜಾತಮಂ ।
ಲೋಲವಿಳೋಚನಕ್ಕೆ ನವಕೈರವಮಂ ಕುಟಿಳಾಳಕಕ್ಕೆ ಭೃಂ ॥
ಗಾಳಿಯನಿಂಚರಕ್ಕೆ ಪಿಕನಿಸ್ವನಮಂ ಸರಿಮಾಡಿ ತಮ್ಮನಾ ।
ನೇಳಿಪೆನೆಂಬುದರ್ಕೆನಗಮಿತ್ತಪವುತ್ಕಟಮಾದ ಖೇದಮಂ ॥ ೮೩ ॥

ವ॥ ಎಂದಿಂತುರಿವರಿವ ವಿರಹರಹಸ್ಯಮಂ ಪ್ರಿಯವಯಸ್ಯಂಗಱಿಪಿದೊಡಾತನಿಂತೆಂದಂ—

ಕಂ॥ ಪರಿಭಾವಿಸೆ ತಮಗಮಗೋ ।
ಚರಮನುಪಾಯಪ್ರವೀಣರಳವಡಿಪರ್ ಗೋ ॥
ಚರಮೆನಿಪ ಕಾರ್ಯಮಿದನಾಂ ।
ತ್ವರಿತಂ ನಿನಗಾಗುಮಾೞ್ಪುದಾವುದು ಗಹನಂ ॥ ೮೪ ॥

ಎನಗಿನಿಸು ದೆವಸಮಱಿಪದೆ ।
ನಿನಗಿನಿತಾಯಾಸಮಾದುದಲ್ಲದೆ ಪೇೞಾ ॥
ವನಿತೆಯನೀಗಳೆ ತಂದಾಂ ।
ಮನೆದೊೞ್ತಿಂ ಮಾಡಿ ಕುಡುವೆನುೞಿವುದುಮೞಲಂ ॥ ೮೫ ॥

ವ॥ ಎಂದು ಸಂತೋಷಂಬಡೆ ನುಡಿದು ಕಲಹಂಸಕನಾ ಕಲಹಂಸಗಮನೆಯಪ್ಪ ವಸುಂಧರಿಯ ಸಮೀಪಕ್ಕೆ ವಂದು ನಿಮ್ಮ ಭಾವನುಣ್ಮಿದತನುಪರಿತಾಪದಿಂ ಬೇಸಗೆಯ ಬಿಸಿಲೆಸಕದಿಂ ಬೞ ಬೞ ಬತ್ತಿದ ಕೆಱೆಯ ಕಮಠನಂತೆ ಮಮ್ಮಲಮಱುಗುತ್ತುಮಿರ್ದಪನೆಂಬುದುಂ ಬೆಗಡುಗೊಂಡು ಈಗಳಿಂತೆನ್ನನೊಡಗೊಂಡು ಪೋಗೆಂದೊಡಾತನಿಂದುಮುಖಿಯನಂದಳಮನೇಱಿಸಿಕೊಂಡು ಡೋಲಾಯಮಾನ ಕುಸುಮಿತಲತಾಂತಾಗಾರ ಲೀಲೋಪಕಂಠದೊಳ್ ಉತ್ಕಂಠತೆಯಿಂ ತನ್ನ ಬರ್ಪ ಬಟ್ಟೆಯತ್ತಲೆ ದತ್ತದೃಷ್ಟಿಯಾಗಿರ್ದ ಕೆಳೆಯನ ಕೆಲಕ್ಕೆ ತಂದೊಡನೆ ಬಂದಂಗರಕ್ಷಕರುಮಂ ಪೊಱಗೆ ನಿಲಿಸಿ ಒಳಗಣ್ಗೊರ್ವಳನೆ ಕಳಿಪುವುದುಮಾಕೆಯಾ ಕಮಠನನೆಯ್ದೆವಂದಿಂತೆಂದಳ್—

ಕಂ ॥ ಒಗೆದೊಡೆ ರುಜೆ ನಿನಗೆಮ್ಮ ।
ತ್ತೆಗಮೆಮ್ಮಕ್ಕಂಗಮೆನಗಮಱಿಪದೆ ನೀನು ॥
ಬ್ಬೆಗದಿಂ ಪ್ರವಾಸಿಗನವೋ ।
ಲಗಲದೆ ವನದೊಳಗೆ ನಿಲ್ವುದನುಚಿತಮಲ್ತೆ ॥ ೮೬ ॥

ಕಳಹಂಸಕನಱಿಪಿದೊಡೀ ।
ಗಳಱಿದೆನೀ ರೋಗಮಾವುದಾವನೊ ವೈದ್ಯಂ ॥
ತಳರದೆ ನೋಡುವನೆನಿತಾ ।
ಯ್ತೊಳಗಘಸಂಯೋಗಮಾವುದೀರುಜೆಗಱಿಪಿಂ ॥ ೮೭ ॥

ವ ॥ ಅಂತಾ ಕಾಂತೆ ತನ್ನ ಋುಜುಸ್ವಭಾವದಿಂ ನುಡಿದೊಡಾ ವಕ್ರಸ್ವಭಾವಂ—

ಕಂ ॥ ಶ್ಲೇಷಾರ್ಥಿಯವಳ ನುಡಿಯಂ ।
ಶೇಷಮನಭಿರೂಪ ನುಡಿಯುಮಂ ಬಯಸುವವಂ ॥
ತೋಷಕರ ರೂಪಕಮನಘ ।
ಪೋಷಕನೀ ತೆಱದೆ ಮಾಡಿ ಧೂರ್ತಂ ನುಡಿದಂ ॥ ೮೮ ॥

ಕುವಳಯದಳಲೋಚನೆ ನಿ ।
ನ್ನ ವಚನಮಿದು ಸತ್ಯಮಲ್ತೆ ಪರಿಭಾವಿಪೊಡಾಂ ॥
ಭವದೀಯ ವಿರಹದಿಂದಂ ।
ಪ್ರವಾಸಿಕನುಮಾದೆನಿಂತುವನವಾಸಿಕನುಂ ॥ ೮೯ ॥

ರೋಗಂ ನಿನ್ನ ವಿಯೋಗಮೆ ।
ಆಗಮನಮೆ ವೈದ್ಯನಿಂದು ಚಂದನ ಹಿಮಧಾ ॥
ರಾಗೃಹಲಂಘನಮಾದುದು ।
ಯೋಗಂ ಸಂಯೋಗಮಿೂ ರುಜೆಗೆ ಪೆಱತುಂಟೇ! ॥ ೯೦ ॥

ಎನಗಾದ ರುಜೆಗೆ ನಿನ್ನೊಂ ।
ದು ನೋಟಮೆಂಬಮರ್ದಿನಿಂದಮಲ್ಲದೆ ವಿಚ್ಛೇ ॥
ದನಮಿಲ್ಲಂತೆ ಸುಹೃದ್ದ ।
ರ್ಶನಮೌಷಧಮೆಂಬ ಸೂಕ್ತಿಯುಂಟಪ್ಪುದಱಿಂ ॥ ೯೧ ॥

ಚಂ ॥ ಹಿಮರುಚಿಯಂ ಮುಖೇಂದು ಲತೆಯಂ ತನು ಚಂದನಮಂ ದರಸ್ಮಿತಂ ।
ಕಮಳಮನಂಘ್ರಿ ಕುಂದಕುಳಮಂ ದಶನಾಳಿ ಮೃಣಾಳಮಂ ಭುಜಂ ॥
ಕುಮುದಮನಕ್ಷಿಗಳ್ ಪುಳಿನಮಂ ಜಘನಂ ಗೆಲೆವಂದವಂಗತಾ ।
ಪಮನುಱಿದಂಗವೆಂತು ಕಳೆದಪ್ಪುವೊ ನೋಂಕಲೊಡಂ ತಳೋದರೀ ॥ ೯೨ ॥

ಕಂ ॥ ಎಂದು ಮನದಳಿಪನಱಿಪೆ ಖ ।
ಳಂ ದೃಢಘನರವಮನಾಲಿಸಿದ ಹಂಸಿಯಿದೆಂ ॥
ಬಂದದೆರ್ದೆಗೆಟ್ಟು ಕೋಗಿಲೆ ।
ಯಂದದೆ ವಧು ಮೂಗುವಟ್ಟು ವಿಸ್ಮಿತೆಯಾದಳ್ ॥ ೯೩ ॥

ವ ॥ ಅಂತು ವಿಸ್ಮಯಾಕ್ರಾಂತಸ್ವಾಂತೆಯಾಗಿ—

ಕಂ ॥ ಈ ತೆಱದೆ ನುಡಿದು ತನ್ನಯ ।
ಚೇತೋವೃತ್ತಿಯನೆ ಧೂರ್ತನಱಿದಪನೆಂಬೀ ॥
ಭೀತಿಯೊಳೆ ಬಗೆಯನೊಪ್ಪಿಸ ।
ದಾ ತರುಣಿಯವಂಗೆ ಕೃತಕದಿಂದಿಂತೆಂದಳ್ ॥ ೯೪ ॥

ಪೊಲ್ಲದುದಂ ಬಗೆದೈ ನಿನ ।
ಗಲ್ಲದುದಂ ನೆಗೞ್ದೆ ನಮ್ಮ ಕುಲದುನ್ನತಿ ಮೇ ॥
ಗಿಲ್ಲದಪವಾದ ಭರದಿಂ ।
ನಿಲ್ಲದೆ ಕುಸಿದಪ್ಪುದುೞಿವುದಸದಾಗ್ರಹಮಂ ॥ ೯೫ ॥

ಎಂದುಚಿತಮನುಸಿರ್ದೊಡಮದ ।
ನೊಂದುಮನವಧರಿಸದವಳನೊಲಿಸುವ ಬಗೆಯಂ ॥
ತಂದಂ ಕಾತರನಂತೆ ದ ।
ಲೆಂದುಮದೇಂ ಮುಂದುಗಾಣ್ಬರೇ ಕಾಮಾಂಧರ್ ॥ ೯೬ ॥

ಪೆಱ ತೆಗೆದ ಬಾಣಮಪ್ಪುದು ।
ನೆಱ ನಡುವಂತವನ ಮನಮನಾಕೆಯ ಬಾಣಂ ॥
ಪೆಱೆ ತೆಗೆದುದು ನೆಱೆ ನಟ್ಟುದು ।
ಪೆಱತೇಂ ವಾಮೋಮ ಧರ್ಮಗುಣಸಮ್ಮಿಳಿತಂ ॥ ೯೭ ॥

ಆವೆಡೆ ದುರ್ಗಮಮಲ್ಲಿಯೆ ।
ಭಾವಭವಂ ಬಟ್ಟೆಗೇಳ್ವ ಕಳ್ಳನ ತೆಱದಿಂ ॥
ದೋವೋ ಮೇಲ್ವಾಯ್ದುಸುವನ ।
ದೋವದೆ ಧೃತಿಗೆಡಿಪನಾರುಮಂ ಕ್ರೂರಾತ್ಮಂ ॥ ೯೮ ॥

ವ ॥ ಅಂತವಳೆಱಗಿಯುಮೆಱಗದಂತೆ ಬಿಡೆ ಬೀಸಿದ ನುಡಿಯೆ ತನ್ನ ವಿರಹಾಗ್ನಿಯನುದ್ದಮುರಿಪಲ್ ಬಿಡದೆ ಬೀಸಿದ ಗಾಳಿಯಂತಾಗೆ ಕಂತುಶರಮಂತರಂಗಮಂ ತಾಗೆ ಬೆಳ್ಕಾಗಿ ಮತ್ತಮಿಂತೆಂದಂ—

ಕಂ ॥ ಅಂಬುರುಹವದನೆ ಮನಸಿಜ ।
ನಂಬಿನ ನೆಱೆ ಏಱು ಮುಚ್ಚುವೊಡೆ ಕರ್ಪುರದಿಂ ॥
ದಂ ಬೆರಸಿ ಮಿಸುಪ ನಿನ್ನಯ ।
ತಂಬುಲದಿಂ ಕವಳದಿಂದೆ ಮುಚ್ಚುಗುಮಲ್ತೇ ॥ ೯೯ ॥

ವ ॥ ಅಂತು ಧೈರ್ಯಂಗೆಟ್ಟು ಬಾಯ್ಬಿಟ್ಟು—

ಚಂ ॥ ಬರಯಿಸಿ ಬೇಟದೊಳ್ ಕಮಠನಾಟಕಿಯಂ ಮನಮೊಯದಿರ್ದುಮಂ ।
ತಿರದೆ ಬೞಕ್ಕಮಾ ಖಳನ ಲಲ್ಲೆಗೆ ತಾನೊಳಗಾದಳಾ ವಸುಂ ॥
ಧರಿ ಮತಿಗೆಟ್ಟು ನೀಚಪಥವರ್ತಿನಿ ಮುನ್ನೆ ವಿರುದ್ಧಮಾದುದಿಂ ।
ಪರಿವವೊಲೊಳ್ಪು ಸೇತುವನೆ ಮೊಱೆ ನದೀಜಲಮಾತ್ತವೇಗದಿಂ ॥ ೧೦೦ ॥

ಕಂ ॥ ಚಿರವಿರಹದಿಂದೆ ಪೋಕುಂ ।
ತರುಣೀಜನದೊಲ್ಮೆಯಲ್ಲಿದೊಂದೇಕೆ ವಸುಂ ॥
ಧರಿ ಮರುಭೂತಿಯೊಳೊದವಿದ ।
ಪರಮ ಪ್ರೀತಿಯನೆ ಮಱೆದವಂಗೆಣೆಯಾದಳ್ ॥ ೧೦೧ ॥

ಆಗಳೆ ಪೆಱತಿನಕರ ಸಂ ।
ಯೋಗಂ ಸಮನಿಸೆ ಸಮಗ್ರಮೆನಿಸಿಯುಮಬಳಾ ॥
ರಾಗಂ ಪೊರೆದ ಹರಿದ್ರಾ ।
ರಾಗದವೋಲಿರದೆ ಪಾಱೆ ಪೋಕುಂ ಕ್ಷಣದಿಂ ॥ ೧೦೨ ॥

ಉ ॥ ಬೂದಿಯ ಬೊಟ್ಟು ಬೂದಿಯ ಸೊಡರ್ ವನಿತಾಜನದೊಲ್ಮೆಯಲ್ಲದಂ ।
ದಾದೊರೆವೆತ್ತ ವಲ್ಲಭನನೀಕ್ಷಿಸದಾ ಖಳನೊಂದು ಲಲ್ಲೆಗಂ ॥
ತಾದಮೆ ತೂಂಕಡಿಪ್ಪವರನೊಪ್ಪುವ ಪಾಸಿನ ಮೇಲೆ ನೂಂಕಿದಂ ।
ತಾದುದೆನಿಪ್ಪಿನಂ ಸಲೆ ವಸುಂಧರಿ ತನ್ನಯ ಚಿತ್ತಮಿೂವಳೇ ॥ ೧೦೩ ॥

ಕಂ ॥ ತರುಣಿ ಗಡ ಸಕಳಸುಖಪರಿ ।
ಕರೆ ಗಡ ವಿರಹಿಣಿಗಡಣಮಿಳಿತಕುಸುಮಮನೋ ॥
ಹರಲತೆಗಡಲ್ಲಿ ನವೆಯದೆ ।
ನೆರೆವಂ ಗಡ ನೆರೆಯದಾಕೆಯೇಂ ಸ್ವೈರಿಪಳೇ ॥ ೧೦೪ ॥

ತಱಗೆಲೆ ತೆಂಕಣಗಾಳಿಯ ।
ನಱಸದೆ ಬಿರುಗಾಳಿಸೋಕಿಯುಂ ಬಱಿಸಲ್ವಂ ॥
ತಱಿಕೆಯ ಪುರುಷನ ಬಱಿಯ ।
ನ್ನಱಸದೆ ಕಠಿಣನುಮನೆಳಸುವರ್ ಸಂಚಳೆಯರ್ ॥ ೧೦೫ ॥

ಪೆಱರೊಲ್ಲದೊಡೆಡೆಯಿಲ್ಲದೊ ।
ಡಱಿಯೆಂ ಕಾಮಿನಿಯರಲ್ಲದಂದೊಲವಂ ಮೇ ॥
ಣಱಿಕೆಯ ಕುಲಮಂ ಕಾಯಲ್ ।
ಮಱೆದುಂ ನೆಱೆದಪರೆ ದೋಷದೂಷಿತಮತಿಗಳ್ ॥ ೧೦೬ ॥

ಸಂಧ್ಯಾರುಚಿ ಪೆಂಡಿರಶುಚಿ ।
ಯೆಂದಾರುಚಿರಾಂಶು ಸೂನೃತಂ ಸುರಧನುವಾ ॥
ಕಾರಂ ಮಾಯಾಪ್ರಚಾರ ।
ಮಾಯತಿಕೆಮಿಕ್ಕ ಮಾಜಿನಪೂಜಂ (?) ॥ ೧೦೭ ॥

ಸುಗತಮತಕ್ಕೆಣೆಯೆನೆ ಶೌ ।
ಚಗುಣಂ ಕ್ಷಣಿಕಂ ಸಗರ್ವ ಚಾರ್ವಾಕಮತ ॥
ಕ್ಕೆ ಗಡೆಣೆಯೆಂದೆನೆ ಪೆಂಡಿರ ।
ನೆಗೞ್ತೆ ಪರಲೋಕಸೌಖ್ಯಘಾತಕಮಲ್ತೆ ॥ ೧೦೮ ॥

ಕಂ ॥ ಪತಿಹಿತೆಯರೆನಿಪ ಸತಿಯವ ।
ರತಿದುರ್ಲಭಮೆಂದುಮಿಂತುಮಲ್ಲದೆ ಕುಲಟಾ ॥
ತತಿ ಸುಲಭಂ ಸುಸ್ಪರ್ಶಮು ।
ದತಿ ದುರ್ಲಭಮಂತೆ ಕಾಜದೇಂ ದುರ್ಲಭಮೇ ॥ ೧೦೯ ॥

ವ ॥ ಇಂತಾ ಪಾತಕಿ ಭೂತಳಂ ಪೞಿಯೆಯುಂ ಭೀತಿಯಿಲ್ಲದಾ ಕಾತರನೊಳ್ ಚೇತಃ ಪ್ರೀತಿಯಂ ಮಾಡಿ—

ಕಂ ॥ ಕಾಪೞಿಯೆ ಪೞಿಯೆ ಜಗಮವ ।
ನಾಪೊೞ್ತುಂ ತಾಯ ಪೆಂಡಿತಿಯ ಪೇೞ್ವಿ ಹಿತಾ ॥
ಳಾಪಮನಾಪ್ತರ ನೀತಿಕ ।
ಳಾಪಮನುಱದಪಳೊಳಾ ಖಳಂ ಮಱೆವಾೞ್ವಂ ॥ ೧೧೦ ॥

ಡೋಳಪ್ರದದ ಬಿಡಾಳಕ ।
ಪಾಳಕ್ಕಾಪನಿತ್ತನೆತ್ತರಪೋಲಾ ಎಂ ॥
ದೀಲೋಕಮುಲಿಯೆ ನೀತಿನು ।
ತಾಲೋಕದ ನರರಹಿತಚರಿತನೆನ್ನದೆ ನಡೆದಂ ॥ ೧೧೧ ॥

ವ ॥ ಅಂತವಂ ತನ್ನ ತಾಯ ಕುಲಸ್ತ್ರೀಯ ಕುಲವೃದ್ಧರ ಬುದ್ಧಿಯೊಳೊಂದುಮಂ ಬಾೞ್ತಿಗೆಯ್ಯದೆ ಧೂರ್ತರೆ ತನಗಾಪ್ತರಾಗೆ ಉದ್ಧತನಾಗಿ ನೆಗೞುತ್ತುಮಿರ್ದನನ್ನೆಗಮಿತ್ತಲ್ ಆ ಭೂಪೋತ್ತಮಂ ಪತ್ತೆಸಾರ್ದು ಬಿಡುವುದಂ ಕಂಡು ಕಡುಮುಳಿದು ವಜ್ರವೀರನಿಂತೆಂದಂ—

ಕಂ ॥ ನಡೆದಿದಿರನೆನ್ನ ದೇಶದ ।
ಗಡಿಯೊಳ್ ಕಾದಲ್ಕೆವೇೞ್ಕುಮದುಮಾಣ್ದೆನ್ನಿ ॥
ರ್ದೆಡೆಗೆ ಬರಲ್ಕೆಯುಮಿಂತಾ ।
ಸೆಡೆದೊಳಗಿರ್ದಂದು ನಾಡೆ ನಗೆಗೆಡೆಯಕ್ಕುಂ ॥ ೧೧೨ ॥

ವ ॥ ಎಂದು ವಜ್ರವೀರಭಟಂ ಮೂದಲಿಸಿ ಪೊಱಮಟ್ಟು ಕಾದಲೆಂದು ಪರಿಚ್ಛೇದಿಸಿ—

ಕಂ ॥ ಕರಿತುರಗರಥಪದಾತಿಯ ।
ಪರಿಸಂಖ್ಯೆಯನಱಿವನಾವನವಱೊಡ್ಡುಗಳಂ ॥
ನಿರುತಂ ಪವಣಿಪರಿಲ್ಲೆನೆ ।
ಪುರಮಂ ಪೊರಮಟ್ಟು ಧುರದೊಳೊಡ್ಡಿದನದಟಂ ॥ ೧೧೩ ॥

ಕ್ಷೋಣೀಪತಿ ಬರೆ ಜೀವ ।
ತ್ರಾಣಕ್ಷಮಮೆನಿಪ ದುರ್ಗಮಂ ಪೊಱಮಟ್ಟ ॥
ಕ್ಷೂಣಬಲನಿದಿರ್ಗೆ ಬಿಸುಡುವೊ ।
ಡಾಣೆಗೆ ತಲೆಯೊಡ್ಡುವಂತಿರೊಡ್ಡಿದನಲ್ತೇ ॥ ೧೧೪ ॥

ವ ॥ ಎಂದು ತನ್ನನೆಂತುಂ ಸಂತೈಸಲಾಱದೆ ನಿಜಮಂತ್ರಿಗಳ್ ತಮ್ಮೊಳಗೆ ನುಡಿವಿನಂ ವಜ್ರವೀರಂ ವೀರರಸಾವೇಶದಿಂ ರೋಷಾವೇಶಂ ಕೆಯ್ಗಣ್ಮೆಯುಣ್ಮಿ ಬಂದೊಡ್ಡಿ ನಿಲ್ವುದುಂ ಮುನ್ನಮೆ ತನ್ನ ಬಲಮುಂ ಕಾಳಿಗಕ್ಕೆ ತೆಱಪಪ್ಪಂತು ಪೆಱತೆಗೆಯೊಡ್ಡಿಯರವಿಂದ ಮಹಾರಾಜನುಂ ಯಮರಾಜನಂತೆ ಯುದ್ಧಸನ್ನದ್ಧನಾಗಿ—

ಕಂ ॥ ಬೀಸೆ ಬಿಱುಗಾಳಿ ತಮ್ಮೊಳ ।
ಗಾಸುರಮೆನೆ ತಾಗುವಭ್ರದೊಡ್ಡುಗಳೆನೆ ಕೆ ॥
ಯ್ವೀಸೆ ನೃಪರೊಡ್ಡು ರಕ್ತಂ ।
ಸೂಸುವಿನಂ ತಾಗಿ ಮುಳಿದರುಂ ಕಡುಪಿಂದಂ ॥ ೧೧೫ ॥

ವ ॥ ಆ ಸಮಯದೊಳ್—

ಕಂ ॥ ನೆಱೆತೆಗೆದಿಸೆ ಸೈಗೋಲರ್ ।
ನೆಱಗೋಲುಂ ಪೆಣನುಮೊಡನೆ ಕೆಡೆದುವುಲೆಕ್ಕಂ ॥
ನೆಱೆದವರೆನೆ ಜವನಾಳ್ಗ ।
ಣ್ಮೆಱೆಯದೆ ಕೋಲ್ವೊಯ್ದು ಲೆಕ್ಕಿಪಂತೆವೊಲಾಗಳ್ ॥ ೧೧೬ ॥

ಪೊಣಿಗರೆನಿಸಿದರಱೆಕೆಯ ।
ಪ್ರಾಣದ ಬಿಲ್ವೊಗೆದ ಬಲ್ಮೆಯಂ ತೋಱುವವೋಲ್ ॥
ಬಾಣಂ ನೆಱಗೊಳೆ ತೆಗೆದರ್ ।
ಪ್ರಾಣಮನವಯವದಿನೆಚ್ಚು ರಿಪುನೃಪಬಲದೊಳ್ ॥ ೧೧೭ ॥

ಕೋಡುಂ ಬೀಡುಂ ಕಾಣ್ಬುದು ।
ನಾಡೆಯುಮುರಿದೆನಿಸಿ ಬಿಲ್ಲ ಬಲ್ಲಾಳೆಚ್ಚ ॥
ಬ್ಬಾಡಿದುದೊಡ್ಡಣದೊಡ್ಡ ।
ಳ್ಳಾಡದೆ ತಾಗಿದುದು ತಾಳಮುಂ ಕೂಡೆನಸುಂ ॥ ೧೧೮ ॥

ವ ॥ ಅಂತು ನೆಲನುಮನಾಗಸಮುಮಂ ತಾಳಂಗುಟ್ಟಿದಂತೆ ಭಯಂಬಟ್ಟು ತಾಳಂಗುಟ್ಟಿಯುಸಿಘುಟ್ಟನದಿಂ ನೆಟ್ಟನಾಡುವ ವೀರರಟ್ಟೆಯಾಟದೊಡನೆ ರುಧಿರಾಸವಸೇವೆಯಿಂ ಸೊರ್ಕಿದ ಭೂತಭೇತಾಳಜಾಳಮುಮನಾಡಿಸಿಯುವಱಾಟಕ್ಕಡ್ಡಂ ಬೀಟ್ವಿಂತೆ ಬಿರ್ದಡ್ಡಣದೊಡ್ಡಣಂ ಪಡಲ್ವಡುವುದುಂ—

ಕಂ ॥ ಖುರಪುಟದಧೂಳಿ ಪರಿವೊ ।
ಲಿರೆ ಮಿಸುಪಸಿಘಾತದಿಂದೆ ಪೊಱಪೊಣ್ಮೆ ಕರಂ ॥
ಪರಿವಿನಮಸೃಕ್ಪ್ರವಾಹಂ ।
ಭರದಿಂ ತಾಗಿದುವುಮಾಹವಾಹವದೆಡೆಯಂ ॥ ೧೧೯ ॥

ಆವರಿಸಿದ ತೂಲಿಗೆ ನ ।
ಟ್ಟೋವದೆ ಬಿರ್ದ್ದವರ ಮೇಲೆ ಪರಿಯೆ ರಥಂ ವೀ ॥
ರಾವಳಿ ಮುಮ್ಮೞಿಯಾದುದು ।
ಲೋವಿಸರದ ಮೇಲೆ ಭಂಡಿ ಪರಿದಂತಾಗಳ್ ॥ ೧೨೦ ॥

ಚಂ ॥ ಖುರಪುಟಘಾತದುಬ್ಬರಿಪ ಧೂಳಿ ದಿಶಾಳಿಯನುರ್ವಿಪರ್ವಿಯುಂ ।
ಪರಿಯಿಸಿದಾಸವಾರಿಗಳುದಗ್ರ ಭುಜಾಸಿಗಳಿಂದಮೊರ್ವರೊ ॥
ರ್ವರನದಟಿಂದೆ ಪೊಯ್ಯೆ ಪೊಱಪೊಣ್ಮಿತನಾಱದೆ ದಾಂಟಲಾಗಳು ।
ದ್ಧುರರಣರಂಗದೊಳ್ ಬಱಿಕೆ ನೂಂಕಿದವಾಹಮಸೃಕ್‌ಪ್ರವಾಹಮಂ ॥೧೨೧॥

ವ ॥ ಅಂತು ಘೋಟಿಬಾಯಿಲ ಕಾಳೆಗಮುಗುರ್ವುವಡೆಯೆ—

X X X X X

ವ ॥ ಅಂತು ಚಕ್ರಹತಿಯಿಂದೋಣಿಯೋದ ರಣಕ್ಷೋಣಿಯನಕ್ಷೂಣ ಬಾಣ ಘಾತದಿಂ ಹತಮಾದ ಹಯದ ಸಾರಥಿಗಳ ರಥಿಗಳಟ್ಟೆಗಳೆಂಬ ಪೆಟ್ಟೆಗಳಿಂ ಪೂಣ್ದು ಸಮತಳಂ ಮಾಡಿಯಾಡುವ ಮರುಳತಂಡದ ಮನೋರಥಮಂ ತೀರ್ಚುವ ಮಹಾರಥರ ಸಮರಂಗಮಾಸುರಮಾಗೆ—

ಕಂ ॥ ವಾರಣದ ಬಿದು ಪಿಸುಱ್ಬಾ ।
ಧೋರಣನಿರದುರುಳೆ ಬಿಸುಗೆ ರಿಪುನೃಪಕಾಂತಾ ॥
ದಾರಾಭರಣದ ಬಿಸುಗೆವೊ ।
ಲೋರಂತಿರೆ ಕಱಲೆ ಭರದಿನೆಚ್ಚರ್ ಜೋದರ್ ॥ ೧೨೨ ॥

ಮದದಿಂದಂ ಕರಿಗಳ್ ದೋ ।
ರ್ಮದದಿಂದಾರೋಹಕ ಬ್ರಜಂ ಮುಂದಂ ಕಾ ॥
ಣದೆಯುಮಿಱಿದೇರ್ಗಳವು ತ ।
ಪ್ಪದೆ ನಟ್ಟುವು ನೆಟ್ಟನದ್ಭುತಂ ನೆಗೞ್ವಿನೆಗಂ ॥ ೧೨೩ ॥

ವ ॥ ಅಂತು—

ಕಂ ॥ ಕರಿ ಕರಿಯೊಳ್ ತೇರ್ ತೇರೊಳ್ ।
ಹರಿ ಹರಿಯೊಳ್ ಪತ್ತಿ ಪತ್ತಿಯೊಳ್ ನೆತ್ತರ ಸು ॥
ಟ್ಟುರೆ ಪುಟ್ಟೆ ತಾಗಿ ತಳ್ತಿಱಿ ।
ದೆರಡುಂ ಬಲಮೊಡನೆ ಬಿಡದೆ ಮಡಿದುವು ಧುರದೊಳ್ ॥ ೧೨೪ ॥

ವ ॥ ಅಂತು ಸಮುಬಟ್ಟಾಗೆ ಪೆಣದ ಬೆಟ್ಟಾಗೆ ಪಡಲ್ವ ಪಡೆಯ ಸಾವಿಂಗೇವೈಸಿ—

ಕಂ ॥ ಎಕ್ಕತುಳದಿಂದೆ ಕಾದುವ ।
ತಕ್ಕಿಂದಂ ಭೂಪರಿರ್ವರುಂ ದೋರ್ವಳದಿಂ ॥
ದಿಕ್ಕರಿಗಳ ನವಯುವದಿಂ ।
ಧಿಕ್ಕರಿಪುವರೆಂದು ನೂಂಕಿದರ್ ನಿಜಗಜಮಂ ॥ ೧೨೫ ॥

ವ ॥ ಅಂತು ತಂತಮ್ಮ ದಂತಿಯುಂ ನಿಶ್ಶಂಕರಂಕುಶದಿಂದೌಂಕಿಯುಂ—

ಕಂ ॥ ಇರ್ವರ್ ಮೆಯ್ಮಱೆದವರಿಂ ।
ಶಿರ್ವರ ದೋರ್ವಳದಗುರ್ವನೀಕ್ಷಿಸೆ ಕಡುಪಿಂ ॥

ಪೂರ್ವಾದ್ರಿಯೊಳಪರಾದ್ರಿಯೆ ।
ನಿರ್ವಂದದೆ ತಾಗುವಂತೆ ತಾಗಿದುವು ಗಜಂ ॥ ೧೨೬ ॥

ವ ॥ ಆ ಸಮರ ಸಮಯದೊಳ್—

ಚಂ ॥ ಮದಜಲಧಾರೆಯಿಂ ಜಗುನೆಪುಟ್ಟಿದ ಪರ್ವತದಂತಗುರ್ವನ ।
ಪ್ಪಿದುದರವಿಂದ ರಾಜಗಜಮಾ ಗಜದುನ್ನತ ದಂತಘಾತದಿಂ ॥
ಮದವೊಳಸೋರೆ ಶೋಣನದಿಪುಟ್ಟಿದ ಪರ್ವತದಂತೆ ತೋಱುತಿ ।
ರ್ದುದು ಮಿಗೆವಜ್ರವೀರನ ಗಜಂ ಪೊಱಪೊಣ್ಮುವಸೃಕ್ಪ್ರವಾಹದಿಂ ॥ ೧೨೭ ॥

ವ ॥ ಅಂತು ವಜ್ರವೀರವಾರಣೇಂದ್ರಂ ನೊಂದು ಬೆಂಗುಡುವುದಂ ಕಂಡಾತನ ಚಾತುರ್ದಂತ ಬಳವೊಂದಾಗಿಯರವಿಂದನರೇಂದ್ರನ ಕರೀಂದ್ರಕ್ಕೆಡೆವೊಕ್ಕು ಬೇಗದಿಂ ತಾಗೆ—

ಮ ॥ ಕರದಿಂ ದ್ವಾದಶಮಾಯತೋರುರದದಿಂದಷ್ಟಾದಶಂ ಸಪ್ತಮಾ ।
ಸುರವದ್ವಾಳಧಿಯಿಂ ಪದಪ್ರಕರದಿಂ ನಾಲ್ವತ್ತನಾಲ್ಕಾ ಮದೋ ॥
ತ್ಕರಮಾಗುತ್ತಿರೆ ಪಾಯ್ದು ನೀೞ್ದುಗಿದುದೆತ್ತಂ ಮೆಟ್ಟಿಕೊಂದತ್ತು ದು ।
ರ್ಧರವಿದ್ವಿಷ್ಟ ತುರುಂಗಮಂ ನಿಮಿಷದಿಂ ಮತ್ತೇಭಮಾ ಭೂಪನಾ ॥ ೧೨೮ ॥

ವ ॥ ಅಂತುಮಲ್ಲದೆ—

ಮ ॥ ಸ್ರ ॥ ತಲೆಗಳ್ಕಲ್ಮೆಟ್ಟೆ ಮಾಂಸಂ ರಿಪುಗಳ ರುಧಿರಂ ತೋಯಮಾಗಿರ್ಪಿನಂ ಮುಂ ।
ಗೆಲೆ ಪಾದಾಘಾತದಿಂ ಘಟ್ಟಿಸಿ ನಿಹತಗಜಂ ತೋರಗುಂಡಾಗೆ ಬೇಗಂ ॥
ನೆಲಗಟ್ಟಂ ಕಟ್ಟಿ ಜೈತ್ರಧ್ವಜಮನೆ ನಿಱಿಸಲ್ಕೆಂದು ಬಂದಿರ್ದ ತಮ್ಮಾ ।
ಯಿಲನಂ ಪೋಲ್ತಿರ್ದುದಾ ರಾಜನ ವಿಜಯಗಜಂ ಕಾಳರೂಪ ಪ್ರಕೋಪಂ ॥ ೧೨೯ ॥

ವ ॥ ಅಂತು ಕೃತಾಂತನೆ ದಂತಿರೂಪಾಗಿ ಕೆಯ್ಕೊಂಡಂತರವಿಂದ ರಾಜದಂತಿ ಮಾಮುಸಕಂ ಮುಸಗಿ ಕೊಲುತ್ತುಂ ಬರೆ ಬಯಲೊಳ್ ನಿತ್ತರಿಸಲಾಱದೆ ಆನೆಯನಿಟ್ಟ ವುಡಲಕ್ಕೆಯುಂ ಮಱಿಗೊಂಡರೆಂಬಂತೋಡಿ ಪೋಗಿ ಕೋಂಟೆಯುಂ ಮಱಿಗೊಂಡು ಗಂಡನುೞಿಯದೆ ತನ್ನ ಸಮುನ್ನತ ದುರ್ಗಮುಂ ಬಲಿದು ವಜ್ರವೀರನುಂ ಕಾದಲೆಂದು ನಿಂದುದನರವಿಂದ ಮಹಾರಾಜಂ ಕಂಡು ದೂಳಿಗೋಂಟೆಯುಂ ಕೊಂಬಂತೆ ಕೊಂಬೆನೆಂದದಱ ಪಕ್ಕದೆಡೆಯನೊಳಪೊಕ್ಕು ನೋೞ್ಪಾಗಳ್—

ಕಂ ॥ ದಸಿಗಳುಱಿ ಬಸಿದ ಶೂಲದ ।
ಸಸಿಗಳವೊಳಗಣ್ಣೊಳೆಯ್ದೆ ನಟ್ಟುವು ಪುಗದಂ ॥
ತಸದಳದಗುದುರೆಗಂಡಿಗ ।
ಳಿಸೆದುವದಂ ಪೂೞಿದಂತು ಪೊಣೆಗರೆಸಪರ್ ॥ ೧೩೦ ॥

ಅರಿವಿತತಿ ತೆನೆಗೆ ಪಾಯ್ದುವ ।
ದುರವಣೆಯಿಂದೆಂದದಂ ನಿವಾರಿಪ ಬಗೆಯಿಂ ॥
ನೆರಪಿದ ಕಲ್ಲುಂ ಕವಣೆಯು ।
ಮಿರೆ ಮಂಚಿಗೆಯುಂತಿರೆಸೆದುವಟ್ಟಣೆ ಪಲವುಂ ॥ ೧೩೧ ॥

ಕಂ ॥ ಬೆಟ್ಟಿದ ವೀರರಸಂ ಸಮು ।
ನೆಟ್ಟನೆ ತೂಗಲ್ಕೆ ದಿಟ್ಟಿಗೊಲೆಯುಂಟಲ್ಲಿ ॥
ಕ್ಕಟ್ಟಿದ ಕಟ್ಟಳೆಯೆನಿಸಿ ।
ರ್ದಟ್ಟಳಮೆನೆ ಕೋಟೆವೞಿಯ ಸೆಱಿಗೆಯ್ದುಱಿಗಳ್ ॥ ೧೩೨ ॥

ತೆನೆಯೆಡೆಯ ಗಾಲಿಗೋಟೆಯ ।
ತೆನೆಯೆಡೆಯಂ ಪೋಪ ರವಿರಥದ ಗಾಲಿಗೆ ಮ ॥
ತ್ತೆನಿಸದೆಣೆಯಾದುದೆಂಬಂ ।
ತೆನಸುಂ ಸೊಗಯಿಸಿದುವೀಕ್ಷಣಕ್ಕಾಕ್ಷಣದೊಳ್ ॥ ೧೩೩ ॥

ವ ॥ ಮತ್ತಂ ತರತರಂಗೊಂಡು ಗಂಡಶೈಳಮನಿೞಿಸಿ ಬೞಿಯೊಳ್ ಸೆಱಿಗೆಯ್ದ ಗುಂಡುಗಳಿಂ, ಬಿದಿರ ಪೊದಱಿನಂತೆ ತುಱುಗಿರಿಸಿದ ಡೆಂಕಣಿಯ ಸಬಳಂಗಳಿಂ ಕುಂಜಂಗಳಂತೆ ರಂಜಿಸುವ ಕೊತ್ತಳಗಳಿಂ, ಶಿಖರಂಗಳಂತೆ ಮುಗಿಲಂ ಮುಟ್ಟುವಟ್ಟಣೆಗಳಿಂದಪೂರ್ವ ಪರ್ವತದಂತಗುರ್ವುವಡೆದೆರ್ವಿಸುವ ಕೋಂಟೆಯಂ ಬಳಸಿ ಬಂದ ವರ್ತನಕ್ಕೆ ತಾಂ ತಕ್ಕ ಪೆಡ್ಡಿಯಂ ಸಮಕಟ್ಟಿಸಿ ಸಬ್ಬಲಗ್ಗೆಯಂ ಮಾಡಿಸಲೆಂದುರ್ವೀಶ್ವರಂ ಕೈವೀಸಿ

ಕಂ ॥ ಆಳೋಚಿಸೆ ಮೊದಲೊಳ್ ಬಾ ।
ಯ್ಗಾಳೆಗಮಲ್ಲಿಂ ಬೞಿಕ್ಕನುಕ್ರಮದಿಂ ಕ ॥
ಲ್ಗಾಳೆಗಮುಮಗುರ್ವಿಪ ಬಿ ।
ಲ್ಗಾಳೆಗಮುಂ ನೆಗೞ್ದುದದ್ಭುತಂ ನೆಗೞ್ವಿನೆಗಂ ॥ ೧೩೪ ॥

ಕಣಿ ವೀರಕ್ಕೆನಿಸುವ ಬ ।
ಲ್ಕಣೆಯಣಿಯಂ ಬೆದಱಿದತ್ತು ಬಿಡೆ ಭೈರವ ಡೆಂ ॥
ಕಣಿಯಿಂದಂ ಚಿಮ್ಮುತ ಡೆಂ ।
ಕಣಿಯಿಂದಂ ಪಾಯ್ವ ಕಲ್ಲೆ ಭೋಂಕೆನಲಾಗಳ್ ॥ ೧೩೫ ॥

ಕಲ್ಲೊಳ್ ತಾಗಿದ ಡೆಂಕಣಿ ।
ಗಲ್ಲೊಡೆದುದು ಸಿಡಿಲ್ದು ಸಿಡಿಲಗಡಣದವೋಲ್ತ ॥
ಳ್ವಿಲ್ಲದೆ ಪೊಡೆದೊಡೆ ಸೆಡೆದಣಿ ।
ಝಲ್ಲೆಂದೋಡಿದುದು ನೆರವಿ ನಗೆ ಪುರವರದಾ ॥ ೧೩೬ ॥

ಉ ॥ ದೂರದೊಳಿರ್ದ ಮೋಹರಕೆ ಭೈರವಡೆಂಕಣಿ ಪತ್ತೆ ಸಾರ್ದುದಾ ।
ಕಾರಯಲಮ್ಮೆನುತ್ತಿರದೆ ಚಿಮ್ಮುಕಡೆಂಕಣಿ ಮತ್ತವಂತಱಿಂ ॥
ಸಾರೆಯದಕ್ಕೆ ಬಲ್ಗವಣೆ ಮಿಕ್ಕಗಳಂ ಪುಗುತಿರ್ಪುದಕ್ಕೆ ವೀ ।
ರಾರಿಗೆ ಕೆಯ್ಯ ಕಲ್ಸರಿಗೆ ಪತ್ತುವುದಕ್ಕೆಳಸಿತ್ತು ಪೊತ್ತ ಕಲ್ ॥ ೧೩೭ ॥

ಕಂ ॥ ಪುದಿದಸಿಘಟ್ಟನದಿಂ ಪು ।
ಟ್ಟಿದ ಕಿಡಿಯುಂ ಕವಣೆಕಲ್ಗಳುಂ ಕೆಯ್ಗಲ್ಲುಂ ॥

ಮದವದರಿಪ್ರಳಯದೊಳೊದ ।
ವಿದ ಕೆಂಡದ ಕಲ್ಮಳಿಯನನುಕರಿಸಿರ್ಕುಂ ॥ ೧೩೮ ॥
ಬಿಟ್ಟೇಱಿಂ ನೊಂದನ ಬಾ ।
ಯ್ವಿಟ್ಟೇಱಿಂದುಗುವ ಖಂಡಮಂ ಕಂಡದಟಂ ॥
ಬಿಟ್ಟೇಱಿಂದಂ ಸೆಡೆದನೆ ।
ನೆಟ್ಟನೆ ಮೆಯ್ವೆತ್ತಿ ಲಗ್ಗೆಯಂ ಮಾಱ್ಪಾಗಳ್ ॥ ೧೩೯ ॥

ವ ॥ ಅಂತು ಮೆಯ್ವೆತ್ತಿ ಲಗ್ಗೆಯಂ ಮಾಱ್ಪಾಳ್ಗಳಂ ದುರ್ಗದವರ್ ನುಗ್ಗು ಮಾಡೆ ನಾಡೆಯುಂ ಸಿಗ್ಗಾಗಿ ಲಗ್ಗೆಯಂ ತೆಗೆಸಿ ಕಱಿಗೊಂಡು ಪೋಗದೆ ನಿಂದು ಕೋಂಟೆ ಯಂ ಕೊಳ್ವುಪಾಯಕೋಟಿಯಂ ಚತುರೋಪಾಯಪ್ರೌಢನಪ್ಪ ಮರುಭೂತಿ ಭೂತಳ ಪತಿಗಱಿಪಿದೊಡಾ ಸಚಿವನೆಂದ ತೆಱದಿಂದೆಲ್ಲಮಂ ನೆಱೆಯೆ ಮಾಡಿಸಿ ಮಱುದಿವಸಂ ದಿವಸಮುಖದೊಳ್ ಪಲವು ಮುಖದಿಂ ಗುಮ್ಮನಂ ಸಾರ್ಚಿಯಣ್ಕಿ ಕಾದುವರ ಗುಣ್ಪಂ ಕಿಡಿಸಿಯುಂ ಗೆಗ್ಗೆಯಂ ಪೊಯ್ಸಿಯುಂ ದುರ್ಗದ ನಾಯಕನ ಗರ್ವಮಂ ನುಗ್ಗಂ ಮಾಡುವಂತೆ ತೆನೆಗಳಂ ನುಗ್ಗುಮಾಡಿಸಿಯುಂ ನೆಲಗನ್ನದಿಂ ನೆಲವಲಕ್ಕೆ ತೆಱದಿಂ ಕಾದುವರೆದ್ದುರ್ ಜಕ್ಕನೆ ಜರಿಯೆ ಕೋಂಟೆಯಂ ಜರಿಯಿಸಿಯುಂ ಲಗ್ಗೆಯಂ ಮಾಡೆ—

ಕಂ ॥ ಎಡಱಿದ ವಿಪಕ್ಷ ಬಲಮಂ ।
ಗಿಡಿಗಂ ಕಡುಪಿಂದೆ ಕಿಡಿಪವೋಲ್ ಬಾಳಕರಂ ॥
ಬಿಡದೆಸೆವ ಗುಮ್ಮನಂಜಿಸಿ ।
ಪಡೆದುವು ತಂತಮ್ಮ ಸಂಜ್ಞೆಗನ್ವರ್ಥತೆಯಂ ॥ ೧೪೦ ॥
ಸಾರಂ ವೈರಿಗಳಂ ಸಂ ।
ಹಾರಂ ಮಾಡಿದುದು ಗುಱುವನೊಳಗುಱುವವರಂ ॥
ವೀರರಸದಟಲೆದುದು ಬ ।
ದ್ಧಾರಂ ನಿರ್ಘಾಟಿಸಿತ್ತುವದಟರ ಧೃತಿಯಂ ॥ ೧೪೧ ॥
ಕಲ್ಲೆರ್ದೆಯಂ ತಾಗಿದೊಡಂ ।
ಕಲ್ಲೆರ್ದೆಗಳ್ ಬೆದಱಿದಿದಿರನದಿರದೆ ನಡೆದಾ ॥
ಬಲ್ಲಾಳ್ಗಳ್ ಬೇಗದಿನಿಂ ।
ಬಿಲ್ಲಾಳಿನ್ನಿಱಿಯಲೆನಿಸಿ ತೆಗೆನೆಱೆದೆಚ್ಚರ್ ॥ ೧೪೨ ॥
ಗವನಿಯ ಮಱೆಗೊಂಡಿಱಿವಿಸು ।
ವವರ್ಗಳ ಕೆಯ್ಮಿಕ್ಕು ಮಿಕ್ಕುತೋಱದವೋಲು ॥
ಕ್ಕೈವಮಿಲ್ಲದೆಚ್ಚು ಪರಿದೇ ।
ಱುವಾಳ್ಗೆ ಸನ್ನಾಹಮೆನಿಸಿದರ್ ಬಿಲ್ಲಾಳ್ಗಳ್ ॥ ೧೪೩ ॥
ಬಾಳ್ಗಿತ್ತು ಬಸಿಱ್ ತೊಡೆ ನಡು ।
ತೋಳ್ಗಂಟಲುರಂ ಕರಂಗಳುಂ ಪಱಿವಿನೆಗಂ ॥
ತೋಳ್ಗಡಿಯದಿಱಿಯೆ ಬಿಡೆ ಬ ।
ಲ್ಲಾಳ್ಗಳ್ ಸರಿಗೆದಱಿ ಮಗ್ಗಿದರ್ ಕಡುಪಿಂದಂ ॥ ೧೪೪ ॥

ಕಂ ॥ ಅಳಲಿಂದಂ ಪೊಯ್ದೊಡೆ ಕೆ ।
ಯ್ಗಳ ಬಳೆಗಳ್ ಪೋಗೆ ಪೋಗದಾಂತಿಱಿದರ್ ಕೆ ॥
ಯ್ಗಳ ಬಳೆಗಳ್[ತವೆ]ಪೊಯ್ದೊಡೆ ।
ಪೇೞ್ಪೊಣರ್ಚುಗುಂ ಗಂಡರಟ್ಟಿ ಮಾಡ್ಪಿರೆ ಧುರಮಂ ॥ ೧೪೫ ॥

ರಯ್ಯುಮೆನಿಸಿದುವು ಮಿಗೆ ಮುಂ ।
ಗೆಯ್ಯೇಱುಂ ಮುಡುಹಿನೇಱುಮುರದೇಱುಮವಾ ॥
ರಯ್ಯುವರ ವೀರರನಿತೆಗ ।
ಜಯ್ಯೆಯುರುಂ ಕೂರ್ತುಕೊಟ್ಟವೋಲ್ ಕೂರಾಳ್ಗಳ್ ॥ ೧೪೬ ॥

ಬಿಟ್ಟಱೆಯ ಪೊಯ್ಲನಸುವೆಯೊ ।
ಳಿಟ್ಟರೆದವೊಲಾಗೆ ಮುನ್ನಮೇಱಿದವರ್ ಪಿಂ ॥
ಮೆಟ್ಟದವಂದಿರ ಪೆಣನಂ ।
ಮೆಟ್ಟಿಯೆ ಬೊಬ್ಬಿಟ್ಟು ಸರಿಗೆವತ್ತಿದರದಟರ್ ॥ ೧೪೭ ॥

ಅಳವೞಿಯದೆ ಕೋಟೆಯ ತೆನೆ ।
ಗಳೊಳೆತ್ತಂ ಸುತ್ತಿ ನೇಲ್ವ ಬಿರುದರ ಕರುಳಂ ॥
ತಳದಿಂ ಪಿಡಿದಡರ್ದರ್ ಬ ।
ಲ್ಕೆಳೆಯಂ ಪಿಡಿದಡರ್ವ ಮಾೞ್ಕೆಯಿಂ ಮೊಯ್ಗಲಿಗಳ್ ॥ ೧೪೮ ॥

ಸರಿಗೆವರಲಾರುಮಿಲ್ಲೆನೆ ।
ಸರಿಗೇಱೆ ಬೆಡಂಗುವಡೆದು ಸುಗ್ಗಿಯ ಗಿಳಿಯಂ ॥
ತಿರೆ ತೆನೆಗಳನೆಡಗಲಿಸಿದು ।
ದುರು ಕೋಪಾರುಣಿತ ತುಂಡಮದವರ ತಂಡಂ ॥ ೧೪೯ ॥

ಮ ॥ ಮದವತ್ಕುಂಭಿಯ ಕುಂಭಮಂಡಲಕೆ ಕೋಪಾಟೋಪದಿಂ ಪೊಯ್ವ ಸಿಂ ।
ಗದವೋಲ್ ಲಂಘಿಸಿ ದುರ್ಗದಟ್ಟಳೆಗೆ ಕಟ್ಟಾಳ್ ಖಡ್ಗದಿಂ ಪೊಯ್ಯೆ ಪೊ ॥
ಣ್ಮಿದುದುದ್ವೃತ್ತರನೆತ್ತಿಯಿಂ ಸುರಿದು ದೇವಾನೀಕಮಾಯುದ್ಧಮಂ ।
ಪದೆಪಿಂದೀಕ್ಷಿಸಿ ಪುಷ್ಪವೃಷ್ಟಿಯನೆ ನೀಡುಂ ಮಾಡಿದಂತೊಪ್ಪುಗುಂ ॥ ೧೫೦ ॥

ವ ॥ ಆ ಸಮಯದೊಳ್—

ಕಂ ॥ ಖಂಡಂ ಕೆದಱಿದೊಡಂ ಕೆಯ್ ।
ಖಂಡಿಕೆವೋಗಿರ್ದೊಡಂ ಕರುಳ್ ಸೂಸಿದೊಡಂ ॥
ಖಂಡೆಯ ಬಾಯಿಂ ತೊಲಗದೆ ।
ಕಂಡರ್ ಕಂಟಣಿಸೆ ಕಾದಿದರ್ ಬಲ್ಗಂಡರ್ ॥ ೧೫೧ ॥

ಪಲ್ಗಳ್ ಕೆದಱಿದೊಡಂ ಕಂ ।
ಪಲ್ಗಳ್ ಕನ್ನೆತ್ತರಿರ್ಪಿನಿಂ ಪುಟ್ಟಿದೊಡಂ ॥
ಬಲ್ಗಂಡಂ ಸೂಸಿದೊಡಂ ।
ಬಲ್ಗಂಡರ್ ಬೆದಱದಿಱಿದು ಕುಱಿದಱಿಯಾದರ್ ॥ ೧೫೨ ॥

ವ ॥ ಅಂತು ದುರ್ಗಾಧಿಪ ವಾಚಾಳ ಭೂಪಾಳನ ತೋಳ್ಗಳ್ ಪಿಂತೆ ಬಲ್ಲಾಳ್ಗಳುಂ ಬೀೞ್ವುದುಂ ಕೋಂಟೆ ಡಿಳ್ಳಿಸಿ ಪೋದೊಡೆ ಅಳ್ಕಿರ್ದಗಳ್ ಕೆಲರ್ ಬಾಳಂ ಬಿಟ್ಟು ಬಾೞಿ ನಾಸೆಯಂ ಪಿಡಿಯೆಯುಂ, ಬಿಲ್ಲಬಲ್ಕಣಿಗಳ್ ಕೆಲರ್ ಕಣೆಯಮನೀಡಾಡಿ ಕಣೆಯಮಂ ಕೊಂಡಾಡೆಯುಂ, ಸಬಳಿಗಮಾನಸರ್ ಬಸವೞಿಯೆ ಸಬಳಮಂ ಬಿಸುಡೆಯುಂ, ಕುಂತ ದವರ್ ಪಿಡಿಪಡೆದ ಶಕುಂತದಂತೆ ಬಾಯ್ವಿಡೆಯುಂ, ಕೆಲರ್ ಬಲ್ಲಾಳ್ತನಮಂ ಬಿಟ್ಟಾಳ್ತನ ಮಂ ಪೂಣೆಯುಂ, ಶಕ್ತಿಧರರ್ ಶಕ್ತಿಯುಂ ಬಿಟ್ಟು ಶಕ್ತಿಯುಂ ಮಱೆಗೊಳೆಯುಂ, ಮಾಸ ವಾರಿಗಳಾಸವಾರಿಗಳಾಗೆಯುಂ ಇಂತು ತನ್ನ ತಂತ್ರಂ ಭಯಾಕ್ರಾಂತ ಸ್ವಾಂತಮಾದುದಂ ಕಂಡು—

ಕಂ ॥ ಆರಯ್ಯೆ ವಜ್ರವೀರನ ।
ವೀರರಸಂ ಪಾದರಸದವೋಲರವಿಂದೋ ॥
ರ್ವೀರಮಣನ ತೇಜೋವಿ ।
ಸ್ತಾರಾಗ್ನಿ ಮುಖಕ್ಕೆ ಪಾಱಿಪೋದತ್ತಾಗಳ್ ॥ ೧೫೩ ॥

ಬಲಮುೞಿಯೆ ವಜ್ರವೀರಂ ।
ಛಲಮಂ ದೋರ್ವಲಮನುೞಿದು ಜೀವನದೊಳ್ ತ ॥
ನ್ನೊಲವಿರೆ ರಂಜಿಪ ಸಂಜೆಯು ।
ಚಲದಿಂದಂ ಪಾರ್ವರಂತಿರೊರ್ವನೆ ಸರಿದಂ ॥ ೧೫೪ ॥

ಬಿಡೆ ಬೆಳಗುವ ಗುಣಮಣಿಗಳ ।
ನಡಿಗಟ್ಟುವ ತರಳಸತ್ವನತ್ಯುದ್ವೃತ್ತಂ ॥
ಜಡಧಿಯ ಸಭ್ಯಂ ಭಂಗಂ ।
ಬಡುವುದು ನೆಲೆಗೆಡುವುದೆಂಬುದದು ತಕ್ಕುದೆನಲ್ ॥ ೧೫೫ ॥

ವ ॥ ಅಂತು ವಜ್ರವೀರಂ ತನ್ನ ಜಸದೆಸಕಂ ಮೆಯ್ಗರೆದೋಡಿ ಪೋಗೆ—

ಕಂ ॥ ಮಾನಸದೊಳೆಸೆವ ಗುಣಮಪ ।
ಮಾನಂ ಕೆಡೆಹರಿಯಿಪಂತೆ ಬಸನಂ ಭಟಸಂ ॥
ತಾನಂ ಕೆಟ್ಟೊಡೆ ನಗರದ ।
ನಾನಾವಸ್ತುವನೆ ಹರಿಯಿಸಿತ್ತಹಿತಜನಂ ॥ ೧೫೬ ॥

ಸ್ರ ॥ ರಾಮಂ ಮುಂ ಲಂಕೆಯುಂ ವಾರಿಧಿಪರಿವೃತಮಂ × × ×
× × × × × ತನಗಾಯತ್ತಮಂ ಮಾಡಿದಂದು ॥
ದ್ದಾಮಂ ಬತ್ತಿರ್ದ ವಿದ್ಯುದ್ಧರಮನತಿಭರಂಗೆಯ್ದು ತಾಂ ಕಾದಿ ಕೊಂಡಂ ।
ಸಾಮರ್ಥ್ಯಂ ಧಾತ್ರಿಯೊಳ್ ಬಿತ್ತರಿಪಿನಮರವಿಂದಾಹ್ವಯಂ
ಕ್ಷೋಣಿಪಾಳಂ ॥ ೧೫೭ ॥

ಕಂ ॥ ಆ ಪದದೊಳಮೆಱಗಿ ನಿಜ ।
ಶ್ರೀಪದಕಾ ವಜ್ರವೀರ ತನಯರ ನಯದಿಂ ॥
ಭೂಪತಿ ಕಾದನದಂತುಟೆ ।
ಶಾಪಾನುಗ್ರಹ ಸಮರ್ಥನಲ್ಲದನರಸೇ ॥ ೧೫೮ ॥

ಉ ॥ ಓಡಿಸಿ ವಜ್ರವೀರನ ಕುಲಾಗತ ಭಾಸುರಕೋಶಮಂ ರಣ ।
ಕ್ರೂಡನೆಯೋಗ್ಯ ಭದ್ರಗಜವಾಜಿಗಳಂ ಮದನಂಗೆ ಹರ್ಷಮಂ ॥
ಮಾಡುವ ರೂಪಯೌವನ ಕಳಾವಿಳಸದ್ಗಣಿಕಾಜನಂಗಳಂ ।
ನೋಡಿ ನೃಪಾಳಕಂ ತರಿಸಿಕೊಂಡನಖಂಡಿತ ಶೌರ್ಯಮಂಡಿತಂ ॥ ೧೪೯ ॥

ವ ॥ ಎಂದು ತನ್ನಂ ಜಗಂ ಪೊಗಟೆ ಪದ್ಮನಗರದೊಳ್ ಗುಣಪದ್ಮನಾ ವಜ್ರವೀರನಸುತನಪ್ಪ ಸುವೀರನಂ ನಿಲಿಸಿಯಾತನ ಮನೋರಥಮಂ ನಿಲಿಸಿ—

ಕಂ ॥ ನಿಜರಾಜಧಾನಿಗನ್ವಿತ ।
ವಿಜಯಶ್ರೀ ಧರ್ಮನಂದನಂ ತಾನೆನೆ ಭೂ ॥
ಭುಜನಭಿಮುಖನಾದಂ ತ ।
ನ್ನ ಜಸಂ ದಶದಿಗ್ಮುಖಕ್ಕೆ ಪಸರಿಸುವಿನೆಗಂ ॥ ೧೬೦ ॥

ಮ ॥ ಸ್ರ ॥ ಲಲಿತ ಶ್ರೀಪುಂಡರೀಕಂ ಸೊಗಯಿಸೆ ಕುಮುದಂ ಕೊರ್ವಿ ಪುನ್ನಾಗ ಪತ್ರಾ ।
ವಲಿ ಚೆಲ್ವಂ ತಾಳ್ದಿ ತೇಜೋರವಿಯೆಸೆಯೆ ಯಶಶ್ಚಾರುಚಂದ್ರಾಂಶುದಿಜ್ಮಂ॥
ಡಲಮಂ ತಳ್ಪೊಯ್ಯೆ ಚೈತ್ರೋತ್ಸವಮೆನೆ ಪುರಮಂ ರಾಜನಂದೆಯ್ದಿ ವಂದಂ ।
ಕಲಕಂಠೋದ್ಭೂತ ಗೀತಂ ವಿಬುಧಜನಮನಃಪದ್ಮಿನೀಪದ್ಮಮಿತ್ರಂ ॥ ೧೬೧ ॥

— ಗದ್ಯಂ —

ಇದು

ವಿದಿತವಿಬುಧಲೋಕನಾಯಕಾಭಿಪೂಜ್ಯವಾಸುಪೂಜ್ಯಜಿನಮುನಿ
ಪ್ರಸಾದಾಸಾದಿತನಿರ್ಮಳಧರ್ಮ ವಿನುತವಿನೇಯಜನ
ವನಜವನವಿಳಸಿತಕವಿಕುಳತಿಳಕಪ್ರಣೀತಮಪ್ಪ ಪಾರ್ಶ್ವ
ನಾಥಪುರಾಣದೊಳ್ ಅರವಿಂದಮಹಾರಾಜ
ವಿಜಯಯಾತ್ರೋತ್ಸವವರ್ಣನಂ

**ತೃತೀಯಾಶ್ವಾಸಂ**



॥ ಶ್ರೀಃ ॥

# ಚತುರ್ಥಾಶ್ವಾಸಂ

ಕಂ ॥ ಶ್ರೀದಯಿತಂ ಪಾಕನಿಳಾ ।
ಹ್ಲಾದಕರಂ ರತ್ನತೋರಣಾದ್ಯಷ್ಟವಿಧೋ ॥
ತ್ಪಾದಿತ ಶೋಭಾಕರಮಂ ।
ಪೌದನಪುರಮಂ ಸಾರ್ದಂ ಕವಿಕುಳತಿಳಕಂ ॥ ೧ ॥

ವ ॥ ಅಂತಖಿಳ ಭೂತಳನಾಥರ್ಸಮೇತಂ ಮಹಾವಿಭೂತಿಯಿಂದರವಿಂದಮಹಾರಾಜನಪಗತಗ್ಲಾನಿಯಂ ನಿಜರಾಜಧಾನಿಯಂ ಪೊಕ್ಕು ಸುಖದಿನಿರೆ—

ಕಂ ॥ ಮರುಭೂತಿಯುಮತಿ ಶೋಭಾ ।
ಕರಮಂ ದೃಕ್ಸೌಖ್ಯಕರಮನತಿಶಯರಿಲ್ಲೆಂ ॥
ದಿರಮಂ ಪೊಕ್ಕಂ ನಿಜಮಂ ।
ದಿರಮಂ ಶರದಿಂದು ವಿಶದತರ ಕೀರ್ತಿತಮಂ ॥ ೨ ॥

ವ ॥ ಅಂತು ಸಕಳಸುಖಾವಾಸಮಂ ನಿಜನಿವಾಸಮಂ ಪೊಕ್ಕು—

ಕಂ ॥ ಜನನಿಗಮಗ್ರಭವಂಗಂ ।
ವಿನಯದೆ ಪೊಡೆವಟ್ಟು ಪತಿಯ ಜಯಮಂ ರಿಪುಭೂ ॥
ಪನ ವಸ್ತುವಾಹನಂ ನೆ ।
ಟ್ಟನಖಿಪೆಯುಂ ತೆರೆಯೆ ನೆರೆಯೆ ನಯನಿಧಿಪೇೞ್ದಂ ॥ ೩ ॥

ವ ॥ ಅಂತು ಪೇೞ್ದನಂತರಂ ಪರಿಜನಪರಿವೃತೆಯಾಗಿ ಕೈಗೆಯ್ದುಂ ಕೈಗೆಯ್ಯದಂತಿರ್ದ ನಿಜಲಲನೆಯ ಕೆಲಕ್ಕೆವರೆ—

ಕಂ ॥ ಅಳವಿನಿದೆ ನೆಗೞ್ವ ದೋಷ ।
ಕ್ಕೆ ಲಜ್ಜೆಯಿಂ ಬೆಮರುಮೊಡನೆ ಕಂಪನಮುಂ ಬಂ ॥
ದೆಳಸೆ ವಸುಂಧರಿಗದನಾ ।
ಗಳ್ಗೊಲವೆತ್ತಾತನೆಯ್ದಿದಂ ಮುದದೊದವಂ ॥ ೪ ॥

ಲಲನೆಯರ ಚರಿತಮನಿತುಂ ।
ಪಳಾಳಮದು ದಿಟವೆಗೆತ್ತು ಹರ್ಷಮನನ್ನಂ ॥
ತಳೆದಪನೆಂದಡೆಯುಳಿದವ ।
ರ್ಗಳನಬಲೆಯರ್ಗಾಳಿಗೊಳ್ವುದೇಂ ವಿಸ್ಮಯಮೇ ॥ ೫ ॥

ಅಂತು ಕೆಲದೆವಸಮಿರ್ಪುದು ।
ಮಂತರ್ವರ್ತಿಗಳುದಗ್ರನಪ್ಪಗ್ರಜವ್ರ ॥

ತ್ತಾಂತಮನಱಿಪಿದಡೆ ನಿಜ ।
ಸ್ವಾಂತದೊಳಿಂತೆಂದು ಚಿಂತಿಸಿದನಾ ಸಚಿವಂ ॥ ೬ ॥

ಮಡದಿಯರನರ್ಥಮುಳ್ಳಡೆ ।
ಪಡೆಯಲ್ಪುರ್ಕುಂ ಸಹೋದರರ್ಕಳನೆನಿತುಂ ॥
ಪಡೆವರೆ ಪೆಂಡಿರ ದೂಸಱಿ ।
ನೊಡವುಟ್ಟಿದರ್ಗೆಂತು ಮುಳಿಯಲಕ್ಕುಂ ತಕ್ಕಂ ॥ ೭ ॥

ಎಂದು ನಿಜಪ್ರಿಯೆಯಂ ಪು ।
ಲ್ಲಿಂದಂ ಕೀೞಾಗಿ ಬಗೆದು ತೋಱಿದುಂ ಮನದೊಳ್ ॥
ನೊಂದಗ್ರಜನಱಿದಂ [ದಿಂ] ।
ದೆಂದುತ್ತಮ ಮುನ್ನಿನಂತೆ ನಡೆಯಿಸುತಿರ್ದಂ ॥ ೮ ॥

ಅನಿತೊಂದಗ್ರಜನ ನಯ ।
ಕ್ಕೆನಸುಂ ಮುನಿಯನೆ ನೃಪಾಳಕಂ ಕೇಳಲೊಡಂ ॥
ಜನಿಯಿಕುಮಪಾಯಮಣ್ಣಂ ।
ಗೆನುತಂ ಚಿಂತಿಸಿದನೇಂ ಮಹಾತ್ಮನೊ ಸಚಿವಂ ॥ ೯ ॥

ವ ॥ ಅಂತು ಚಿಂತಿಸುತಿರ್ಪುದುಮಂಜಲಂಜಲ್ ಬೆಳಗಾದುದೆಂಬಂತೆ ಭೂಕಾಂತನಾ ಕಮಠನ ದುರ್ವೃತ್ತ ವೃತ್ತಾಂತಮನಂತಃಪುರರಿಂದಂ ತಿಳಿದು ತನ್ನಂ ಬರಿಸೆ ಮರುಭೂತಿ ಬಂದು ಪೊಡೆವಟ್ಟು ಕಟ್ಟುಕಡೆದು ಸಶಂಕಿತನಾಗಿ ಸಿಂಹಾಸನದ ಕೆಲದೊಳ್ ತನಗಿಕ್ಕಿದು ಚಿತಾಸನದೊಳ್ ಕುಳ್ಳಿರ್ಪುದುಂ ಸಚಿವಂಗರಸನಿಂತೆಂದಂ—

ಕಂ ॥ ಏಕಾಂತಮಾಗಿಯುಂ ಮಗು ।
ೞ್ದೇಕಾಂತಮೆನಿಪ್ಪುದಲ್ತು ನಿಮ್ಮಗ್ರಜನ ॥
ವ್ಯಾಕುಳತೆಯಿಂದೆ ನೆಗೞ್ದುದು ।
ದೇಕಾಂತಮದಂ ವಿಚಾರಿಪಂತಱಿಯದರಾರ್ ॥ ೧೦ ॥

ಆಮಿನಿತು ದೆವಸಮಱಿದುಂ ।
ನೀಮೆ ನಿಜಾಗ್ರಜನನಱಿದು ನೆರೆತೋಱಿದಪರೆಂ ॥
ಬೀ ಮನದೊಳಿರ್ದೆಮುಚಿತಮ ।
ನೇಮಾತಱಿದಪರೆ ಮೋಹವಿಘುಟಿತ ಮತಿಗಳ್ ॥ ೧೧ ॥

ಮುನ್ನಮೆ ನಿಜಪಿತೃ ನಯಸಂ ।
ಪನ್ನನನಾಗತಮನಱಿದು ತೋಱಿದವನಂ ನೀ ॥
ಮಿನ್ನೆವರಮಱಿಯದೊಳಕೊಂ ।
ಡನ್ನೆಯಮಿದೆ ಸಾಲ್ವುದಿರಿಸದಿಂ ಪರಿಹರಿಸಿಂ ॥ ೧೨ ॥

ಎನೆ ಜನಪತಿ ಸಚಿವಂ ಭೂ ।
ಪನ ಕೋಪಮನಱಿದು ದೇವ ಕೇಳದುದಂ ನೀ ॥

ಮೆನಗೆ ಬೆಸಸುವಿರಿಯಾದೊಡ ।
ಮನುಕಂಪೆಯಿನಧಿಪ ನೀಂ ವಿಚಾರಿಪುದಿನ್ನುಂ ॥ ೧೩ ॥

ವ ॥ ಎಂಬುದುಂ ಜಗತೀಪತಿ ಮುಗುಳ್ನಗೆ ನಗುತಮಿಂತೆಂದಂ—

ಕಂ ॥ ಮುಚ್ಚುಮಱಿಯಲ್ಲದರ್ಕೇಂ ।
ಪಚ್ಚು ನಿಜಾಗ್ರಜನ ಧೂರ್ತವೃತ್ತಿಗೆ ನೆಗಱ್ದಿ ॥
ರ್ಮೆಚ್ಚದಿನೆಂತೋ ನೀಮಿಂ ।
ಮುಚ್ಚುವಿರೂರುಟ್ಟು ನಾಡು ಮೋಲ್ಕೊಂಡುದುದಂ ॥ ೧೪ ॥

ವ ॥ ಅದರಿಂದಾದುರಾಚಾರಂ ವಿಚಾರಗೋಚರಮಲ್ಲದಂತು ನೆಗಱ್ದುದಂ ನಾಮೆಂತು ವಿಚಾರಿಸುವೆಮೆಂದು ಮಱುಮಾತುಗುಡದಂತು ನುಡಿಯೆ ಲಜ್ಜಿತರಾಗಿ ತಲೆಯಂ ಬಾಗಿರೆಯರಸಂ ಮರುಭೂತಿಯ ಮನದ ಕಳಂಕಮಂ ಕಳೆಯಲೆಂದಿಂತೆಂದಂ-

ಕಂ ॥ ವಿನಯನಿಧಿ ವಿಶ್ವಭೂತಿಗೆ ।
ಜನಿಯಿಸಿ ನಿಮ್ಮಗ್ರಜಾತನೆನಿಸಿಯುಮಂ ದು ॥
ರ್ಜನನಾದನಿಂಗಡಲ್ಗಮ ।
ರ್ದಿನೊಡನೆ ವಿಷಮುದಯಿಪಂದದಿಂದಂ ಕಮಠಂ ॥ ೧೫ ॥

ಜನನಸ್ಥಾನಮದೊಂದಾ ।
ದನಿತರೊಳೆ ಸಮಾನಶೀಲಮುಕ್ಕುಮೆ ಜನಕೇಂ ॥
ಜನಿಯಿಸಲಾರ್ಕುಮೆ ಸಿಡಿಲದು ।
ಘನಸಂಭವಮೆನಿಸಿ ಹರ್ಷಮಂ ವರ್ಷದವೋಲ್ ॥ ೧೬ ॥

ವ ॥ ಅದುನಿಮಿತ್ತಮಾದುರ್ವೃತ್ತನ ಕೇಡಿಂಗೆ ಅಳಲಲಿಲ್ಲೇಕೆಂದೊಡೆ 'ಛಿಂದಿ ಬಾಹುಮಪಿ ದುಷ್ಟಮಾತ್ಮನಾ'ಯೆಂಬ ನೀತಿಯುಂ ನೀಮಱಿಯದವರಲ್ಲೆಂದು ತನ್ನಂ ಪ್ರತಿಬೋಧಿಸಿದ ನಿಜಸ್ವಾಮಿಪ್ರಸಾದದೊಳಾ ದೋಷಮುಮಗ್ರಜನ ಕೇಡಿನೊಳಾದ ದೋಷಮುಂ ಮನದೊಳಿರೆ ಪೀಯೂಷಮುಮಂ ಬಡಬಾನಳನುಮನೊಳಕೊಂಡ ಪಯಃಪಯೋಧಿಯಂ ನೆನೆಯಿಸುತ್ತಂ ಜನಪತಿಯ ನಿಯಮದಿಂ ಮನಮಲ್ಲದ ಮನದಿಂ ಮನೆಗೆ ಪೋಪುದುಮಿತ್ತಲ್—

ಕಂ ॥ ಪರಿಹರಿಸಲ್ ಮರುಭೂತಿಗ ।
ಮರಿದಾದುದು ರಾಜಯಕ್ಷ್ಮಮನುಭವಿವೈದ್ಯಂ ॥
ಗರಿದಪ್ಪ ತೆಱದೆ ಕಮಠನೊ ।
ಳರಸನ ಮರುಷಂ ಸಮಸ್ತದೋಷ ಪ್ರಭವಂ ॥ ೧೭ ॥

ವ ॥ ಅಂತರವಿಂದಮಹಾರಾಜನುದ್ದೀಪಿತಕೋಪನಾಗಳೆ ತಳಾರನಂ ಬರಿಸಿ—

ಕಂ ॥ ಅತಿಕುಪಿತನಾಗಿಯುಂ ಕ್ಷಿತಿ ।
ಪತಿ ಯತಿಗಂ ಬ್ರಾಹ್ಮಣಂಗಮಾವುದು ಶಾಸ್ತ್ರೋ ॥
ದಿತ ದಂಡಮದನೆ ಕಮಠಂ ।
ಗೆ ತಡೆಯದೆಸಗೆಂದು ಬೆಸಸಿದಂ ನೀತಿವಿದಂ ॥ ೧೮ ॥

ವ ॥ ಅಂತು ವಸುಧೇಶಂ ಬೆಸಸೆ—

ಕಂ ॥ ಮರುಭೂತಿಯ ಕೂರ್ಪಿಂಗೋ ।
ಸರಿಸಿಯೆ ಕಮಠಂಗದೇನುಮಂ ಮಾಡದೆ ಪಲ್ ॥
ಮೊರೆವವನರಸನ ನಿಯಮವ ।
ನೆರಡಿಲ್ಲದೆ ಪಡೆದು ತಡೆಯಲೇನಱಿದಪನೇ ॥ ೧೯ ॥

ವ ॥ ಅಂತು ಪಲವು ದೆವಸದಿಂದುದ್ದಂಡನಂ ದಂಡಿಸಲ್ ಪಡೆದೆನೆಂದು ಸಮನಾಂತು—

ಕಂ ॥ ಪುಟ್ಟಿದ ಮುಳಿಸಿಂದಂ ಚೌ ।
ವಟ್ಟದೆಡೆಗೆ ತಂದು ಕಟ್ಟಿ ಕುಟ್ಟುವೆನೆನುತಂ ॥
ನಿಟ್ಟಿಸಿ ಕಂಡನವಂ ಚೌ ।
ವಟ್ಟದ ತೆಂಟೆಯೊಳೆ ನಿಂದು ಜೂಜಾಡುವನಂ ॥ ೨೦ ॥

ವ ॥ ಅಂತು ನೀಡುಂ ಜೂಜಾಡುವ ಕಮಠನಂ ಕಂಡು ತನ್ನಂತರಂಗದೊಳಿಂತೆಂದಂ—

ಕಂ ॥ ನಿಯಮಮನೀವನ ಸಂಗಂ ।
ನಿಯತಂ ಶಿಕ್ಷಿಸಲೆವೇಡಿದೆನಗಂ ಮನದೊಳ್ ॥
ದಯೆ ಪುಟ್ಟುವಂತೆ ನೆಗಟ್ದನೆ ।
ನಯಹೀನಂ ಮೆಚ್ಚಿದಂದದಿಂದಂ ನೆಗಟ್ದಂ ॥ ೨೧ ॥

ವ ॥ ಆದೊಡಮೊದುರಾಚಾರಪರಿಣತಂ ಮರುಭೂತಿಯ ಮನೆಯೊಳಿರದೀಯೆಡೆಯೊಳಿರ್ದನಾಯಾಸಮಂ ಮಾಡಿದನಲ್ಲದಂದಕ್ಷುಣ್ಣ ಗುಣನಿಧಿಯ ದಾಕ್ಷಿಣ್ಯಮನೆಂತುಂ ಮೀಱಲ್ಬಾರದೆಂದಾ ಕ್ರೂರಾತ್ಮನಂ ತನ್ನ ಚಿತ್ತದೊಳ್ ಬಗೆಯುತ್ತಮೆಯ್ದೆವಂದು—

ಕಂ ॥ ನೃಪನೀಯೆ ನಿಯಮಮಂ ದಂ ।
ಡಪಾಶಿಕಂ ಕಟ್ಟಿ ಕುಟ್ಟಿ ಕಮಠನನವನಂ ॥
ತಪಮಾನವನೆಯ್ದಿಸಿ ತ ।
ನ್ನ ಪೆಸರನನ್ವರ್ಥಮೆನಿಸಿದಂ ಜನದಿಂದಂ ॥ ೨೨ ॥

ವ ॥ ಅನಿತರ್ಕ್ಕಲ್ಲಿ ನೆರೆದು ಜೂದಾಡುತ್ತಿರ್ದ ಧೂರ್ತಜನಂಗಳೆಲ್ಲಂ ತಮತಮಗೆ ಕಮಠಂಗನಯಪರಂಗೆ ಮುನಿದು—

ಕಂ ॥ ವನಮಂ ಸುಡುವಗ್ನಿಗೆ ವಾ ।
ಯು ನಂಟನದೆ ದೀಪನಾಶಮಂ ಮಾಡುವವೋಲ್ ॥
ಘನತೇಜಂ ಕಿಡೆ ಕಮಠಂ ।
ಗನುಕೂಲಜನಾಳಿಯಾಯ್ತು ತಾಂ ಪ್ರತಿಕೂಲಂ ॥ ೨೩ ॥

ವ ॥ ಅಂತವನನರ್ಥಶ್ರೀಯುಪರಸಂಧ್ಯಾಶ್ರೀಯುಂದದಿಂ ದೋಷಾಭಿವೃದ್ಧಿಗೆ ಕಾರಣಮಾಗಿ ಪಾಱಿಪೋಗೆ ರಾಗಿಜನಂಗಳೊಂದಾಗಿಯುದ್ದಂಡನ ಮಂಡೆಯನೇಱಬಟ್ಟೆಗಳೆದು ಸಗಣದಿನಿಡಿಸುತ್ತಂ—

ಕಂ ॥ ಕುಂದಾಗೆ ಗುಣಕೆ ಕಾವದೊ ।
ಳೊಂದಿರೆ ಗೋಧರ್ಮಮಿರದೆ ಕೆರಹಂ ಸೊರೆಯಂ ॥
ತಂದೈಚಂಡಿಕೆಯೊಳ್ ತರ ।
ದಿಂದಮವಂಗುಚಿತಮೆನಿಸಿ ಕಟ್ಟಿದರರೆಬರ್ ॥ ೨೪ ॥

ವ ॥ ಅಂತು ಕಟ್ಟಿ ಮಿಟ್ಟಿಯ ಬೂತುಗಳಿನಾತನ ಮಂಡೆಯನಣೆಯಿಸುತ್ತಂ—

ಕಂ ॥ ಮತ್ತಗಜಮೇಱಿ ಬೆಳ್ಗೊಡೆ ।
ಯೆತ್ತಿಸಿ ಬರುತಿರ್ಪ ಬೀದಿಯೊಳ್ ಕತ್ತೆಯನು ॥
ದ್ವೃತ್ತನನೇಱಿಸಿ ಪಱಿಮೊರ ।
ನೆತ್ತಿಸಿ ಜೀಯೆಂಬ ಜನಮೆ ಚೀಯೆನೆ ತಂದರ್ ॥ ೨೫ ॥

ಕಿಱಿದೆಡೆಯಯಶದ ಭವದಿಂ ।
ಕರಟಾದವೊಲಣೆಯೆ ಬುಗುಟು ನೆಗೆದೆಡೆ ಶಿರದೊಳ್ ॥
ತರದಿಂದೆ ದಡ್ಡ ನೆಗೆದಂ ।
ತಿರೆ ಪಿರಿದಪಮಾನಮೆಯ್ದಿದಂ ದುಶ್ಚರಿತಂ ॥ ೨೬ ॥

ಎಟ್ಟಿನೊಳೆಣೆಯೆನಿಸಿವನ ನೆ ।
ಗಟ್ಟೆಯಿದಂ ನೆಱಿಯೆ ಗೆಲ್ದುದೆಂದಱಿವುವವೋಲ್ ॥
ಕಟ್ಟೆಯನೇಱಿಸಿಯಂತಾ ।
ಪೊಟ್ಟರೊಳೀತಂಗಿದುಚಿತಮೆಂದರ್ ಕೆಲಬರ್ ॥ ೨೭ ॥

ಪಱಿಮೊರನಂ ಪಿಡಿಯಿಸೆ ಮುಂ ।
ದಱಿಯದಿವಂ ತನ್ನ ವಂಶದೌನ್ನತ್ಯಮನೀ ॥
ತೆಱದಿಂ ನೆಱೆ ಕಿಡಿಸಿದನೆಂ ।
ದಱಿವುವ ತೆಱದಿಂದಮಿರ್ದುದಱಿವರ ಬಗೆಯೊಳ್ ॥ ೨೮ ॥

ಬಿಡದಯಶಮೆಂಬ ಕಸದೊಂ ।
ದೆಡೆಯಿವನೆಂದಱಿವುವಂದದಿಂ ಸಗಣದಿನಾ ॥
ದಿರ್ಡುತಂ ಧೂರ್ತನ ಮಂಡೆಯ ।
ನಡೆಯುತ್ತಂ ಪೊಗಟ್ಟಿ ವಂದಿಗಳ್ ತೆಗಳುತ್ತಂ ॥ ೨೯ ॥

ವ ॥ ಬೆಂಬೆನ್ನೊಳ್ ಬರೆ ತನ್ನ ನಾಡುನಿಯೊಳೀ ಖಳಂ ಮಱಿವಾಟ್ಟನ್ಯಾಯವರ್ತಿಯೆಂದು ಡಂಗುರಂಬೊಯ್ಸುತ್ತಂ ನಾಡಿಂದಮೆತ್ತಿಕಳೆವುದುಮಾಗಳ್ ಕೆಲರಿಂತೆಂದರ್ —

ಕಂ ॥ ಆ ತಂದೆಗೆ ಪುಟ್ಟಿಯುಮಿೂ ।
ಖ್ಯಾತನ ಮರುಭೂತಿಯೊಡನೆ ಪುಟ್ಟಿಯುಮಿವನಿಂ ॥
ತೀತೆಱದವಸ್ಥೆವಡೆದನ ।
ನೀತಿಪರಂಗಿನಿತಱಿಂದಮುಗ್ಗಳಮುಕ್ಕುಂ ॥ ೩೦ ॥

ಕಂ ॥ ಗುಣಹೀನನೆನಿಪ ಕಮಠನ ।
ಪಣಮುಂ ಕುಲಮುಂ ಮಹೋನ್ನತಿಯನಿಂತೇಕ ॥
ಕ್ಷಣಮಿರಿಸಲಾರವದಱಿಂ ।
ಗುಣಮೆ ಮಹೋನ್ನತಿಗೆ ಕಾರಣಂ ಪೆಱತುಂಟೇ ॥ ೩೧ ॥

ಪಲರಂ ಬಾಧಿಪ ಪುಲಿಯಂ ।
ಕೊಲೆ ಸಂತಸಮಪ್ಪ ತೆಱದೆ ಕಮಠನನನಯಾ ॥
ಕಲಿತನನರಸಂ ದಂಡಿಸೆ ।
ತಲೆದೋರಿದುದಖಿಳ ಪುರಜನಕ್ಕನುರಾಗಂ ॥ ೩೨ ॥

ಪರದಾರಗಮನಪರರೆನಿ ।
ಪರದಾರಮನಕ್ಕೆ ಪರ್ವರದಱಿಂದವನಂ ॥
ಕರಮೆ ಪರಿಭವಿಸೆ ವಿಬುಧೋ ।
ತ್ಕರಮೆ ಸುಖಂ ಪಡೆದುದುೞಿದವರ್ ಪಡೆಯದರಾರ್ ॥ ೩೩ ॥

ವ ॥ ಅಂತು ಪರಿಭವಿಸಿ ಪುರದಿಂ ಪೊಱಮಡಿಸಿ ಕಳೆಯೆ—

ಕಂ ॥ ಭೂತಾದ್ರಿಗೆ ಶೋಭಾಪರಿ ।
ಭೂತಾದ್ರಿಗೆ ಚಂದ್ರಕಾಂತ ನಿರ್ಮಳ ಜಳಸಂ ॥
ಭೂತಾದ್ರಿಗೆ ರತಿ ಚೇತೋ ।
ಭೂತ ಕ್ರೀಡಾದ್ರಿಗದ್ರಿಗಳ್ ಸಮನೊಳವೇ ॥ ೩೪ ॥

ವ ॥ ಅಂತಾ ರಾಜಧಾನಿಗೆ ದಶಯೋಜನದೊಳ್ ವಿರಾಜಿಸುತಿರ್ಪ—

ಉ ॥ ಭೂತನಗಕ್ಕೆ ಪೋಗಿ ಪರಿಭೂತನನಕ್ಷರಕುಕ್ಷಿಯಂ ಜಟಾ ।
ವ್ರಾತಸಮಗ್ರ ಭಾರವಹಗರ್ದಭನಂ ದೃಢ ಕಿಲ್ಬಿಷಾಭನಂ ॥
ಭೌತಿಕನಂ ಕರಂ ವರದನಂ ಕಮಠಂ ಶಠನೆಯ್ದಿಪೊರ್ದಿ ನಿ ।
ನ್ನೀತಪಮಂ ಕುಡೆಂದೊಡಪನೀತಿಯಿನಾತನುಮೆಂದು ಪೇೞ್ವಿರೊಳ್ ॥ ೩೫ ॥

ಕಂ ॥ ತಡೆಯದೆ ಮುಂತಿಱಿದ ಶಿರಂ ।
ಜಡೆಗಟ್ಟಲ್ ಬಾರದೆಂದು ಬೋಳಿಸಿ ಬೋದಂ ॥
ಕುಡೆ ಕೊಂಡನವಂ ತಪಮಂ ।
ಗೆಡೆಗೊಂಡಿರೆ ದಂಡು ಬೂದಿ ಸೊರೆ ರುದ್ರಾಕ್ಷಂ ॥ ೩೬ ॥

ನಿರವಿಸಿದುದಸೇವ್ಯತೆಯಂ ।
ಸೊರೆ ಭಸ್ಮಂ ಸ್ವಪದವೃತ್ತಿಯಂ ದಂಡುವಿನಿ ॥
ಷ್ಠುರದಂಡದಂತೆಯುಂತಾಂ ।
ಧರಿಯಿಸೆ ರೌದ್ರಾಕ್ಷನೆಂಬುದಂ ರುದ್ರಾಕ್ಷಂ ॥ ೩೭ ॥

ವ ॥ ಅಂತಾ ದುರಾಚಾರಂ ದುರಾಚರಣಕ್ಕೆ ಬೆರಲೆತ್ತುವಂತೂರ್ಧ್ವಬಾಹುವಾಗಿ ತಪಮಂ ಮಾಡುತ್ತಮಿರ್ದನಿತ್ತಲ್—

ಕ ॥ ಆಳೋಚಿಸಿ ನರಪತಿ ದು ।
ಶ್ಶೀಳನನಱಿದೆತ್ತ ಕಳೆಯೆ ನೆನೆದಗ್ರಜನಂ ॥
ಮೇಳಿಸಿದ ಮೋಹದಿಂ ಕರ ।
ಮೇಳಿಸಿದಂ ಕೂಳನಿರದೆ ನಿದ್ದೆಯ ದೆಸೆಯಂ ॥ ೩೮ ॥

ವ ॥ ಅಂತು ನಿಜಾಗ್ರಜಂ ಪೋದ ದೆಸೆಯನಱಿಯದೆ ದೆಸೆಗೆಟ್ಟ ಪುಲ್ಲೆಯಂತೆ ಚಿಂತಿಸುತಿರ್ಪನ್ನೆಗಮಾತಂಗೆ ಯಮದೂತಂ ಬರ್ಪಂತದೋರ್ವಂ ವ್ಯಾಧನಿದಿರಿಂಗೆ ಬಂದು ನಿಮ್ಮಗ್ರಭವನುಗ್ರವ್ಯಾಘ್ರ ತಿಕ್ಷ್ಣತರಕ್ಷು ಕ್ರೂರ ಕಂಠೀರವ ಚಂಡಭೇರುಂಡ ಪರುಷತರ ಶರಭ ರಭಸಾತಿಗಹನ ಗಹನಪರೀತ ಭೂತಶೈಳದ ಸಮೀಪದ ತಾಪಸಾಶ್ರಮದೊಳ್ ತಾಪಸನಾಗಿರ್ದನಂ ಕಂಡೆಮೆಂದೊಡಾನಂದಮಂದಿರ ಹೃದಯನರವಿಂದ ಮಹಾರಾಜನ ರಾಜಮಂದಿರಕೆ ವಂದು—

ಉ ॥ ದೇವ ದಯಾಳು ನೀನೆ ವಲಮಲ್ಲದೊಡುಗ್ರಮದಗ್ರಜನ್ಮನು ।
ದ್ದೀವತೆಗಾರೊ ಸೂಕ್ತವಿಧಿಯಂ ನೆಱಿಮಾಡದೆ ಮನ್ನಿಪನ್ನರು ॥
ವೀರವರರೆಂಬಿದಂ ಬಗೆದು ನಿರ್ಭಯನಾಗಿಯೆ ಬಿನ್ನನಿಪ್ಪೆನೊ ।
ಲ್ದೀವುದದಾಗದೆನ್ನದೆನಿಯಾಮಮನಪ್ರತಿಮಪ್ರಭಾವ ನೀಂ ॥ ೩೯ ॥

ವ ॥ ಎಂದು ನುಡಿದ ನಿಜಸಚಿವನ ವಚನವನವಧಾರಿಸಿ—

ಕಂ ॥ ಏನೆನೆ ಮದಗ್ರಭವನವ ।
ಮಾನಾನಳ ದಗ್ಧನೆಂಬುದಂ ಭೌತಿಕನೆಂ ॥
ಬೀನೆವದಿಂದಱಿಪುತ್ತಂ ।
ತಾನಿರ್ದಂ ಭೂತನಗದೊಳೆಂದೆನಗೀಗಳ್ ॥ ೪೦ ॥

ಮಾನವನೊರ್ವಂ ಬಂದವ ।
ಮಾನಮನೆಯ್ದಿದನ ವಾರ್ತೆಯಂ ಪೇೞ್ದಿನದ ॥
ಕ್ಕಾನಲ್ಲಿಗೆ ಪೋಗಿ ಮನೋ ।
ಗ್ಲಾನಿಯನಪಹರಿಪೆನುಚಿತವಚನಾಮೃತದಿಂ ॥ ೪೧ ॥

ವ ॥ ಎಂದೊಡರವಿಂದ ಮಹಾರಾಜಂ ಮುಗುಳ್ನಗೆ ನಗುತ್ತಮಿಂತೆಂದಂ—

ಕಂ ॥ ಮನೆಯೊಳಗಣ ಪಾವಂ ನೆ ।
ಟ್ಟನೆ ಕಳೆವಂತವನನೆತ್ತಿ ಕಳೆದಡೆ ನಿಮಗೇ ॥
ಕಿನಿತೊಂದು ಖೇದಮಾ ದು ।
ರ್ಜನನಿರೆ ಕೇಡಲ್ಲದೊಳ್ಳಿತೇನಾದಪುದೇ ॥ ೪೨ ॥

ಅವನನಪನೀತಿಭವನನ ।
ನವಿವೇಕದೆ ಪೋದ ಪಡಣಮಂ ತಲೆವಿಡಿವಂ ॥
ತೆವೊಲಱಸಿ ಪೋಪುದಿದು ಮಿ ।
ೞ್ತುವನಱಸಿಯೆ ಪೋಪ ತೆಱನನಱಿಪುಗುಮಲ್ತೇ ॥ ೪೩ ॥

ಕಂ ॥ ಮತಿಗೆಟ್ಟವನಿರ್ದೆಡೆಗಱಿ ।
ಸಿ ತಿಂಬ ದೈವಕ್ಕೆ ಪೋಗಿ ಪಾಲಂಬಿಡುವಂ ॥
ತತಿ ಮೋಹದಿಂದೆ ಪೋದಡೆ ।
ಗತಿ ಕೆಡುಗುಂ ಪ್ರಾಣಬಾಧೆಯಕ್ಕುಮಮೋಘಂ ॥ ೪೪ ॥

ಒಡೆತನಮನಿತ್ತು ಹರ್ಷಮ ।
ನೊಡರಿಸಿ ಮುಂ ಪಡೆದ ಲೇಸದೇಂ ಪರಿಭವದಿಂ ॥
ಕಡುಮುಳಿಸು ತೊಡರ್ದ ಜಡನಿ ।
ರ್ದೆಡೆಗಳ್ಕದೆ ಪೋಗಿ ಪಡೆವುದೇನೆಮಗಱಿಪೈ ॥ ೪೫ ॥

ನೀತಿವಿದರ್ ನಿಮ್ಮಂದಿಗ ।
ರೀ ತೆಱದಿಂ ನುಡಿವುದಪನಯಮಂ ಮಗುೞ್ದಿನ್ನೀ ॥
ಮಾತಂ ನುಡಿಯದಿರಿಂ ಪರಿ ।
ಭೂತನವಂಗನಿತಪಾಯಮಂ ಚಿಂತಿಸುಗುಂ ॥ ೪೬ ॥

ಕೆಳೆಯುಂ ಪಗೆಯುಂ ದುರ್ಜನ ।
ನೊಳನುತ್ತಮಂ ನೋಡೆ ದಲ್ ಶುನಕಂ ಕೂರ್ತುಂ ॥
ಮುಳಿದುಮಪಕಾರಮಂ ಮೊ ।
ಕ್ಕಳಮಾಗಿರೆ ನೆಕ್ಕಿ ಕರ್ಚಿ ಮಾಡದುದುಂಟೇ ॥ ೪೭ ॥

ವ ॥ ಅದು ಕಾರಣದಿನಾದುರಾತ್ಮನೆಂತುಂ ಪರಿಹರಣೀಯನಲ್ಲದೆ ಸ್ವೀಕರಣೀಯನಲ್ಲೆಂದು ಮಱುಮಾತು ಪುಟ್ಟದಂತು ಮುಟ್ಟೆ ಮೂದಲಿಸಿ ಪಲತೆಱದಿಂ ನಯಮಂ ಕಲಿಸಿ ಕಳಿಪೆ ಮನಮಲ್ಲದ ಮನದಿಂ ಮನೆಗೆವಂದು—

ಮ ॥ ಅತಿಮೋಹಂ ಗತಿಯುಂ ಕರಂ ಕಿಡಿಕುಮೆಂಬೀ ಮಾತು ಕೈಗೂಡೆ ಸ ।
ನ್ಮತಿಹೀನಂ ಮರುಭೂತಿಯಗ್ರಭವನೊಳ್ ಮೆಯ್ವೆತ್ತ ದುರ್ಮೋಹ ಸಂ ॥
ಗತಿಯಿಂ ಮುಂದಣ ಜನ್ಮದೊಳ್ ಜನಿಯಿಪಾ ಹಸ್ತಿತ್ವದಿಂ ಮುನ್ನೆ ಮೂ ।
ರ್ಖತೆ ಬಂದಿರ್ದವೊಲಣ್ಣನಂ ತಿರಿಪಿ ತಪ್ಪುದ್ಯೋಗಮಂ ತಾಳ್ದಿದಂ ॥ ೪೮ ॥

ಕಂ ॥ ಆಸನ್ನ ಮೃತ್ಯುಗನಯುಮೆ ।
ಲೇಸಾಗಿಯೆ ತೋರ್ಪುದಕ್ಕುಮಲ್ಲದೊಡೆ ಗುಣಾ ॥
ವಾಸಂ ಪತಿಪೇೞ್ದುದನಂ ।
ತಾ ಸಚಿವಂ ಮಱೆದಕಾರ್ಯದೊಳ್ ವರ್ತಿಪನೇ ॥ ೪೯ ॥

ವ ॥ ಅಂತು ತಿರಿಪಿತಪ್ಪುಪಾಯಮಪ್ಪ ಬಗೆಯನೆ ಬಗೆದು—

ಚಂ ॥ ಅಳಲಿರದಗ್ರಜಾತನ ವಿಯೋಗದೊಳಾಗೆ ಮನಕ್ಕೆ ಮೊಕ್ಕಳಂ ।
ಪಳುಗಳಿದಿರ್ದ ತನ್ನ ಸಿರಿಯಂ ಮರುಭೂತಿ ಬಿಸುಟ್ಟು ಕಟ್ಟಿದಂ ॥
ಕಳಿವವನಾವನೆಂಬಿನೆಗಮೊರ್ವನೆ ಕಪ್ಪಟಮುಟ್ಟು ನಟ್ಟಿರುಳ್ ।
ಘುಳಿಲೆನೆಯೆರ್ದು ಪೋಗಿ ಪರಿದೆಯ್ದಿದನಾಗಳೆ ಭೂತ ಶೈಳಮಂ ॥ ೫೦ ॥

ಕಂ ॥ ವಸುವಿರಹಿತನಂಬರವಂ ।
ಬಿಸುಟೆಯ್ದಿದನಾತ್ಮ ಬಂಧುಚಕ್ರದೊಳಗಲ ॥
ರ್ವಸೆಯುಸ್ತಸಮಯ ರವಿಯಂ ।
ತೆ ಸಚಿವನಾ ನಗಮನಪರಶೋಭಾಪರಮಂ ॥ ೫೧ ॥

ವ ॥ ಅಂತಾ ಗಿರೀಂದ್ರಮನೆಯ್ದೆವಂದು ತಾಪಸರೂಪಮಂ ಸ್ವೀಕರಿಸಿದ ಸಹೋದರನ ವಿಳೋಕನದಿಂ ಶೋಕೋದ್ರೇಕಮಾಗೆ ಮನ್ಯು ಮಿಕ್ಕಾ ಕಮಠಂಗೆ—

ಕಂ ॥ ನೀನಲ್ಲದೊಡೆನಗೇವುದೊ ।
ಭೂನಾಯಕನಿತ್ತಮಾತ್ಯಪದಮದಱಿಂದಂ ॥
ನೀನಾದುದನಪ್ಪಂ ಪೇಱ ।
ತೇನಗ್ರಜ ನಿನ್ನದೊಂದು ಲೋಕಮೆ ಲೋಕಂ ॥ ೫೨ ॥

ವ ॥ ಎಂದು ಮರುಭೂತಿ ಬಂದು ಕಾಲ್ಗೆಱಗೆ—

ಕಂ ॥ ಅಲ್ಲಿ ಪರಿಭವವಮನೆನಗಳ ।
ವಲ್ಲದುದಂ ತನ್ನ ನೃಪತಿಯಿಂ ಮಾಡಿಸಿ ಮ ॥
ತ್ತಿಲ್ಲಿಗಮಱಿಪಲ್ ಬಂದಂ ।
ನಿಲ್ಲದಿವಂ ಧೂರ್ತನೆಂದು ಮುಳಿಸಂ ತಳೆದಂ ॥ ೫೩ ॥

ಅಂತು ಮುಳಿದುಗ್ರತಪದಿಂ ।
ದಂ ತನಗಾಯ್ತುಗ್ರವೃತ್ತಿಯೆನೆ ಕಿಡಿಕಣ್ಣಿಂ ॥
ದಂತರದೆ ಸೂಸುತಂ ಭ ।
ಸ್ಮಾಂತರಿತ ಹುತಾಶನಂಬೊಲಿರ್ದಂ ಗೊರವಂ ॥ ೫೪ ॥

ಕೊಲ್ವ ಮುಳಿಸುಳ್ಳನಿನ್ನೇ ।
ಕೊಲ್ವನವಂ ಕ್ಷಮೆಯನೆನಿಸಿ ತಾಪಸಪಾಶಂ ॥
ಕಲ್ವೊತ್ತು ನಿಂದ ಕಮಠಂ ।
ಕಾಲ್ವಿಡಿದನ ತಲೆಯೊಳಿಕ್ಕಿದಂ ಸೆಲೆಯುನದಂ ॥ ೫೫ ॥

ವ ॥ ಅಂತು ಪೊಡೆವಡಲ್ ಪೋಗೆ ದೇಗುಲಂ ಮೇಲೆಗೆಡೆದುದೆಂಬ ನುಡಿ ನನ್ನಿಯಾಗೆ ತನ್ನ ತಲೆವೊಡೆಯಾಗಿರ್ದ ತಪಮನೊಡೆಯಿಕ್ಕುವಂತೆ—

ಕಂ ॥ ಪಾತಕನಿಕ್ಕಿದ ದೃಷದಭಿ ।
ಘಾತದೆ ನಿರ್ಘಾತಘಾತದಿಂ ಗಿರಿಶಿಖರಂ ॥
ಮಾತೇನೊಡೆವಂದದೆ ಮರು ।
ಭೂತಿಯ ತಲೆಯೊಡೆದು ನುಚ್ಚುನೂಱಾಯ್ತಾಗಳ್ ॥ ೫೬ ॥

ವ ॥ ಅಂತಾರ್ತಧ್ಯಾನಾಧೀನಮಾನಸಂ ಪ್ರಾಣಪರಿತ್ಯಾಗಂ ಮಾಡಿ—

ಮ ॥ ಧರಣೀಮಂಡನಮೊಪ್ಪುಗುಂ ಮಳಯದೇಶಂ ತನ್ಮಹೀಶ್ರೀಗೆ ಕುಂ ।
ಜರಶೈಳಂ ತೊಡವಂತದಕ್ಕೆ ತಿಳಕಂ ವೇಗಾವತೀಸಿಂಧುವಾ ॥
ಯೆರಡಕ್ಕಂ ಸಿರಿಸಲ್ಲಕೀಘನವನಂ ತನ್ನಂದನಕ್ಕಾದುದಾ ।
ಭರಣಂ ಬಬ್ಬುರಿ ತತ್ತ್ರಿಯಂ ಪೃಥುವಿಘೋಷಾಖ್ಯಾನ ಗಂಧದ್ವಿಪಂ ॥ ೫೭ ॥

ಕಂ ॥ ದೊರೆವೆತ್ತಾ ಕರಿಣಿಗಮಾ ।
ಕರಿಪತಿತಾಂ ವಜ್ರಘೋಷಮೆಂಬೀ ಪೆಸರಂ ॥
ಧರಿಯಿಸಿ ವಿವೇಕವಿರಹಿತ ।
ಚರಿತಂ ಮರುಭೂತಿ ಗಂಧ ಸಿಂಧುರಮಾದಂ ॥ ೫೮ ॥

ವ ॥ ಅಂತು ಮರುಭೂತಿ ವಜ್ರಘೋಷಮೆಂಬ ನಾಗಮಾಗಿ ಪುಟ್ಟಿ ಬಳೆಯುತ್ತ ಮಿರ್ದನತ್ತಲಾ ಭೂತಪರ್ವತದ—

ಕಂ ॥ ತಾಪಸರೆಲ್ಲರುಮನಘನ ।
ರೂಪನ ನಿಸ್ತ್ರಿಂಶವೃತ್ತಿಯಂ ಕಂಡನುಜಂ ॥
ಗಾಪತ್ತಂ ಮಾಡುವವಂ ।
ಕೋಪಿಸಿದೊಡೆ ನಮಗಮೊಖಳಂ ಮಾಡದುದೇಂ ॥ ೫೯ ॥

ನಯಯುಕ್ತರಗ್ನಿವತ್ಸಾ ।
ಶ್ರಯಮೇವ ದಹಂತಿ ದುರ್ಜನಾ ಎಂಬುದನಾ ॥
ರಯದಿರಿಸಿದಂದು ನಮ್ಮ ।
ನ್ವಯಕಂ ಕೇಡಕ್ಕುಮಿವನನೀಗಳೆ ಕಳೆವೊಂ ॥ ೬೦ ॥

ವ ॥ ಎಂದು ತಮ್ಮೊಳಗಾಳೋಚಿಸಿಯಾಕ್ರೂರಕರ್ಮನಪ್ಪ ಕಮಠನನವರು ಮಾರ್ದೆತ್ತಿ ಕಳೆಯೆ—

ಮ ॥ ಜಗತೀ ವಿಶ್ರುತ ದೇವಸಿಂಧು ಹಿಮವಚ್ಛೈಳಾಗ್ರದೊಳ್ ಪುಟ್ಟಿಯುಂ ।
ಪುಗುವಂತಾದಮಸೇವ್ಯಮಾದ ಲವಣಾಂಭೋರಾಶಿಯಂ ಪೊಕ್ಕನಾ ॥
ಕುಗತಿ ಪ್ರಾಪ್ತನೆನಿಪ್ಪನುತ್ತಮಕುಲ ಪ್ರೋದ್ಭೂತನಾಗಿರ್ದಡಂ ।
ಪುಗುಗುಂ ನೀಚರನೆಂಬಿನಂ ಕಮಠನುದ್ಯತ್ಕ್ರೋಧರಂ ವ್ಯಾಧರಂ ॥ ೬೧ ॥

ವ ॥ ಅಂತು ಬೇವಿನಮರನಂ ಕೈಪೆಸೊರೆ ಪೊರ್ದುವಂತೆ—

ನಿಜಾಚಾರಂ ನಿಜಾಚಾರರಪ್ಪ ।
× × × × × × ॥
× × × × × × ।
× × × × × × ॥ ೬೨ ॥

ಚಂ ॥ ಶಬರರೊಳೊಂದಿವೂರನಿರಿವಲ್ಲಿ ನಿಶಾತ ಶತಾಸ್ತ್ರಘಾತದಿಂ ।
ದವಿರಳ ರಕ್ತಧಾರೆ ನಿಜಕೋಪದವೋಲ್ ಪೊರಪೊಣ್ಮೆ ಜೀವನಂ ॥
ತವುತರೆ ಪಾಪಕರ್ಮ ಕಮಠಂ ಗಜಭೂಷಣ ವಜ್ರಘೋಷನು ।
ದ್ಭವಿಸಿದ ಸಲ್ಲಕೀವನದೊಳಾದನವಂ ವಿಷಕುಕ್ಕುಟೋರಗಂ ॥ ೬೩ ॥

ವ ॥ ಅಂತು ಮರುಭೂತಿಯುಂ ಕಮಠನುಂ ವಾರಣಮುಂ ಕುಕ್ಕುಟೋರಗನು
ಮಾಗಿ ಬಳೆಯುತ್ತಮಿರ್ಪುದುಮಿತ್ತಲ್—

ಮ ॥ ಕಿಱಿಯಂ ಭಂಗಿಸೆ ಸಿಂಗಮನ್ಯಮೃಗಮಿಲ್ಲಂ ಭೀತಿಗೊಳ್ವಂತೆ ಸಂ ।
ಗರದೊಳ್ ಭಂಗಿಸೆ ವಜ್ರವೀರನೃಪನಂ ಮೇಲಾದರುಳ್ಳಳ್ಕಿ ಭೂ ॥
ವರರಾತ್ಮೀಯ ಪದಾರವಿಂದಮನೆ ಬಂದಾರಾಧಿಸುತ್ತಿರ್ಪಿನಂ ।
ತರವಿಂದಾ ಮಹರಾಜನಾಂತನವನೀ ಸಂಪೂಜ್ಯ ಸಾಮ್ರಾಜ್ಯಮಂ ॥ ೬೪ ॥

ಉಪೇಂದ್ರವಜ್ರಂ ॥ ನಿರಂತರ ಶ್ರೀ ಹೃದಯಾರವಿಂದಂ ।
ಸರಸ್ವತೀ ಚಾರುಮುಖಾರವಿಂದಂ ॥
ನರೇಶ್ವರಾರಾಧ್ಯ ಪದಾರವಿಂದಂ ।
ವಿರಾಜಿಸಿರ್ದಂ ವಿನುತಾರವಿಂದಂ ॥ ೬೫ ॥

ವ ॥ ಅಂತು ಸಮಸ್ತ ಧಾತ್ರಿಯನೇಕಚ್ಛತ್ರಮಂ ಮಾಡಿಯಾಕ್ಷತ್ರಿಯ ಪವಿತ್ರಂ
ಪ್ರತಿಪಾಳಿಸುತ್ತಮಿರೆ—

ಚಂ ॥ ತಿಳಿಯೆ ಜಳಾಶಯಂ ತೊಳಗಿ ತೋಱೆ ದಿಗಂಬರ ರಾಜಹಂಸ ಸಂ ।
ಕುಳಮಿತರಾರ್ಥಯುಕ್ತಸಮಯಂ ಕರಮೇಳಿದಮಾಗೆ ಭವ್ಯನಿ ॥
ರ್ಮಳಮುಖ ಪುಂಡರೀಕಮಲರ್ದೊಪ್ಪೆ ಶರತ್ಸಮಯಪ್ರಭಾವಮು ।
ಜ್ವಳಿಸಿ ಜಿನೇಂದ್ರರುಂದ್ರಸಮಯಾನುಗಮಾಯ್ತು ಸಮಸ್ತ ಧಾತ್ರಿಯೊಳ್ ॥ ೬೬ ॥

ಕಂ ॥ ಜಳದಂಗಳ ಮಳಿನತೆಯಂ ।
ಕಳೆದುದು ನಿಜದಿಂದಮೆನೆ ಜಳಾಶಯ ಜಳದಾ ॥
ಮಳಿನತೆಯಂ ಕಳೆದುದಿದ ।
ತ್ಕಳಗಮೆ ಪೇೞ್ದೆನಿಸಿ ವಿಮಳವಾದುದು ಶರದಂ ॥ ೬೭ ॥

ವ ॥ ಅಂತು ತನ್ನ ಸಮುನ್ನತ ರಾಜಲಕ್ಷ್ಮಿಯಂತೆ ಸಕಳಜನಮನೋಹರಮಾಗಿರ್ದ
ಶರತ್ಸಮಯದೊಳಮರರಮಣಿಯರಂ ಪರಿಹಾಸಂ ಮಾೞ್ಪ ವಿಳಾಸಿನಿಯರ್ ಬೆರಸರವಿಂದ
ಮಹಾರಾಜಂ ದಿವಿಜರಾಜವಿಭವದಿಂ ದಿವಿಜವಿಮಾನದ ಸಿರಿಯನಧಃಕರಿಸುವುತ್ತುಂಗ
ಸಪ್ತತಳ ಪ್ರಾಸಾದ ಪರಾಂಗಣದೊಳಿರ್ದು ಶರಲ್ಲಕ್ಷ್ಮಿಯಂ ನಿರೀಕ್ಷಿಸುತ್ತಮಿರ್ಪನ್ನೆಗಂ—

ಕಂ ॥ ಜನನಾಥನ ನಯನಾನಂ ।
ದನಮಂ ಜನಿಯಿಸಿತು ಜಳದಜಂ ವಿಶದಶರ ॥
ಧ್ವನಿತೇಂದುಕಾಂತಮಣಿ ಸಂ ।
ಜನಿತ ಪ್ರಾಸಾದ ಸುರುಚಿರ ಪ್ರಾಸಾದಂ ॥ ೬೮ ॥

ವ ॥ ಅಂತುಮಲ್ಲದೆ—

ಮ ॥ ಪ್ರಕೃತಿಪ್ರೋದ್ಭವಮಲ್ತು ಜೈನರುಸಿರ್ವಂತಾರಯ್ಯೆ ಲೋಕಂ ಸಕ ।
ರ್ತೃಕಮೆಂಬಾ ಮತಮಂ ನಿರಾಕರಿಪವೋಲ್ ಪ್ರಾಸಾದಮಾಸಾದಿತಾ ॥
ಧಿಕಶೋಭಾಖಿಳಲಕ್ಷಣಂ ಜಳದಜಾತಂ ತೋಱೆ ತತ್ಸಾಮ್ಯಮಾ ।
ಗೆ ಕಳಾಸಿಂಧು ಜಿನೇಂದ್ರಮಂದಿರಮನಾದಂ ಮಾಡಿಪುದ್ಯೋಗದಿಂ ॥ ೬೯ ॥

ಕಂ ॥ ಬಟ್ಟಿಗೆವಲಗೆಯೊಳಾಗಳ್ ।
ದಿಟ್ಟಿಗೆ ನೇರ್ವಟ್ಟು ತೋಱೆ ನೆಟ್ಟನೆ ಭೂಪಂ ॥
ತಿಟ್ಟಮಿಡಲ್ ಬಗೆವುದು ವಿಧು ।
ತೊಟ್ಟನೆ ಕರಗಿದುದು ನೃಪತಿಯೆರ್ದೆ ಕರಗುವಿನಂ ॥ ೭೦ ॥

ವ ॥ ಅಂತು ಸಂಸಾರವೈಚಿತ್ರ್ಯಂ ತನ್ನ ಚಿತ್ತಭಿತ್ತಿಯೊಳ್ ತಿಟ್ಟಮಿಟ್ಟಂತು ನಿಲೆ ಬಱಿಕಮಿಂತೆಂದಂ—

ಕಂ ॥ ಪರಿಭಾವಿಸೆ ಪೀನಪಯೋ ।
ಧರಾಳಿಯಿಂ ಪೊಳೆವ ಸೌಖ್ಯಮೊ ತೆಱದಿಂದಂ ॥
ಚಿರಮಲ್ಲದೆಂದು ಪೇೞ್ವಂ ।
ತಿರೆ ಪೀನಪಯೋಧರಾಳಿ ಕರಗಿದುದಲ್ತೇ ॥ ೭೧ ॥

ವಿಭ್ರಮವತಿಯ ರಮಿಸುಗುಮ ।
ದಭ್ರವಿಳಾಸಂ ನವೀನ ಯೌವನದೊದವೀ ॥
ಶುಭ್ರಾಭ್ರವಿಭ್ರಮದವೋಲ್ ।
ವಿಭ್ರಂಶಮನೆಯ್ದದೇಂ ಕ್ಷಣಂ ನಿಂದಪುದೇ ॥ ೭೨ ॥

ಪೆಱರಾಪತ್ತಂ ಕಂಡುಂ ।
ತೊಱೆವರ್ ವಿಷಯಾಭಿಲಾಷೆಯುಂ ಸತ್ಪುರುಷರ್ ॥
ನೆಱೆ ತಮಗಾಪತ್ತಾದೊಡ ।
ಮೆಱಗುವವರ್ ವಿಷಯ ಸುಖಕದೇಂ ಸಾಸಿಗರೋ ॥ ೭೩ ॥

ಕಿವಿ ಕಣ್ ದಶನಂ ಮೊದಲಾ ।
ದವಯುವಮುಂ ಕರಗೆ ಮುಪ್ಪಿನೊಳ್ ವಿಷಯಸುಖ ॥
ಕ್ಕವಚರರಿತರರ್ ನರಪತಿ ।
ಯುವಚರ್ತಂ ಕರಗೆ ಮುಗಿಲದೇಂ ವಿಸ್ಮಯಮೋ ॥ ೭೪ ॥

ವ ॥ ಅಂತು ನಿಸ್ಸಾರಸಂಸಾರಸ್ವರೂಪವಿಶಾರದಂ ಶಾರದ ನೀರದ ಸಂಚಳಾಕಾರ ವಿಳೋಕನ ಪ್ರಭೂತ ಪರಮವೈರಾಗ್ಯ ಪರಾಯಣಂ ವಿಮಳಗುಣಾಧಾರಂ ಧವಳಾರವಿಂದ ದಂತರವಿಂದಮಹಾರಾಜನಿರ್ಪುದುಮಾ ಸಮಯದೊಳ್—

ಕಂ ॥ ವನಪಾಳಕನೋರ್ವಂ ಪಾ ।
ವನ ವನಸುರಭಿಪ್ರಸೂನ ಫಳಸಂಕುಳಮಂ ॥
ಜನಪತಿಗೋಲಗಿಸಿ ಪದಾ ।
ವನತಂ ಹಿತಸಮಧಿಕೋಕ್ತಿವಿದನಿಂತೆಂದಂ ॥ ೭೫ ॥

ಉ ॥ ಶ್ರೀ ನರಪಾಳ ನಿನ್ನತುಳಪುಣ್ಯದಿನಪ್ರತಿಮರ್ ಸ್ವಯಂಪ್ರಭಾ ।
ಖ್ಯಾನ ಮುನೀಶ್ವರರ್ ವಿಮಳಿನಾವಧಿಬೋಧ ವಿಲೋಚನರ್ ನವೋ ॥
ದ್ಯಾನ ವನಕ್ಕೆ ವಂದು ನೆಲಸಿರ್ದರೆನುತ್ತಿರೆ ಬೇಗದಿಂ ನಿಜಾ ।
ಸೀನ ಗಜಾರಿವಿಷ್ಟರದಿನೆರ್ದವರಿರ್ದೆಡೆಯತ್ತಲರ್ತಿಯಿಂ ॥ ೭೬ ॥

ವ ॥ ಸಪ್ತ ಪರಮಸ್ಥಾನಮಂ ಪೊರ್ದುವುದರ್ಕೀವುದೇ ಕಾರಣಂಗಳೆಂದು—

ಕಂ ॥ ಕೇಳೇಱಿಡಿಯಂ ಧಾತ್ರೀ ।
ಪಾಳಂ ನಡೆದೆಱಗಿ ಮುನಿಗೆ ನಿರ್ಮಳಗುಣ ಭೂ ॥
ಷಾಳಿಗಳನೆ ಧರಿಯಿಸಿ ವನ ।
ಪಾಳಂಗಿತ್ತಂ ನಿಜಾಂಗಚಿತ್ತಮನಾಗಳ್ ॥ ೭೭ ॥

ತಾನಱಿಸಿ ಪೋಗಲಿರ್ಪ ನಿ ।
ಧಾನಮೆ ತನಗಿದಿರ್ಗೆ ವಂದುದೆಂಬುತ್ಸವದಿಂ ॥
ದಾನಂದಭೇರಿಯಂ ಭ ।
ವ್ಯಾನಂದಂ ನೆಗೞೆ ಪೊಯ್ಸಿದಂ ವಸುಧೇಶಂ ॥ ೭೮ ॥

ಲಬ್ಧಿವಶದಿಂದೆ ಸಂಸಾ ।
ರಾಬ್ಧಿಯನಾನೀಸಲೆಂದು ಬಗೆದಾಕೆ ಸಮಾ ॥
ರಬ್ಧಮನೆ ತೀರ್ಚಲೆಂದು ಗು ।
ಣಾಬ್ಧಿಗಳಾಯಾನಪಾತ್ರದಂತೇ ಬಂದರ್ ॥ ೭೯ ॥

ಉ ॥ ಎಂದು ನರೇಂದ್ರನಿಂದ್ರನ ವಿಳಾಸಮನೇಳಿಪ ಲೀಲೆಯಂದಮಂ ।
ಪೊಂದಿ ಸಮಸ್ತಧಾರ್ಮಿಕ ಜನಂ ಬೆರಸಾ ಮುನಿಪಾದ ಸೇವೆಯೊಳ್ ॥
ಸಂದಿರೆ ಚಿತ್ತವೃತ್ತಿ ಶುಕಕೋಕಿಳ ಭೃಂಗಕಳಸ್ವನಂಗಳಿಂ ।
ಕುಂದದ ಶೋಭೆಯಂ ತಳೆದ ನಂದನಮಂ ಮುದದಿಂದಮೆಯ್ದಿದಂ ॥ ೮೦ ॥

ವ ॥ ಅಂತೆಯ್ದೆವಂದ ಮುನೀಂದ್ರನ ಬರವಿಂ ತನ್ನ ಜನ್ಮದಂದದಿಂ ಸಫಳಮಾದ ನಂದನವನಶ್ರೀಯಂ ನೋಡಿ—

ಕಂ ॥ ಅತುಳ ಸ್ವಯಂಪ್ರಭಾಹ್ವಯ ।
ಯತಿಚರಣಾಂಬುರುಹ ಸೇವೆಯಭಿಮತ ಫಳಮಂ ॥
ಚತುರರ್ಗೆ ಕುಡದೆಯೆ ವನ ।
ಸ್ಪತಿಗಂ ಪದೆದಿತ್ತುವೆಂದೊಡಭಿಮತ ಫಲಮಂ ॥ ೮೧ ॥

ವ ॥ ಎಂದು ಪಾವನ ವನಮಂ ಪೊಗೞ್ವೆ ನೆವದಿಂದವರ ಸಾಮರ್ಥ್ಯಮಂ ಮುನಿ ಜನ ಪ್ರಾರ್ಥನಮಂ ಕೀರ್ತಿಸುತ್ತಂ ಕ್ಷತ್ರಿಯಪವಿತ್ರಂ ಬರೆ—

ಚಂ ॥ ಮಿಸುಪ ಶಿಳಾತಳಂ ನೆಗೞ್ದ ಕೇಸರಿವಿಷ್ಟರಮಾಗೆ ಪಲ್ಲವೋ ।
ಲ್ಲಸಿತಮಶೋಕಭೂರುಹಮಶೋಕಮಹೀರುಹಮಾಗೆ ಚೆಲ್ವುವೆ ॥
ತ್ತಸದೃಶ ನಂದನಂ ಸಮವಸೃತ್ಯವನೀತಳಮಾಗೆ ಯೋಗಿರಂ ।
ಜಿಸಿದನಗಾಧ ಬೋಧನಿಧಿಯಪ್ಪ ಜಿನೇಶ್ವರನಿಪ್ಪಮಾೞ್ಕೆಯಿಂ ॥ ೮೨ ॥

ವ ॥ ಅಂತು ರಂಜಿಸುವಕ್ಷೂಣಗುಣನಿಧಿಯೆನಿಸಿದ ಮುಮುಕ್ಷುವಂ ನಿರೀಕ್ಷಿಸುತ್ತಂ ಬಂದಪ್ರತಿಮಭಕ್ತಿಯಿಂ ತ್ರಿಃಪ್ರದಕ್ಷಿಣಂಗೆಯ್ದು—

ಕಂ ॥ ಮುನಿಪದಮಂ ಭಕ್ತಿಭರಾ ।
ವನತಂ ಜಲಗಂಧ ಕಳಮ ತಂಡುಳಪುಷ್ಪಾ ॥
ಶನದೀಪಧೂಪಫಲದಿಂ ।
ಜನಪತಿ ಪೂಜಿಸಿದನಖಿಳ ಸುಖಸಾಧಕಮಂ ॥ ೮೩ ॥

ವ ॥ ಆ ಸಮಯದೊಳ್—

ಕಂ ॥ ಧವಳಾಕ್ಷತಹರಿಚಂದನ ।
ನವಗಂಧದೊಳಲರೊಳೆಱಗದೆಱಗಿದವು ಯತಿ ॥
ಪ್ರವರ ಪದಾಂತಿಕದೊಳ್ ಮಧು ।
ನಿವೃತ್ತಿಯಂ ಮಾಡಿದಂದದಿಂ ಮಧುಪಂಗಳ್ ॥ ೮೪ ॥

ವ ॥ ಅಂತಾ ಮುನಿರಾಜಹಂಸನಂ ರಾಜಹಂಸಂ ಪೂಜಿಸಿ ತತ್ಪದಪಯೋಜಾಸನ್ನ ಪ್ರದೇಶದೊಳಾಸನ್ನಭವ್ಯಂ ಕುಳ್ಳಿರ್ದು ಕರಕಮಲಯುಗಂಗಳಂ ಮುಗಿದು—

ಕಂ ॥ ಜೀವಾದಿ ದ್ರವ್ಯಪದಾ ।
ರ್ಥಾವಳಿ ತತ್ವಸ್ವರೂಪಮಂ ದರ್ಶನಮಂ ॥
ಶ್ರಾವಕಯತಿಧರ್ಮಮನಘ ।
ದಾವಾನಳಮಂ ಸಮಸ್ತಸುಖಸತ್ಫಳಮಂ ॥ ೮೫ ॥

ಬೆಸಗೊಳೆ ನರಪತಿ ಯತಿಪತಿ ।
ಬೆಸಸಿದನತಿವಿಶದದಶನವಿಸರಾಂಶು ದಯಾ ॥
ರಸಮುಚ್ಚಳಿಸಿದಪುದು ಹೃದ ।
ಯಸರೋವರದಿಂದಮೆನಿಸಿ ಸೊಗಯಿಸುವಿನೆಗಂ ॥ ೮೬ ॥

ಮುನ್ನಮೆ ವಿರಾಗತಾಸಂ ।
ಪನ್ನನನಾ ಮುನಿಪ ತಿಳಿಪುವುದು ಬೆಳಗುವವೋಲ್ ॥
ಕನ್ನಡಿಯಂ ಪದೆಪಿಂ ವ್ಯ ।
ತ್ಪನ್ನನನೋದಿಸುವ ತೆಱದಿನಾದುದು ಸುಗಮಂ ॥ ೮೭ ॥

ವ ॥ ಅಂತು ತತ್ವವಿದಂ ತತ್ವಸ್ವರೂಪ ನಿರೂಪಣಮಂ ಮಾಳ್ಪುದುಮಪಗತ ಪದಾರ್ಥಸಂಶಯತಪಸ್ತಮೂಹಾಶಯ ಕುಶೇಶಯಂ ವಿಕಾಸವಿಳಾಸಭಾಸುರವದನಾರ ವಿಂದನರವಿಂದ ಮಹಾರಾಜನನಂತರಂ ಶಾಂತರಸಾಕ್ರಾಂತಸ್ವಾಂತಂಗೆ ಮತ್ತಮಿಂತೆಂದಂ—

ಕಂ ॥ ಕಾಂತಗುಣಣನೆರ್ದು ಪೋಗಿ ಕ ।
ರಂ ತಡೆದಂ ಸಚಿವನೇಕೆ ತಡೆದನದೆಲ್ಲಿ ॥
ರ್ದಂ ತಿಳಿಪಿಮೆಂದೊಡಾವ್ಯ ।
ತ್ತಾಂತಮನಱಿದವಧಿಬೋಧದಿಂ ಯತಿ ಪೇೞ್ದಂ ॥ ೮೮ ॥

ಕಂ ॥ ಪೇೞಲೊಡಮದುವೆ ಧಾತ್ರೀ ।
ಪಾಳನ ವೈರಾಗ್ಯಮಪ್ಪುದಂ ದ್ವಿಗುಣಿಸೆ ತ ॥
ಚ್ಛೀಳನಿಧಿ ಸನ್ನಿಧಿಯೊಳಘು ।
ಜಾಳಮನಳಱಿಸುವ ದೀಕ್ಷೆಯಂ ತಳೆವಾರ್ಪಿಂ ॥ ೮೯ ॥

ವ ॥ ಅಂತಾ ವೈರಾಗ್ಯಸಂಪನ್ನಂ ತನ್ನಂತರಂಗದೊಳಿಂತೆಂದಂ—

ಕಂ ॥ ತನ್ನೋರ್ವನ ದೆಸೆಯಿಂದಾ ।
ದಂ ನೆರಪಿದ ದುರಿತಬಂಧಮಂ ಗೆಲಲರಿದೋಂ ॥
ಇನ್ನೆಂತಖಿಳ ಪರಿಗ್ರಹ ।
ದಿಂ ನೆರಪಿದ ದುರಿತಬಂಧಮಂ ವಿಭು ಗೆಲ್ವಂ ॥ ೯೦ ॥

ಎಂತುಂ ರಾಜ್ಯಮನಱಿವ ನೃ ।
ಪಂ ತೊಱೆಯಲೆವೇೞ್ಕುಮನುಭವಿಪ ಕಾಲದೊಳಂ ॥
ಚಿಂತೆಯನೊದವಿಸುವುದು ರಾ ।
ಜ್ಯಾಂತಂ ನರಕಂ ದಲೆಂಬ ನುಡಿಯುಂಟದಱಿಂ ॥ ೯೧ ॥

ವ ॥ ಎಂದು ತನ್ನ ರಾಜ್ಯಮನಭೋಜ್ಯಮಂ ಸಚ್ಚರಿತಂ ಪರಿಹರಿಪಂತೆ ಪರಿಹರಿಸಿ—

ಕಂ ॥ ನರಪತಿ ನಿಜಸಂಪದಮಂ ।
ನರೇಂದ್ರನೆಂಬಗ್ರನಂದನಂಗಾನಂದಂ ॥
ಬೆರಸಿತ್ತಂ ಮಂಗಳತೂ ।
ರ್ಯರವದೊಡನೆ ತೀವೆ ನಿಜಯಶಂ ದಶದಿಶೆಯಂ ॥ ೯೨ ॥

ಭೂರಾಜ್ಯಂ ತನುಜರ್ಗೆ ತ ।
ಪೋರಾಜ್ಯಂ ತಮಗೆ ಯೋಗ್ಯಮೆಂಬವಸರಮಂ ॥
ಭೂರಮಣರ್ ಮುಂ ಕಲಿಪದೆ ।
ಚಾರುಗುಣರ್ ನೆಗೞ್ವರೇನವರ್ ಪರಿಣತರೋ ॥ ೯೩ ॥

ಒದವಿದ ನಿಜರಾಜ್ಯ ಪರಿ ।
ಚ್ಛದಮಂ ಭೋಗಿಸದೆ ಜೀರ್ಣಮೆನಿಸಿದುದಂ ಪ್ರ ॥
ಚ್ಛದಮಂ ಬಿಸುಡುವ ತೆಱದಿಂ ।
ದುದಾತ್ತಮತಿ ಬಿಸುಟನೇಂ ಮಹಾತ್ಮನೊ ಮಹಿಮಂ ॥ ೯೪ ॥

ಜೊಕ್ಕಳನೆನಿಪಂ ನಿಜವಧು ।
ಮಕ್ಕಳು ವಡೆದಂದು ಭೋಗಿಸಲ್ವೇಸಿಯೆ ಪಿಂ ॥
ತಿಕ್ಕುವ ತೆಱದಿಂದಂ ಪಿಂ ।
ತಿಕ್ಕಿದನಾ ರಾಜ್ಯವನಿತೆಯಂ ತತ್ತ್ವವಿದಂ ॥ ೯೫ ॥

ಕಂ ॥ ಈ ತೆಱದಿಂ ತನ್ನುಪಮಾ ।
ತೀತ ಪರಿಚ್ಛೇದ ಗುಣಮನಱಿವವರ್ಗಳ್ ಸಂ ॥
ಪ್ರೀತಿಯೊಳೆ ಪೊಗೞೆ ದುರಿತಾ ।
ರಾತಿಯನವಯವದೆ ಗೆಲ್ವ ಬಗೆಯನೆ ಬಗೆದಂ ॥ ೯೬ ॥

ವ ॥ ಅಂತು ಬಗೆದು—

ಕಂ ॥ ಜ್ಞಾನಂ ವೈರಾಗ್ಯಂ ದುರಿ ।
ತಾನಳ ದಳನಾಂಬು ವಿಮಳಚಾರಿತ್ರಂ ಸು ॥
ಧ್ಯಾನಂ ದೊರೆಕೊಂಡುದಱಿಂ ।
ನೀನೆ ಕೃತಾರ್ಥನೆ ಮುನೀಂದ್ರ ನಿರ್ಜಿತತಂದ್ರಾ ॥ ೯೭ ॥

ವ ॥ ಎಂದು ಗುಣಾರ್ಥಿ ತನ್ನ ಹಿತೋಪದೇಶದಿಂ ಕೃತಾರ್ಥನಂ ಮಾಡಿದ ಗುಣ ನಿಧಿಗಳಂ ಪೊಗೞ್ದು—

ಕಂ ॥ ನಿಧಿಗಂಡು ಬರಗುಗರ್ಚುವ ।
ನಧಮನೆನಿಕ್ಕುಂ ಗಡಖಿಳ ಸುಖದಾಯಿ ತಪೋ ॥
ನಿಧಿ ನಿನ್ನಂ ಕಂಡೆನಹಿತ ।
ವಿಧಿಗೊಡರಿಪೊಡಾನುಮಧಮನೆನಿಸನೆ ಪೇೞಿಂ ॥ ೯೮ ॥

ವ ॥ ಎಂದು ತನ್ನ ಪರಿಚ್ಛೇದಮುಂ ಪ್ರಕಟಿಸೆ—

ಕಂ ॥ ದೀಕ್ಷೆಯನೀವುದೆನುತ್ತೆ ಮು ।
ಮುಕ್ಷುಗೆ ಬಿನ್ನವಿಸೆ ಪತಿ ಮಹಾವ್ರತಮುಂ ಬೋ ॥
ಧೇಕ್ಷಣನಿತ್ತನಹಿಂಸಾ ।
ಲಕ್ಷಣ ಲಕ್ಷಿತಮನತುಳವಿಧಿರಕ್ಷಿತಮಂ ॥ ೯೯ ॥

ವ ॥ ಅಂತು ಸಾಕ್ಷಾನ್ಮೋಕ್ಷಮಾರ್ಗಮೆನಿಪ ದಿಗಂಬರ ದೀಕ್ಷೆಯಂ ಕೈಕೊಂಡು—

ಉ ॥ ಮೂಲಗುಣೋತ್ತರೋತ್ತರ ಗುಣೋತ್ತರ ಸದ್ಗುಣದೊಳ್ ಮುನೀಶ್ವರಂ ।
ಶೀಲ ಸಮನ್ವಿತಂ ನೆರೆದು ಪನ್ನೆರಡುಂ ತಪಮುಯ್ದು ಸಂಯಮುಂ ॥
ಮೇಳಿಸೆ ತತ್ವಭಾವನೆಯೊಳಾವಗಮುದ್ಯತನಾಗಿ ಕರ್ಮ ನಿ ।
ರ್ಮೂಳನ ಧರ್ಮತತ್ಪರತೆಯಂ ತಳೆದಂ ವಿಜಿತಾಖಿಳೇಂದ್ರಿಯಂ ॥ ೧೦೦ ॥

ಕಂ ॥ ದೀಕ್ಷಾ ಕಾಲಮನಾಗಮ ।
ಶಿಕ್ಷಣದಿಂ ಕಳೆದು ಬೞಿಕೆ ಕಳೆದಂ ಗುಣಸಂ ॥
ರಕ್ಷಣ ಕಾಲಮನಖಿಳ ವಿ ।
ಚಕ್ಷಣರಂ ಮಾಡೆ ಶಿಷ್ಯರಂ ಮುನಿತಿಳಕಂ ॥ ೧೦೧ ॥

ವ ॥ ಅಂತು ಕಳೆದು—

ಮ ॥ ಬುಧಸಂಪೂಜಿತ ದರ್ಶನೂರ್ಜಿತ ತಪೋವಿಜ್ಞಾನ ಶುಂಭದ್ವಯಾಂ ।
ಬುಧಿ ಚಾರಿತ್ರಮೆನಿಪ್ಪ ನಾಲ್ಕು ತೆಱನಪ್ಪಾರಾಧನಾ ರೂಪಸ ॥
ದ್ವಿಧಿಯಂ ನಿರ್ಮಳನೊಲ್ದು ತಾಳ್ದೆ ಸುಜನಸ್ತುತ್ಯಂ ಗುಣಪ್ರತ್ಯಯಾ ।
ವಧಿ ಪುಟ್ಟಿತ್ತು ಯತೀಂದ್ರನೊಳ್ ಸಕಳರೂಪದ್ರವ್ಯ ಸಂಧ್ಯಾಪಕಂ ॥ ೧೦೨ ॥

ಕಂ ॥ ಸ್ಫುರಿತಾವಧಿಬೋಧದಿನಾ ।
ಯುರವಧಿ ಪನ್ನೆರಡು ಬರಿಸಮೆಂದಱಿದು ಗುಣಾ ॥
ಭರಣಂ ಸಲ್ಲೇಖನೆಯಂ ।
ನಿರಂತರಂ ಮಾಳ್ಪಕಾಲಮೆನಗಿದೆನುತ್ತಂ ॥ ೧೦೩ ॥

ಮ ॥ ಕ್ರಮದಿಂ ದೀಕ್ಷೆ ಸುಶಿಕ್ಷಣಂ ಸ್ವಗುಣಪೋಷಂ ಕೂಡೆ ಶುದ್ಧೋಪಯೋ ।
ಗಮನೆಯ್ದಲ್ಕೆ ಶುಭೋಪಯೋಗಮನದಂ ತನ್ನಗ್ರ ಶಿಷ್ಯಂಗೆ ರಾ ॥
ಜ್ಯಮನಾತ್ಮೀಯ ಸುತಂಗೆ ಕೊಟ್ಟ ತೆಱದಿಂ ಸಂಪ್ರೀತಿಯಿಂ ಕೊಟ್ಟು ಸಂ ।
ಯಮರಾಜಂ ಪರಿಹಾರಶುದ್ಧಿಯನುರುಶ್ರೀಸಿದ್ಧಿಯಂ ತಾಳ್ದಿದಂ ॥ ೧೦೪ ॥

ಕಂ ॥ ದುರಿತ ಪರಿಹಾರಕರಮಂ ।
ಪರಿಹಾರವಿಶುದ್ಧಿ ಸಂಯಮಮನಾಮುನಿಪಂ ॥
ಧರಿಯಿಸಿ ಸಮಸ್ತ ತೀರ್ಥೋ ।
ತ್ಕರಮಂ ಸುಖಕರಮನೊಸೆದು ಬಂದಿಸಿ ಬೞಿಯಂ ॥ ೧೦೫ ॥

ಉ ॥ ಶ್ರೀ ದೊರೆವೆತ್ತ ತೀರ್ಥಕರನಷ್ಟವಿಧಾತುಳ ಕರ್ಮಬಂಧಮಂ ।
ಭೇದಿಸಿ ಮುಕ್ತಿವೆತ್ತೆಡೆಯನುತ್ತಮ ಭಕ್ತಿಯೊಳಿಷ್ಟ ಸಿದ್ಧಿ ಸಂ ॥
ಪಾದಕಮಂ ಸಮಸ್ತಜನ ಸಮ್ಮುದ ಸಾಧಕಮಂ ಪ್ರಸಿದ್ಧ ಸ ।
ಮ್ಮೋದಗಿರೀಂದ್ರಮಂ ಮಣಿವಿನಿರ್ಮಿತ ನಿರ್ಮಳ ಜೈನ ಹರ್ಮ್ಯಮಂ ॥ ೧೦೬ ॥

ವ ॥ ವಂದಿಸಿ ಮುನೀಂದ್ರಂ ಬರುತ್ತಮಿರೆ—

ಉ ॥ ಶ್ರೀವಿಭುತಂತ್ರಗುಪ್ತನತಿನಿರ್ಮಳ ಧಾರ್ಮಿಕ ಚಂದ್ರಗುಪ್ತನೆಂ ।
ಬಾವರ ಸಾರ್ಥನಾಥರುರುಮಾರ್ಗಪರಿಶ್ರಮದಿಂದೆ ಬಂದುವೇ ॥
× × × × × × ।
× × × × × × ॥ ೧೦೭ ॥

ವ ॥ ಅಂತಿರ್ಪುದುಮಾ ಶಾಂತಾತ್ಮರಂ—

ಕಂ ॥ ಸಾರ್ಥಾಧಿಪತಿಗಳತಿಶಯ ।
ತೀರ್ಥಮೆ ತಮ್ಮಿದಿರ್ಗೆವಂದುದೆಂದನುಪಮ ಪು ॥
ಣ್ಯಾರ್ಥಿಗಳಮಳಚರಿತ್ರ ಕೃ ।
ತಾರ್ಥರನೊಲವಿಂದೆ ಬಂದು ವಂದಿಸಿದರವರ್ ॥ ೧೦೮ ॥

ವ ॥ ಅಂತು ನಿರ್ಭರ ಭಕ್ತಿಪೂರ್ವಕಂ ವಂದಿಸಿ—

ಮ ॥ ಇತತಾನೂನಜದತ್ಕಿಕಾಪಗೆಯ? ಸೇವಾಶಕ್ತಿಯಿಂದಂ ಚತು ।
ರ್ಗತಿ ಸಂಸಾರ ಪರಿಭ್ರಮಂ ಸುಗಮಮಿಯೋಗೀಂದ್ರರುಂದ್ರಾಚಳೋ ॥
ತ್ಥಿತ ವಾಕ್ಯಾಮೃತ ಪೂರ್ಣಸಿಂಧು ಕಳಿಗುಂ ಕೇಳ್ದಂದೆನುತ್ತಂ ಸಮು ।
ನ್ನತ ಧರ್ಮಶ್ರವಣಕ್ಕೆ ಸಾರ್ಥಪತಿಗಳ್ಸಾಮರ್ಥಿಯಂ
ಮಾಡಿದರ್ ॥ ೧೦೯ ॥

ವ ॥ ಅಂತವರ ಪರಿನಿಷ್ಕ್ರಮಣ ವಿಶೇಷಮಂ ಕಂಡು—

ಕಂ ॥ ಮದವಜ್ರಘೋಷಗಜಮಂ ।
ವಿದಿತಂ ತಿಳಿಪಲ್ಕೆ ಪೂರ್ವರಂಗಮಿದೆಂಬಂ ॥
ದದೆ ತಿಳಿಪುತ್ತಿರ್ದರ್ಸವ ।
ಪದಾರ್ಥತತ್ವಸ್ವರೂಪರಾ ಯತಿಪತಿಗಳ್ ॥ ೧೧೦ ॥

ವ ॥ ಅಂತು ಧರ್ಮಶ್ರವಣಮಂ ಶ್ರವಣರಮಣೀಯಮಾಗೆ ಶ್ರವಣಾಗ್ರಣಿ ಯೇಕಾಗ್ರದಿಂ ಕೇಳ್ವ ಶ್ರಾವಕನಿಕಾಯಕ್ಕೆ ಮಾಡುತ್ತಿರ್ಪನ್ನೆಗಂ—

ಕಂ ॥ ಕುಂಜರಶೈಳಂ ತನ್ನಿಂ ।
ದಂ ಜಗದೊಳ್ನೆಗಟ್ದುದೋ ಪೆಸರಿನೆಂಬವೊಲೇಂ ॥
ರಂಜಿಸಿ ಬಳೆಯುತ್ತಿರ್ದುದೊ ।
ಕುಂಜರಮಾ ವಜ್ರಘೋಷನಾಮಸುಧಾಮಂ ॥ ೧೧೧ ॥

ಸಲೆಪೋತ ಚಿಕ್ಕ ಸುಲಲಿತ ।
ಕಳಭಜವನ ಕಾಂತರೂಪ ಕಲ್ಯಾಣ ಸಮು ॥
ಜ್ವಳಯೋಧ ಯೋಧತರ ಕೃತ ।
ಬಳಹೀನಸ್ಥವಿರ ವೃದ್ಧಮೆಂಬಿವುದಶೆಗಳ್ ॥ ೧೧೨ ॥

ವ ॥ ಅಂತೊಗೆದು ಸೊಗಯಿಸುವ ದಶವಿಧ ದಶೆಗಳೊಳ್—

ಕಂ ॥ ಜವನಮೆನಿಸಿರ್ದ ನಿಜದಶೆ ।
ಜವನನಧಃಕರಿಸೆ ವಿಳಯಜಳಧರಕುಳ ಭೈ ॥
ರವರವಮನಿಳಿಸೆ ದೃಢಘನ ।
ರವರಭಸಂ ಕಣ್ಗೆವಂದುದಂದು ಗಜೇಂದ್ರಂ ॥ ೧೧೩ ॥

ಕಮನೀಯಕಾಯಮುಚ್ಛ್ರಯ ।
ಸಮುಹಸ್ತಾಯತ್ತಮಖಿಳ ಶುಭಲಕ್ಷಣಮು ॥
ತ್ತಮ ಭದ್ರಜಾತಿಜಾತಂ ।
ಸಮುಸರ್ವಾಂಗಾತಿಸುಂದರಂ ಪ್ರೌಢದಶಂ ॥ ೧೧೪ ॥

ಉ ॥ ಶ್ರೀವರಸಲ್ಲಕೀವನದ ಪಲ್ಲವಮಂ ನಲವಿಂದೆ ಮೇದು ರಾ ।
ಜೀವಪರಾಗಪುಂಜ ಪರಿಪಿಂಜರಿತೋರುತರಂಗಸಂಗವೇ ॥
ಗಾವತಿಯಂಬುಪಂ ಕುಡಿದು ನಂದನಚಂದನ ಕುಂಜರಾದ್ರಿ ಕುಂ ।
ಜಾವಳಿಯೊಳ್ವಿಹಾರಿಸಿ ವಿರಾಜಿಸುತಿರ್ಪುದು ಗಂಧಸಿಂಧುರಂ ॥ ೧೧೫ ॥

ಚಂ ॥ ಕದುಪಿನ ಚಿಕ್ಕಪೋತ ಕರಿಣೀಗಣಮುಂ ನವಪಲ್ಲವಂಗಳಂ ।
ಮುದದೊಳೆ ಮುನ್ನೆ ಮೇಯಿಸಿ ಬೞಿಕ್ಕದು ಮೇದು ನದೀಜಲಂಗಳಂ ॥
ಪದಪಿನೆ ಮುನ್ನಮೂಡಿಸಿ ಬೞಿಕ್ಕೊಳೆದೂಡಿ ಪೊದಲ್ದಿ ಶಯ್ಯೆಯೊಳ್ ।
ಮದಕರಿ ಮುನ್ನೆ ಮೆಯ್ಯಿರಿಸಿ ತಾಂ ಬೞಿಕಿರ್ಪುದು ರಮ್ಯಶಯ್ಯೆಯೊಳ್ ॥ ೧೧೬ ॥

ಕಂ ॥ ವಿಕಸಿತ ಕನಕಾಂಬುರುಹಾ ।
ಧಿಕರೇಣುಕರೇಣು ಸೂಸೆ ಸಿಂಧುರಮೆನೆ ಮ ॥
ಸ್ತಕದೊಳ್ ರಂಜಿಸುತಿರೆ ಸಲಿ ।
ಲಕೇಳಿಯೊಳ್ ಲೀಲೆವಡೆದುದಾ ಶುಂಡಾಳಂ ॥ ೧೧೭ ॥

ಅತಿನಿಷ್ಠುರತರ ನಿಜ ಬೃಂ ।
ಹಿತಹತಿಯಿನೊಡೆಯೆ [ಸತ್ವರಂ] ವಿತತಕ್ಷಿತಿಭೃ ॥
ತ್ರತಿಯಂತಾ ಗಜಪತಿಗ ।
ನ್ವಿತಮಾದುದು ವಜ್ರಘೋಷಮೆಂಬಭಿದಾನಂ ॥ ೧೧೮ ॥

ಅತಿಚಿತ್ರಂ ಮರದಿಂ ತುಂ ।
ಗತೆಯಿಂ ಶುಭಲಕ್ಷಣಂಗಳಿಂ ಬಳದಿಂದ ॥
ಪ್ರತಿಮಾನಮೆನಿಸಿ ಮತ್ತಂ ।
ಪ್ರತಿಮಾನ ವಿರಾಜಮಾನಮಾ ಗಜರಾಜಂ ॥ ೧೧೯ ॥

ವ ॥ ಅಂತು ಬಳೆಯುತ್ತಮಿರೆ—

ಕಂ ॥ ನವಯೌವನಲಕ್ಷ್ಮಿಯೊಳಾ ।
ಗೆ ವಿವಾಹಂ ತಿಳಕಮಿಟ್ಟವೋಲ್ತಿಳಕೆಯುದೊ ॥
ಪ್ಪುವ ಕತ್ತುರಿಯುಂ ತೊಡೆದಂ ।
ತೆವೊಲರ್ಧ ಕಪೋಳೆ ಪುಟ್ಟಿದುದು ಗಜಪತಿಯೊಳ್ ॥ ೧೨೦ ॥

ವ ॥ ಅನಂತರಂ—

ಕಂ ॥ ನೀಳದ ಕಂಠಿಕೆಯಂ ಶುಂ ।
ಡಾಳ ಶಿರೋಮಣಿಗೆ ಕಟ್ಟಿದಂತಿರೆ ಚೆಲ್ವಂ ॥
ಪಾಳಿಸುತಿರ್ದುದು ಮಧುಕರ ।
ಮಾಳಾಶೋಭಿತಮದೋನಿಬಂಧಿತ ದಾನಂ ॥ ೧೨೧ ॥

ಮ ॥ ನದಿಯೊಳ್ ನೀರಜಗಂಧಮಂತುದರದೊಳ್ಕಸ್ತೂರಿಕಾ ಗಂಧಮಂ ।
ಹೃದಯಾನಂದನ ನಂದನಾಂತರದೊಳುದ್ಯನ್ಮಾಳತೀ ಗಂಧಮಂ ॥
ಮದಗಂಧಂ ಗೆಲೆ ಗಂಧಚಾರಿಣಿಯಿನುನ್ಮತ್ತಾಳಿ ಸಂದೋಹ ಸ ।
ಮ್ಮದ ಸಂದಾರಿಣಿಯಿಂ ವಿರಾಜಿಸುತಮಿರ್ಕುಂ ವಜ್ರಘೋಷದ್ವಿಪಂ ॥ ೧೨೨ ॥

ಕಂ ॥ ಕಟನಿಕಟೋತ್ಕಟ ಮದದಿಂ ।
ಪಟು ಮಧುಕರನಿಕರ ಮಧುರ ಮೂಕಾತರವಂ ॥
ಪಟು ಪಟಹಮೆನಿಸೆ ನೆರೆದು ಕ ।
ರಟ ಕರಿಣೀಗಣದ ಸೊಂಕಿನಿಂದೆಸೆದಿರ್ಕುಂ ॥ ೧೨೩ ॥

ಕಂ ॥ ಎಡೆಯುಡುಗದ ದಾನಿಗಿದ ।
ಕ್ಕೆಡೆಯೆಱಿಯದೆ ಕೊಟ್ಟು ಮಾಣ್ಬ ಮಿಕ್ಕ ಗಜಂಗಳ್ ॥
ಪಡಿಯಪ್ಪುವೆ ಪೇೞೆಂಬವೊ ।
ಲೆಡೆಗಿಱಿದಳಿರುತಿಯಿನಾ ಗಜಂ ಸೊಗಯಿಸುಗುಂ ॥ ೧೨೪ ॥

ಮಾತಂಗದಾನವಿಭವಂ ।
ಮಾತೇನೆನಿತರಿದದಾದೊಡಂ ಚೇತಸ್ಸಂ ॥
ಪ್ರೀತಿಯನತಿವಿಮಳತರವಿ ।
ಜಾತಿಗೆ ಮಧುಪವ್ರಜಕ್ಕೆ ಮಾೞ್ಪುದೆ ಸಹಜಂ ॥ ೧೨೫ ॥

ಒದವಿದ ಮದಜಲದಿಂ ತೀ ।
ವಿದ ನಗದಿಡುಪುಗಳೊಳೆಯ್ದೆ ಮುೞುಗಿರೆ ಯಮುನಾ ॥
ಹ್ರದದೊಳ್ ಮುೞುಗಿದವೋಲ್ ತೋ ।
ರ್ಪುದು ನೋೞ್ಪಡೆ ನಾಡೆ ಚೆಲ್ವುವಡೆದು ಕರೀಂದ್ರಂ ॥ ೧೨೬ ॥

ಎರಡುಂ ತಟಮಳಿಮಿಳಿತಂ ।
ಸರೋವರಂ ಸುರಿವ ಮದಜಲಂ ನದಿಯೆನೆ ಪು ॥
ಷ್ಕರವರಕರಪ್ರಣಾಳೀ ।
ಪರಿಕಳಿತಂ ನೆಱೆನೀಳಗಿರಿಗೆ ದೊರೆಯೆನಿಕುಂ ॥ ೧೨೭ ॥

ಗಗನೋನ್ನತ ಗಜದ ಮದಂ ।
ತ್ರಿಗಂಡಗಳಿತಂ ಪ್ರವಾಹಮೆನೆಗುಂ ಯಮುನಾ ॥
ಪಗೆಯುಂ ಗಂಗೆಯವೋಲ್ ತ್ರಿಪ ।
ಥಗೆಯೆನಿಸಿ ತ್ರಿಪ್ರವಾಹಮಂ ತಾಳ್ವುವವೋಲ್ ॥ ೧೨೮ ॥

ಆ ವಜ್ರಘೋಷ ದಾನಾಂ ।
ಭೋವಿಸರ ಪಟುಪ್ರವಾಹ ಭರದಿಂದಂ ವೇ ॥
ಗಾವತಿಯೆಂಬೀ ಪೆಸರಂ ।
ಭಾವಿಸೆ ತತ್ಸಿಂಧು ತಳೆದುದೆನೆ ಪೊಗೞದರಾರ್ ॥ ೧೨೯ ॥

ಮ ॥ ಸ್ರ ॥ ಮದಗಂಧಕ್ಕನ್ಯವನ್ಯದ್ವಿರದನತತಿ ಬೆನ್ನಿತ್ತು ಮತ್ತೆಲ್ಲಿಯುಂ ನಿ ।
ಲ್ಲದೆ ಶಂಕೋದ್ರೇಕದಿಂದಂ ದೆಸೆಯ ಕಡೆವರಂ ಪೋದವಾಶಾಧಿನಾಥ ॥
ರ್ಗೆ ದಿಟಂ ವಾಹಂಗಳಾಗಿರ್ದಪುವೆನೆ ಪೆಱತೇಂ ವಜ್ರಘೋಷದ್ವಿಪೇಂದ್ರ ।
ಕ್ಕಿದಿರಾಂಪುನ್ಮತ್ತಹಸ್ತಿಪ್ರತತಿಯುೞಿಸುವಂದಿಲ್ಲ ದಲ್ ನಾಡೊಳೆಲ್ಲಂ ॥ ೧೩೦ ॥

ಮ ॥ ಮದಗಂಧಂ ಪುದಿದಿರ್ದ ಕುಂಜರ ಕುಭೃತ್ಕುಂಜಕ್ಕೆ ವೇಗಾವತೀ ।
ನದಿಗುತ್ಪಲ್ಲವ ಸಲ್ಲಕೀವನಕೆ ವಶ್ಯೇಭಬ್ರಜಂ ಪೊರ್ದದಿ ॥
ಪ್ಪುದಱಿಂ ನಿಃಪ್ರತಿಪಕ್ಷರಾಜ್ಯಪದದೊಳ್ತೇಜಸ್ವಿರಾಜಂ ಮನೋ ।
ಮುದದಿರ್ಪಂದದಿನಿರ್ಪುದಾ ವನಗಜಂ ನಾನಾವಿನೋದಪ್ರಿಯಂ ॥ ೧೩೧ ॥

ಚಂ॥ ಮದಜಳನೀಳಕಂಠ ಕಳಿತಂ ವಿಷಮಾಸಳ ಭೀಮಲೋಚನಂ ।
ಪದನತದಾನವಾರಿಗಿರಿಶಂ ಗಿರಿಜಾತವಿನೂತ ಕೇಳಿ ಕ ॥
ಣ್ಗೊದವಿದ ಶೋಭೆಯಂ ಕುಡುತಮಿರ್ಪುದು ನಾಗಶಿರೋವಿಭೂಷಣಂ ।
ವಿದಿತಗಜಾಸುರೇಂದ್ರನನೆ ಮರ್ದಿಸಲುಗ್ರನಿಭೇಂದ್ರನಾದವೋಲ್ ॥ ೧೪೨ ॥

ಕಂ॥ ಕ್ರೋಧಿನಿ ಸಮುಗ್ರತರ ಜಯ ।
ಬೋಧಿನಿ ದುರ್ವಾರ ವಾರಣಾಧಿಕ ಮದಸಂ ॥
ರೋಧಿನಿ ನಗಮೃಗನಿಕರ ವಿ ।
ರೋಧಿನಿ ಮದಲಕ್ಷ್ಮಿಯುದಯಿಸಿತ್ತಿಭಪತಿಯೊಳ್ ॥ ೧೪೩ ॥

ವ॥ ಆ ಸಮಯದೊಳ್,

ಕಂ॥ ಬಿಸುನೆತ್ತರೊಗೆಯೆ ರದದಮಂ ।
ಬಿಸಮಂ ಕೀಳ್ವಂತೆ ಕಿೞ್ತು ಮತ್ತಗಜೇಂದ್ರಂ ॥
ಮುಸಕಮನಾಂತಿಭಕುಳಮಂ ।
ಮುಸಕಮನೊರಸುವವೊಲೊರಸುವುದು ನಿಜಕರದಿಂ ॥ ೧೪೪ ॥

ವ॥ ಅಂತುದಯಿಸಿದ ಕ್ರೋಧಿನಿಯುಂ ಕ್ರೋಧಾವಿಳಂ ಮತ್ತವರ್ತಿನಿಯೊಳತಿವರ್ತಿಯುಂ ಸಂಭಿನ್ನಮದಮರ್ಯಾದೆಯೊಳ್ ಮರ್ಯಾದೆಯುಂ ಮೀಱಿ ಸ್ವಾತಂತ್ರ್ಯ ಮದಾಕ್ರಾಂತಸ್ವಾಂತನುಂ, ಯೌವನಮದಮದಿರೋನ್ಮತ್ತಚಿತ್ತನುಂ, ದ್ರವಿಣ ಮದಗ್ರಹ ಗ್ರಸ್ತನುಮವಿವೇಕಮದನ ಕೋದ್ರವ ವಿದ್ರಾವಿತವಿವೇಕನುಮಪ್ಪ ರಾಜಕುಮಾರನಂತಾ ಗಜರಾಜ ಕುಮಾರಂ ಮದಾಂಧಕಾರದಿಂ ಮುಂದುಗಾಣದನರ್ಥ ತತ್ಪರನಾಗಿ—

ಮ॥ ಸ್ರ॥ ವಿಳಯಾಬ್ಧಿ ಕ್ಷೋಭಮುಜ್ಜೃಂಭಿತ ಸಕಳಮದ ಕ್ಷೋಭಮುದ್ದೀಪ್ತ ಕಾಳಾ ।
ನಳನಾತ್ಮೀಯ ಪ್ರಕೋಪಂ ಪ್ರಳಯ ಸಮಯ ತೀವ್ರಾನಿಳಂ ವೇಗಮುಚ್ಛ್ರಂ ॥
ಖಳಕಳ್ಪಾಂತಾಂತಕಂ ತಾನೆನೆ ಮುಸಗಿ ಜಗಂ ಭೀತಿಗೊಳ್ವಂತು ಭೂತಾ ।
ವಳಿಯಂ ಕೊಂದತ್ತು ರಕ್ತಾರ್ಣವ ಮೊಗೆವಿನೆಗಂ
ವಜ್ರಘೋಷದ್ವಿಪೇಂದ್ರ ॥ ೧೪೫ ॥

ಸ್ರ॥ ಕೋಡೊಳ್ಕೋಡೊತ್ತುತುಂ ದಂತಿಗಳನೆ ತಿಱಿಕಲ್ಲಾಡುವಂತಂಬರಕ್ಕೀ ।
ಡಾಡುತ್ತುಂ ತುಂಗಶೈಳಂಗಳನೆ ಮೃಗಸಮೂಹಂಗಳಂ ಮೆಟ್ಟಿ ಸೀಳ್ದೀ ॥
ಡಾಡುತ್ತುಂ ನೋಡಲಾರುಂ ನೆರೆವ ಸುಭಟರಿಲ್ಲೆಂಬಿನಂ ತನ್ನ ಕಾಯ್ಪಂ ।
ನೀಡುಂ ನೀಡುತ್ತಮೆಯ್ತುಂದುದು ಪವನಜವಂ
ರುಂದ್ರಗಂಧದ್ವಿಪೇಂದ್ರಂ ॥ ೧೪೬ ॥

ಉ॥ ಪೆರ್ಚಿದ ಕೋಪದಿಂದೆ[ಬಿಡೆಕಿೞ್ತು] ಮಹೀರುಹಮಂ ಕಡಂಗಿ ಕೋ ।
ಡುರ್ಚೆ ಮೃಗಂಗಳಂ ವನಗಜಂಗಳನೋವದೆ ಸೀಳ್ದು ನೀಳ್ದ ಕಾ ॥
ಲ್ಕಿರ್ಚಿನ ಮಾಱ್ಕೆಯಿಂ ತವಿಸುತುರ್ವಿದ ತೀವ್ರತೆಯಿಂ ಮದಾಂಧನಾ ।
ಸಾರ್ಥಮನೆಯ್ದೆವಂದುದು ಜಗಂ ಬೆದಱುತ್ತಿರೆ ಗಂಧಸಿಂಧುರಂ ॥ ೧೪೭ ॥

ವ॥ ಅಂತಾ ಸಾರ್ಥಪತಿಗಳುಂ ಯತಿಪತಿಗಳುಮಿರ್ದ ಸಾರ್ಥಮನೆಯ್ದೆವಂದು,

ಚಂ॥ ಬೆದಱಿದ ಬಾಳವೃದ್ಧರನೆ ಬಾಯ್ವಿಡೆ ಬಾಯ್ವಿಡೆ ಸೀಳ್ದು ಪೋಲ್ದು ಬಂ।
ದದಿರದೆ ನಿಂದ ಬೀರರನೆ ಬೊಬ್ಬಿಡೆ ಬೊಬ್ಬಿಡೆ ತಗ್ಗೆಗುಟ್ಟಿ ಲಾ।।
ಯದ ತುರಗಂಗಳಂ ತರದೆ ಗೋೞಿಡೆ ಗೋೞಿಡೆ ಕೋಡೊಳೆತ್ತಿ ಕ।
ಟ್ಟಿದ ಮದದಂತಿಯಂ ಬಿಡದೆ ಗೀೞಿಡೆ ಗೀೞಿಡೆ ಕೊಂದುದಾ ಗಜಂ ॥೧೩೮॥

ಕಂ॥ ಏಕಾಶೀತಿವಿಧಂ ವಧೆ।
ಲೋಕಸ್ಥಿತಿ ಚತುರಶೀತಿಲೇಶ್ಯಪ್ರಮಿತಾ ।।
ವ್ಯಾಕುಳ ಯೋಗಿಯ ಜೀವ।
ಕ್ಕಾಕಂಪಮನೀಯೆ ಕೊಂದುದಿಭಪತಿ ಪಲರಂ ॥ ೧೩೯ ॥

ಅನುಪಮ ಯೋಗೀಶ್ವರನವೊ।
ಲೆನಿತೊಳವು ಧರಿತ್ರಿಯಲ್ಲಿ ಸಚರಾಚರಮಂ ।।
ತನಿತುಮನೊರ್ಮೊದಲೊಳೆ ನೆ।
ಟ್ಟನೆ ತನ್ನಿಂ ಭಿನ್ನಮೆನಿಸಿ ಭಾವಿಸಿತು ಗಜಂ ॥ ೧೪೦ ॥

ರದನದೊಳೆರಡರೊಳಂ ಸು।
ತ್ತಿದ ಕರುಳ ಪಿಣಿಲ್ಗಳಲ್ಲಿ ತೊಡರ್ದೞಿಲ್ವ ಪೆಣಂ ॥
ಮದಲಕ್ಷ್ಮಿಯ ಲೀಲಾಂದೋ।
ಳದ ಲೀಲೆಯನಾಂತುಗೊಂಡುದಾ ಶುಂಡಾಳಂ ॥ ೧೪೧ ॥

ಉ॥ ಅಂತು ಕೃತಾಂತನಂತೆ ಕೊಲುತೆಯ್ದುವ ದಂತಿಯನಾ ಮುನೀಶ್ವರಂ।
ಶಾಂತರಸಾಬ್ಧಿ ಕಂಡಿದಱಿನಪ್ಪುಪಸರ್ಗಮೆ ಪಿಂಗುವಂತೆವೋ॥
ರಂತೆ ಶರೀರ ಸನ್ಯಸನಮಿನ್ನೆಮಗೆಂದಿರೆ ಸಾರ್ಥಸಾದರುಂ।
ಭ್ರಾಂತಿವಿಹೀನರಾ ತೆಱದೆ ನಿಶ್ಚಳರಾಗಿರೆ ಮಂದರಾದ್ರಿವೋಲ್ ॥ ೧೪೨ ॥

ಕಂ॥ ಅತಿನಿಷ್ಠುರತರ ವಾತಾ।
ಹತಿಗೆ ಪರಲ್ವಾಱುವಂದದಿಂದಮದೇಂ ಪ ॥
ರ್ವತಮುಂ ಪಾಱುಗುಮೇಂಯೆನೆ।
ಧೃತಧೃತಿಗಳ್ನಿಂದರಿತರರಿರದೋಡಿದೊಡಂ ॥ ೧೪೩ ॥

ವ॥ ಅಂತು ಮೂವರುಮಜಯ್ಯಮನರ್ಜನಮೆಲ್ಲಂ ಪುಯ್ಯಲಿಡೆಯಿಡೆ ಕಯ್ಯಿಕ್ಕಿ ನಿಲೆ,

ಕಂ॥ ಕೋಡಿನೊಳೊತ್ತುವೆನಿರ್ವರ।
ನೀಡಾಡುವೆನಿರದೆ ಕರದಿನೊರ್ವನನೆನುತಂ ॥
ಕಾಡಾನೆ ಕಡುಪಿನಿಂ ಜನ।
ಮೋಡುವಿನಂ ಮುಟ್ಟಿವಂದುದಾ ಮೂವರುಮಂ ॥ ೧೪೪ ॥

ಮಾತೇಂ ರುಷಿವಧೆಗಂ ವಿ।
ಖ್ಯಾತೋತ್ತಮ ಜಾತಿಜಾತವಧಸಂಕ್ರೋಧಾ ॥
ನ್ವಿತನೇಂ ಪೇಸುಗುಮೇಯೆನೆ।
ಮಾತಂಗಂ ಮುಳಿದು ಮುಟ್ಟಿವಂದತ್ತವರಂ ॥ ೧೪೫ ॥

ಕಂ ॥ ಮುನಿಕುಂಜರ ನಾಮುಕ್ಕದು ।
ಮುನಿದೆಯ್ದುವ ತೆಱದಿನೆಯ್ದಿ ಘನಸತ್ವಂ ನೆ ॥
ಟ್ಟನೆ ಕಯ್ಯಿಕ್ಕಿರೆ ಬೆದಱ ।
ತ್ತನೆ ಪೆಱಮೆತ್ತಿರಿತು ವಿಸ್ಮಯಂ ಪುಟ್ಟುವಿನಂ ॥ ೧೪೬ ॥

ಮ॥ ಮುನಿವಕ್ಷಸ್ಥಿತಮಂ ಸ್ವಕೀಯ ಹಿತಮಂ ಶ್ರೀವತ್ಸವಿಖ್ಯಾತ ಲಾಂ।
ಛನಮಂ ತತ್ವವಿವೇಕಲೋಚನಮನಾತ್ಮಾತೀತ ಜನ್ಮಪ್ರಕಾ ॥
ಶನಮಂ ಸಚ್ಚರಿತೋಪದೇಶನಮನಾಗಳ್ ಕಂಡು ಕೈಕೊಂಡು ತಾ।
ನೆನಸುಂ ಶಾನ್ತಿಯನಪ್ರಮತ್ತನವೊಲೇನಿರ್ದತ್ತೊ ಮತ್ತದ್ವಿಪಂ ॥ ೧೪೭ ॥

ಮ ॥ ಸ್ರ ॥ ಮಹನೀಯಂ ಮಂತ್ರಸಿದ್ಧಂ ಬಿಡೆ ಪಿಡಿದ ಮಹಾಮುದ್ರೆಯಂ ಕಂಡು ದುಷ್ಟ।
ಗ್ರಹಮಾದಂ ಶಾಂತಿಯಂ ತಾಳ್ದುವ ತೆಱದರವಿಂದಾಖ್ಯಯೋಗೀಂದ್ರವಕ್ಷೋ॥
ನಿಹಿತ ಶ್ರೀವತ್ಸದಾ ಲಾಂಛನಮನೊಲವಿನಿಂ ಕಂಡು ಮೆಯ್ವೆತ್ತುದಂದು।
ರ್ವಹಿ ಕೋಪಾಟೋಪಮಂ ಬಿಟ್ಟೆಸೆದುದು ಶಮದಿಂ
ವಜ್ರಘೋಷದ್ವಿಪೇಂದ್ರಂ ॥ ೧೪೮ ॥

ಚಂ॥ ರವಿರುಚಿಯಿಂದೆ ಬೆಂದಚಳಮಾಗಳೆ ನೀಳಘನಂಗಳಿಂದಮಾ।
ಱುವವೊಲುದಗ್ರಕೋಪವಶಮಾಗಳೆ ತೆತ್ತುಪಶಾಂತಮಾದುದೊ ॥
ಪ್ಪುವ ಕರಿ ಕಾಲಲಬ್ಧಿವಶದಿಂ ಕ್ಷಣದಗ್ಗಳಮಾತ್ಮನಲ್ಲಿ ಪು ।
ಟ್ಟುವ ಪರಿಣಾಮಮುಪ್ಪದಿರದೆಂಬ ಜಿನೋಕ್ತಿಯೆ ಸತ್ಯಮಪ್ಪಿನಂ ॥ ೧೪೯ ॥

ಉ ॥ ಅಂತು ನಿರಂತರಂ ತಳದ ಶಾಂತರಸಂ ಕರೆಗಣ್ಮುವಂದದಿಂ ।
ದಂತರದಿಂದೆ ಸೂಸುತಿರೆ ಕಣ್ಬನಿ ಸಂಯುತನಪ್ಪುದಕ್ಕಿದೋ ॥
ರಂತಿರೆ ಸೂಚಕಂ ಗಡೆನೆ ದುರ್ಮದಮಂ ಬಿಸುಟಾ ಮುನೀಂದ್ರಪಾ ।
ದಾಂತಿಕದಲ್ಲಿ ಬಂದೆಱಗಿದತ್ತುಪಶಾಂತಮನಂ ಮಹಾಗಜಂ ॥ ೧೫೦ ॥

ವ ॥ ಅಂತು ಜಾತಿಸ್ಮರನಾಗಿ ಭದ್ರಜಾತಿಜಾತ ರೂಪಧರರ ಪಾದಪಯೋಜಾತಕ್ಕೆ ಪೂರ್ವಭವದ ನಿಜಸ್ವಾಮಿಯೆಂಬುದನಱಿದೆಱಗಿಪ್ಪುದುಮದಱ ಮುನ್ನಿನ ತೀವ್ರತೆಯುಮಂ ಬಳಿಕ್ಕಾದುಪಶಮಭಾವಮುಮಂ ಕಂಡಿದು ಜಾತಿಸ್ಮರಣಪರಿಣತಮಾಗಲೆವೇಳ್ಕುಮೆಂದು ನಿಶ್ಚಯಿಸಿ ಸಾರ್ಥಪತಿಗಳ್ ಯತಿಪತಿಗಳ್ಗೆ—

ಕಂ॥ ಅವಧಿವಿಲೋಚನದಿಂದೆಸೆ।
ವವರ್ಗಳೆ ತಿರಿಕಂಗಳಪ್ಪುವಂ ತಿಳಿವುಗುಮೆಂ ॥
ದವರ ಪರಿಣಾಮಮುಮಂ ಮಿ ।
ಕ್ಕವರ್ಗಳ್ ತಿಳಿಗುಮೆ ವಿವೇಕವಿರಹಿತಮತಿಗಳ್ ॥ ೧೫೧ ॥

ಮಾತಂಗಂ ನಿಜತಿರ್ಯ ।
ಗ್ಜಾತಿತ್ವಮನೀಗಳಿಂತೆ ಭವದಂಘ್ರಿಪಯೋ ॥
ಜಾತಪ್ರಸಾದದೊಳೆ ಬಿಡು ।
ವೀತೆಱನಂ ಜಲಕನೆಮಗಮಱಿವುಗುಮಲ್ತೇ ॥ ೧೫೨ ॥

ವ॥ ಎಂದದಱ ಜಾತಿಸ್ಮರತ್ವಮುಂ ತಿಳಿದು ಬಿನ್ನವಿಸೆ ಬುದ್ಧಿಗಸಾಧ್ಯಮಿಲ್ಲೆಂದು ಮೆಚ್ಚುತ್ತಮವಧಿಬೋಧದಿನವಗತ ವೃತ್ತಾಂತರಾಗಿ ನಾಗಪತಿಯುಂ ತಿಳಿಪುವ ನೆವದಿಂದ ವರ್ಗಮದಱತೀತ ಜನ್ಮಮುಂ ಪ್ರಕಟಂ ಮಾಡಲ್ವೇಡಿ ಮುನಿಪತಿಗಳಾ ಕರಿಪತಿಗಿಂತೆಂದರ್,

ಕಂ॥ ಮಾತಂ ಕೇಳದೆ ಮುಂ ಮರು।
ಭೂತಿಯನೀತಿಯೊಳ ನಡೆದು ಪುಟ್ಟಿದೆ ತಿರ್ಯ॥
ಗ್ಜಾತಿಯೊಳವಿವೇಕಮೆ ಸುಖ।
ಘಾತಕಮಱಿವೊಂದೆ ದೇಹಿಗಪ್ಪುದು ಸುಖದಂ ॥ ೧೫೩ ॥

ಒಂದಾರ್ತದಿನೊಗೆದಘದಿಂ।
ದಂ ದುರ್ಗತಿವಡೆದೆಯೆಂದೊಡವಿರಳ ಹಿಂಸಾ॥
ನಂದನದಿನಾರ್ತರೌದ್ರದಿ।
ನೊಂದುವ ದುಷ್ಕರ್ಮದಳವನಾರ್ಪವಣಿಸುವರ್ ॥ ೧೫೪ ॥

ಎನೆ ವಿನಯವಿನತವಿಭಪತಿ।
ಮುನಿಪತಿಯ ಮುಖಾರವಿಂದಮಂ ನೋಡಲ್ ನೆ॥
ಟ್ಟನೆ ನಾಣ್ಚಿತಂತೆ ಸಜ್ಜನ।
ರ್ಗನುಚಿತವರ್ತನಮೆ ಲಜ್ಜೆಯುಂ ಮಾಱ್ಪುದೆ ದಲ್ ॥ ೧೫೫ ॥

ವ॥ ಅಂತಾ ದಂತಿ ತಾಗಿ ಬಾಗುವಂದದಿಂದ ವರಪದಾಂಬುಜಕ್ಕೆ ಬಾಗಿ ಕೈಗಣ್ಣುವ ಕಣ್ಬನಿಯ ಪೊನಲೊಳೋಲಾಡುತ್ತಮಿರೆ ಕಾರುಣ್ಯರಸಾರ್ದ್ರಚಿತ್ತಮುನಿಕುಂಜರಂ ಕುಂಜರಂಗೆ ಮತ್ತಿತೆಂದಂ,

ಕಂ॥ ಅಂದಱಿಯದೆಸಗಿದನಯ।
ಕ್ಕಿಂದೀ ತೆಱದಿಂದಮೞಲುತಿರ್ದಡೆ ನಿನಗೇ॥
ವಂದಪುದೊ ಪೋದ ತೊರೆಯುಂ।
ಪಿಂದಂ ಕಟ್ಟುವರೆ ಧರ್ಮಮುಂ ನೆನೆ ಮನದೊಳ್ ॥ ೧೫೬ ॥

ವ॥ ಅಂತು ಕಾರುಣ್ಯಜಳಧಿಗಳ್ ತಿಳಿಪೆ ತಿಳಿದು,

ಮ॥ ಸ್ರ॥ ಶುಭದ ಪ್ರಾಯೋಗ್ಯತಾಪ್ರೋಪಶಮನಸುವಿಶಾದ್ಯಾಖ್ಯಲಬ್ಧತ್ರಯಂಗಳ್।
ವಿಭವಂ ಬೆತ್ತೊಪ್ಪೆ ಸಂದೇಶಮನಹಿತಸಮಾಲಬ್ಧಿಮೆಯ್ದೋಱೆ ವಿದ್ಯಾ॥
ವಿಭುಕಾರುಣ್ಯಾರ್ದ್ರಚಿತ್ತಂ ಯತಿಬೆಸಸುವುದಂ ಕೇಳಲುದ್ಯುಕ್ತಮಾದ।
ತ್ರಿಭರಾಜಂ ಪುಣ್ಯಬೀಜಂ ಸುಕವಿಜನಮನೋಹರ್ಷ ಸಸ್ಯಪ್ರಹರ್ಷಂ ॥೧೫೭॥

— ಗದ್ಯಂ —

ಇದು

ವಿದಿತವಿಬುಧಲೋಕನಾಯಕಾಭಿಪೂಜ್ಯವಾಸುಪೂಜ್ಯಜಿನಮುನಿ
ಪ್ರಸಾದಾಸಾದಿತನಿರ್ಮಳಧರ್ಮ ವಿನುತವಿನೇಯಜನ
ವನಜವನವಿಳಸಿತಕವಿಕುಳತಿಳಕಪ್ರಣೀತಮಪ್ಪ
ಪಾರ್ಶ್ವನಾಥಪುರಾಣದೊಳ್
ಮರುಭೂತಿಚರಗಜರಾಜಾರವಿಂದ ಮುನಿ
ರಾಜ ದರ್ಶನವರ್ಣನಂ.

**ಚತುರ್ಥಾಶ್ವಾಸಂ ಸಮಾಪ್ತಂ**

---

॥ ಶ್ರೀಃ ॥

# ಪಂಚಮಾಶ್ವಾಸಂ

ಕಂ॥ ಶ್ರೀ ಮುನಿಮುಖಮಂ ಬೋಧ ।
ಶ್ರೀ ಮಿತ್ರಾಭ್ಯುದಯ ದಿವಸಮುಖಮಂ ವಿಪುಳ ॥
ಪ್ರೇಮದಿನೀಕ್ಷಿಸುತಿರ್ದುದು ।
ಸಾಮಜಪತಿ ಕೋಕದಂತೆ ಕವಿಕುಳತಿಳಕಂ ॥ ೧ ॥

ಅಂತವರ ಮುಖಾಂಬುಜಮಂ ।
ಮುಂತನೆ ವಿಷಪದಮದೀ ತೆಱದೆ ತನಗಕ್ಕುಂ ॥
ಭ್ರಾಂತಿಲ್ಲದೆಂಬುದಂ ಪೇ ।
ಳ್ವಂತೆಮೆಯಿಕ್ಕದೆ ನಿರೀಕ್ಷಿಸುತ್ತಿರೆ ಭರದಿಂ ॥ ೨ ॥

ಚಂ॥ ಅದಱುಪಶಾಂತಿಯಂ ನೆಗಲ್ದಿ ಹಿಂಸೆಗೆ ಕೊಕ್ಕರಿಸುತ್ತಮಿರ್ಪುದಂ ।
ಪುದಿದಘಬಂಧವಾವತೆಱದಿಂದಮೆ ಪೋಕುಮೆನುತ್ತೆ ಚಿಂತಿಪೊಂ ॥
ದುದಿತವಿವೇಕಮಂ ನಿಜಪದಾಂಬುಜ ಭಕ್ತಿಯನಾತ್ಮನಿಂದೆಗೋ ।
ಪದೆ ತಱಿಸಂದುದಂ ಮುನಿಪರೀಕ್ಷಿಸಿದರ್ ವರಬೋಧದೃಷ್ಟಿಯಿಂ ॥ ೩ ॥

ವ॥ ಅಂತು ನಿರೀಕ್ಷಿಸುತ್ತಮಿರೆ,

ಕಂ॥ ಎಲ್ಲಮುಮಂ ತಿಳಿಪಲ್ಮಿಗೆ ।
ಬಲ್ಲರಿವರ್ ಬಗೆಗೆವಂದುದಂ ಬೆಸಗೊಳ್ವೊ ॥
ಳ್ಪಿಲ್ಲೆನಗದಱಿಂದುಣ ಕ ।
ಲ್ತಲ್ಲಿಯೆ ಹಸಿವಾದುದೆಂಬುದೆನಗಾಯ್ತೊಗಳ್ ॥ ೪ ॥

ವ॥ ಎಂದು ಚಿಂತಾಕ್ರಾಂತವಾದ ದಂತಿಯಭಿಪ್ರಾಯಮನಱಿದು,

ಕಂ॥ ಚಿಂತಿಸದಿರ್ ಭವದೀಯ ।
ಸ್ವಾಂತದೊಳೇನೇನನಱಿವದಕ್ಕುಂಟದನೋ ॥
ರಂತೆ ನುಡಿವಾವೆ ನಿನಗೆ ಸ ।
ಮಂತಱಿಸುವೆಮವಧಿಲೋಚನಕ್ಕರಿದುಂಟೇ ॥ ೫ ॥

ಕಂ॥ ಸ್ವರ್ಮೋಕ್ಷಪದದೊಳತಿಶಮ ।
ಕರ್ಮದ ಪದದೊಳ್ ಸಮಾಶ್ರಿತರನಿರಿಪುದೆ ಸ ॥
ದ್ಧರ್ಮಮದು ತಾಂ ವಿಚಾರಿಸೆ ।
ನಿರ್ಮಳರತ್ನತ್ರಯಾತ್ಮಕಂ ತೊದಳುಂಟೇ ॥ ೬ ॥

ವ॥ ಆ ಪವಿತ್ರ ರತ್ನತ್ರಯಸ್ವರೂಪಮಂ ನಿರೂಪಿಸುವಡೆ,

ಕಂ॥ ವಿನುತ ಪದಾರ್ಥದ ನಂಬುಗೆ ।
ಮನನಂ ನಿಃಪಾಪವೃತ್ತಿಯೆನಿಸುವ ಸದ್ದ ॥
ರ್ಶನಬೋಧವೃತ್ತರೂಪಂ ।
ಜಿನಮಾರ್ಗಂ ಪೊರ್ದೆ ಸುಖದಮೆನಿಸುಗುಮಾರ್ಗಂ ॥ ೭ ॥

ವ ॥ ಆ ಸೂತ್ನ ರತ್ನತ್ರಯಂಗಳೊಳ್ ಸಮ್ಯಗ್ದರ್ಶನವಿಷಯವಿಶೇಷಮಂ ವಿಶೇಷಿಸುವಡೆ,

ಉ ॥ ಆಪ್ತನಶೇಷದೋಷರಹಿತಂ ಜಿನನಾಗಮಕರ್ತೃವಿಶ್ವಸಂ ।
ವ್ಯಾಪ್ತಸಮಗ್ರಬೋಧನಿಧಿಯಾ ಜಿನಭಾಷಿತಮುತ್ತಮಂ ಸುಖ ॥
ಪ್ರಾಪ್ತಿನಿಮಿತ್ತಮೆಂದದಱ ಪೇೞ್ದೆಯಿನಾಚರಿಪರ್ಮುನೀಂದ್ರರೀ ।
ವ್ಯಾಪ್ತಿಯಿನೊಲ್ದು ನಂಬುವುದೆ ದರ್ಶನಮಷ್ಟವಿಧಾಘಕರ್ಶನಂ ॥ ೮ ॥

ಕಂ॥ ಪರಮಹಿತಂ ಪೂರ್ವಾಪರ ।
ವಿರೋಧರಹಿತಂ ತ್ರಿಳೋಕಮಹಿತಂ ಕುಮತೋ ॥
ತ್ಕರ ಸಂಹರಣಂ ಬುಧಜನ ।
ಶರಣಂ ಸರ್ವಜ್ಞಗದಿತಮಾಗಮಮಕ್ಕುಂ ॥ ೯ ॥

ಆಗಮವಿದಿತಂ ವಿಷಯವಿ ।
ರಾಗಂ ಪರಿಹೃತಪರಿಗ್ರಹಂ ಗತಪಾಪೋ ॥
ದ್ಯೋಗಂ ನಿಜಾತ್ಮಭೋಗ ನಿ ।
ಯೋಗನಿಯೋಜಿತಮನಂ ಮುನೀಶ್ವರನೆನಿಕುಂ ॥ ೧೦ ॥

ವ॥ ಆ ಸಮ್ಯಕ್ತ್ವಸ್ವರೂಪಸಾಮರ್ಥ್ಯಮಂ ಕೀರ್ತಿಪಡೆ,

ಸ್ರ ॥ ಜ್ಯೋತಿಷ್ಕಂ ವ್ಯಂತರಂ ಶ್ವತಭವನಭವಂ ನಾರಕಂ ಕುತ್ಸಿತಾಂಗಂ ।
ಸ್ತ್ರೀತಿರ್ಯಗ್ಜಾತಿಷಂಡಂ ಬಡವನಕುಲನಲ್ಪಾಯುವಜ್ಞಾನಿಯಾಗಂ ॥
ಮಾತೇಂ ಸಮ್ಯಕ್ತ್ವಯುಕ್ತಂ ವ್ರತದೆವಿಕಳನಾಗಿರ್ದುಮೆಂದಂದುವೃತ್ತ ।
ವ್ರಾತಕ್ಕಂ ಪಾತ್ರಮಾದಂ ಪಡೆವುದರಿದೆ ನಿರ್ವಾಣಮಂ ಸೇವ್ಯಭವ್ಯಂ ॥ ೧೧ ॥

ಕಂ॥ ಸಂದ ಸುಚರಿತ್ರಬೋಧದೊ ।
ಳೊಂದದೆಯುಂ ದುಃಖಜನಕಮೆನಿಸುವ ನಾಲ್ವ ॥
ತ್ತೊಂದುಂ ತೆಱದಘಬಂಧಮ ।
ನೆಂದುಂ ಕಿಡಿಸುವುದು ನಿರ್ಮಳಂ ಸಮ್ಯಕ್ತ್ವಂ ॥ ೧೨ ॥

ಅಸವಸದಿಂ ದೇಹಿಗೆ ಸಮ ।
ನಿಸಿ ಜಿನರುಚಿಮಾಣ್ಬುದಾದೊಡಂ ಲೇಸಂ ಪು ॥
ಟ್ಟಿಸುಗುಂ ಸುವರ್ಣತೆಯನಾ ।
ಯಸದೊಳ್ ರಸಮೊರ್ಮೆಪುಟ್ಟಿಯುಂ ಪುಟ್ಟಿಪವೋಲ್ ॥ ೧೩ ॥

ಕಂ ॥ ಅದೆ ಸತ್ಕುಲಮದೆ ಸದ್ಭವ ।
ಮದೆ ಸದ್ಗುಣಮದೆ ಸದುಕ್ತಿಯದೆ ಸದ್ವ್ರತಮುಂ ॥
ತದೆ ಸದುಪದೇಶಮೆನಿಸುಗು ।
ಮುದಯಿಸಿತಾವುದಱೊಳತಿಶಯಂ ಶ್ರದ್ಧಾನಂ ॥ ೧೪ ॥

ಎನಿತೊಳವು ಸೌಖ್ಯರಾಶಿಗ ।
ಳನಿತುಂ ಜೀವಕ್ಕೆ ಜನಿಯಿಕುಂ ದರ್ಶನದಿಂ ॥
ದೆನಿತೊಳವು ದುಃಖಕೋಟಿಗ ।
ಳನಿತುಂ ಮಿಥ್ಯಾತ್ವದಿಂದೆ ಸಮನಿಕುಮಲ್ತೇ ॥ ೧೫ ॥

ಅದು ಕಾರಣದಿಂ ಸಮ್ಯ ।
ಕ್ತ್ವದ ಸರಿಜೀವಕ್ಕೆ ಪೆಱತು ಮಿತ್ರಂ ಮಿಥ್ಯಾ ॥
ತ್ವದ ಸರಿ ಪಗೆವಂ ಪೆಱನಿ ।
ಲ್ಲೆದು ನಿಶ್ಚಯಮಲ್ತೆ ಭದ್ರಗುಣಗಜರಾಜಾ ॥ ೧೬ ॥

ಜನಿಯಿಪ ಶಂಕಾದಿಗಳೆಂ ।
ಟನಾಯತನ ಸೇವೆಯಾಱು ಮೂಢಂ ಮೂಱುಂ ॥
ತನುಗತಮದಮೆಂಟಿವು ದ ।
ರ್ಶನಕ್ಕಮಳಮೆಣಿಸೆ ಪಂಚವಿಂಶತಿಯಕ್ಕುಂ ॥ ೧೭ ॥

ವ॥ ಮತ್ತಮಾ ಸಮ್ಯಗ್ದರ್ಶನಮುಂ ದರ್ಶನ ಮೋಹನೀಯಮುಮನಂತಾನುಬಂಧಿನಾಮಕಷಾಯಮುಮಾ ಗತಿಯುಮವರೊಳಗೆ,

ಕಂ ॥ ತತ್ತ್ವದೊಳತತ್ತ್ವಮತಿಯುಮ ।
ತತ್ತ್ವದೊಳಾತತ್ತ್ವ ಬುದ್ಧಿಯಂ ಪುಟ್ಟಿಸಿ ಮಿ ॥
ಥ್ಯಾತ್ವಂ ಜೀವನೊಳಜ್ಞಾ ।
ನಿತ್ವಮನೀಗುಂ ಕುಯೋನಿಯೊಳ್ತೊಟಲಿಸುಗುಂ ॥ ೧೮ ॥

ತಥ್ಯಮುಮನತಥ್ಯಮುಮಂ ।
ತಥ್ಯಮೆನಿಪ್ಪತನುಬುದ್ಧಿಯಂ ಸಲೆಸಮ್ಯ ॥
ಗ್ಮಿಥ್ಯಾತ್ವಂ ಮಾಡುತ್ತುಮ ।
ಪಥ್ಯಮನಾಗಿಪುದು ದುಃಖಮಂ ದೇಹಿಗಳೊಳ್ ॥ ೧೯ ॥

ಖಳಕರ್ಮಮನಳಿಸಿ ನಿ ।
ರ್ಮಳನಿಶ್ಚಳ ಸುಖಮನೀವ ದೃಢದರ್ಶನದೊಳ್ ॥
ಸಲೆ ಸಮ್ಯಕ್ತ್ವಪ್ರಕೃತಿಯೆ ।
ಜಳಮಳಿನಾಗಾಡ ಕಿಟ್ಟಮಂ ಪುಟ್ಟಿಸುಗುಂ ॥ ೨೦ ॥

ಮ ॥ ಅಲಘುಶ್ರೀಯುತನಂ ದರಿದ್ರನಖಿಳಾರ್ಥತ್ಯಾಗಿಯಂ ಲೋಭಿ ನಿ ।
ರ್ಮಳನಂ ಕರ್ಮಿ ಜಗತ್ರಯೈಕಪತಿಯಂ ಭೃತ್ಯಂ ದಯಾನ್ವಿತನಂ ॥
ಖಳಕೋಪಂ ಸುಖಿಯಂ ಸುದುಃಖಿವಿಗತವ್ಯಾಮೋಹನಂ ವ್ಯಾಕುಳಂ ।
ಸಲೆಸರ್ವಜ್ಞನನಜ್ಞನೆಂದೆನಿಸುಗುಂ ಮಿಥ್ಯಾತ್ವಮೀ ಜೀವನಂ ॥ ೨೧ ॥

ಕಂ॥ ಮತಿಕುಮತಿ ಸುಶ್ರುತಂ ಕು ।
ಶ್ರುತಮವಧಿವಿಭಂಗಮೆನಿಸುಗುಂ ಮಿಥ್ಯಾತ್ವಾ ॥
ನ್ವಿತಮಾಮೊಡೆ ಕರ್ಪೂರಂ ।
ಸತತಂ ತೈಲದೊಳೆ ಕೂಡೆ ವಿಷಮೆನಿಸುವವೋಲ್ ॥ ೨೨ ॥

ಸದಮಳ ದರ್ಶನಮುಂ ಭೂ ।
ವಿದಿತ ಸ್ವರ್ಗಾಪವರ್ಗ ಸುಖಕರಮುಂ ತ ॥
ಪ್ಪದೆ ನಿರ್ಮೂಳಿಕುಮಾತ್ಮನೊ ।
ಳೊದವಿದನಂತಾನುಬಂಧಿನಾಮಕಷಾಯಂ ॥ ೨೩ ॥

ಕೋಪಾವಿಳನೊಳ್ ದಯೆ ಮಾ ।
ಯಾಪರನೊಳ್ಋಜುತೆ ಮೃದುತೆ ಮಾನಿನಿಯೊಳ್ ಲೋ ॥
ಭಾಪರನೊಳ್ ಶೌಚಗುಣಂ ।
ಪಾಪಹತಂ ಪುಟ್ಟದಲ್ತೆ ಧರ್ಮಂಕರ್ಮಂ ॥ ೨೪ ॥

ಪ್ರಕಟಿಪೊಡಿಂತಿವು ಸಪ್ತ ।
ಪ್ರಕೃತಿಗಳವಱ ಕ್ಷಯೋಪಶಮದಿಂದಂ ವೇ ॥
ದಕಮುಕ್ಕುಂಕ್ಷಯದಿಂ ಕ್ಷಾ ।
ಯಿಕಮುಪಶಮದಿಂದಮುಪಶಮಂ ಸಮ್ಯಕ್ತ್ವಂ ॥ ೨೫ ॥

ನಿತ್ಯಮಣುವ್ರತಮನದ ।
ಪ್ರತ್ಯಾಖ್ಯಾನಂ ಮಹಾವ್ರತಪ್ರತತಿಗಳಂ ॥
ಪ್ರತ್ಯಾಖ್ಯಾನಂ ಕಿಡಿಕುಂ ।
ಸ್ತುತ್ಯ ಯಥಾಖ್ಯಾತ ಚರಿತಮಂ ಸಂಜ್ವಳನಂ ॥ ೨೬ ॥

ವ॥ ಅದು ಕಾರಣದಿಂ,

ಕಂ॥ ಹೇಯಂ ಮಿಥ್ಯಾತ್ವಮುಪಾ ।
ದೇಯಂ ಸಮ್ಯಕ್ತ್ವಮಖಿಳವಿಷಯಕಷಾಯಂ ॥
ಹೇಯಂ ನಿನಗೆಂದುಮುಪಾ ।
ದೇಯಂ ವ್ರತವಿತತಿ ಸೌಖ್ಯಫಳಕಳ್ಪಕುಜಂ ॥ ೨೭ ॥

ಮ॥ ಸ್ತುತಿವೆತ್ತುತ್ತಮ ಜಾತಿ ಸದ್ಗೃಹತೆ ಪಾರಿವ್ರಾಜ್ಯಮಿಂದ್ರತ್ವಮೂ ।
ರ್ಜಿತರಾಜ್ಯಂ ತ್ರಿಜಗತ್ಪ್ರಪೂಜ್ಯ ಪರಮಾರ್ಹಂತ್ಯಂ ಸುಖಾಕ್ರಾಂತಸಿ ॥
ದ್ಧ್ರತಿಕಾಂತಾ ಪರಿರಂಭಮೆಂಬ ಪರಮುಸ್ಥಾನಂಗಳೊಳ್ಪುಟ್ಟುಗುಂ ।
ವ್ರತಮಂ ತಾಳ್ದಿದ ಸೇವ್ಯಭವ್ಯನೆ ವಲಂ ಸಮ್ಯಕ್ತ್ವ ಸಂಯುಕ್ತಮಂ ॥ ೨೮ ॥

ವ॥ ಆ ವ್ರತಂಗಳಾವುವೆನಿತು ಭೇದಮುಪಕ್ಕುಮೆನೆ,

ಕಂ॥ ಅತಿಶಯ ಸುಖಜನಕಮಣು ।
ವ್ರತಮೈದುಗುಣವ್ರತತ್ರಯಂ ನರಶಿಕ್ಷಾ ॥
ವ್ರತಮವುನಾಲ್ಕೀ ದ್ವಾದಶ ।
ಮತುಳವ್ರತವಿತತಿ ಜೈನಜನಕಾದೇಯಂ ॥ ೨೯ ॥

ಕಂ ॥ ಶ್ರುತಸಮ್ಯಕ್ತ್ವಮಹಿಂಸಾ ।
ನೃತವಿಗತಸ್ತೇಯವಸ್ತ್ವಮೂರ್ಛಾಬ್ರಹ್ಮಂ ॥
ನುತಕರಿಪತಿ ಪೆಸರೊಳಣು ।
ವ್ರತಮಲ್ಲದೆ ನಿನಗೆವನಣುಸೌಖ್ಯಮನೀಗುಂ ॥ ೨೦ ॥

ಮ॥ ಶ್ರುತದಿಂ ಸೂಕ್ತಿಯಹಿಂಸೆಯಿಂ ಸಕಳ ಮೈತ್ರೀಭಾವಮಸ್ತೇಯದಿಂ ।
ವಿತತ ಶ್ರೀ ಪರದಾರವಿತತೆಯಿನಾ ಸೌಭಾಗ್ಯಮಾಕಾಂಕ್ಷಣ ॥
ಸ್ಕೃತಿಯಿಂದಕ್ಷಯಮೋಕ್ಷಸಂಜನಿತ ಸೌಖ್ಯಂ ಮತ್ತಸತ್ಯಾದಿಯಿಂ ।
ಪ್ರತಿಕೂಳಂ ಪಳಮಿಂತಿವಕ್ಕೆ ಸಮನಿಕ್ಕುಂ ಕುಂಜರಾಧೀಶ್ವರಾ ॥ ೨೧ ॥

ವ॥ ಎಂದಿಂತು,

ಮ ॥ ಸ್ರ ॥ ನಯನಿಕ್ಷೇಪಪ್ರಮಾಣಂಗಳಿನಿಭಪತಿಗಾವಾವ ತತ್ವಂಗಳೊಳ್ ಸಂ ।
ಶಯಮುಂಟಾಗಿರ್ಕುಮಂತೆಲ್ಲಮನಱಿಪಿ ದಯಾಂಭೋಧಿ ಹಸ್ತಸ್ಥರೇಖಾ ॥
ತ್ರಯಮಂ ಪ್ರವ್ಯಕ್ತಮಂ ಮಾಡುವ ತೆಱದಿನವಂ ವ್ಯಕ್ತಮಂ ಮಾಡೆ ಬೋಧಾ ।
ತ್ರಯಮನನ್ಯೂನಾತಿರಿಕ್ತಂ ತಿಳಿದು ಕಳೆದುದಾನಂದಮಂ ತತ್ಕರೀಂದ್ರಂ ॥ ೨೨ ॥

ಕಂ ॥ ಅವಿವೇಕರುಜೆಯನಿಭಪುಂ ।
ಗವನಱಿಪಲ್ಕಱಿಯದಿರ್ದೊಡಂ ಕಳೆದರ್ತ ॥
ಪ್ರ್ಮವಚನ ರಸಾಯನದೆ ಬಾ ।
ಳವೈದ್ಯನವೋಲವಧಿ ಬೋಧನಿರೆ ಯತಿಪತಿಗಳ್ ॥ ೨೩ ॥

ಎಂತೆಂತು ತಿಳಿಪುಗುಂ ಯತಿ ।
ಯಂತಂತಾ ದಂತಿಯಂತರಂಗದೊಳುದ್ಬೋ ॥
ಧಂ ತಲೆದೋಱಿದುದಿನರುಚಿ ।
ಸಂತತಿ ತಱ್ಕೈಸಿದಮುಳಕಮುಳದ ತೆಱದಿಂ ॥ ೨೪ ॥

ಚಂ॥ ಪರಿಹರಿಸುತ್ತೆ ಸಂಶಯ ವಿಮೋಹನವಿಭ್ರಮಮಂ ಸ್ವಕೀಯವಾಕ್ ।
ಸ್ಫುರಿತ ಖನಿತ್ರದಿಂ ನಯಪವಿತ್ರದಿನಪ್ರತಿಮಂ ಯತೀಶ್ವರಂ ॥
ಕರಿವರಹೃತ್ಸರಾಭವ ವಿವೇಕ ವಿಶುದ್ಧ ಜಲಪ್ರವಾಹಮಂ ।
ನಿರುಪಮ ಧರ್ಮನಂದನವನೆಯ್ದಿಸಿದಂ ವನಪಾಳನಂದದಿಂ ॥ ೨೫ ॥

ಕಂ ॥ ಈಯಂಶಂ ತಿಳಿದುದು ಮ ।
ತ್ತೀಯಂಶಂ ತಿಳಿಯದೆಂಬುದಂ ತಿಳಿದು ಸುಖೋ ॥
ಪಾಯದಱಿವದಱೊಳೆಸೆದಿರೆ ।
ಹೇಯೋಪಾದೇಯ ತತ್ವಮಂ ನಿರವಿಸಿದರ್ ॥ ೨೬ ॥

ವ॥ ಅಂತು ಸಮ್ಯಗ್ದರ್ಶನಾದ್ಯುಪಾದೇಯ ತತ್ವಮುಮಾ ಮಿಥ್ಯಾದಿ ಹೇಯ ತತ್ವಮುಮಂ ಪ್ರಶಸ್ತಮತಿಗಳ್ ಸವಿಸ್ತರಮಱಿಪೆ ಕರಿಪತಿ ತನ್ಮುನಿಪತಿಯ ನಯನರುಚಿರ ವಚನದೀಪವರ್ತಿಯಿಂ ಪಿಡಿವನೂನಶ್ರದ್ಧಾನ ನಿದಾನಮಂ ಸಾಧಿಸಲೆಂದುದಕ್ಕೆ ತುಚ್ಛಾಚ್ಛಾದನಮೆನಿಸಿದ ದರ್ಶನ ಮೋಹನೀಯಕ್ಷೋಣಿಪಟಳವಿಘಟನಪಟುಖನಿತ್ರಮೆನಿಸಿರ್ದವಂ,

ಕಂ॥ ಅತಿಕಳಮುಂ ತಳೆದಧಃಪ್ರ ।
ವೃತ್ತಕರಣಮನಪೂರ್ವಕರಣಮನನಿತುಂ ನಿ ॥
ವೃತ್ತಿವಿಶೇಷಕರಣಮಂ ।
ಕೃತದರ್ಶನ ಮೋಹನೀಯ ಬಳಭೇದಕಮಂ ॥ ೩೭ ॥

ವ॥ ಅಂತನಂತ ಸುಖಸಂತತಿ ನಿಮಿತ್ತ ಸಮ್ಯಕ್ತ್ವ ಲಕ್ಷ್ಮೀನೇತ್ರ ಶತಪತ್ರ ತರುಣ ತರಣಿ ಕಿರಣಮೆನಿಪ ಕರಣತ್ರಯದೊಳ್ ಪ್ರತಿಸಮಯಮನಂತ ಗುಣವಿಶೋಧಿಯುಂ ಸ್ಥಿತಿಬಂಧಾಪಸರಣಮುಂ ಪ್ರತಿಕ್ಷಣಮನಂತ ಗುಣಾಧಿಕಹೀನ ಶುಭಾಶುಭ ಕರ್ಮಾನುಭಾಗ ಬಂಧಂಗಳುಮೆಂಬ ಚತುರಾವಶ್ಯಕ ಚತುರಂ ಪ್ರಥಮಕರಣದೊಳಂತರ್ಮುಹೂರ್ತಂ ಪ್ರವರ್ತಿಸಿ ಮತ್ತಂ ಪೂರ್ವೋಕ್ತಾವಶ್ಯಕಯುಕ್ತಂ ಗುಣಶ್ರೇಣಿ ಗುಣಸಂಕ್ರಮಣ ಸ್ಥಿತ್ಯನುಭಾಗ ಕಾಂಡಕಘಾತವಿಸೂತಾವಶ್ಯಕ ಚತುಷ್ಟಯವಿಶಿಷ್ಟಂ ದ್ವಿತೀಯ ಕರಣದೊಳನಿತೆ ಪೊಳ್ತು ವರ್ತಿಸೆ ಸುದರ್ಶನ ವನಿತಾ ವಶೀಕರಣವಶ್ಯಾಷ್ಟಾವಶ್ಯಕೋತ್ಕೃಷ್ಟಾ ನಿವೃತ್ತಿಕರಣ ಪರಿಣತಂ ಸ್ವಾಂತರ್ಮುಹೂರ್ತ ಚರಮಭಾಗದೊಳ್ ದರ್ಶನ ಮೋಹನೀಯ ಭಾಗಾಂತರಕರಣಾಂತಃಕರಣಮಂ ನಿರ್ವರ್ತಿಸೆ ಮತ್ತಂ ಕಿಱಿದು ಪೊಳ್ತಿರೊಳ್ ಯದಾಗಮದ ನಿಷೇಕಪ್ರಮದ ಸ್ಥಿತಿಯನನುಭವಿಸುತ್ತಮುಪರಿತನ ದ್ವಿತೀಯ ಸ್ಥಿತಿಯೊಳ್,

ಕಂ॥ ಘನವಿಷಯ ವಿಷಾಸ್ಥಿತ ದ ।
ರ್ಶನ ಮೋಹಮಹಾಹಿ ಕೋಪದೃಢದಂಷ್ಟ್ರಾ ಬಂ ॥
ಧನಮುನುಪಮುಶಮವಿಧಿಯಿಂ ।
ಜನಿಯಿಸಿತದು ತರಳ ವೈದ್ಯನೆನೆ ಗಜರಾಜಂ ॥ ೩೮ ॥

ವ॥ ಆಗಳುಪಶಾಂತದೃಙ್ಮೋಹಧ್ವಾಂತಾಂತರ ಪ್ರಥಮ ಸಮಯ ದಿವಸ ಮುಖದೊಳ್,

ಕಂ॥ ಪ್ರತಿಕೂಲಕರ್ಮಮೇಘಂ ।
ಪ್ರತಿಸಮಯಾನಂತಗುಣವಿಶೋಧಿಮಹಾ ಮಾ ॥
ರುತನಿಂ ಕಿಡೆದರ್ಶನ ರವಿ ।
ಮಾತಂಗಂ ಹೃದಯನಭದೊಳೇನೊಪ್ಪಿದುದೋ ॥ ೩೯ ॥

ಕತಕಫಳೋಪಮ ಶುಭಪರಿ ।
ಣತಿಯಿಂದೆ ನಿಜಾಂತರಂಗ ವಿಪುಳ ಸರಸ್ಸಂ ॥
ಗತಸಪ್ತಪ್ರಕೃತಿ ಕಳಂ ।
ಕತೆ ತೊಲಗಿರೆ ಪುಟ್ಟಿತುಪಶಮಂ ಸಮ್ಯಕ್ತ್ವಂ ॥ ೪೦ ॥

ಘನಬೋಧ ಲೋಹರಸ ಸಂ ।
ಜನಿತ ಸ್ಪರ್ಶನಮನಮೃತಯುವತಿ ಮುಖಾದ ॥
ರ್ಶನಮಂ ಕರಿ ಸಮ್ಯಗ್ದ ।
ರ್ಶನಮಂ ಪಡೆದತ್ತನಾದಿಭವ ದುರ್ಲಭಮಂ ॥ ೪೧ ॥

ವ॥ ಅಂತುದಯಿಸಿದ,

ಕಂ॥ ವರದರ್ಶನಕುಳಿಶದಿನು ।
ದ್ಧರ ಮಿಥ್ಯಾತ್ವಾದ್ರಿಪಕ್ಷಮಂ ದ್ವಿರದೇಂದ್ರಂ ॥
ಭರದಿಂ ಖಂಡಿಸೆ ಮುಕ್ಕಡಿ ।
ನಿರತಂ ತಾನಾಯ್ತು ದುಸ್ತರಂ ಮಿಥ್ಯಾತ್ವಂ ॥ ೪೨ ॥

ವ॥ ಅಂತಾ ಪ್ರಥಮೋಪಶಮ ಸಮ್ಯಕ್ತ್ವಮಂತರ್ಮುಹೂರ್ತ ನಿಃಪ್ರತಿಪಕ್ಷ ವೃತ್ತಿಯಿಂ ಮತ್ತಗಜಚಿತ್ತಗೃಹದೊಳ್ ತೊಳಗಿ ಬೆಳಗುತ್ತಿರೆ,

ಕಂ॥ ಪ್ರಕೃತಿಗಳೊಳ್ ಸಮ್ಯಕ್ತ್ವ ।
ಪ್ರಕೃತಿಯೆ ತಲೆದೋಱೆಯುಪಶಮಕ್ಕುೞಿದಾಱುಂ ॥
ಪ್ರಕೃತಿಗಳೊಳಗಾಗಿರೆ ವೇ ।
ದಕಮುದಯಿಸಿತಾ ಗಜೇಂದ್ರನೊಳ್ ಸಮ್ಯಕ್ತ್ವಂ ॥ ೪೩ ॥

ವ॥ ಅಂತಾ ಸುದೃಷ್ಟಿರತ್ನಂ ಗಜರತ್ನದದೃಷ್ಟವಶದಿನನಂತಾನುಬಂಧಿಪಾಪಂ ದಿಕ್ ಪ್ರಕರಕರಕ್ಕೊಳಗಾಗದೆ ಮಿಥ್ಯಾತ್ವ ವಜ್ರಘಾತದಿಂ ಶತಚೂರ್ಣಮಾಗದೆ ಸಮ್ಯಗ್ಮಿಥ್ಯಾತ್ವ ಕರ್ದಮಮಂ ಪೊರ್ದದೆ ಸಮ್ಯಕ್ತ್ವಪ್ರಕೃತಿಯೆಂಬ ಮಿತ್ರನಕ್ಕೆಗೆವಿರ್ದು ಬರ್ದುಂಕಿ ಬಂದುದನಾ ಮುಮುಕ್ಷುಗಳ್ ಪ್ರತ್ಯಕ್ಷೇಕ್ಷಣದಿಂ ನಿರೀಕ್ಷಿಸಿ ತಮ್ಮಂತರಂಗದೊಳ್ ಸಂತಸಂಬಟ್ಟು ಬೞಿಕ್ಕದಕ್ಕಿಂತೆಂದರ್,

ಕಂ॥ ಉಗ್ರತರ ದುರಿತ ವಿಪಿನ ಸ ।
ಮಗ್ರ ದವಾನಳಮೆನಿಪ್ಪ ನಿರ್ಮಳ ಸಮ್ಯ ॥
ಕ್ತ್ವಗ್ರಹಣಂ ನಿರ್ವೃತಿ ಪಾ ।
ಣಿಗ್ರಹಣಂ ಪ್ರಾಣಿಗಳ್ಗದೇಂ ತೊಡಳುಂಟೇ ॥ ೪೪ ॥

ಆ ನೆಗೞ್ದ ಸಪ್ತಪರಮ ।
ಸ್ಥಾನಂ ಸಮ್ಯಕ್ತ್ವದಿಂದಮತಿದುಃಸಹ ದುಃ ॥
ಖಾನೀಕ ಸಪ್ತನರಕ ।
ಸ್ಥಾನಂ ಮಿಥ್ಯಾತ್ವದಿಂದೆ ಜೀವಕ್ಕಕ್ಕುಂ ॥ ೪೫ ॥

ಭವಜಳಧಿಯುತರಿಕಡು ನಾ ।
ರೆವಲಂ ನಿನಗಲ್ಲದಂದು ಸಮನಿಪುದೆ ಸುಖಾ ॥
ರ್ಣವ ಪೂರ್ಣಚಂದ್ರನಘತಿಮಿ ।
ರ ವಿಭೇದನ ತರಣಿ ಗುಣದ ಕಣಿಸಮ್ಯಕ್ತ್ವಂ ॥ ೪೬ ॥

ಮೊದಲೊಳುದಿಯಿಸಿದುದುಪಶಮ ।
ಮದಱಿಂ ಬೞಿಕಾದುದಲ್ತೆ ವೇದಕಮದು ತ ॥
ಪ್ಪದೆ ನಿನ್ನ ಹೃದಯದೊಳ್ ನೆಲ ।
ಸಿದೊಡಕ್ಕುಂ ಕ್ಷಾಯಿಕಂ ಸುದರ್ಶನರತ್ನಂ ॥ ೪೭ ॥

ಮ ॥ ಪರಮಾರ್ಥಂ ಪರಮೋಪಶಾಂತಿಗೆ ನಿದಾನಂ ಜೈನಧರ್ಮಕ್ಕುದಾ ।
ಹರಣಂ ನೀನಿತರಕ್ಕುದಾಹರಣನಾ ನಿನ್ನಗ್ರಜನ್ಮಂ ದುರಾ ॥
ಚರಣಂ ಚಂದ್ರಮನಂ ತಮಂ ವಿಮಳನಂನಿಃಕಾರಣಂ ಪೀಡಿಪಂ ।
ತಿರೆ ನಿನ್ನಂ ಬಿಡದೆಯ್ದೆ ಪೀಡಿಸುತವಂದಾ ಸ್ಥಾನದೊಳ್ ಪುಟ್ಟುಗುಂ ॥ ೪೮ ॥

ವ ॥ ಅದೆಂತೆನೆ,

ಮ ॥ ಕಮಠಂ ಕುಕ್ಕುಟಸರ್ಪನುಗ್ರಭಯಕೃದ್ಧೂಮಪ್ರಭೋರ್ಥಂ ಮಹಾ ।
ಹಿಮವಚ್ಛೈಳಮಹಾಹಿಷಷ್ಠನರಕೋರ್ವೀನಾರಕಂ ವ್ಯಾಧನ ॥
ಪ್ರಮದುಃಖಾಬ್ಧಿತಮಃ ಪ್ರಭಾವನಿಭವಂ ಕಂಠೀರವಂ ಷಷ್ಠಭೂ ।
ಭ್ರಮಿತಂ ತೀವ್ರತಪಸ್ವಿದೈತ್ಯನೆನೆ ಕೇಳ್ ದುಃಖಕ್ಕೆ ಪಕ್ಕಾದಪಂ ॥ ೪೯ ॥

ವ ॥ 'ಗುರುತ್ವಾದಧಃಪಾತ'ಯೆಂಬ ಯುಕ್ತಿಯಂ ವೇತ್ತಂ ಮಾೞ್ಪ ದುರ್ಗತಿ ಭಾಜನಂ ನಿಸರ್ಗಕೋಪದಿಂ ನಿನಗೆಸಗುವುಪಸರ್ಗಂ ಸುವರ್ಣಕಗ್ನಿಸಂಯೋಗ ವರ್ಣೋತ್ಕರ್ಷಮಂ ಪಡೆವಂತುತ್ತರೋತ್ತರ ಸುಖಪ್ರದಮನೊದವಿಸುತ್ತಂ ಸಕಳ ಕಳಂಕ ನಿರ್ಮುಕ್ತಿಪದಮಂ ಕೆಲವೆ ಭವದೊಳೆ ಪಡೆಗುಮದೆಂತೆನೆ,

ಮ ॥ ಅಭಿಜಾತಂ ಮರುಭೂತಿಭದ್ರಗುಣಮಾತಂಗಂ ಸಹಸ್ರಾರಕ ।
ಲ್ಪಭವಂ ಖೇಚರನಚ್ಯುತಂ ನೃಪವರಂ ಗ್ರೈವೇಯಕೋದ್ಭಾಸಿ ಭೂ ॥
ವಿಭುವಾನಂದಕನಾನತೇಂದ್ರನಮರೇಂದ್ರಾಹೀಂದ್ರ ಭೂಪೇಂದ್ರ ವ ।
ಲ್ಲಭ ಪಾರ್ಶ್ವಾಧಿಪನಾಗಿ ನೀನೆ ಪಡೆವೈ ಸತ್ಸೌಖ್ಯಸನ್ಮೋಕ್ಷಮಂ ॥ ೫೦ ॥

ಕಂ ॥ ಎಂದಿಂತು ಪೇೞೆ ಯತಿಪತಿ ।
ಸಂದೆಯಮಿಲ್ಲೆಂದೆ ನಂಬಿ ಪೊಣ್ಮಿದ ಪರಮಾ ॥
ನಂದದ ಬಾಷ್ಪಾಂಜಳಿಯಿಂ ।
ಮಿಂದೆಯ್ದೆ ಪವಿತ್ರಗಾತ್ರನಾಗಿರೆ ನಾಗಂ ॥ ೫೧ ॥

ತೊಳಗುವ ನೊಸಲೊಳ್ ಮುಖರುಚಿ ।
ಮಳಯಜದಿಂ ತಿಳಕಮಿಟ್ಟು ಕಾರುಣ್ಯಾ ಸುಸಿ ॥
ರ್ಮಳ ಗಂಧೋದಕಮಯಮಂ ।
ತಳಿದು ಕರೀಂದ್ರದ ವಿಶಾಳಕುಂಭಸ್ಥಳದೊಳ್ ॥ ೫೨ ॥

ವ ॥ ವೃಕ್ಷಾಯುರ್ವೇದ ನಿವೇದಿತ ದಿವ್ಯೌಷಧ ವಿಧಾನದಿಂ ಸದ್ಬೀಜಾಂಕುರ ಪಲ್ಲವಪ್ರಸವಸಂಪತ್ತಿಯಿನೊರ್ಮೊದಲೆ ಪಡೆವಂತೆಸೆದುಪದೇಶಲಬ್ಧಿವಶದಿಂ ನಿನ್ನಂತ ರಂಗದೊಳ್ ಮುನ್ನಮೆ ಸಮ್ಯಗ್ದರ್ಶನರತ್ನಂ ಭಾವವ್ರತಪರಿಣತಮಾಗಿಯೆ ಪುಟ್ಟಿತ್ತಾ ದೊಡಂ ವ್ಯವಹಾರ ಸಮಾಶ್ರಯದಿಂ ನಿನಗವಂ ದೃಢಂ ಮಾಡಲ್ವೇಡಿಯಾತ್ಮಾದಿ ಸಾಕ್ಷಿಕ ಮಾರಾಧಿಸಿದಪ್ಪಮೆಂದು,

ಮ ॥ ಸಕಳಶ್ರಾವಕವಿಶ್ರುತವ್ರತಮನಾ ನಾಗಕ್ಕೆ ಸಮ್ಯಕ್ತ್ವಪೂ ।
ರ್ವಕಮಾಗಿತ್ತು ಮುನೀಶ್ವರರ್ಮಗುೞೆ ನಾನಾ ತೀರ್ಥಮಂ ಪುಣ್ಯಸಾ ॥
ಧಕಮಂ ವಂದಿಸಲೆಂದು ಪೋದರಿಭಮುಂ ತಾಂ ಮಾಡಿದತ್ಯುಗ್ರಪಾ ।
ತಕಮಂ ಚಿಂತಿಸಿ ನೋಂತೊಡಲ್ಲದಿದನಿನ್ನೆಂತುಂ ಗೆಲಲ್ ಬರ್ಕುಮೇ ॥ ೫೩ ॥

ವ॥ ಎಂದಾ ಸಿಂಧುರವರಮರವಿಂದಮುನೀಂದ್ರರ್ ಪರಮಕಾರುಣ್ಯದಿನಿತ್ತುತ್ತಮ ವ್ರತವಿತ್ತಮಂ ಚಿತ್ತದೊಳ್ತಾಳ್ದಿ ತತ್ಪರಿರಕ್ಷಣಪ್ರವರ್ಧನತತ್ಪರಂ ತನ್ನಂತರಂಗದೊಳಿಂ ತೆಂಗುಂ

ಕಂ॥ ಜೀವದಯಾಸಮಮೆನಿಸವ ।
ವಾವುಂ ಚರಿತಂಗಳಂತೆ ಚಿಂತಾಮಣಿಯೊ ॥
ಲ್ದೀವುದನೀಪ್ಸಿತವಸ್ತುವ ।
ನೀವುದೆ ಕೃಪೆಯೆನಿತು ಘನತೆಯಂ ಮಾಡಿದೊಡಂ ॥ ೫೪ ॥

ವ॥ ಎಂದು ಸಕಳಧರ್ಮ ಕಲ್ಪತರುಮೂಳಮೆನಿಪಖಿಳಸತ್ವಾನುಕಂಪಾಂಕುಶ ವಶನಾಗಿ,

ಕಂ॥ ಪೋಪೆಡೆಯೊಳೊಱಗುವೆಡೆಯೊ ।
ಳ್ನೀಪಂ ಕೊಳ್ವೆಡೆಯೊಳುದಕಮಂ ಕುಡಿವೆಡೆಯೊಳ್ ॥
ಪಾಪಲವಕ್ಕುಮಾಗದವೊ ।
ಲಾಪೊಲ್ಲಂ ನೆಗೞ್ದುದರಿದು ಕರಿಭದ್ರಗುಣಂ ॥ ೫೫ ॥

ಪಸಿವಿಂದಸು ಪೋಪೊಡಮುದು ।
ಪಸಿಯಂ ಪಲ್ಲವಮನುಡಿದು ಮೇಯದು ತೃಷೆ ಬಾ ॥
ಧಿಸೆಯುಂ ಕುಡಿಯದು ಕರಿ ಸ್ಪ ।
ರಿಸಿ ನಿರ್ಝರ ಜಳಮನಲ್ಲದುಳಿದಂಬುಗಳಂ ॥ ೫೬ ॥

ಉಪವಾಸದಿನಂಗಳೆ ಪಲ ।
ವು ಪಾರಣೆಯದಿನಮೆ ಕೆಲವು ನೆನೆದಡದೊಡಲಂ ॥
ಕ್ಷಪಿಯಿಸಿ ಭವಮುಘಬಂಧ ।
ಕ್ಕುಪಚಯಮದಱಿಂದಮಪ್ಪುದೆಂಬೀ ಮುಳಿಸಿಂ ॥ ೫೭ ॥

ಅವಮೋದರ್ಯದಿನುಪವಾ ।
ಸವಿಧಿಗಳಿಂ ಕರಮೆ ನೋಂತು ಬಡವಾಯ್ತು ಭವಾ ॥
ರ್ಣವಮಂ ದಾಂಟಿಪ ಜಿನಮತ ।
ದವಹಿತ್ರಮನೇಱಲ್ತತ್ಕರಿಗುಚಿತಮೆ ದಲ್ ॥ ೫೮ ॥

ತ್ರಸಮಂ ಕರಿಪತಿ ಪರಿರ ।
ಕ್ಷಿಸುವುದದೇನರಿದೆ ಬಹುವಿಧಸ್ಥಾವರಮಂ ॥
ಪಸರಿಪ ದಯೆಯಿಂ ಪರಿರ ।
ಕ್ಷಿಸಿದಪುದೆನೆ ವಿಪುಳಪಾಪ ಭೀತಮನಸ್ಕಂ ॥ ೫೯ ॥

ಸತ್ವಂಗಳೊಳನುಗತ ಮಿ ।
ಥ್ಯಾತ್ವಂ ತಲೆದೋಱೆ ಮೋಷಮುಕ್ಕಿಂ ಮಿಗೆ ಭ ॥
ವ್ಯತ್ವಮಿರೆ ಗುಣವಿಕಾಸಂ ।
ತತ್ವವಿದರಮುತದಿನದುವೆ ದಿಟವಾಯ್ತಿಭದೊಳ್ ॥ ೬೦ ॥

ವ॥ ಅಂತು ನಿರಂತರಮುತ್ತರೋತ್ತರ ಚರಿತ್ರದಿಂ ನೆಗೞುತ್ತಮಿರ್ದೊಂದು ದಿವಸಂ,

ಉ॥ ಆವಗಮನ್ಯವನ್ಯಕರಿಸಂತತಿ ನೀರುಣಲೆ ತಾಂ ಬೞಿಕ್ಕೆ ವೇ ।
ಗಾವತಿಗಾ ಗಜಾಳಿ ನಡೆದಧ್ವದೊಳೊಯ್ಯನೆ ನೀರನೂಡಲೆಂ ॥
ದಾ ವರ ವಜ್ರಘೋಷಕರಿ ಪೋಗುತೆ ತತ್ತಟದಾನೆ ಗಂಪಲೊಳ್ ।
ಭಾವಿಸದೆಯ್ದೆ ಪೊಕ್ಕ ಬಳಮುೞ್ದಿರೆ ಕಂಡತಿರೋಷದೂಷಿತಂ ॥ ೬೧ ॥

ಕಂ॥ ಕಮಠಚರಕುರ್ಕುಟೋರಗ ।
ಮಮರ್ದಿರೆ ಮಸ್ತಕಕೆ ವಾರಣಾರಿಯು ತೆಱದಿಂ ॥
ದಮೆ ಪಾಯ್ದುಕೊಂಡೊಡದಱ ವಿ ।
ಷಮ ವಿಷಮಾವರಿಸೆ ತನ್ನನವಹಿತಚೇತಂ ॥ ೬೨ ॥

ಚಂ॥ ಪರಮಸಹಾಯನಾದುದಘದುರ್ದಮಕರ್ದಮ ನಿರ್ಗಮಕ್ಕಿದೆಂ ।
ಬುರುತರ ಶಾಂತಿ ತನ್ನೊಳಿರೆ ತಾನಘಕರ್ದಮಮಂ ಜಿನಕ್ರಮಾಂ ॥
ಬುರುಹನಖಾಂಶು ನಿರ್ಮಳತರಾಂಬುಗಳಿಂ ತೊಳೆವೆಂ ದಲೆಂದು ತಾಂ ।
ಪರಮ ಜಿನೇಂದ್ರ ಚಾರುಚರಣಸ್ಮರಣಂ ವರವನ್ಯವಾರಣಂ ॥ ೬೩ ॥

ಕಂ॥ ಒಡಲುಮನಾ ಕರ್ದಮದೊಳ್ ।
ಪಡಿಯೆನೆ ಬೇರ್ಕೆಯ್ದು ನಿಜದ ಭಾವನೆ ಮನದೊಳ್ ॥
ತೊಡರ್ದಿರೆ ಕರ್ಮದ ತೊಡರಂ ।
ತೊಡರಂ ಪರಿವಂತೆ ಪರಿದುದಾ ಗಜರಾಜಂ ॥ ೬೪ ॥

ಜೈನಪದಂಬಿಡಿದು ಸುಖ ।
ಸ್ಥಾನಕ್ಕಮರಪದವಿಗಾನೆ ಬಿರ್ದೋಡೆ ತನ್ನಂ ॥
ತಾನೆ ನೆಗಪುವುದೆನಿಪ್ಪುದ ।
ನಾ ನಾಗಂ ನನ್ನಿಮಾಡೆ ನೆಗಪಿತು ತನ್ನಂ ॥ ೬೫ ॥

ಉ॥ ಅಗ್ಗಳಮಪ್ಪ ವಿದ್ಯೆಕುಲಮೆಂಬಿವು ದರ್ಶನ ಶುದ್ಧಿಯಿಲ್ಲದಿ ।
ರ್ಪೆಗ್ಗನೊಳಪ್ಪುದಲ್ತೆ ವಿಫಳಂ ಮರುಭೂತಿಗಿವಿರ್ದುಮಾಯ್ತುತಿ ॥
ರ್ಯಗ್ಗತಿಯಂತವಿಲ್ಲದ ಕುಯೋನಿಯೊಳಂ ಜಿನಭಕ್ತಿಯೊಂದಱಿಂ ।
ಸಗ್ಗವದಾದುದಂತದಱಿನರ್ಚಿಸುಗೂರ್ಜಿತ ಜೈನಭಕ್ತಿಯಿಂ ॥ ೬೬ ॥

ವ ॥ ಆ ನಾಕಲೋಕದಾಕಾರಮೆಂತೆಂದೊಡೆ, ಮಂದರ ಶೈಳಮೂಳಂ ಮೂಳಂ ಲೋಕಾಗ್ರಮಗ್ರಮೆನಿಸಿದ ಸಪ್ತರಜ್ವಾಯಾಮ ವ್ಯೋಮದೊಳೇಕ ಲಕ್ಷಯೋಜನಂ ಕುಂದಿದೊಂದುವರೆ ರಜ್ಜುವರಂ ಷಷ್ಟಿಲಕ್ಷಸಂಖ್ಯಾನ ವಿಮಾನಂಗಳನೊಳಕೊಂಡು ಗಗನ ಮಂಡಳ ಮಂಡನಮೆನಿಸಿ ಸೌಧರ್ಮೈಶಾನ ಕಲ್ಪದ್ವಯಮಲ್ಲಿಂ ಮೇಲೆ ತತ್ಪ್ರಮಾಣಾ ಯಾಮ ರಜ್ಜುವಿನೊಳ್ ವಿಂಶತಿ ಲಕ್ಷತ್ರಿದಶಸದನ ಶೋಭಿತ ಸನತ್ಕುಮಾರಮಾಹೇಂದ್ರಕಲ್ಪ ದ್ವಂದ್ವಂ ತತ್ಪರಿಮಿನಭೋವಿಭಾಗದೊಳನುಕ್ರಮದಿಂದಾಱೆಡೆಯೊಳರ್ಧರಜ್ಜು ವಿಸ್ತಾರಿಗ ಳಾಗಿ, ಚತುರ್ಲಕ್ಷವಿಬುಧಾಲಯೋಪಲಕ್ಷಿತ ಬ್ರಹ್ಮಬ್ರಹ್ಮೋತ್ತರ ಕಲ್ಪದ್ವಿತಯಂ

ಪಂಚಾಶತ್ಸಹಸ್ರ ನಿರ್ಜರನಿವಾಸಾಂಚಿತ ಲಾಂತವಕಾಪಿಷ್ಠ ಕಲ್ಪಯುಗ್ಮಂ ಚತ್ವಾರಿಂಶತ್ಸಹಸ್ರದೇವಗೇಹಮಹಿತ ಶುಕ್ರಮಹಾಶುಕ್ರ ಕಲ್ಪಯುಗಂ ಷಟ್ಸಹಸ್ರದಿವಿಜಭವನವಿನುತ ಶತಾರಸಹಸ್ರಾರ ಕಲ್ಪಯುಗಳಂ ಸಪ್ತಶತಾಮರದಾಮಾಭಿರಾಮಾನತ ಪ್ರಾಣತಾರಣಾಚ್ಯುತಕಲ್ಪದೊಳ್ ಶತಚತುಷ್ಟಯಂ ತದಗ್ರಿಮಭಾಗದೊಳೇಕರಜ್ಜೂಚ್ಛ್ರಾಯ ವಿಯತ್ತಳದೊಳ್ ಮೇಲೆ ಮೇಲೆ ಲೀಲೆವಡೆದೇಕಾದಶೋತ್ತರ ಶತಾಮರ್ತ್ಯ ಹರ್ಮ್ಯರವ್ಯೋಧಸ್ಥಗ್ರೈವೇಯಕತ್ರಯಂ ಸಪ್ತಾಧಿಕಶತಸುಮನಸ್ಶರಣಸಮುದಿತ ಮಧ್ಯಮಗ್ರೈವೇಯಕತ್ರಿತಯವೇಕಾಗ್ರ ನವತಿ ನಾಕಿನೀಲಸಿತೋಪರಿ ಗ್ರೈವೇಯಕತ್ರಯಂ ನವರತ್ನರಂಜಿತ ನವಾನುದಿಶೆ ಪಂಚರತ್ನಾಂಚಿತ ಪಂಚಾನುತ್ತರೆ ಚೆಲ್ವುವೆತ್ತಿರ್ಪುವಿವೆಲ್ಲಂ ಕೂಡಿ ಚತುರಶೀತಿಲಕ್ಷಸಪ್ತನವತಿಸಹಸ್ರ ತ್ರಯೋವಿಂಶತಿ ಸಂಖ್ಯಾನಂಗಳುಮಿಂದ್ರಕ ಶ್ರೇಢೀಬದ್ಧಪ್ರಕೀರ್ಣಕಾಭಿಧಾನಂಗಳುಂ ಸಂಖ್ಯಾತಾಸಂಖ್ಯಾತೋಭಯವಿಸ್ತಾರಂಗಳುಮಮರಸಮಿತಿರಚಿತ ನಿತ್ಯಪೂಜಾವಿರಾಜಿತಾವಿಳಯ ಜಿನನಿಳಯ ವಿಳಸಿತಂಗಳುಮಾಗಿರ್ಪುವು, ಮತ್ತಮವಱ ಚೆಲ್ವಂ ಬಿತ್ತರಿಸುವೊಡೆ,

ಕಂ॥ ಸುರಕುಧರಮಧಿಷ್ಠಾನದ ।
ಗಿರಿಯಂ ಪಡೆವಿನೆಗಮಿತ್ತರದಿನೆಂಟೆಂಟಂ ॥
ಕರುಮಾಡಮನಡಕಿಲ್ದೊಂ ।
ಡಿರೆ ಸರಸಿಜಭವನೆ ಮಾಡಿದಂತೆಸೆದಿರ್ಕುಂ ॥ ೬೭ ॥

ಕಲ್ಪಂಗಳ್ಪದಿನಾಱುವಿ ।
ಕಳ್ಪಿಸೆ ಶಶಿಕಳೆಗಳಂದದಿಂದಂ ನಯನ ॥
ಕ್ಕೊಳ್ಪಂ ಪಡೆಯುತ್ತಿರ್ಪವ ।
ನಲ್ಪಸುಖಾಮೃತಮನಾವಗಂ ಕರೆಯುತ್ತುಂ ॥ ೬೮ ॥

ಗ್ರೈವೇಯಕಮಮರ ಶ್ರೀ ।
ಗ್ರೈವೇಯಕಮೆನಿಸಿ ಸೊಗಯಿಕುಂ ನವರತ್ನ ॥
ಶ್ರೀವಿಳಸಿತಮದುನಯನೇಂ ।
ದೀವರ ಹರ್ಷಾವಕಾಶ ಶಶಿಸಂಕಾಶಂ ॥ ೬೯ ॥

ಸುರಸದ್ಮಪ್ರಾಸಾದ ।
ಕ್ಕುರುಮಣಿರುಚಿರಂ ನವಾನುದಿಶೆ ಘಂಟೆಯವೋಲ್ ॥
ಪರಿಶೋಭಿಸೆ ಪಂಚಾನು ।
ತ್ತರೆ ಶಶಿಮಣಿಕಳಶದಂತೆ ಕಣ್ಗೊಳಿಸಿರ್ಕುಂ ॥ ೭೦ ॥

ವ॥ ಅಂತುಮಲ್ಲದೆ,

ಮ॥ ಸ್ರ॥ ವರಮುಕ್ತಸ್ಥಾನ ಜೈನಾಶ್ರಯದ ಸುಖನಿವಾಸಂ..... ಸನ್ನುತಾನು ।
ತ್ತರೆ ಲಕ್ಷ್ಮೀಮಂಡಪಂ ಮಿಕ್ಕನುದಿಶೆ ವಿತತದ್ವಾರವಾಟಾಳಿ ರತ್ನ ॥
ಸ್ಫುರಿತಗ್ರೈವೇಯಕ ಶ್ರೇಣಿಗಳೆನೆ ಗಣಿಕಾವಾಟದೊಂದಂದದಿಂದಿ ।
ರ್ತರದಿಂದೆಂಟೆಂಟು ಕಲ್ಪಂ ಮಿಗೆ ಸೊಗಯಿಸುಗುಂ
ದೇವಕಾಂತಾಳಿಕಾಂತಂ ॥ ೭೧ ॥

ವ॥ ಆ ಕಳ್ಪಜರ ಕಳ್ಪಾತೀತರನಲ್ಪಸುಖಸುಧಾಸಮಮೆನಿಸಿದಾಯುರಾದಿಗಳಂ ವಿಕಳ್ಪಿಸುವೊಡೆ,

ಕಂ॥ ವರಸೌಧರ್ಮೇಶಾನದೊ ।
ಳೆರಡೆ ಸಮ ಸನತ್ಕುಮಾರ ಮಾಹೇಂದ್ರದೊಳೇ ॥
ೞ್ಕಿರುತಂ ಬ್ರಹ್ಮಬ್ರಹ್ಮೋ ।
ತ್ತರದೊಳ್ಪತ್ತಕ್ಕುಮಾಯುರಂಭೋನಿಧಿಗಳ್ ॥ ೭೨ ॥
ಲಾಂತವಕಾಪಿಷ್ಮದೊಳೋ ।
ರಂತಿರೆ ಪದಿನಾಲ್ಕು ಮತ್ತಮುೞಿದಿರ್ದವರೊಳ್ ॥
ಭ್ರಾಂತೇನೆರಡೆರಡಧಿಕಂ ।
ಕಾಂತಾಚ್ಯುತಕಲ್ಪಮವಧಿಯೆನೆ ವನನಿಧಿಗಳ್ ॥ ೭೩ ॥
ಗ್ರೈವೇಯಕಮೊಂಬತ್ತರೊ ।
ಳಾವಗಮೊಂದೊಂದೆ ಪೆರ್ಚಯನುದಿಶೆಗಕ್ಕುಂ ॥
ಮೂವತ್ತೆರಡು ಸಮುದ್ರಂ ।
ಭಾವಿಸೆ ಮೂವತ್ತಮೂಱನುತ್ತರೆಗಕ್ಕುಂ ॥ ೭೪ ॥
ದ್ವಿತಯ ದ್ವಿತಯ ಚತುಷ್ಕ ।
ದ್ವಿತಯ ಚತುಷ್ಕ ಪ್ರತೀತ ತ್ರಿತಯತ್ರಿತಯ ॥
ಚತುರ್ದಶತ್ರಿದಿವಸಸ್ಥಳದೊಳ್ ।
ವಿತತಸ್ಥಳದಮರ ಸಮಿತಿಯಂಗೋತ್ಸೇಧಂ ॥ ೭೫ ॥
ಮೊದಲಿಂ ಮೊೞನೇೞಾಱ ।
ಯ್ದುದಱಿಂ ನಾಲ್ಕುಮೂಱುವರೆಮೂಱು ಬೞಿ ॥
ಕ್ಕದಱಿಂದಳಹೀನಂ ಬೞಿ ।
ಕದಱಿಂದಂ ಬೞಿಕಮೊರ್ಮೊೞನೆ ತೊದಳುಂಟೇ ॥ ೭೬ ॥
ಮೊದಲೆರಡೆರಡರೊಳಂ ತ ।
ಪ್ಪದೆ ಕಾಯಸ್ಪರ್ಶರೂಪಮನೋಹರ ಶಬ್ದ ॥
ಪ್ರವಿಚಾರಮನಾಂತಾನಿಃ ।
ಪ್ರವಿಚಾರಮನಾಂತುದು ಕಾಮಮುಸುಖಮಲ್ತೇ ॥ ೭೭ ॥
ಒಳಗಣ ಶುಭಲೇಶ್ಯಾಸಂ ।
ಕುಳಕ್ಕೆಸಲೆಸದೃಶಮೆನಿಸಿ ಸುರರಶರೀರಂ ॥
ಪಳಿಕಿನ ಕರಡಿಗೆಯೆನೆ ನಿ ।
ರ್ಮಳಿನಂ ತದ್ರುಚಿಯನಾಂತು ಕಣ್ಗೊಳಿಸಿಕುರ್ಂ ॥ ೭೮ ॥
ಮಾಸಾರ್ಧಕ್ಕೊರ್ಮೆಗಡು ।
ಚ್ಛ್ವಾಸಂ ಸಮನಿಸುವುದೇಕಶರಧಿ ಸ್ಥಿತಿವೆ ॥
ತ್ತಾಸುರರ್ಗಮೃತಾಹಾರದೊ ।
ಳಾಸಕ್ತಿ ಸಹಸ್ರವತ್ಸರಕ್ಕೊಡರಿಸುಗುಂ ॥ ೭೯ ॥

ಕಂ ॥ ದಿವ್ಯಕಳೇವರ ಕಳಿತರ್ ।
ದಿವ್ಯಾಂಬರ ದಿವ್ಯಗಂಧದಿವ್ಯಾಭರಣರ್ ॥
ದಿವ್ಯಾನ್ನದಿವ್ಯಮಾಳಾ ।
ದಿವ್ಯವಧೂಮಧುರ ಭೋಗನಿಧಿಗಳ್ ದಿವ್ಯರ್ ॥ ೮೦ ॥
ಮೇಗಣ ಮೇಗಣ ಸುರರ ಸು ।
ಖಾಗಮಮುಱೆ ವಾಯುಬೋಧಮಧಿಕಂ ದೇಹಾ ॥
ಭೋಗಂ ಕುಂದುವುದೆಂದು ಜಿ ।
ನಾಗಮವಿದರಱೆವರುಱೆದ ಜಡರಱೆದಪರೇ ॥ ೮೧ ॥
ಮೊದಲಯುಗಳದೊಳೆ ಸುದತಿಯು ।
ರುದಯಿಪರವರಿತರದಿವದದಿವಿಜರ್ಗಪ್ಪರ್ ॥
ಸುದತಿಯರೊಂದೆಡೆಯೊಳೆ ಪು ।
ಟ್ಟಿದ ಮಣಿಗಳೆ ಮಹಿಗೆ ತುಡುಗೆಯೆನಿಸುವ ತೇಜದಿಂ ॥ ೮೨ ॥
ಜಿನಮಹ ಮುಖ್ಯತೆಯೊಂದ ।
ಲ್ತೆ ನಿಮಿತ್ತಂ ತತ್ಸುರೇಂದ್ರರುನ್ನತಿಗಿತರೇಂ ॥
ದ್ರನಿಕಾಯಕ್ಕಂ ವನಿತಾ ।
ಜನಮುಂ ಪಡೆದೀಪಪೆಂಪುಮಲ್ತೆ ನಿಮಿತ್ತಂ ॥ ೮೩ ॥

ವ ॥ ಅಂತು ನಿರಂತರವೇಕಾಂತ ನಿಸರ್ಗಸುಖ ಸಂಸರ್ಗಮೆನಿಪ್ಪಾ ಸ್ವರ್ಗಂಗಳೊಳಗೆ,

ಕಂ ॥ ಮನದೊಳ್ ಭಾವಿಸೆ ಪನ್ನೆರ ।
ಡನೂನವ್ರತಮನಗೀತನುತ್ಪ್ರೇಕ್ಷೆಗಳಂ ॥
ಜನಿಯಿಸಿತದು ಕರಿಪನ್ನೆರ ।
ಡನೆಯ ಸಹಸ್ರಾರಕಲ್ಪದೊಳ್ ಸುಖಪದದೊಳ್ ॥ ೮೪ ॥
ಕರಮೆಸೆವ ಮುತ್ತುಚಿಪ್ಪಿನ ।
ಮಱೆಯೊಳ್ ಪಜ್ಜಳಿಸೆ ತೋರ್ಪತೇಜದಿಂ ಚೆಲ್ವಾ ॥
ವರಿಸಿದುಪಪಾದತಳ್ಪದ ।
ಪೊರೆಯೊಳ್ ಸಂಭವಿಸಿ ತೊಳಗಿ ಬೆಳಗಿದನಮರಂ ॥ ೮೫ ॥
ಅಱೆಕೆಯ ಮನಸಿಜ ಸುಖದೊಂ ।
ದಱವಟ್ಟೆಯೆನಿಪಮರರಮಣಿಯ ಪುಣ್ಯಮೆ ಕ ॥
ಣ್ದೆಱೆವಂತೆ ವಿಮಾನದ ಪಡಿ ।
ತೆಱೆವುದೆ ದೆಸೆದೆಸೆಗೆ ಕಂಪು ಪಸರಿಸುವಿನೆಗಂ ॥ ೮೬ ॥
ಸುಮನೋವಲ್ಲಭನಿವನೆಂ ।
ದಮರಗಣಕ್ಕೆಲ್ಲಮಱೆಪುವಂತಾ ಕ್ಷಣದೊಳ್ ॥
ಸುಮನೋವರ್ಷಂ ಸುರಿದುದು ।
ನಮೇರುಮಂದಾರ ಪಾರಿಜಾತಪ್ರಭವಂ ॥ ೮೭ ॥

ಕಂ ॥ ಪರಿವೃತ ಜನನ ಸಮುದ್ಭವ ।
ಪರಿವಾರಮನೋನುರಾಗ ಲತಿಕಾಂಕುರಮಂ ॥
ತರದಿಂ ನೆಗಪುತ್ತ್ರಂ ಬಿ ।
ತ್ತರದಿಂ ತೀಡಿತ್ತು ಮಂದಚಾರುಸಮೀರಂ ॥ ೮೮ ॥

ಚಂ॥ ಗುಡಿಗೃಹ ದೇವತಾನಿಕರದೊಳ್ನಿರಿಯಂತೆ ವಿಮಾನರಾಜಿಯೊ ।
ಳ್ಗಿಡೆಗೊಳೆರತ್ನತೋರಣದ ಸಂತತಿ ತತ್ಕಟಿಸೂತ್ರಶೋಭೆಯಂ ॥
ಪಡೆಯೆ ತದೀಯ ನರ್ತನಲಯೋಚಿತ ವಾದ್ಯನಿನಾದದಂದದಿಂ ।
ದೊಡರಿಸೆ ಮಂಗಳಾನಕರವಂ ಜನನೋತ್ಸವಮೊಪ್ಪಿತಾತನಾ ॥ ೮೯ ॥

ವ ॥ ಅಂತು ಪುಣ್ಯಪುಂಜನ ಜನನಕ್ಷಣ ವಸಂತಸಮಯಮನಮರಸಮಿತಿ ಚೇತೋನಂದನಾನಂದಮನೆತ್ತಂ ಬಿತ್ತರಿಸೆ,

ಚಂ॥ ಸ್ತನಕಳಶಕ್ಕೆ ಪೊಂಗಳಶಮಾನನಶೋಭೆಗೆ ರತ್ನದರ್ಪಣಂ ।
ವಿನುತವಿಶಾಳಲೋಚನ ಮರೀಚಿಗೆ ಮಲ್ಲಿಗೆಯರ್ಚಮಾಲೆ ಬೆ ॥
ಳ್ಪನೆ ಕರೆಯುತ್ತಮಿರ್ಪನಗೆಗಕ್ಷತಮಂತೆಣೆಯಾಗೆ ಬಂದರಂ ।
ದನುಪಮರಾಗದಿಂ ತಳೆದು ಮಂಗಳವಸ್ತುಗಳಂ ಲತಾಂಗಿಯರ್ ॥ ೯೦ ॥

ವ॥ ಅಂತು ತನತನಗೆ ಸೇಸೆಯಿಕ್ಕಲೆಂದು ಬಂದನಿಕಾಮಕೋಮಳಾಮರ ಕಾಮಿನಿಯರುಮನೇಕ ಭಂಗಿ ಸಂಗತ ಸಭಾವ ಸಂಭಾವನಾರಂಭೋರುಹರಂಭಾ ನೃತ್ಯಾನುಗಗಂಧರ್ವಗಣಗೇಯಮಾನ ಬಂಧುರಗೇಯ ದಿವಿಜವಾದಕ ವಾದ್ಯಮಾನ ಹೃದ್ಯನಿನಾದ ಮುಂ ನಿಳಿಂಪ ಪುಣ್ಯಪಾಠಕವರ್ಯ ಸಮುಚ್ಚಾರ್ಯಮಾಣಜಯ ಜೀವ ನಂದವರ್ಧಸ್ವರದಮುಂ ಲೋಚನಗೋಚರಮುಂ ಶ್ರವಣರಮಣೀಯಮುಮಾಕಸ್ಮಿಕ ಮಾಗೆ,

ಚಂ॥ ತುಱುಗಿದನೂನಕಾನನದೊಳೊರ್ವನೆ ದಿಗ್ಭ್ರಮೆಯಿಂ ತೊಲಲ್ದು ಬಂ ।
ದೊಱಗಿದನಂತದರ್ಜಿತ ಸಮೂರ್ಜಿತಪುಣ್ಯದಿನೊರ್ವನಿಂದ್ರನ ॥
ಲ್ಕಱೊಳೆನಿಜಾಲತಾಲಯಸುಶಯ್ಯೆಯೊಳಂದಿರಿಸಿರ್ದೊಡಾಗಳೆ ।
ಚ್ಚಱುತಮೆ ವಿಸ್ಮಯಂಬಡುವವೋಲ್ ಮಿಗೆ ವಿಸ್ಮಿತನಾದನಾ ಸುರಂ ॥ ೯೧ ॥

ವ॥ ಅಂತು ವಿಸ್ಮಿತಾಂತರಂಗನಾಗಿ,

ಮ ॥ ಇದು ತಾನಾವುದೊ ಲೋಕಮೀ ಪರಿಜನಂತಾನಾರದಾನಾರ್ಗೆ ಯಾ ।
ವುದನಾರಿಂದಮೆ ನೋನ್ತೆನೆಂಬಿನೆಗೆಮಾ ದೇವಂ ಭವತ್ಪ್ರತ್ಯಯಂ ॥
ವಿದಿತಂ ತೊಟ್ಟನೆ ಪುಟ್ಟೆ ಬೋಧಮಱಿದಂ ಸ್ವರ್ಲೋಕಮೀ ಸೈನ್ಯಮೆ ।
ನ್ನದು ಮುನ್ನಾಂ ಗಜಮಂದುನೋಂತೆನರವಿಂದ
ಶ್ರೀ ಮುನೀಂದ್ರೋತ್ತಮಂ ॥ ೯೨ ॥

ವ॥ ಎಂದಿಂತು ಸುಪ್ರತೀತಾತೀತ ಸಾಂಪ್ರತ ಜನ್ಮವೃತ್ತಾಂತನಾಗಿರ್ಪನ್ನೆಗಂ ಮಹತ್ತರ ದೇವಿಯರೆಯ್ದೆವಂದು,

ಚಂ॥ ಸೊಗಯಿಪ ಪಾರಿಜಾತ ಹರಿಚಂದನಪುಷ್ಪದಿನಾದ ಬಣ್ಣವಾ ।
ಸಿಗಮುಮನೊಪ್ಪುತಿರ್ಪತಿವಿಚಿತ್ರ ಸುವಸ್ತ್ರ ಸುರತ್ನ ಭೂಷಣಾ ॥
ಳಿಗಳುಮನಾಗಳೋಲಗಿಸಿ ಮುತ್ತಿನ ಸೇಸೆಯನಿಕ್ಕಿ ಸಂತಸಂ ।
ಮಿಗೆಪೊಡವಟ್ಟು ಬಿನ್ನವಿಸಿದರ್ ವಿಭುಗಾ ಸುರಮಂತ್ರಿಕಾಂತೆಯರ್ ॥ ೯೩ ॥
ತ್ರಿದಶನಿವಾಸಮಿಂತಿದು ನಿಜೂರ್ಜಿತ ಪುಣ್ಯದಿನಾದುದೀ ವಿಮಾ ।
ನದೊಳನುಬಂಧಿಸಿರ್ಪ ವನಿತಾಜನಮೀಪರಿವಾರಮೆಯ್ದೆ ನಿ ॥
ನ್ನದು ಮದನಾಸ್ತ್ರಮೂರ್ತಿ ರಮಣೀನಯನೋತ್ಪಳ ಹರ್ಷದಾಯಿಯ ।
ಪ್ಪುದರೊಳೆ ದೇವ ನೀಂ ವರಶಶಿಪ್ರಭನೈ ಸುಖವಾರ್ಧಿ ವರ್ಧನಾ ॥ ೯೪ ॥

ಕಂ॥ ಇನಿತು ವಿಭವಂ ನಿನಗೆ ಸಂ ।
ಜನಿಯಿಸಿದುದು ಜಿನಪದಾಬ್ಜ ಭಕ್ತಿಯಿನಿನ್ನುಂ ॥
ಜಿನನನೆ ಪೂಜಿಸು ಪುಣ್ಯಮ ।
ನನುಭವಿಸುತಮಱಿವನದನೆ ನೆರಪಲೆವೇಳ್ಕುಂ ॥ ೯೫ ॥

ಎನೆ ಮನದೆಗೊಂಡು ವಿವಿಧಾ ।
ರ್ಚನೆಯಿಂ ಜಿನಚೈತ್ಯರಾಜಿಯಂ ಭಕ್ತಿಭರಾ ॥
ವನತಂ ಪೂಜಿಸಿ ತಳೆದಂ ।
ಘನಪುಳಕಮನಮರಕಾಮಿನೀಮುಖತಿಳಕಂ ॥ ೯೬ ॥

ವ॥ ಅಂತು ಕಳೆದು ಬಱಿಯಂ,

ಮ॥ ಪರಿವಾರಂ ಬೆರಸಾ ಶಶಿಪ್ರಭಸುರಂ ತಾರೇಶನಂತಂಶುವಂ ।
ಬರಮಂ ಚಿತ್ರಿಸೆ ಬಂದು ದಿವ್ಯಮಣಿಯಿಂ ದಿವ್ಯಾರ್ಚನಾದ್ರವ್ಯದಿಂ ॥
ದರವಿಂದಪ್ರತಿನಾಥನಿರ್ದ ಶಿಲೆಯಂ ತತ್ಕುಂಜರಾದ್ಯರ್ಕಳೀ ।
ವರಮಂ ಪೂಜಿಸಿದಂ ಸ್ವಕೀಯಸುರಲೋಕಶ್ರೀನಿಮಿತ್ತಂಗಳಂ ॥ ೯೭ ॥

ಕಂ॥ ಪರಿವೃತವಿಮಾನಮಣಿಗಣ ।
ಮರೀಚಿಯಂ ತನ್ನಯರುಚಿಯಿನರುಚಿ ದೀಪಾಂ ॥
ಕುರಮನಿಱಿಪಂತಿರಿಱಿಪುದು ।
ವರಸ್ವಯಂಪ್ರಭವಿಮಾನಮಪ್ರತಿಮಾನಂ ॥ ೯೮ ॥

ನಾನಾ ರತ್ನವಿಮಾನಾ ।
ನೂನಪ್ರಭೆಯಂ ಪ್ರಭಾಖ್ಯಾನಸುಖ ॥
ಸ್ಥಾನವಿಮಾನಪ್ರಭೆ ಗೆ ।
ಲ್ವಾನಾಮಮಂ ತನಗೆ ಸಾಮ್ಯಮೆನೆ ಸೊಗಯಿಸುಗುಂ ॥ ೯೯ ॥

ವ॥ ಆ ವಿರಾಜಮಾನವಿಮಾನದೊಳ್,

ಚಂ॥ ಸುರುಚಿರರತ್ನಗೇಹಸಹಜಾಭರಣಪ್ರಭೆಯಂ ಸ್ವದೀಪ್ತಿ ಬಿ ।
ತ್ತರಿಸೆ ಸುರದ್ರುಮಪ್ರಸರಶೇಖರಸೌರಭಮಂ ನಿಜಾಂಗ ಬಂ ॥
ಧುರತರಗಂಧವಿರ್ಮಡಿಸೆ ಕಾಂತಿಯ ತಿಂಥಿಣಿಸಾರಸೌರಭಾ ।
ಕರನೆನೆ ಕಣ್ಗೆವಂದನಮರೀಜನಕಂತುನಿಭಂ ಶಶಿಪ್ರಭಂ ॥ ೧೦೦ ॥

ಕಂ॥ ಮೂಱುವರೆಮೊೞನೆನಿಪ ತನು ।
ಬೀರುತ್ತಲರಂಬಿನಂದದಿಂ ತನಿಗಂಪಂ ॥
ನೀರೆಯರ ಮನಮನೆೞಗಿಸೆ ।
ಜಾರೆಂ ಜವ್ವನದಿನಮರನೆಸೆದಂ ನಿಸದಂ ॥ ೧೦೧ ॥

ಅಯಮೂರ್ತಿ ಪುಕ್ಲಶೋಣಿತ ।
ಮಯನಲ್ಲಂ ಮೌಕ್ತಿಕಾರಣಾತ್ಮದ್ಯುತಿ ಸಂ ॥
ಚಯದಿಂದೆ ಶುಕ್ಲಶೋಣಿತ ।
ಮಯನೆನಿಪಂ ದಿವಿಜನಿಂತು ಚಿತ್ರಚರಿತ್ರಂ ॥ ೧೦೨ ॥

ಸಹಜಾಂಬರ ಭೂಷಾಸ್ತ್ರ ।
ನ್ಮಹಿತಂ ಮಳರಹಿತನಾತ್ತ್ಮಯೌವನ ಶೋಭಾ ॥
ವಿಹಿತಂ ನೆನೆವಂ ಷೋಡಶ ।
ಸಹಸ್ರವರ್ಷಕ್ಕದೊರ್ಮೆ ದಿವ್ಯಾಶನಮಂ ॥ ೧೦೩ ॥

ಲಲಿತಮುಖಕಮಳ ಪರಿಮಳ ।
ಮಿಳಿತಂ ಮಳಯರುಹಪವನನಂ ನೆನೆಯಿಸೆ ನಿ ॥
ರ್ಮಲನೆಂಟುತಿಂಗಳಂದಿಂ ।
ಗಲಘುಸುಖಾಂಬೋಧಿ ಸುಯ್ವನೊರ್ಮೆ ಸುರೇಶಂ ॥ ೧೦೪ ॥

ಮಾತಿನೊಳೆ ವಿನೂತಮನೋ ।
ಜಾತಸುಖಮನಮರರಮಣಿಯರ್ ಸಕಳಕಳಾ ॥
ನ್ವೀತಂಗೆ ಪಡೆದು ಶಬ್ದಾ ।
ದ್ವೈತಮನಭಿನಯಿಪ ವಾಣಿಯಂ ನೆನೆಯಿಸಿದಂ ॥ ೧೦೫ ॥

ಮ॥ ಹರಿನೀಳಾಶನಿಮಾಣಿಕಂ ಮಹಿಸುತಂ ಮುಕ್ತಾಫಳಂ ಭಾರ್ಗವಂ ।
ಗರುಡೋದ್ಗಾರಿ ಶಶಾಂಕಜಂ ಮರಕತಂ ಸ್ವರ್ಭಾನು ಗೋಮೇಧಿಕಂ ॥
ಗುರುವಾಗಂಬರಮಂ ಸ್ವಯಂಪ್ರಭವಿಮಾನಂ ಪೋಲೆ ಪುಣ್ಯೋದಯಂ ।
ಬೆರಸಿರ್ದಂ ಶಶಿವೋಲ್ ಶಶಿಪ್ರಭಸುರಂ ರುಕ್ಚಂದ್ರಿಕಾ ಭಾಸುರಂ ॥ ೧೦೬ ॥

ಚತುರಸ್ತ್ರೀ ಕಮಳಾಂಚಿತಂ ವಿನಯರತ್ನಂ ಪುಣ್ಯವೇಳಾಸಮು ।
ನ್ನಿತಮಾಹ್ಲಾದಿ ವಿನೋದ ವಿಭ್ರಮಯುತಂ ದಾನಾಮರೋರ್ವೀಜರಾ ॥
ಜಿತಮಾ ಷೋಡಶ ಸಾಗರೋಪಮ ಪಲಂ ಸಂಸಾರಸೌಖ್ಯಾಮೃತೋ ।
ನ್ನತಿಯಿಂ ಮತ್ತೆ ಶಶಿಪ್ರಭಂ ಸೊಗಯಿಸುತ್ತಿರ್ದಂ ಕಳಾವಲ್ಲಭಂ ॥ ೧೦೭ ॥

ಉ॥ ಮೆಲ್ಪಳವಟ್ಟು ತೋಱಿನುಡಿಯಲ್ನಡೆಯಲ್ದನಿಮುಟ್ಟಿ ಪಾಡಲೋ ।
ದಲ್ಪೊಸತಾಗೆ ನರ್ತಿಸಲಭೀಕ್ಷಿಸಲೊಲ್ಮೆಯನುಂಟುಮಾಡಿ ಪೊ ॥
ರ್ದಲ್ಪರಿಹಾಸಮಂ ಮೆಱೆಯಲೆಂಬನೆ ಬಲ್ಲಮರಾಂಗನಾಳಿ ಸಂ ।
ಕಲ್ಪಜನೊಪ್ಪುತ ತ್ರಿದಿವದೊಳ್ ನಿರುತಂ ಸುಖಮಿರ್ಪನಾಗಳುಂ ॥ ೧೦೮ ॥

ಕಂ ॥ ಗರಿವಾಣಿಮಾಜ್ಞತೆಗರ್ಘ ।
ಜಿನೇಶ್ವರಾರ್ಚನಾ ಸೂಕ್ತಿಸರಸಂ ವಾಣೀ ॥
ವತ್ಯಮೆನೆ ಶುಕ್ಲಶುಭತರ ।
ಲೇಶ್ಯೆಯನೊಳಕೊಂಡು ಸೊಗಯಿಪಂ ಸುರರಾಜಂ ॥ ೧೦೯ ॥

ಮ ॥ ಸ್ರ ॥ ರಸಗೇಯಂ ಭಾವನೃತ್ಯಂ ಪಡೆಯೆ ಸುಲಯ ವಾದ್ಯಂ ಮನಕ್ಕೆಂದುಮೊಳ್ಪಂ ।
ಪಸಿವುಂ ನೀರಟ್ಕೆಯುಂ ನಿದ್ದೆಯುಮಲಸುಗೆಯುಂ ಮಾಣ್ದಿದೆಂಬಂದದಿಂ ಮಾ॥
ಣಿಸಿ ಲೀಲಾಪಾಂಗದೇವೀ ನಿವಹಸತತ ಶಬ್ದಪ್ರವೀಚಾರದಿಂ ಸಂ ।
ತಸಮಂ ತಾಳ್ದುತ್ತಮಿರ್ದಂ ವಿಬುಧಜನಮೆನಲ್ ಪದ್ಮಿನೀಪದ್ಮಮಿತ್ರಂ ॥ ೧೧೦ ॥

॥ ಗದ್ಯ ॥

ಇದು
ವಿದಿತವಿಬುಧಲೋಕನಾಯಕಾಭಿಪೂಜ್ಯವಾಸುಪೂಜ್ಯಜಿನಮುನಿ
ಪ್ರಸಾದಾಸಾದಿತನಿರ್ಮಳಧರ್ಮ ವಿನುತವಿನೇಯಜನ
ವನಜವನವಿಳಸಿತಕವಿಕುಳತಿಳಕಪ್ರಣೀತಮಪ್ಪ
ಪಾರ್ಶ್ವನಾಥಪುರಾಣದೊಳ್ ಶಶಿಪ್ರಭ
ದೇವವಿಭವ ವರ್ಣನಂ

**ಪಂಚಮಾಶ್ವಾಸಂ ಸಮಾಪ್ತಂ.**

---

॥ ಶ್ರೀಃ ॥

# ಷಷ್ಠಾಶ್ವಾಸಂ

ಕಂ॥ ಶ್ರೀ ಸುರಲಲನಾಪಾಂಗ ವಿ ।
ಭಾಸಲತಾ ಲಲಿತಕಲ್ಪತರು ಚೇತೋವ ॥
ಲ್ಲೀಸಂಶೋಭಿತ ಜಿನಪತಿ ।
ಭಾಸುರಪದಕಲ್ಪಶಾಖಿ ಕವಿಕುಳತಿಳಕಂ ॥ ೧ ॥

ವ॥ ಅಂತಾ ನಾಕಪತಿ ನಾಕಲೋಕ ಸಂಜನಿತ ಸುಖಾನೀಕಮನನಾಕುಳಚಿತ್ತ ನನುಭವಿಸುತ್ತಮಿರೆ,

ಉ॥ ಸೋಸಿಸಲೆಂದು ಬರ್ಪಯುಮ ತೇಜದಳುರ್ಕೆಗೆ ಬಾಡುವಂದದಿಂ ।
ಬಾಸಿಗಮೆಯ್ದೆ ಬಾಡಿದುದು ತದ್ಬಳರೇಣುಗೆ ಮಾಸುವಂದದಿಂ ॥
ಮಾಸಿತು ಸೇಸೆ ತನ್ನೃಪನ ಸೈನ್ಯದ ಘಟ್ಟನದಿಂದೆ ಕಂಪಿಪಂ ।
ತಾಸುರಮಾಗಿ ಕಂಪಿಸಿತು ನೆಟ್ಟನೆ ರತ್ನಪಿನದ್ಧ ಕುಟ್ಟಿಮಂ ॥ ೨ ॥

ವ॥ ಅಂತು ತನ್ನಾಯುರವಸಾನಸೂಚಕ ದುಶ್ಚಿಹ್ನಂಗಳ್ತೋಱೆ ಬಗೆ ಬೆದಱೆ ಬಱಿಯುಮವಧಿಯಂ ಪ್ರಯೋಗಿಸಿ ಷಣ್ಮಾಸಾವಧಿಯೆ ನಿಜಜೀವಿತಮೆಂದು ನಿಶ್ಚಯಿಸಿ,

ಉ॥ ಸೂಡಿದ ಬಾಸಿಗಂ ಬಿಡದೆ ಬಾಡಿದುದಂ ನಿಜವಕ್ತ್ರ ಪಂಕಜಂ ।
ಬಾಡದೆ ತನ್ನ ಸನ್ನುತ ವಿಮಾನದ ರತ್ನಪಿನದ್ಧ ಭೂಮಿಯು ॥
ಳ್ಬಾಡಿದೊಡಂ ಸ್ವಕೀಯಧೃತಿ ಮೂಳಮನೋಲತಿಕಾಗ್ರಮೆಂದುಮ ।
ಳ್ಬಾಡದದೊಪ್ಪೆ ದರ್ಶನವಿಶುದ್ಧತೆಯಂ ಮೆಱೆದಂ ಸುರೇಶ್ವರಂ ॥ ೩ ॥

ಕಂ॥ ಅಱಿಯುದಗಿವು ದುಶ್ಚಿಹ್ನಂ ।
ಪೆಱತೇನಱಿವುಳ್ಳವಂಗೆ ಶುಭಚಿಹ್ನಂ ಮೆ ॥
ಯ್ಮಱೆದಿಂತಿರವೇಡೆಂದೆ ।
ಚ್ಚಱಿಸಿ ಶುಭಾಕ್ರಾಂತ ಚಿಂತೆಯಂ ಮಾಳ್ಪುದಱಿಂ ॥ ೪ ॥

ಪಡೆಯಲ್ಕಾರ್ಪದನರ್ಘಂ ।
ಕಿಡೆ ಧೃತಿಗಿಡದಂತು ದಿವಿಜನುಂ ಮುಂದೆ ಸುಖಂ ॥
ಬಡೆವಾರ್ಪಿನಿಂದೆ ಧೈರ್ಯಂ ।
ಗೆಡದೆ ಜಿನೇಶ್ವರ ಪದಾಬ್ಜಮಂ ಪೂಜಿಸಿದಂ ॥ ೫ ॥

ವ॥ ಅಂತಱುದಿಂಗಳ್ಕಱೆವಿನಮನುದಿನಂ ಧರ್ಮಧ್ಯಾನಾಧೀನಮಾನಸಂ ಸಮಸ್ತ ಕೃತ್ರಿಮ ಚೈತ್ಯಾಲಯ ಸಕಳತೀರ್ಥಕರ ಸಮವಸರಣಾದಿ ಪರಮತೀರ್ಥ ವಂದನಾರ್ಚನಾ ತತ್ಪರನಾಗಿರ್ದು ಸಮಾಧಿಸಮಯದೊಳ್,

ಕಂ॥ ತೃಣಕುಟಿಯೊಳ್ ಮಣಿಭವನಂ ।
ತೃಣಕಲ್ಪಿತ ಪುತ್ರಿಕಾಳಿಯೊಳ್ ಯುವತಿಗಣಂ ॥
ತೃಣರಚಿತ ಭೂಷಣಂಗಳೊ ।
ಳೆಣೆ ಮಣಿಭೂಷಣಮೆನುತ್ತಮಿರ್ದನುದಾತ್ತಂ ॥ ೬ ॥

ಭಾವನೆ ಜಳಮಾಗೆ ಜಳಂ ।
ಭಾವನೆ ಚಿರಮಾಗೆ ಸುಸ್ಥಿರಂ ಶ್ರೀವಿಭವಂ ॥
ಜೀವಕ್ಕೆ ಸಮನಿಕುಂ ಯ ।
ದ್ಭಾವ್ಯಂ ತದ್ಭವತಿಯೆಂಬ ನುಡಿಯುಳ್ಳುದಱಿಂ ॥ ೭ ॥

ವ॥ ಎಂದಿಂತು ದೂರೀಕೃತ ಬಾಹ್ಯಾಭ್ಯಂತರ ಪರಿಗ್ರಹ ಮೋಹಗ್ರಹನುಂ ಕೃತಾತ್ಮ ಭಾವನೈಕಪರಿಗ್ರಹನುಮಾಗಿ,

ಕಂ॥ ಜೀವನವಿರಹಿತಮಭ್ರಂ ।
ಭಾವಿಸುತಿರೆ ಕರಗುವಂತೆ ಕರಗೆ ಶರೀರಂ ॥
ದೇವಂ ಜಿನಪತಿಪದಮಂ ।
ಭಾವಿಸುತ ಸಮಾಧಿಮರಣಮಂ ಸಾಧಿಸಿದಂ ॥ ೮ ॥

ವ॥ ಅಂತು ಸಮಾಧಿಯಂ ಸಾಧಿಸಿಕೊಂಡು,

ಕಂ॥ ಮುದನಾಸ್ಪದ ಜಂಬೂದ್ವೀ ।
ಪದೊಳೊಪ್ಪುವ ಪೂರ್ವಸೌಖ್ಯಕೃತ್ಪೂರ್ವವಿದೇ ॥
ಹದ ಪುಷ್ಕಳಾವತೀವಿಷ ।
ಯದೊಳಖಿಳ ಪದಾರ್ಥಪುಷ್ಕಳಂ ವಿಜಯಾರ್ಧಂ ॥ ೯ ॥

ಗಣಿತಮಧುಕರಸರೋಜ ।
ಪ್ರಣುತಾಸ್ಯೆಯ ಪುಷ್ಕಳಾವತೀವಿಷಯಮೃಗೇ ॥
ಕ್ಷಣೆಯ ತೆಗೆದುಟ್ಟ ದುಕುಲದ ।
ಕಣೆಯಕ್ಕೆಣೆಯೆನಿಸಿ ರಜತಗಿರಿ ಸೊಗಯಿಸುಗುಂ ॥ ೧೦ ॥

ಮ॥ ಕುಜಪಾಷಾಣ ಮೃಗಾವಲಂಬಮಿತರಕ್ಷ್ಮಾಭೃನ್ನಿತಂಬಂ ಸ್ಫುರ ।
ದ್ವಿಜಯಾರ್ಧಾದ್ರಿನಿತಂಬಬಿಂಬಮನಿತುಂ ವಿದ್ಯಾಧರಾಧೀಶ ದೇ ॥
ವಜಗತ್ಪೂಜ್ಯ ಜಿನೇಶ್ವರಾಶ್ರಯಮಯಂ ತಾನೆಂದೊಡೇನೆಂದು ಪೇ ।
ೞ್ವೆ ಜಡಾವಾಸಮೆನಿಪ್ಪುವಂ ವಿಬುಧಲೀಲಾವಾಸದಳ್ಪೋಲಿಪೆಂ ॥ ೧೧ ॥

ನಿಜಸಾನುದ್ವಯ ಖೇಚರಾಚರಸಮೂಹಂ ಸಿದ್ಧಕೂಟ ಪ್ರಸಿ ।
ದ್ಧಜಿನಾಧೀಶನ ನಾದಕೋಲಗಿಸೆ ನಾನಾ ಖೇಚರೀ ನೃತ್ಯನಾ ॥
ಕಜತೂರ್ಯಸ್ವನ ಕಿನ್ನರೀಸರಸಗೇಯಂ ಶ್ರೀಮನಂಗೊಳ್ಪಿನಂ ।
ವಿಜಯಾರ್ಧಂ ನವರತ್ನರಾಜಿತ ಜಿನೇಂದ್ರಾಸ್ಥಾನದಂತೊಪ್ಪುಗುಂ ॥ ೧೨ ॥

ಮ॥ ಸ್ರ॥ ಅಳಿನೀಝುಂಕಾರಮುಂ ಕೋಕಿಳಕಳರವಮುಂ ನಂದನಾಕ್ರೋಣಲಕ್ಷ್ಮೀ ।
ನಿಳಯೋದ್ಯದ್ದೇವವಿದ್ಯಾಧರಗೃಹದ ಲಸದ್ವಲ್ಲಕೀನಾದಮುಂ ಕೋ ॥
ಮಳ ನಾನಾಕಿನ್ನರೀಗೇಯದ ಮೃದುರವಮುಂ ಕೀರ್ತಿಪಂತೊಪ್ಪೆ ತನ್ನು ।
ಜ್ವಳಕೀರ್ತಿಶ್ರೀಯನೋರಂತೆಸೆವುದು ವಿಜಯಾರ್ಧಂ
ಮನೋಜಾತಹೃದ್ಯಂ ॥ ೧೩ ॥

ಕಂ॥ ರಾಜಿತ ವಿಜಯಾರ್ಧಾಚಳ ।
ರಾಜಕಟೀಸೂತ್ರಘುಟಿತಮಣಿಗಣಮೆನೆ ವಿ ॥
ಭ್ರಾಜಿಕುಮುಭಯಶ್ರೇಣೀ ।
ಶ್ರೀಜನ್ಮಾವಾಸಮಖಿಳಖಚರಾವಾಸಂ ॥ ೧೪ ॥

ವ॥ ಅವರೊಳಮೇಯನಾಯಕರತ್ನವಿಳಾಸಮಂ ತಳೆದು,

ಉ॥ ಉತ್ತಮ ಧರ್ಮವರ್ತನ ಸಮಾಶ್ರಯಮುತ್ತಮ ಭೋಗಗೇಹಮು ।
ತ್ಯುತ್ತಮ ಕಾಮಿನೀಜನನಿಕೇತನವುತ್ತಮವರ್ಣಪೂರ್ಣ ಸಂ ॥
ಪತ್ತಿನಿಧಾನಮುತ್ತಮಕಳಾನಿಧಿ ಮಂದಿರಮಂತರಿಂ ತ್ರಿಳೋ ।
ಕೋತ್ತಮಮಿಂತು ತನ್ನ ಪೆಸರ್ಗನ್ವಿತಮಂ ಪಡೆದೊಪ್ಪುಗುಂ ಪುರಂ ॥ ೧೫ ॥

ಕಂ॥ ಹೃದ್ಯವೆನಿಸುವುದು ಚೋದ್ಯಮೆ ।
ವಿದ್ಯಾಧರಗಾಯಿಕಾನಿಕಾಯದ ಮಂದ್ರಂ ॥
ಚೋದ್ಯಮಿದು ಮಧ್ಯತಾರಂ ।
ಹೃದ್ಯಮೆನಿಕ್ಕುಂ ಗಡಲ್ಲಿ ಪಾಡುವಪದದೊಳ್ ॥ ೧೬ ॥

ಮಣಿನೂಪುರರಶನಾ ಕಂ ।
ಕಣನಿನದಂ ಗೀತವಿರುತಿಕರಧೃತವೀಣಾ ॥
ರಣಿತಂ ಸ್ಮರಶರ ಪಾತ ।
ಕ್ವಣನಕ್ಕೆಣೆಯೆನಿಸಿ ಸುಳಿವರಂಬರಚರಿಯರ್ ॥ ೧೭ ॥

ಸ್ರ॥ ವಿದ್ಯುನ್ಮಾಳಾಪ್ರಿಯಂ ಸಾಧಿತಕುಳವಿಳಸಜ್ಜಾತಿಸಂಭೇದ ಶುಂಭ ।
ದ್ವಿದ್ಯಾವಷ್ಟಂಭದಿಂದಾಕ್ರಮಿಸಿ ಖಚರರಂ ನೀತಿನಿಷ್ಠಾತನುರ್ವೀ ॥
ಹೃದ್ಯಂ ವಿದ್ಯುತ್ಪ್ರಭಂ ಪೂಜಿತಜಿನ ಚರಣಾಂಭೋರುಹಂ ರಾಜವಿದ್ಯಾ ।
ನದ್ಯಂಭೋರಾಶಿಯಂತಾ ನಗರದೊಳೆಸೆದಿರ್ಪಂ ಜಿತಾರಾತಿದರ್ಪಂ ॥ ೧೮ ॥

ಕಂ॥ ವಿದ್ಯುತ್ಪ್ರಭೆಯುಂ ಗಲೆ ತ ।
ನ್ನದ್ಯುತಿನಯನಾಂತು ನಖಮರೀಚಿಪ್ರಚಯಂ ॥
ವಿದ್ಯುತ್ಪ್ರಭದೇವಂಗಾ ।
ವಿದ್ಯುನ್ಮಾಳಾಭಿಧಾನಮಿಂತನ್ವರ್ಥಂ ॥ ೧೯ ॥

ಆ ನೆಗಟ್ದ ರಾಜಹಂಸೆಯ ।
ಯಾನಂ ನಿರುಪಮುಪಯೋಧರಾಗಮದೊಳ್ಪಿ ॥
ದ್ಯಾನಿಳಯ ಕುಭೃನ್ನಾಯಕ ।
ಮಾನಸದೊಳ್ ಸೊಗಯಿಸಿರ್ಪುದದು ತಕ್ಕುದೆನಲ್ ॥ ೨೦ ॥

ಕಂ ॥ ಪಾಳಿಪುದುಚಿತಂ ವಿದ್ಯು ।
ನ್ಮಾಳಿ ಪಯೋಧರಲೀಲಾ ಲಾವಣ್ಯಪಯೋ ॥
ಜಾಳದೆ ವಿದ್ಯುತ್ಪ್ರಭ ಖಗ ।
ಪಾಳಮನೋರಾಗವಲ್ಲರಿಯನನವರತಂ ॥ ೨೧ ॥

ಅಂತಾ ಕಾಂತೆಯೊಳಂ ಶ್ರೀ ।
ಕಾಂತೆಯೊಳಂ ವಿಬುಧವಿನುತವಿಶದಯಶಃ ಶ್ರೀ ॥
ಕಾಂತೆಯೊಳಂ ನೆರೆದವನೀ ।
ಕಾಂತಂ ಸುಖಸಂಕಥಾ ವಿನೋದದೊಳಿರ್ದಂ ॥ ೨೨ ॥

ವ॥ ಅಂತಾ ದಂಪತಿಗಳ ಸಂಪತ್ಸುಧಾಸಾಗರ ಸಮೃದ್ಧಿ ಸಂಪಾದನಮಗ್ರ, ಪುಣ್ಯ ಮೂರ್ತಿಯೊಂದು ಶುಭಮುಹೂರ್ತದೊಳ್,

ಕಂ॥ ಸಿತವಿಧು ತಾಂ ಕುಮುದಿನಿಯೊಳ್ ।
ಪ್ರತಿಬಿಂಬಿಸುವಂತೆ ಸತ್ಪಥದ್ಯೋತಕನಾ ॥
ಕ್ಷಿತಿಪತಿಯ ಸತಿಯ ಮಹಿತಳ ।
ಹಿತಗರ್ಭದೊಳಾ ಶಶಿಪ್ರಭಂ ಜನಿಯಿಸಿದಂ ॥ ೨೩ ॥

ವ ॥ ಅಂತಾ ನಿರ್ಮಳ ಗುಣವಿರಾಜಿತ ರಾಜಹಂಸನಾನಂದದಿಂದಮಾ ಸರೋಜ ಮುಖಿಯ ಗರ್ಭಸರೋಜಿನಿಯೊಳ್ ಬಂದು ನೆಲಸೆ

ಕಂ॥ ಕುಡುವ ಗುಣದಿಂದೆ ಲೋಕದ ।
ಬಡತನಮಂ ಕಿಡಿಸಲಾರ್ಪ ತನುಜಂ ತನ್ನಿ ॥
ರ್ದೆಡೆಯ ಬಡತನಮನೋವದೆ ।
ಕಿಡಿಸುವುದೇ ಚೋದ್ಯಮೆನೆ ಪೊದಱ್ದುದು ಗರ್ಭಂ ॥ ೨೪ ॥

ತನುತೆಯಿನಲ್ಲದೆ ನಡುವುಂ ।
ಘನತ್ವದಿಂ ತಮ್ಮ ತೆಱದಿಸಿಸಿಯನ ಚಿತ್ತ ॥
ಕ್ಕನುರಾಗಮನೊದವಿಸಿದಪು ।
ದೆನುತುಂ ಮೊಲೆಮೊಗದ ಕರ್ಪನಾಂತಂತೆಸೆಗುಂ ॥ ೨೫ ॥

ವ ॥ ಅಂತಾ ಚಂದ್ರಾನನೆಯ ಬಂಧುಜನ ಹರ್ಷಗರ್ಭಮೋಟ್ಟೆಯ ಪಾಡಿವದ ಚಂದ್ರನಂತನುದಿನವನುಕ್ರಮದಿಂ ಬಳೆದು ನವಮಾಸಂ ನೆಱೆಯೆ ದಿಶಾಚಂದ್ರಂ ಕಣ್ದೆಱೆಯೆ ಸಕಳ ಜಲಾಶಯಂ ಕಲುಷತೆಯಂ ತೊಱೆಯೆ, ಶೈತ್ಯ ಸೌರಭ್ಯ ಮಾಂದ್ಯಗುಣದಿಂ ಪರಿಣತೆಯಂ ಸಮೀರಣಂ ಮೆಱೆಯೆ ಹವಿರ್ಭುಜಂ ಚತುರ್ಭುಜ ಶಂಖದಂತೆ ದಕ್ಷಿಣಾವರ್ತದಿಂ ಮೆಱೆಯೆ ವಸುಂಧರಾಲಕ್ಷ್ಮೀದೃಷ್ಟಿಗೆ ಸೌಂದರ್ಯವೃಷ್ಟಿಯಂ ಕರೆಯೆ ಗರ್ಭದರ್ಭಕನ ಪುಣ್ಯದಶೆಯಂ ಪ್ರಕಟಿಸುವಂತೆ, ನವಗ್ರಹಂಗಳೇಕಾದಶಸ್ಥಂಗಳಾಗೆ, ಪರಿಜನ ಪುರಜನ ಸನಾಭಿ ಜನಂಗಳನುರಾಗ ಸಾಗರದೊಳ್ ಮಗ್ನರಾಗೆಯುದಯಕಾಲದ ಶುಭ ಲಗ್ನದೊಳ್ ಹಿಮರಶ್ಮಿಯಂತುದಯಿಸಿ ನಿಜಜನ್ಮೋತ್ಸವಾನೂನ ವಸುದಾನದಿಂ ವಸುಂಧರೆ ಗನ್ವರ್ಥಾಭಿಧಾನಮಂ ಸಮರ್ಥಿಸಿ ರಶ್ಮಿವೇಗಾಭಿಧಾನಮಂ ಪಡೆದು ಬಳೆಯುತ್ತಮಿರೆ—

ಕಂ॥ ಪ್ರಮದಾಕ್ಷಿ ಕುಮುದವಿಕಸನ ।
ಹಿಮರಶ್ಮಿವಿರೋಧಿ ಖಚರ ಗರ್ವತಮೋ ವಿ ॥
ಭ್ರಮ ತೀವ್ರರಶ್ಮಿಗುಣರಾ ।
ಗಮನಾಳ್ದಂ ರಶ್ಮಿವೇಗನನುಪಮ ಭೋಗಂ ॥ ೨೬ ॥

ಮ॥ ಮದನಾಸ್ತ್ರಂ ನಿಜಮೂರ್ತಿ ಮೋಹನಶರಂ ಸೌಭಾಗ್ಯಸಂಪತ್ತಿಯು ।
ನ್ಮದನಾಖ್ಯೇಷು ಕಳಾವಿಚಕ್ಷಣಗುಣಂ ಸಂತಾಪಬಾಣಂ ರತಿ ॥
ಪ್ರದಬಾಣಂ ಸುದತೀ ವಶೀಕರಣ ಶಸ್ತ್ರಂ ಯೌವನಾರಂಭಮಾ ।
ಗೆ ದಿಟಂ ದರ್ಪಕನಂದದಿಂದೊಲಿಸಿದಂ ವಿದ್ಯಾಧರಸ್ತ್ರೀಯರಂ ॥ ೨೭ ॥

ಉ॥ ಕೈರವನೇತ್ರೆಯರ್ವಿಕಚ ಕೈರವಮಂ ವರವಾರಿಜಾಸ್ಯೆಯರ್ ।
ವಾರಿಜಷಂಡಮಂ ಕುಸುಮಕೋಮಳೆಯರ್ ಕುಸುಮೋರುಶಯ್ಯೆಯಂ ॥
ಚಾರುನವೀನ ಚಂದನಸುಗಂಧಿಯರುಜ್ವಳ ಚಂದನದ್ರುಮಾ ।
ಸಾರಮನಾರೊಸಾರದವರೊಲ್ದಭಿವೀಕ್ಷಿಸಿ ರಶ್ಮಿವೇಗನಂ ॥ ೨೮ ॥

ವ॥ ಅಂತು ಸಂಪ್ರಾಪ್ತ ಯೌವನ ಪ್ರಾಯನುಂ ಸಮನುಭೂತ ಸಮಸ್ತ ಶಾಸ್ತ್ರಾಭಿಪ್ರಾಯನುಂ ಸಮಾಸಾದಿತ ಸಕಳಕಳಾವಿದ್ಯಾಸಮೂಹನುಂ ನಯವಿನಯ ಶ್ರೀಜನ್ಮಗೇಹನುಂ ನಿಜಾಕಾರನಿರ್ಜಿತಮನೋಜನುಮಾದ ತನೂಜನಂ ಕಂಡು ಯುವರಾಜಪದವಿಗೆ ಯೋಗ್ಯನಾದನೆಂದಾನಂದ ಮಂದಿರಹೃದಯನಾಗಿ,

ಕಂ॥ ಕುಂರಿತರಿಪುಮದನವೆನಿಪ ।
ಕಂರೀರವನಾತ್ಮಜಂಗೆ ಯುವನೃಪಪದವೀ ॥
ಕಂರಿಕೆಯಂ ಕಂಠದನು ।
ತ್ಕಂರತೆಯಿಂ ತೀವೆ ದೆಸೆಗಳಂ ತೂರ್ಯರವಂ ॥ ೨೯ ॥

ವ॥ ಅಂತನಂತ ಸಾಮಂತಸಮೇತಂ ಯುವರಾಜಂಗೆ ಖೇಚರರಾಜಂ ಯುವರಾಜಲಕ್ಷ್ಮಿಯೊಳ್ ಪಾಣಿಗ್ರಹಣಮಂ ಮಾಡಿಸಿ ನಿಜಾನ್ವಯ ಲಕ್ಷ್ಮಿಯೆನಿಪ ಕನ್ಯಾರತ್ನ ಪಾಣಿಗ್ರಹಣ ಮಾಡಿಸಲೆಂದುದ್ಯುಕ್ತಚಿತ್ತನಾಗಿರೆ,

ಕಂ॥ ತಮತಮಗುಭಯಶ್ರೇಣಿಯ ।
ಸಮಸ್ತ ಖಚರಾಧಿನಾಥರಾತನ ಭುಜವಿ ॥
ಕ್ರಮಮಂ ಕ್ರಮಮಂ ವಿದ್ಯಾ ।
ಶ್ರಮರೂಪಮನೊಲ್ದುಕೇಳ್ದು ನಿಜತನುಜೆಯರಂ ॥ ೩೦ ॥

ಮದನಶರಾಕಾರೆಯರಂ ।
ಮದನೋನ್ಮದ ಕುಂಭಿ ಕುಂಭ ಕುಚಯುಗಳೆಯರಂ ॥
ಮದನಕಳಾ ಕುಶಳೆಯರಂ ।
ಮದನ ಮಹೀಪಾಳ ಭಾಗ್ಯಸೌಭಾಗ್ಯೆಯರಂ ॥ ೩೧ ॥

ವ॥ ಕನ್ಯಾರತ್ನಮಂ ಕುಡುವುದಕ್ಕಿದುವೆ ಸಂಚಕರಮೆಂಬಂತೆ ಪುರುಷ ರತ್ನೋಪಾರ್ಜನೋಪಾಯಮೆನಿಸಿದ ರತ್ನೋಪಾಯನಮನುಚಿತವಚನ ಚತುರ ಸಚಿವೋತ್ತಮರ

ಕಯ್ಯೊಳಟ್ಟುವುದುಮಟ್ಟಿದುದೆ ಮುಹೂರ್ತಮಾಗೊಡ್ಡೋಲಗಂಗೊಟ್ಟು ಕುಳ್ಳಿರ್ದು ಕಾಣಿಕೆಕೊಂಡು ತಂದ ಪಾಗುಡಮುಮಂ ಲೇಖಾರ್ಥಮುಮಂ ಮಹಾಸಂಧಿವಿಗ್ರಹಿಯುಂ ಕಯ್ಯೊಳ್ವೇಟ್ಟುದುಮಾತಂ ಮಹಾಪ್ರಸಾದಮೆಂದು ಕೈಕೊಂಡು ರತ್ನಕರಂಡಕದ ಮುದ್ರೆಯನುನ್ಮುದ್ರಿತಂ ಮಾಡಿಯಲ್ಲಿರ್ದ ರತ್ನಾಭರಣಂಗಳಂ ಖಚರವಲ್ಲಭಂಗೆ ಬೇಱೆ ವೇಱೆ ಬಿರ್ಚಿ ತೋಱೆ ಸುವರ್ಣಪತ್ರಲಿಖಿತ ಲೇಖಾರ್ಥಮಂ ತಳದುಕೊಂಡಸ್ಖಳಿತ ವಾಚಕಂ ಸಭಾಮಂಡಳಶ್ರವಣ ರಮಣೀಯಮಾಗೆ ಖಚರಾಧೀಶನಾದೇಶದಿಂ,

ಉ ॥ ಖೇಚರನಾತ್ಮಜಾತಸುಭಗತ್ವಗುಣಪ್ರಕಟಪ್ರಶಸ್ತಿಯಂ ।
ವಾಚಿಸಿ ಸಂಧಿವಿಗ್ರಹಶಿಖಾಮಣಿ ಪೊಯ್ನುವಿರುಣ್ಮೆ ಹರ್ಷಮಂ ॥
ಸೂಚಿಸೆ ಕೇಳ್ದು ರಾಜಸಚಿವಪ್ರಚಯುಕ್ಕುಚಿತಾರ್ಥಮಂ ನಿರಾ ।
ಳೋಚದಿನಿತ್ತು ಮನ್ನಿಸಿದನೊಪ್ಪಿರೆ ತನ್ನುಚಿತಜ್ಞತಾಗುಣಂ ॥ ೩೨ ॥

ವ ॥ ಅಂತು ಮನ್ನಿಸಿಯುನ್ನತಪ್ರತ್ಯುಪಾಯನಂ ಬೆರಸು ಕನ್ಯಾರತ್ನಕರ್ಷಣ ಮಂತ್ರ ನಿಪುಣರೆನಿಪ ಮಂತ್ರಿಗಳಂ ಕಳಿಪುವ ವಿದ್ಯುತ್ಪ್ರಭವಿಭುವಿನುದ್ಯೋಗಮಂ ರಶ್ಮಿವೇಗಂ ಕಂಡೀ ಸಂಭ್ರಮಮೇನೆಂದು ತಂದೆಯುಂ ಬೆಸಗೊಳೆ ನಿನ್ನ ವಿವಾಹಸಂಬಂಧಮೆಂದಱಿಪೆ ಲಬ್ಧಿ ವಶದಿಂ ಸಂಸಾರಾಬ್ಧಿತೀರಂ ತನಗತಿದೂರಮಪ್ಪುದಱಿಂ,

ಕಂ ॥ ಸಮನಿಪ ವಿವಾಹಸಂಬಂ ।
ಧಮನತಿ ದೃಢಬಂಧಮೆಂದೆ ತನಗದು ಬಂಧ ॥
ತ್ತಿಮರಳಮಂ ನೋಡುವ ಚಿ ।
ತ್ತಮನಾಳ್ದಂ ಚೋರನಂದದಿಂದಾ ಖಚರಂ(?) ॥ ೩೩ ॥

ಮಾರಂ ಮಿಗೆಚಿತ್ತಗೃಹ ।
ದ್ವಾರಮನೊಳಪುಗಲೆ ಬಗೆಯೆ ವೈರಾಗ್ಯಗುಣಂ ॥
ಬಾರಿಸಿದುದು ಚತುರಪ್ರತಿ ।
ಹಾರನ ತೆಱದಿಂ ಕುಮಾರ ಕಂಠೀರವನಂ ॥ ೩೪ ॥

ವ ॥ ಅಂತೊಗೆದ ವೈರಾಗ್ಯಭಾವನಾವಿಶೋಧಿಯೆ ಜಾತಿಸ್ಮರಣ ಕಾರಣಮಾಗೆ,

ಮ ॥ ಅಣಿಮಾದ್ಯಷ್ಟಗುಣಕ್ಕೆ ವಿದ್ಯೆ ದಿವಿಜ ಸ್ತ್ರೀಯರ್ಗೆ ವಿದ್ಯಾಧರೀ ।
ಗಣವೆಂದುಂ ಕಿಡದಿರ್ಪ ಯೌವನಕೆನಿತ್ಯಂ ಯೌವನಂ ನಾಕಜ ॥
ಪ್ರಣುತಶ್ರೀವಿಭವಕ್ಕೆ ಖೇಚರಪದಂ ನೋಳ್ಪಂದು ಹೇಮಾಚಳ ।
ಕ್ಕಣುವೆಂತಂತೆ ಸಮಾನಮೆಂದೆಣಿಸಿದಂ ಜಾತಿಸ್ಮರಂ ಖೇಚರಂ ॥ ೩೫ ॥

ಕಂ ॥ ದೇವಗತಿ ವಿಷಯಗಲ್ಲದ ।
ದೇವುದೊ ಮೋಕ್ಷಾರ್ಥಿಗದಱೊಳಲ್ಪವ್ರತಮಂ ॥
ಜೀವಕ್ಕೆ ಸಮನಿಸದು ಪರಿ ।
ಭಾವಿಪಡೆ ತಪಕ್ಕೆ ಮನುಜಗತಿಯೊಂದೆ ವಲಂ ॥ ೩೬ ॥

ಕಂ ॥ ಮುನ್ನಿನ ತಿರ್ಯಗ್ಗತಿ ಬೞಿ ।
ಕಂ ನೆರಪಿದ ದೇವಗತಿ ವಿನಿಷ್ಫಳಮಾದ ॥
ತ್ತಿನ್ನೀ ಭವಮಂ ತಪದಿಂ ।
ದನ್ನೆಗೞ್ದಾಂ ಸಫಳಮಾಗೆ ಮಾೞ್ಪೆನಮೋಘಂ ॥ ೩೭ ॥

ವರಬೋಧನಿಶಿತಖಳ್ಗಂ ।
ನಿರವಧಿ ವೈರಾಗ್ಯಖೇಟಕಂ ಕೈಗಳವ ॥
ಟ್ಟಿರೆ ದುರಿತರಿಪುವನಲೆವುದು ।
ನೆರವಂ ಪಡದಲ್ಲಿ ಪಗೆಯನಿಱಿಯದರೊಳರೇ ॥ ೩೮ ॥

ವ॥ ಎಂದಿಂತು ತನ್ನಂತರಂಗದೊಳ್ ನಿಶ್ಚಯಿಸಿ,

ಕಂ ॥ ವಿಮಳ ಗುಣಪ್ರಕಟನ ದ ।
ತ್ತಮನಸ್ಕಂ ಖಚರನಿಂದುವೆಂದಂತಿರೆ ರಾ ॥
ಗಮುಸಗಲೆ ನೂಂಕಿ ಸದ್ವ್ರ ।
ತ್ತಮನುತ್ತಮನೊಲ್ದು ಮೆಱೆಯಲುದ್ಯತನಾದಂ ॥ ೩೯ ॥

ವಿದ್ಯುತ್ಪ್ರಭನಸುತಂ ಸಂ ।
ಪದ್ಯೌವನ ರೂಪವಿಭ್ರಮಾಧಿಕಮನಿತುಂ ॥
ವಿದ್ಯುದ್ವಿಳಸಿತಮೆನುತನ ।
ವದ್ಯಗುಣಂ ಬಗೆದನೇಂ ಮಹಾತ್ಮನೊ ಮಹಿಯೊಳ್ ॥ ೪೦ ॥

ವ॥ ಅಂತು ಬಗೆದು ಬೞಿಯಂ ತಂದೆಗಿಂತೆಂದಂ,

ಕಂ॥ ಸುತನಿರೆ ಘನಬಂಧನದೊಳ್ ।
ಪಿತೃ ಬಿಡಿಪುದುಗೆಟ್ಟು ಮದುವೆಯೆಂಬೀ ನೆವದಿಂ ॥
ಮತಿವಿಕಳರಂತೆ ಭವಸಂ ।
ತತಿ ಬಂಧದೊಳೆನ್ನನಿರಿಪುದುಚಿತಮೆ ಪೇೞಿಂ ॥ ೪೧ ॥

ವ॥ ಅದಱಿನೀಶೋಭನಮೆನಗಶೋಭನಂ ಕೆಯಿನೀರೆಂಬುದು ಸಂಸೃತಿ ಲತಾ ಮೂಳಕ್ಕೆ ಪೊಯಿನೀರ್ ಪಾಣಿಗ್ರಹಣಂ ಪವಿತ್ರ ಚಾರಿತ್ರೇಂದುಗೆ ರಾಹು ಗ್ರಹಣಮೆಂದು ತನ್ನ ವಿಷಯವಿರಕ್ತಿಯಂ ವ್ಯಕ್ತಂ ಮಾಡೆ—

ಮ ॥ ಒದವಿರ್ದೀ ನವಯೌವನಂ ನಿರುಪಮಂ ರೂಪಂ ಕಳಾಪ್ರೌಢಿಯು ।
ಗ್ಗದ ಸೌಭಾಗ್ಯಮುದಗ್ರಮುಪ್ಪವಿಭವಂ ವಿದ್ಯಾಧರ ಸ್ತ್ರೀಸಮೂ ॥
ಹದೊಳಪ್ಪೊಂದು ವಿವಾಹಮುತ್ಸವಕರಂ ನೋೞ್ಪಿಂದು ವೈರಾಗ್ಯಮಾ ।
ವುದಱಿಂದಾದುದಿವಂಗೆನುತ್ತೆ ಖಚರಂ ವಿಭ್ರಾಂತಿಯಂ ತಾಳ್ದಿದಂ ॥ ೪೨ ॥

ವ॥ ಅಂತು ವಿಭ್ರಾಂತಿಯಂ ತಾಳ್ದಿ,

ಕಂ॥ ಅಂಬರಚರಪದಮಂ ಕುಡ ।
ಲಾಂ ಬಯಸಿರೆ ನಚ್ಚಿನೆರ್ಮೆ ಕೋಣನನೀಂದ ॥
ತ್ತೆಂಬವೊಲೀ ಮಗನಿರದೆ ತ ।
ಪಂಬಡಲೆಳಸಿರ್ದನೆಂದು ಬೆಚ್ಚನೆ ಸುಯ್ದಂ ॥ ೪೩ ॥

ಕಂ॥ ಸ್ಮರರೂಪನಿವಂ ಜಾತಿ।
ಸ್ಮರನಾಗಲೆವೇೞ್ಕುಮಲ್ಲದೊಡೆ ವೈರಾಗ್ಯಂ॥
ದೊರೆಕೊಳ್ಳದೆಂದು ಖಚರಂ।
ಪರಿಭಾವಿಸಿ ಮಗುೞೆ ಮೋಹ ಮೂರ್ಛಿತನಾದಂ ॥ ೪೪ ॥

ದೊರೆಕೊಂಡ ರಾಜ್ಯಸುಖಮಂ।
ಪರಿಹರಿಸಿ ತಪಕ್ಕೆ ಪೋಗಲುದ್ಯೋಗಿಸುವಂ॥
ಪರಿಪಕ್ವಕ್ಷೇತ್ರಮನುೞಿ।
ದರಣ್ಯಮಂ ಮಾಣದುೞುವ ಮರುಳಂ ಪೋಲ್ಕುಂ ॥ ೪೫ ॥

ವ॥ ಅದು ಕಾರಣದಿಂ

ಉ॥ ಕ್ರಮಮಂ ಮೀರಲೆ ಬಾರದೀ ಮದುವೆಯುಂ ಸಂತಾನಸಂರಕ್ಷಣಾ।
ರ್ಥಮೊಡಂಬಟ್ಟಧಿರಾಜ್ಯಮಂ ತಳೆದು ನೀನೆನ್ನಂ ತಪೋರಾಜ್ಯಭಾ॥
ರಮನಾಂಪಂತಿರೆ ಮಾಡಿ ಪುತ್ರ ಬೞಿಕಂ ನೀನುಂ ತಪೋರಾಜ್ಯ ಭಾ।
ರಮನಾನಿಂತಿದು ರಾಜನೀತಿಗುಚಿತಂ ಮನ್ನಿಪ್ಪುದೆನ್ನುಕ್ತಿಯಂ ॥ ೪೬ ॥

ವ॥ ಅದಲ್ಲದೆಯುಮೀ ತಪೋಭೂಮಿಕಾರೋಹಣಂ ಪರಿಣತ ವಯಸ್ಕರಪ್ಪೆಮ್ಮಂದಿಗರ್ಗುಚಿತಮಲ್ಲದೆ ನವಯೌವನನಪ್ಪ ನಿನಗೀಗಳುಚಿತಮಲ್ಲದೆಂದನೇಕಪ್ರಕಾರ ಲೌಕಿಕಯುಕ್ತಿಗಳಿಂದಬಳಾಬಾಹುಪಾಶದೊಳ್ ತೊಡರ್ಚುವ ನುಡಿಗಳಿಂ ನುಡಿಯೆ ರಶ್ಮಿವೇಗನಿಂತೆಂದಂ—

ಕಂ॥ ಭಾವಿಸುವೊಡೆ ನಿಮ್ಮಯ ನುಡಿ।
ದೀವಚನಮೆ ಸತ್ಯಮೆನಗೆ ಕೃತ್ಯಂಪೃಥು ಕೋ॥
ಪಾವಿಳನಂತಕನಿಂತಿದ।
ನಾವಗಮನುಸರಿಪೊಡವನೊಳದು ಕೂಡುಗುಮೇ ॥ ೪೭ ॥

ಎೞಗಿ ವಿಷಯಕ್ಕೆ ಮಿಗೆ ಮೆ।
ಯ್ಮಱೆದಿರೆ ನಿಜಜೀವಿತಾಬ್ಧಿಗೞಿಯಿಸೆ ಬೞಿಕಂ॥
ತರುನಿರಮಿಂಬೊಲಿ (?)।
ಮಱಮಱಮಱುಗುವರ ಬಾೞ್ಕೆ ನಿಟ್ಟೆಯ ಪೇೞಾ ॥ ೪೮ ॥

ಉ॥ ಪುಟ್ಟೆವಿರಕ್ತಿ ಲಬ್ಧಿವಶದಿಂ ಬೞಿಯಿಕ್ಕದೆ ಕಾಲಮಂ ತಪಂ।
ಬಟ್ಟು ಪರತ್ರೆಯಂ ಸುಜನನಾರ್ಜಿಸವೇೞ್ಪುದು ಭೋಗಕಾಂಕ್ಷೆಯಿಂ॥
ನೆಟ್ಟನೆ ನಿಂದು ಮೆಯ್ಮಱೆದೆನಪ್ಪೊಡೆ ದುಷ್ಟವಿಚೇಷ್ಟಿತಾಂತಕಂ।
ತೊಟ್ಟನೆ ಬಂದು ಮುಟ್ಟೆ ಬೞಿಕೇಂ ದೊರೆಕೊಳ್ಗುಮೆ ದುರ್ಲಭಂ ತಪಂ ॥೪೯॥

ಕಂ॥ ಆರಯೆ ಮೃಗತೃಷ್ಣಿಕೆಯುಂ।
ನೀರೆಂದತಿ ತೃಷಿತನೀಂಟುವಂತೆ ವೊಲೀ ಸಂ॥
ಸಾರಸುಖಂ ಸುಖಮೆಂದವಿ।
ಚಾರಿಗಳನುಭವಿಪರಱಿವನನುಭವಿಸುವನೇ ॥ ೫೦ ॥

ವ॥ ಅದೆಂತೆನೆ

ಕಂ॥ ಅನುಭವಿಸುವೊಡಿಂದ್ರಿಯ ಸುಖ ।
ಮನಿತುಂ ಸ್ವರ್ಗದೊಳೆ ಸುಲಭಮಾ ದಿವಿಜರ್ಗಂ ॥
ಜನಿಯಿಸುಗುಮಸುಖಮುಂತ್ಯದೊ ।
ಳೆನೆ ಸುಖಮಂ ಬಯಸುವಂಗೆ ಶಿವಪದಮೆ ಪದಂ ॥ ೫೧ ॥

ತಪಮಿಲ್ಲದೊಡದು ಸಾರದು ।
ತಪಮಿಂದ್ರಿಯ ಜಯಮೆ ತಜ್ಜಯಂ ಜವ್ವನದೊಳ್ ॥
ತಪಮಂ ತಳೆವಂಗಕ್ಕುಂ ।
ತಪಮಂ ಜವ್ವನದೊಳದಱನಾಂಪುದು ಚದುರಂ ॥ ೫೨ ॥

ಉ॥ ಆವನುದಗ್ರನಪ್ಪ ಪಗೆಯಂ ತವೆ ಕೊಲ್ವನವಂಗೆ ಸಜ್ಜಯ ।
ಶ್ರೀವಧು ಕೂರ್ಪಳಂತೆ ನವಯೌವನದೊಳ್ಕರಣಂಗಳಂ ಪೊಡ ॥
ರ್ಪಾವರಿಸಿರ್ದುದಂ ಕಿಡಿಸಲಾವವನಾರ್ಪನವಂಗೆ ತಾಂ ತಪಃ ।
ಶ್ರೀವಧು ಕೂರ್ಪಳಲ್ಲದೊಡೆ ಕಾಮಿನಿಯರ್ಕಳ ಕೂರ್ಮೆ ಬಿಟ್ಟಿಯೇ ॥ ೫೩ ॥

ವ॥ ಎಂದಿಂತು,

ಕಂ॥ ಉತ್ತರವಿತ್ತಯ್ಯನನೆ ನಿ ।
ರುತ್ತರನಂ ಮಾಡಿ ಭವಸಮುದ್ರಮನಿರದಿ ॥
ನ್ನುತ್ತರಿಸುವೊಡೆ ದಿಗಂಬರ ।
ವೃತ್ತಿಯೆ ತನಗುಚಿತಮೆಂದು ಖಚರಂ ಬಗೆದಂ ॥ ೫೪ ॥

ರವಿಗನಕ ಹೃದಯಮಂ ಬೆಳ ।
ಗುವ ತೆಱದಿಂ ರಶ್ಮಿವೇಗನಯ್ಯನ ಮನದೊಂ ॥
ದವಿವೇಕ ರವಮನುಕ್ತಿ ।
ಪ್ರವಿಮಳರುಚಿಯಿಂದೆ ತೂಳ್ದಿದಂ ವ್ಯಾಕುಳದಿಂ ॥ ೫೫ ॥

ವ॥ ಅದಂ ಕಂಡು ಸಚ್ಚರಿತ್ರದತ್ತ ಚಿತ್ತರಪ್ಪ ಸಭಾಸದರಿಂತೆಂದು ತಲೆದೂಗಿದರ್,

ಉ॥ ಆವ ಪದಾರ್ಥದಿಂದಮಘಬಂಧಮಬೋಧೆಗೆ ಬಾಹ್ಯವಸ್ತು ಸಂ ।
ಭಾವನೆವೆತ್ತವಂಗೆ ಮಗುಟ್ದಿಂತದೆ ತತ್ತ್ವವಿದಂಗರಾಗತಾ ॥
ಭಾವಯುತಂಗೆ ಬಂಧನವಿನಾಶನಕಾರಣಮಪ್ಪುದೆಂದೊಡಿ ।
ನ್ನಾವನೊ ಭೇದಿಪಂ ವಿಬುಧವೃತ್ತಮನನ್ಯಜನಪ್ರವೃತ್ತಮಂ ॥ ೫೬ ॥

ಕಂ॥ ಕುಡದೆಟೆದುಕೊಳ್ವನಧಮಂ ।
ಕುಡೆಕೊಳ್ವವನಲ್ತೆ ಮಧ್ಯಮಂ ಪಿತೃಪದೆಪಿಂ ॥
ಕುಡೆ ರಾಜ್ಯಮನೊಲ್ಲದವಂ ।
ಪಡೆಮಾತೇಂ ಪುತ್ರನೀತನುತ್ತಮನಲ್ತೇ ॥ ೫೭ ॥

ಮ॥ ಸುದೃಢೋದಗ್ರಚರಿತ್ರಮೋಹನಿಗಳಂ ವೈರಾಗ್ಯಮೆಂಬೊಂದು ಚೇ ।
ಣ್ಣದೆ ವಿಚ್ಛೇದಮನೆಯ್ದೆ ತನ್ನ ಗುಣಮಂ ನಿರ್ಬಂಧದಿಂದಂ ಸಭಾ ॥
ಸದರೆಲ್ಲಂ ಪರಿಕೀರ್ತಿಸುತ್ತಿರೆ ಪರಿಚ್ಛೇದೋಹಿ ಪಾಂಡಿತ್ಯಮಂ ।
ಬುದನಾದಂ ದಿಟಮಾಗೆ ಮಾಡಿ ತೋಱಿದಂ ವಿದ್ಯಾಧರೈಶ್ವರ್ಯಮಂ ॥ ೫೮ ॥

ವ॥ ಅಂತಾ ಮಹಾತ್ಮನಾತ್ಮವಿದ್ಯಾಧರವಿಭವಸಂಭವ ವಿಷಯಸುಖಶ್ರೀಫಳಮಂ ಶ್ರೀಫಳಮನೀಡಾಡುವಂತೀಡಾಡಿ ಮುಕ್ತಿರಮಣೀರಮಣೀಯ ಕೂಟಮಂ ಬಯಸಿ ಸಿದ್ಧಕೂಟಕ್ಕೆವಂದದಂ ತ್ರಿಃ ಪ್ರದಕ್ಷಿಣಂ ಮಾಡಿ ತನ್ನಿಂ ಮುನ್ನಮಾಪ್ರಸಿದ್ಧ ಸಿದ್ಧಕೂಟ ಚೈತ್ಯವಂದನನಿಮಿತ್ತಮಲ್ಲಿಗೆೞ್ತಂದಿರ್ದ

ಉ॥ ಆಪ್ತನಿರೂಪಿತಾಗಮವಿಧಾತ್ಮವಿಚಾರಸಮಂತು ಸೌಖ್ಯ ಸಂ ।
ತೃಪ್ತ ಸಮಾಧಿಗುಪ್ತಯತಿಪಾದಪಯೋರುಹ ಸನ್ನಿಧಾನದೊಳ್ ॥
ದೃಪ್ತಮನೋಜರಾಗರವಿಭಂಜನಮೊಪ್ಪಿರೆ ತಾಳ್ದಿದಂ ಯಶೋ ।
ವ್ಯಾಪ್ತದಿಶಂ ಗುಣಾಂಬುಧಿ ದಿಗಂಬರದೀಕ್ಷೆಯನಂಬರೇಚರಂ ॥ ೫೯ ॥

ವ॥ ಅಂತುಭಯ ಪರಿಗ್ರಹನಿವೃತ್ತಿಲಕ್ಷಣಮಪ್ಪ ಜಿನದೀಕ್ಷೆಯನಕ್ಷೂಣ ವಿಶುದ್ಧಿಯಿಂ ಕೈಕೊಂಡು

ಮ॥ ಮುನಿನಾಥಂ ಮನಮಂ ಪ್ರತೀತವಿಷಯವ್ಯಾಪಾರದತ್ತೊಯ್ಯದೊ ।
ಯ್ದು ನಿಜಪ್ರಸ್ತುತ ತತ್ವಭಾವನೆಗಮೋಘಂ ಸಂಚಿತಾಘಪ್ರಘಂ ॥
ಜನಮಂ ಭೇದಿಸುತಂ ಪರೀಷಹಜಯಂ ಮೆಯ್ವೆತ್ತಿನಂ ಪೆಂಪುವೆ ।
ತ್ತನುದಾತ್ತಂ ಶುಭಚಿತ್ತನುತ್ತಮತಪೋನುಷ್ಠಾನನಿಷ್ಠಾಪರಂ ॥ ೬೦ ॥

ಕ್ಷಯವೈಷಮ್ಯಯುತಂ ಸಬಾಧಮಘಸಂಬಂಧಂ ಪರಾಧೀನಮಿಂ ।
ದ್ರಿಯಜಂ ಸೌಖ್ಯಮದಕ್ಕನೇಕ ಭವದೊಳ್ ದುಃಖಂಬಡುತ್ತಿರ್ದೆನ ॥
ನ್ನಯದಿಂದೆಂದಡತೀಂದ್ರಿಯಾಪ್ರತಿಮ ಸೌಖ್ಯಾರ್ಥಂ ತಪೋದುಃಖಮಂ ।
ನಿಯತಂ ಸೈರಿಪುದಾವಗಾಹನಮೆನುತ್ತಾಯೋಗಿ ತಾಂ ಸೈರಿಪಂ ॥ ೬೧ ॥

ಕಂ॥ ಎನಿತೆನಿತು ಪರೀಷಹಮಾ ।
ಯ್ತನಿತನಿತೆ ವಿಶುದ್ಧಭಾವಮಂ ಮುನಿ ತಳೆದಂ ॥
ಕನಕಂ ಶಿಖಿಯೋಗಮದೆನಿ ।
ತನಿತನೆ ನಿರ್ಮಳಿನ ವೃತ್ತಿಯಂ ತಾಳ್ದುವವೋಲ್ ॥ ೬೨ ॥

ವ॥ ಅಂತು ನಿಜವಿಶುದ್ಧ ಭಾವನಾಪ್ರಧಾನನಪ್ಪ ಮುನಿಪ್ರಧಾನಂ ನಿಯಮಿಸಿದಂತೆ ಪಲವುಕಾಲಂ ಗುರುಪಾದಮೂಲದೊಳ್ ನೆಗೞುತ್ತಮಿರ್ದು—

ಚಂ॥ ವನಗಜಕುಂಭಸಂಭವ ಸಮುಜ್ವಳ ಮೌಕ್ತಿಕಜಾಳಮಾಳಿವೇ ।
ಷ್ಟನದಿಸಳಿಪ್ರತಾನ ವಿಳಸನ್ಮೃಗನಾಭಿ ಸುಗಂಧಸಿಂಧು ಚಂ ॥
ದನ ಭುಜಪತ್ರದಿಂ ತಿಳಕದಿಂ ಮಣಿಮೇಖಳೆಯಿಂ ಸಮಗ್ರಮಂ ।
ಡನಮಹಿರಾಜನಂತಿರೆಸೆದತ್ತು ಮಹಾಹಿಮವನ್ಮಹೀಧರಂ ॥ ೬೩ ॥

ವ॥ ತನ್ಮಹೀಧರಾಭ್ರಾಂಕದ ವಿಭ್ರಮಮಂ ಪೊಗೞ್ವಡೆ—

ಕಂ ॥ ಉತ್ಪನ್ನಪ್ರೇಮದಿನಲ ।
ದುರ್ಗತ್ವಳಮಂ ಚಂದ್ರನಬ್ಜಮಂ ರವಿ ತದ್ಭೂ ॥
ಭೃತ್ಪತಿ ಶಿಖರಸರೋಜಸಿ ।
ತೋತ್ಪಳದಳ ತಳ್ಪತಳದೊಳೊಪ್ಪುತ್ತಿರ್ಕುಂ ॥ ೬೪ ॥

ಚಂ ॥ ಉರಗವಿಷಾದಿಳಾನಿಳ ವಿಘಾತವಿಮೂರ್ಛಿತ ಜೀವಜಾತಮಂ ।
ಸ್ಫುರಿತ ಮಹೌಷಧಿ ಪ್ರಯುತಮಾರುತಮೆಚ್ಚರಿಸುತ್ತಮಿರ್ಕುಮಾ ॥
ಗಿರಿವರದೊಳ್ ದ್ವಿಜಿಹ್ವಪರಿಪೀಡಿತರಂ ಸುಜನಂ ಲಸತ್ಸುಧಾ ।
ಪರಿಗತ ದಿವ್ಯಸೇಕಮುಱಿದೆಚ್ಚರಿಪಂತವನೀಶ ವಾಸದೊಳ್ ॥ ೬೫ ॥

ಮ ॥ ಸ್ರ ॥ ಸ್ಫುರಿತಚ್ಛಾಯಂ ಸ್ವಕಿಂಸಾನುಜ ವಿಷಯಮನಂ ವ್ಯಾಳಪಾಶಾವಕಾಶಂ ।
ಖರದಂಷ್ಟ್ರಂ ಲೋಕಸಂತ್ರಾಸನಕರಚರಿತಂ ಪ್ರೋತ್ಫಣಾಚಂಡದಂಡಂ ॥
ಕರಮಂ ಘೂತ್ಕಾರ ತೀವ್ರಾನಳನೆ ಬಳನೆ ನಾನಾ ಮೃಗಾನೀಕಮಂ ಸಂ ।
ಹರಿಸುತ್ತಂ ಕ್ರೋಧದಿಂದಂ ನೆಸೆಯಿಪುದಗದೊಳ್ ಕಾಳನಂ
ಕಾಳಸರ್ಪಂ ॥ ೬೬ ॥

ಚಂ ॥ ಉರಿಯನೆ ತೋರ್ಪ ದಿಟ್ಟಿ ಸಿಡಿಲರ್ವಿಪ ನಾಲಗೆ ನೀಳ್ದ ಮಿಂಚು ಫೂ ।
ತ್ಕರಮೆನೆ ಗರ್ಜನಂ ತನಗದಾಗೆ ಭಯಂಕರಮೂರ್ತಿ ಲೋಕಸಂ ॥
ಹರಣ ವಿಷಂಗಳಂ ವಿಷಧರಂ ವಿಳಯಾಂಬುದಮೆಂಬ ಮಾಱ್ಕೆಯಿಂ ।
ಸುರಿಯುತಮಿರ್ಕುಮಾಗಿರಿ ಗುಹಾಂತರಸಂತತಿಯಲ್ಲಿ ಸಂತತಂ ॥ ೬೭ ॥

ವ ॥ ಅಂತಗುರ್ವನೊಳಕೊಂಡ ದರ್ವೀಕರನಿಕರ ಭೀಕರ ಪರ್ವತಪ್ರದೇಶಕ್ಕೆ ಫುಲ್ಲಶರಪ್ರತಿಮಲ್ಲನನೇಕಭವಗಹನೈಕವಿಹಾರಶ್ರಮಹಾರಿಯಪ್ಪೇಕವಿಹಾರಿತ್ವಮಂ ಪೂಣ್ದು ಬಂದು—

ಕಂ ॥ ಶೀಲನಿಧಿ ತನ್ಮುನೀಂದ್ರಂ ।
ಮೂಲಗುಣೋತ್ಕರ ಗುಣೋತ್ತರೋತ್ತರ ಗುಣಮಂ ॥
ಪಾಲಿಸುತಮನುದಿನಂ ತ ।
ಚ್ಛೈಲಗುಹಾಂತರದೊಳಚಳಯೋಗದೊಳಿರ್ದಂ ॥ ೬೮ ॥

ವ ॥ ಅಂತಿರ್ಪುದುಮತ್ತಲಾಕುಂಜರಕುಧರತಟದೊಳಿರ್ಪ ಕಮಠಚರನಪ್ಪ —

ಕಂ ॥ ಸ್ಥೂಳಾಗಮದೊಳ್ ಮದಶುಂ ।
ಡಾಳಂ ತನುತನುಗಳಲ್ಲಿ ಕುಂದುವ ಕಡೆ ಜೀ ॥
ವಾಳಿಯೊಳೆನೆ ತವೆ ಕೊಂದುದು ।
ಕಾಳನವೋಲ್ ಕುರ್ಕುಟೋರಗಂ ಕ್ರೂರಾತ್ಮಂ ॥ ೬೯ ॥

ಪಱುಗಱಿದ ಪಾಪಮಂ ತಾಂ ।
ಕಱಿವಿನಮೊತೆಱದೆ ನೆರಪಿ ಪಾಪದ ಭರದಿಂ ॥
ದಿಱಿವಂತೆ ಜೀವಿತಾಂತ್ಯದೊ ।
ಳಿಱಿದುದು ಗಳಗಳನೆ ನರಕಧರೆಗೆ ತದುರಗಂ ॥ ೭೦ ॥

ವ ॥ ಆ ನರಕಧರೆಗಳಿರವಿನಂದಮೆಂತೆಂದೊಡೆ ಮಂದರಮಹೀಧರಾಧಸ್ತನಭಾಗಂ ಬಿಡಿದು ಸಲಕ್ಷಾಶೀತಿದ್ವಾತ್ರಿಂಶದಷ್ಟಾವಿಂಶತಿ ಚತುರ್ವಿಂಶತಿ ಷೋಡಶಾಷ್ಟಸಹಸ್ರ ಯೋಜನಬಾಹುಲ್ಯಸಹಿತಂಗಳುಂ ರತ್ನಶರ್ಕರಾವಾಳುಕಪಂಕಧೂಮತಮಸ್ತಮಸ್ತಮಃಪ್ರಭಾಭಿಧಾನಾಭಿಹಿತಂಗಳುಂ, ಸರ್ವೇಂದ್ರಿಯ ದುಸ್ಸಹ ದುಃಖಕರ ಸಮಸ್ತ ವಸ್ತು ಭರಿತ ಬಿಲಪರಿಕಳಿತಂಗಳುಂ ಕಿಂಚಿದೂನೈಕೈಕ ರಜ್ಜ್ವಂತರಿತಂಗಳುಮಾಗಿರ್ಕುಮವಱಲ್ಲಿ,

ಕಂ ॥ ಸಂಧಿಸಿ ಪದಿಮೂಱುಂ ಪ ।
ನ್ನೊಂದುಮದೊಂಬತ್ತುಮೇೞುಮಯ್ದುಂ ಮೂಱುಂ ॥
ತೊಂದುಮೆನೆ ಪಟಳವಾಕ್ರಮ ।
ದಿಂದೇೞುಂ ನರಕಧರಣಿಯೊಳ್ ನೆಲಸಿರ್ಕುಂ ॥ ೭೧ ॥

ಸಯ್ಪಮೆ ಮೂವತ್ತಿರ್ಪ ।
ತ್ತಯಿಪ್ಪಪದಿನೈದು ಪತ್ತು ಮೂಱಲ್ಲಿಂದ ॥
ತ್ರಯ್ಯೂನಮೊಂದು ಲಕ್ಕೆಯ ।
ವೆಯ್ದೆ ಬೞಿಕ್ಕೆಣಿಪೊಡವಱ ನರಕಬಿಲಂಗಳ್ ॥ ೭೨ ॥

ಕ್ರಮದೇೞುಂ ನರಕದೊಳೊಂ ।
ದು ಮೂಱು ಬೞಿಕೇೞು ಪತ್ತು ಪದಿನೇೞಾಯುಃ ॥
ಪ್ರಮಿತಿಯದಿಪ್ಪತ್ತೆರಡ ।
ತ್ತಮದರ್ದು ಮೂವತ್ತಮೂಱು ಪಾರಾವಾರಂ ॥ ೭೩ ॥

ಪದಿನೆಂಟಂಗುಳದಿಂ ಕುಂ ।
ದಿದೆಂಟುಧನು ಮೊದಲನಾರಕುತ್ಸೇಧಂ ತ ॥
ಪ್ಪದೆ ತದ್ದ್ವಿಗುಣಕ್ರಮದಿಂ ।
ದೊದವುಗುಮೇೞನೆಯ ನಿರಯ ಮೇದಿನಿವರೆಗಂ ॥ ೭೪ ॥

ಮೊದಲ ನರಕಂ ಮೊದಲ್ಗೊಂ ।
ಡುದಯಿಸುಗುಮಸಂಜ್ಞಿಸರೀಸೃಪಂ ವಿಹಗಂ ತ ॥
ಪ್ಪದೆ ಪಾವು ಸಿಂಹಸಂತತಿ ।
ಸುದತೀತತಿ ಮರ್ತ್ಯಮತ್ಸ್ಯನಿಕರಂ ಕ್ರಮದಿಂ ॥ ೭೫ ॥

ತಮಮನಿತುಂ ನರಕಂಗಳೊ ।
ಳಮರ್ದಿರ್ಕುಂ ನಿರಯಜಾತಚೇತೋಮಿಥ್ಯಾ ॥
ತಮಮಶುಭ ಲೇಶ್ಯೆಗಳ್ಪೊಱ ।
ಗುಮನಾವರಿಸಿರ್ದುವೆಂಬಿನಂ ನಿಬಿಡತಮಂ ॥ ೭೬ ॥

ಓರೋರ್ವರ ಮರ್ಮಂಗಳ ।
ನೋರೋರ್ವರ್ಕಂಡು ದಂಡಿಪರ್ನಾರಕರಾ ॥
ಘೋರತಮಮಾದೊಡಂ ಮಾ ।
ರ್ಜಾರಂ ಕಾಣ್ಬಂದದಿಂದೆ ನರಕಾವನಿಯೊಳ್ ॥ ೭೭ ॥

ಕಂ॥ ಅಹಿಲೋಕ ಸರ್ವಸಂಕುಳ ।
ಮಹನೀಯ ವಿಷಪ್ರವಾಹ ಸಂತತಿಯಂತಾ ॥
ಮಹಿಗಿೞಿದುದೆಂಬ ತೆಱದಿಂ ।
ದಹರ್ನಿಶಂ ಪರಿವುವುಗ್ರತರ ವಿಷನದಿಗಳ್ ॥ ೭೮ ॥

ಪೀರ್ವಡೆ ವಿಷಮಯವುದಕಂ ।
ನಾರ್ವಡೆ ವಿಷಮಯಮೆನಿಪ್ಪ ಮೃತ್ತಿಕೆ ನೆಱೆಲಂ ॥
ಪಾರ್ವಡೆ ವಿಷಮಯ ರಸಮಂ ।
ಸೋರ್ವ ವಿಷದ್ರುಮಸಮೂಹಮೆಲ್ಲೆಡೆಗಳೊಳಂ ॥ ೭೯ ॥

ಕ್ರೂರತೆಯಿಂ ಜೀವಂಗಳ ।
ನೋರಂತಿರೆ ಕೊಂದು ತಿಂಬವಂ ಬಿಡೆ ಪಾಂಬಂ ॥
ಚೋರಂ ಮೃಷಾರತಂ ಬ ।
ಹ್ವಾರಂಬಕಮೆಯ್ದುಗುಂ ಮಹಾರೌರವಮಂ ॥ ೮೦ ॥

ಅಯ್ದಿಂದ್ರಿಯದಿಚ್ಛೆಗೆ ಸಂ ।
ದೆಯ್ದೆ ಮಹಾಪಾತಕಂಗಳೊಳ್ವರ್ತಿಸುವರ್ ॥
ಮಾಯ್ದು ನರಕದೊಳ್ ದುಃಖಮ ।
ನೆಯ್ದುವುದಂ ಪೊಗೞಲಾರುಮೋಸೆಯ್ದುವರೇ ॥ ೮೧ ॥

ಉ ॥ ಬಟ್ಟೆಯ ಪಂದಿಯಾನನದ ಪಾೞಿಕ್ಕೆಯಿನರ್ಬಿಸುತಟ್ಟೆ ನಾಱುತಿ ।
ರ್ಪಟ್ಟುಗಳಲ್ಲಿ ಪುಟ್ಟೆ ಬೞಿಕೊಟ್ಟಿದ ಶಸ್ತ್ರದ ಮೇಲೆ ಬಿೞ್ದು ಬಾ ॥
ಯ್ವಿಟ್ಟೆರ್ದೆಗೆಟ್ಟು ಪುಯ್ಯಲಿಡೆಯಾದನಿಗೆಯ್ದೆ ಪುರಾಣನಾರಕರ್ ।
ಕಟ್ಟಿರೆ ಕುಟ್ಟು ಸೀಳಿಸುತಮೆಯ್ದುವರುಗ್ರತರಪ್ರಕೋಪದಿಂ ॥ ೮೨ ॥

ಕಂ ॥ ನಿರಯಜರ ಮೆಯ್ಯುಮುಖಗಂ ।
ಧರಜದೊಳ್ ಪುಟ್ಟಿ ಬೀೞ್ವ ಪುೞುಗಳಿವೆಂಬಂ ॥
ತಿರೆ ಕೊಳ್ ನಾರ್ಪಟ್ಟುಗಳೊಳ್ ।
ನಿರಯಭವರ್ ಪುಟ್ಟಿ ಬೀೞ್ವರಾಕಯ್ದುಗಳೊಳ್ ॥ ೮೩ ॥

ಆತತ ದುಃಖಾನಳ ಸಂ ।
ಭೂತಿಗೆ ತಳ್ತರಣಿಯಂ ಪ್ರತಾಪಕ್ಕಿನ್ನೇಂ ॥
ವೈತರಣಿಯನೆನಿಸಿದಾರ್ ।
ವೈತರಣಿಯನಧಿಕ ತೃಷ್ಣೆಯಿಂದಂ ಪುಗುವರ್ ॥ ೮೪ ॥

ಆವಾವ ಜೀವನಿವಹಮ ।
ನೋವದೆ ಮುಂಕೊಂದುದಕವರಾರೂಪಂ ಕೋ ॥
ಪಾವಿಳರಾಗೋರೋರ್ವರ ।
ನಾವಗಮುರದಿಱಿವರಲ್ಲಿ ನಿರಯಭವರ್ಕಳ್ ॥ ೮೫ ॥

ಕಂ ॥ ಅಡಗಿಲ್ಲದೆತ್ತಿ ತುತ್ತಿಡೆ ।
ಯುಡಗಲೆ ಪಿಡಿಯೆಂದು ಕತ್ತಿಗೆಯಿನವನೊಡಲೊಳ್ ॥
ಬಿಡದಡಗುಳ್ಳಿಡೆಯನೆ ಕೊ ।
ಯ್ವುಡಗಿಲ್ಲದ ಬಾಯೊಳಡಸುವರ್ಕಡುಪಿಂದಂ ॥ ೮೬ ॥

ಕುಡಿಯದೊಡಾಗಳೆ ನಾಲಗೆ ।
ಯೊಡೆವುದು ಗಡ ಕಳ್ಳನದಱಿನೆಡೆಯುಡುಗದೆ ನೀಂ ॥
ಕುಡಿಯೆಂದು ಲೋಹರಸಮಂ ।
ಕುಡಿಯಿಪರೊಡಲೊಡನೆ ನಾಲಗೆಯುಮೊಡೆವಿನೆಗಂ ॥ ೮೭ ॥

ಮಧುಮಧುರಮೆಂದು ಬಹುತರ ।
ವಧೆಯಿಂ ಸಮನಿಪುದನಱಿದು ತೋಱಿಯುದವಂದಿರ್ ॥
ಮಧುಬಿಂದು ಕಲಹಕಿಕ್ಕಿತೆ ।
ನೆ ಧರಣಿ ವಧಿಯಿಸುಗುಮಲ್ಲಿಯೋರ್ವರನೋರ್ವರ್ ॥ ೮೮ ॥

ಒಪ್ಪುವ ಪರವನಿತಾಜನ ।
ದಪ್ಪು ನಡಿಲ್ವಂದು ನಿಲ್ಲನಿವನೆಂದಱಿದಿಂ ॥
ತಪ್ಪು ಸಡಿಲದವೊಲಿರ್ಕೆಂ ।
ದಪ್ಪಿಸುವರ್ ಕಾಯ್ದು ಕಾಯ್ದಯಃಪುತ್ರಿಕೆಯಂ ॥ ೮೯ ॥

ಸುಲಿಪಲ್ಲಂ ಮೆಱೆವೈ ಪರ ।
ಲಲನೆಯರ್ಗೆಂದಿಕ್ಕುಳಿಂದೆ ಕೀೞ್ವರ್ ಪಲ್ಲಂ ॥
ನಲೆ ಕಣ್ಣಂ ಕೆತ್ತುವೆಯೆಂ ।
ದು ಲಕ್ಕಬಾಣದಿಂ ಮೊಂಟಿ ಕಳೆವರ್ ಕಣ್ಣಂ ॥ ೯೦ ॥

ಪಡೆಮಾತೇಂ ಹಿಂಸಾದಿಯ ।
ನೊಡರಿಸೆಯುಂ ಸ್ವರ್ಗಮೆಲ್ಲಿ ಕೇಳಾಗಮಮಂ ॥
ಪಿಡಿದು ಪುಸಿನುಡಿವ ಧೂರ್ತರ ।
ಪೆಡತಲೆಯಿಂ ತೆಗೆವರಿಕ್ಕುೞಿೞೊಳ್ ನಾಲಗೆಯಂ ॥ ೯೧ ॥

ಉ ॥ ಒರ್ಮೆಯುಮಾರ್ತರೌದ್ರದೊಳೆ ವರ್ತಿಸುತಂ ಸುಖಕಾರಿಯಪ್ಪ ಸ ।
ದ್ಧರ್ಮಮನೊಲ್ಲದಾರ್ಜಿಸಿದವಂದಿರ ದಾರುಣದುಃಖದಾಯಕಂ ॥
ಕರ್ಮಮೆ ಮೂರ್ತಿಗೊಂಡಿರದೆ ದಂಡಿಸುವಂತೆವೊಲೋರ್ವರೋರ್ವರಂ ।
ಮರ್ಮಮನುರ್ಚೆ ಶಸ್ತ್ರದೆ ವಿಘಾತಿಸುವರ್ ಕಡುಕೆಯ್ದು ನಾರಕರ್ ॥ ೯೨ ॥

ಕಣ್ಣೆಮೆಯಿಕ್ಕುವನ್ನೆವರಮುಂ ಬರೆದಲ್ಲಿರದೋರ್ವರೋರ್ವರಂ ।
ಬಣ್ಣಿಗೆಗಯ್ದುವಂ ಪಿಡಿದು ನಾರಕರೋವದೆ ಕುತ್ತಿ ಕೊಯ್ದೊಡಂ ॥
ಸಣ್ಣಿಗೆಯಿಂದಮಿಟ್ಟರೆದೊಡಂ ತನು ಮುನ್ನಿನ ಮಾೞ್ಕೆಯಕ್ಕುಮಾ ।
ತಿಣ್ಣಮೆನಿಪ್ಪ ಪಾಪಪರಿಪಾಕದೆ ಪಾದರಸಪ್ರಕಾರದಿಂ ॥ ೯೩ ॥

ಚಂ ॥ ಝುಷಮಕರಾದಿ ಪಾದಹತಿನಾರಕ ಶಸ್ತ್ರವಿಘಾತಬಾಡವಂ ।
ವಿಷಮ ಸಮಗ್ರ ಕೋಪಶಿಖಿಯಾಸುರರೋಗಶತಪ್ರಭೂತಮಾ ॥
ನುಷ ಸಹಜಾತದುಃಖನಿವಹಂ ಬಹುತುಂಗತರಂಗಮಪ್ಪಿನಂ ।
ವಿಷನಿಧಿಯಾದುವಿಂತು ಪರಮಾಯು ವಿಚಾರಿಸೆ ನಾರಕರ್ಕಳಂ ॥ ೯೪ ॥

ಶಾ ॥ ಏನಂ ಪೇಟ್ವೆನೊ ನಾರಕರ್ಗೆ ಸಲೆ ಸಂಸ್ಥಾನಂಗಳೀೞುಂ ಪುಟ ।
ಸ್ಥಾನಂ ವಿಶ್ರುತವೇದನೀಯದೊಳಸಾತಾವೇದನೀಯೋದಯಂ ॥
ಜ್ಞಾನಾನೀಕದೊಳಪ್ರಯೋಜಕ ವಿಭಂಗಜ್ಞಾನಮಾಧ್ಯಾನದೊಳ್ ।
ನಾನಾದುಃಖಕರಾರ್ತರೌದ್ರಮಶುಭಧ್ಯಾನದ್ವಯಂ ವರ್ತಿಕುಂ ॥ ೯೫ ॥

ಕಂ ॥ ಉದಧಿಯನೀಂಟಿದೊಡಂ ತ ।
ಗ್ಗದು ತೃಷೆ ಮೂಜಗಮನೆಯ್ದೆ ನುಂಗಿದೊಡಂ ಪೋ ॥
ಗದು ಪಸಿವು ನಿರಯ ಭವರ್ಗಿ ।
ನ್ನುದಕಾಶನಲವಮುಮಿಲ್ಲದೇಂ ದುಃಖಿತರೋ ॥ ೯೬ ॥

ಮ ॥ ಸ್ರ ॥ ಪಸಿವಿಂ ನೀರಟ್ಕೆಯಿಂ ತೀರದ ಬಹುರುಜೆಯಿಂ ನಾರಕಾನೀಕಶಸ್ತ್ರ ।
ಪ್ರಸರಪ್ರಾದ್ಭೂತದಿಂ ತಾಪಮನತಿಹಿಮಮುಂ ಬೀರುತಿರ್ಪುರ್ವಿಯಂ ಮಾ॥
ನಸ ಕೋಪಾಟೋಪದಿಂ ನಿರ್ದಯ ದನುಜಸಮೂಹಂಗಳಿಂದುಣ್ಮುವೀದುಃ ।
ಖ ಸಮುದ್ಭಾಂಭೋಧಿಯೊಳ್ ನಾರಕತತಿ ಸತತಂ ಮೂಡಿ
ಮುೞುಂಗಾಡುತಿರ್ಕುಂ ॥ ೯೭ ॥

ವ॥ ಅಂತು ನಿರಂತರಾನಂತದುಃಖಸಂತತಿ ಸಾಗರಮೆನಿಪೇೞುಂ ನರಕಂಗಳೊಳಗೆ,

ಕಂ ॥ ಸಂಚರಿಸದೆ ಕರಿಗಳನೆ ಪ ।
ಳಂಚಲೆವ ಪಟುಪ್ರತಾಪದಿಂದಾದುದು ತಾಂ ॥
ಪಂಚಾನನನೆಂಬವೊಲಹಿ ।
ಪಂಚಮನರಕಮನೆ ಪಡೆದುದಘಸಂಚಯದಿಂ ॥ ೯೮ ॥

ವ॥ ಆ ಗಿರಿಯ ಧರಣಿಯ ಮಧ್ಯಪ್ರದೇಶದೊಳ್ ಪಾಪಕ್ಕೆ ನೆಲೆಯಾದರಂ ನುಂಗಲೆಂದು ನೆಲನೆ ಬಾಯ್ದೆಱೆದಂತಿರ್ದ ಬಿಲದ ಮೇಲಣಭಾಗದ ದುರ್ವರ್ಣ ದುಸ್ಪರ್ಶ ದುರ್ಗಂಧಾನುಬಂಧಿಗಳಪ್ಪುಷ್ಟ್ರಾದಿಮೂಖಾಕಾರೋಪಪಾದಸ್ಥಾನದೊಳ್ ಪುಟ್ಟಿ ಪುಟ್ಟಂತರ್ಮುಹೂರ್ತಕ್ಕೆ

ಕಂ ॥ ವ್ಯವಧಾನಂ ದುಃಖಮನನು ।
ಭವಿಸುವೊಡೇಕೆಂಬ ತೆಱದಿನಾಹಾರದಿನಾ ॥
ಪ್ರವಿಪುಳ ಪರ್ಯಾಪ್ತಿಗಳಂ ।
ತವಾಱುಮಘವಶದಿನಾವಗಂ ನೆರೆಯಲೊಡಂ ॥ ೯೯ ॥

ವ ॥ ಇಟ್ಟಳವಾಗೆ ಮುಂ ಕಟ್ಟಿದ ದುಷ್ಕರ್ಮದವೊಟ್ಟೆಯೆ ಭುಜ್ಯಮಾನ ತಿರ್ಯಗಾಯುಷ್ಯಮೆಂಬ ಕಟ್ಟು ಪರಿಯೆ ತೊಟ್ಟನೆ ಬೀೞ್ವಂತಾಂತೊಟ್ಟಿದ ಶಸ್ತ್ರಕೋಟಿ ಕೋಟಿ ನಿಶಿತವಜ್ರದ ಶಿಲೆಯ ಮೇಲಪ್ಪಳಿಸಿ ದೊಪ್ಪನೆ ಬಿೞ್ದುನಿರಯಜರ್ನೆರಂ ಬರ್ಪನ್ನೆ

ವರಂ ತಡವೆಂಬಂತುತ್ಸುಕತೆಯಿಂ ತನ್ನ ಮುಂ ನೆರಪಿದ ಪಾಪಮೆ ಕೋಪದಿಂ ಪೊಡೆ ಸೆಂಡು ಪೊಡೆಯುತಿರ್ದುದೆಂಬಂತೆ ಪೊಡರದೆ ಪುಟಂ ನೆಗೆದು ಮಗುಟಿಮಗುಟಿ ಶಿಲೆಯ ಮೇಲೆ ನುಚ್ಚುನೂರಾಗಿ ಬಿಬ್ದಂ ಪಾಪಪರಿಪಾಕದಿಂ ಪರೆದ ಪಾದರಸವೊಂದಿದಪ್ಪ ವಯವಂಗಳಿಂ ಸಂಧಿಸಿ ಕಿಱಿದು ಬೇಗಂ ಮೂರ್ಛೆಯಿನಿರ್ದೆರ್ಚರುತಿರ್ಪನ್ನೆವರಂ ಬೇಡರ ಬೀಡಿಂಗೆ ಬೆಳ್ಕಿಗಮೋಡಿ ಪುಗೆ ನೀಡುಮಿರದೆ ಕೂಡಿ ಕೈದುಗೊಂಡು ಕವಿತಪ್ಪಂತೆ

ಸ್ರ ॥ ಕರ್ಣವ್ಯಾಘಾತ ಗಾಂಡೀವದ ಜೇವೊಡೆವೋಲ್ ರಾಗಮಂ ರಾಗಪುಂಜೋ ।
ತ್ಕೀರ್ಣಂಬೋಲ್ ರೂಪುರೂಕ್ಷಂ ತಮಗಳವಡೆ ಕೊಲ್ಕೊಲ್ಪರಂಗೆಯ್ದೆನುತ್ತ ॥
ಭ್ಯರ್ಣಕ್ಕೆಯ್ತಂದು ತನ್ನೊಳ್ ಬಹುವಿಧವಧೆಯಂ ಮಾಡಿ ಸಂಪೂರ್ಣ ದುಃಖಾ ।
ಕೀರ್ಣಾತ್ಮಸ್ವಾಂತದೊಳ್ ತೊಟ್ಟನೆ ನೆಗಟಿ ವಿಭಂಗಂ ।
ಕ್ಷತಕ್ಶೋಭಿತಾಂಗಂ ॥ ೧೦೦ ॥

ಕಂ ॥ ಅಂತುದಯಿಸಿದ ಶುಭವಿಭಂ ।
ಗಂ ತನಗಂ ಪೆಱರ್ಗಮತಿದುಃಖಮನಿರದೋ ॥
ರಂತಿವರ ಕೋಪಶಿಖಿಬೀ ।
ಜಂ ತಾನೆನೆ ಪುಟ್ಟಿಸಿತ್ತು ತೊಟ್ಟನೆ ಮುನಿಸಂ ॥ ೧೦೧ ॥

ಪುಟ್ಟಿದ ಮುನಿಸೆನಸುಂ ಕೈ ।
ಗೊಟ್ಟಿತ್ತಿದ ತೆಱದಿನೆರ್ದು ಕೋಟ್ಕಿಗಮಿಱಿದೆ ॥
ಟ್ಟಿಟ್ಟವ ತೆಱದಿಂದಂದರೆ ।
ಯಟ್ಟಿಱಿದಂ ನಿಶಿತಶಸ್ತ್ರದಿಂ ನಾರಕರಂ ॥ ೧೦೨ ॥

ಕ್ರೂರಾನ್ಯೋನ್ಯ ಕ್ಷೇತ್ರೋ ।
ದೀರಿತ ಸಹಜಾತಮಾನಸಾಗಂತುಕಶಾ ॥
ರೀರಾದಿದುಃಖನಿಚಯಮ ।
ನೋರಂತನುಭವಿಸಿ ಷೋಡಶಾಂಬುಧಿಮಿತಮಂ ॥ ೧೦೩ ॥

ಕಮುರಚರ ಕುರ್ಕುಟೋರಗ ।
ಮಮಿತಾಖಿಳದುಃಖದಾಮಧೂಮಪ್ರಭೆಯೊಳ್ ॥
ನಮೆದಲ್ಲಿಂ ಬಂದು ಮಹಾ ।
ಹಿಮವದ್ಗಿರಿಯೊಳ್ ಮಹಾಹಿಯಾದುದು ಮಗುಟ್ದಂ ॥ ೧೦೪ ॥

ಪ್ರೇಮದೊಳೆ ತನ್ನ ಬೆನ್ನನೆ ।
ಧೂಮಪ್ರಭೆ ನಾರಕತ್ವಮೆಟ್ಟಿಂದವೊಲಾ ॥
ಧೂಮಪ್ರಭೆ ವಿಕಟಾಂಗತೆ ।
ಯೋಮಾತತ್ಯುಗ್ರವೃತ್ತಿ ನೆಲಸಿತ್ತಹಿಯೊಳ್ ॥ ೧೦೫ ॥

ಘನಕಾಯಂಗಳನವಯವ ।
ದೆ ನುಂಗಲಹಿ ಬಯಸಿ ಮನದ ತೃಷ್ಣೆಗೆ ಪಡೆದ ॥
ತ್ತನುಕೂಲ ತನುವನೆನೆ ಯೋ ।
ಜನಶತವಿಸ್ತೀರ್ಣಮಾಯ್ತು ಕರ್ಬುರವರ್ಣಂ ॥ ೧೦೬ ॥

ಚಂ ॥ ಗಿರಿತಟದೊಳ್ ಮಹಾಮುಖಮೆಗೆತ್ತಟವೀನಿಕಟಂಗಳಲ್ಲಿಯಾ ।
ಮಿರುಗುತ ಪೋಱಲೆಂದು ತೆಱೆದಾನನಮಂ ಮೃಗಸಂಕುಳಂ ಪೊದ ॥
ಱ್ದಿರಿದರಿವಂದು ಬೇಸಗೆಗೆ ಬೆರ್ಚಿ ಕರಂ ಪುಗುತಿರ್ಪುದೆಂದೊಡಾ ।
ವುರಗನ ದೇಹದುನ್ನತಿಯನಾಯತಿಯಂ ನೆಱೆಬಣ್ಣಿಪನ್ನರಾರ್ ॥ ೧೦೭ ॥

ವ ॥ ಅಂತಗುರ್ವಿಸುವ ಪೆರ್ವಾವಾಗಿ

ಕಂ ॥ ಪಲಕಾಲಂ ನರಕದೊಳಶ ।
ನಲವಮುಮಂ ಪಡೆಯದಿರ್ದ ತನ್ನಯ ಜಠರಾ ॥
ನಳನಳುರೆ ಪಲವು ಜೀವಾ ।
ವಳಿಯನಱಸಿ ನೋಡಿದು ತಣಿಯದಾ ಫಣಿ ಮತ್ತಂ ॥ ೧೦೮ ॥

ವ ॥ ಎರೆಗೊಳಲ್ತೊಳಲುತ್ತಮಾರಾಧಕಜನಪುಣ್ಯಾಗಮನದ್ವಾರಮುಂ ವಿರಾಧಕಲೋಕಾನೀಕಪಾಪಾಗಮನದ್ವಾರಮೆನಿಸಿದ ರಶ್ಮಿವೇಗಯೋಗೀಶ್ವರರಿರ್ದ ಗುಹಾದ್ವಾರಕ್ಕೆ ವಂದಬಿಂಡಿತಯೋಗಿನಿಯೋಗದೊಳಿರ್ದವರಂ ಕಂಡು,

ಕಂ ॥ ಭವಬದ್ಧಕ್ರೋಧಂ ಸಂ ।
ಭವಿಸಿರೆ ಭವವಾರ್ಧಿವರ್ಧನೋದ್ಯೋಗಪರಂ ॥
ಭವಹಾರಿಯೆನಿಪ ಮುನಿಪತಿ ।
ಗೆ ವಿಶೇಷಂ ಮುನಿವುದುಚಿತಮೆನೆ ಮುನಿದೆನಸುಂ ॥ ೧೦೯ ॥

ಅಹಿ ತನ್ನಂ ನುಂಗಿದೊಡಾ ।
ವಹಿತಂ ತನಗೆಂದು ಬಗೆದನೇ ಮುನ್ನಿರ್ದಾ ॥
ಗುಹೆಯಿಂದಹಿಮುಖ ಗುಹೆಯೊಳ್ ।
ಗುಹಿತಂ ತನಗೆಂದು ಬಗೆದನೇಂ ಗುಣನಿಧಿಯೋ ॥ ೧೧೦ ॥

ಉ ॥ ಕ್ರೂರಮಹಾಹಿ ನುಂಗುತಿರೆ ತನ್ಮುಖದಿಂದಮಗಲ್ವ ಚಿತ್ತಮಂ ।
ತಾರದೆ ದಿವ್ಯಯೋಗಿ ನಿಜಯೋಗದಿನುಗ್ರಮಪ್ಪೆಡೆ ಕಾಳಕಾ ॥
ಳೋರಗ ತೀವ್ರವಕ್ತ್ರದಿನಗಲ್ವದಟಂ ಗೆಡೆಗೊಂಡು ನಿಶ್ಚಳಂ ।
ಘೋರತರೋಪಸರ್ಗಮನೆ ಸೈರಿಸಿದಂ ಗಡ ಧೀರರನ್ನರಾರ್ ॥ ೧೧೧ ॥

ಕಂ ॥ ಚ್ಯುತಿಯುಳ್ಳ ತನುವನುಳಿದ ।
ಚ್ಯುತಮೆನಿಪಾತ್ಮ ಸ್ವರೂಪಮಂ ಭಾವಿಸಿಯು ॥
ಚ್ಯುತನಪ್ಪುದುಚಿತಮೆನೆಯು ।
ಚ್ಯುತೇಂದ್ರಸಾದಂ ಖಗೇಂದ್ರನಪ್ಪ ಮುನೀಂದ್ರಂ ॥ ೧೧೨ ॥

ಮ ॥ ಸ್ರ ॥ ಉಪಪಾದಾನಲ್ಪತಲ್ಪಂ ಸಿತಜಳಧರಮಂ ಪೋಲ್ವಿನಂ ರಶ್ಮಿವೇಗಂ ।
ಚಪಳೋದ್ಯಲ್ಲೇಖೆಯೆಂಬಂತುದಯಿಸಿ ಪುಳಕಾನೀಕ ಸಸ್ಯಂಗಳಂ ಹ ॥
ರ್ಷಪಯೋವರ್ಷಂಗಳಿಂ ಕೊರ್ವಿಸಿ ಸುರವನಿತಾದೇಹಕೇದಾರದೊಳ್ ದೇ ।
ವವರೀತಂ ರಂಜಿಸಿರ್ದಂ ಸುಕವಿಜನಮನೋಹರ್ಷಸಸ್ಯಪ್ರವರ್ಷಂ ॥ ೧೧೩ ॥

— ಗದ್ಯಂ —

ಇದು

ವಿದಿತವಿಬುಧಲೋಕನಾಯಕಾಭಿಪೂಜ್ಯವಾಸುಪೂಜ್ಯಜಿನಮುನಿ
ಪ್ರಸಾದಾಸಾದಿತನಿರ್ಮಳಧರ್ಮ ವಿನುತವಿನೇಯಜನ
ವನಜವನವಿಳಸಿತ ಕವಿಕುಳತಿಳಕಪ್ರಣೀತಮಪ್ಪ
ಪಾರ್ಶ್ವನಾಥ ಪುರಾಣದೊಳ್ ರಶ್ಮಿವೇಗ
ಮುನೀಶ್ವರಾಚ್ಯುತಕಲ್ಪಪ್ರಭವ
ವಿಭವವರ್ಣನಂ

## ಷಷ್ಠಾಶ್ವಾಸಂ ಸಮಾಪ್ತಂ

॥ ಶ್ರೀಃ ॥

# ಸಪ್ತಮಾಶ್ವಾಸಂ

ಕಂ ॥ ಶ್ರೀ ಸುರಯುವತಿಮುಖಾಬ್ಜವಿ ।
ಕಾಸಿ ಸುರಾಶಯಸರಃ ಪ್ರಸಾದಕರಂ ಸಂ ॥
ದಾಸರದಂದದಿಂದೇಂ ವಿ ।
ಭಾಸಿಸಿದಂ ವಿಶದಕೀರ್ತಿ ಕವಿಕುಳತಿಳಕಂ ॥ ೧ ॥

ಷೋಡಶ ಕಳೇಂದು ವಿಶದಂ ।
ಷೋಡಶ ಸಹಜಾತ ಮಣಿವಿಭೂಷಣಮಹಿತಂ ॥
ಷೋಡಶ ನಾಕಪ್ರಭವಂ ।
ಷೋಡಶ ವರ್ಷಪ್ರಪೂರ್ಣ ಯೌವನವಿಭವಂ ॥ ೨ ॥

ಸ್ಥಿತಿಯಿಪ್ಪತ್ತೆರಡಂಬುಧಿ ।
ಮಿತಮನಿತೆ ಸಹಸ್ರವತ್ಸರಕ್ಕೊರ್ಮೆ ಸುಧಾ ॥
ಸ್ಮೃತಿಯುಂ ಮೂಱಿಂ ಪನ್ನೊಂ ।
ದು ತಿಂಗಳಿಂಗೊರ್ಮೆ ಸುರಭಿತರಮೆನೆ ಸುಯ್ವಂ ॥ ೩ ॥

ಉ ॥ ಚಾರುವಿಳೋಚನಾಂಶು ನವಕೌಮುದಿ ಕೈರವಮಂ ಪ್ರಮೋದ ವಿ ।
ಸ್ತಾರದಿನಪ್ಪಿದಂತೆಸೆವ ದೇವನಿತಂಬಿನಿಯರ್ಕಳೊಳ್ಕಳಾ ॥
ಧಾರನುದಾರನನ್ಯದಿವದೊಳ್ದೊರೆಕೊಳ್ಳದುದಂ ನಿರಂತರಂ ।
ಸಾರಮನೋಜಸೌಖ್ಯಸುರಸಾಮೃತಮಂ ಸವಿದಂ ಸುರಾಧಿಪಂ ॥ ೪ ॥

ಮ ॥ ಜಿನಜನ್ಮಾಭಿಷವಕ್ಕದೊರ್ಮೆ ಜಿನಪಾರಿವ್ರಾಜ್ಯ ಪೂಜ್ಯಪ್ರಭಾ ।
ವನೆಗಂತೊರ್ಮೆ ಜಿನಪ್ರಬೋಧ ಜನನಶ್ರೀಗೊರ್ಮೆ ಸರ್ವಜ್ಞ ಪಾ ॥
ವನನಿರ್ವಾಣ ವಿಭೂತಿಗೊರ್ಮೆ ದಿವಿಜಂ ದಿವ್ಯಾರ್ಚನಾದ್ರವ್ಯಧಾ ।
ರಿನಿಜೋದ್ಯತ್ಪರಿವಾರನಂತನುದಿನಂ ಪೋಪಂ ಸುಧರ್ಮೋದ್ಯಮಂ ॥ ೫ ॥

ವ ॥ ಅಂತಮರಲೋಕಸುಖಮಂ ನಿರಂತರಮನುಭವಿಸುತ್ತಮಿರ್ಪನಮನ್ನೆಗ ಮತ್ತಲ್—

ಕಂ ॥ ಸಮವೃತ್ತಶೋಭೆಯಿಂ ಕವಿ ।
ಗಮಕೋಚಿತ ನವಪದಾರ್ಥದಿಂ ಜಂಬೂದ್ವೀ ॥
ಪಮದೆನೆಗುಂ ಕವಿಕುಳತಿಳ ।
ಕ ಮುಖಾಂಭೋಜಾತ ಜಾತಕಾವ್ಯಾಕೃತಿಯಿಂ ॥ ೬ ॥

ವ ॥ ಆ ಜಂಬೂದ್ವೀಪಲಕ್ಷ್ಮೀವಕ್ಷೋೕರುಹಾಳಂಕಾರಮೆನಿಸಿ ವಿದೇಹಂಗ ಳೊಪ್ಪುತಿರ್ಪುವವಱ ವಿಭವಮಂ ಪ್ರಭಾವಿಸುವೊಡೆ—

ಮ ॥ ಗಣನಾತೀತ ತಟದ್ರುಮಂಗಳೆಮೆಯಂ ಪೋಲ್ತೊಪ್ಪೆ ಸೌಂದರ್ಯ ಧಾ ।
ರಿಣಿ ವಿದ್ಯಾನಿಧಿ ಚಿತ್ತಹಾರಿಣಿ ವಿದೇಹಾಂತತ್ಸಮುದ್ಭೂತೆ ಸ ॥
ತ್ಪೃಣುತಾಚ್ಛತ್ವ ಸಮನ್ವಿತಾಯತೆ ಕರಂ ಸೀತೋದೆ ಸೀತಾತರಂ ।
ಗಿಣಿ ನೇತ್ರದ್ವಯದಂತೆ ರಂಜಿಪುದು ಜಂಬೂದ್ವೀಪ ಭೂಕಾಂತೆಯಾ ॥ ೭ ॥

ವ ॥ ಆ ನದಿಗಳಿರ್ತಡಿವಿಡಿದಿರ್ಪುವು—

ಕಂ ॥ ಎಂಟೆಂಟು ನಾಡುಗಳ್ ನಿಃ ।
ಕಂಟಕ ವೃತ್ತಿಯೊಳೆ ತಮಗೆ ಪಾಸಟಿ ಕೀೞ್ಮೇ ॥
ಲುಂಟವಱೊಳದಱಿಸುಪಮೆಗೆ ।
ಗೆಂಟೆನುತವಯವದೆ ದಿವಮನಾಕರ್ಣಿಸುಗುಂ ॥ ೮ ॥

ಪದಿನಾಱನಿಪ್ಪ ಸಂಖ್ಯೆಯೊ ।
ಳೆ ದಿವಂಗಳ್ ತಮಗೆ ಪಾಟಿಯುನ್ನತಿಯಂ ಪೊ ॥
ರ್ದಿದ ಜನಕೆ ಸಮಾನಸ್ಥಿತಿ ।
ಯೊದವಂ ಮಾೞ್ಪೆಮಗೆ ಪಾಟಿಯಲ್ಲೆನುತಿರ್ಕುಂ ॥ ೯ ॥

ಮ ॥ ಕಮನೀಯಾಕೃತಿ ಕಾಮದೇವ ವಿಜಯ ಶ್ರೀವಿಷ್ಣು ನೀಲಾಂಬರೋ ।
ತ್ತಮ ಬೋಧಾಧಿಪ ತೀರ್ಥನಾಥ ಸಕಲ ಶ್ರೀಚಕ್ರಿ ಸಪ್ತರ್ಧಿಯು ॥
ಕ್ತ ಮುನೀಂದ್ರಾದಿ ವಿಶಿಷ್ಟದೇಹಜಗತಾಸಂಭೂತಿಯಿಂದಂ ವಿದೇ ।
ಹಮೆನಿಪ್ಪಾಪೆಸರಂತವರ್ಕನುಗುಣಂ ವಿಶ್ವಂಭರಾಭಾಗದೊಳ್ ॥ ೧೦ ॥

ಚಂ ॥ ಜನಪತಿಗಳ್ ಷಡಂಶಮನೆ ಕೊಂಡಿಳೆಯಂ ಪ್ರತಿಪಾಳಿಪರ್ಪದ ।
ಕ್ಕನುವಶಮಾವಿಕೊಳ್ವ ಮಱೆಯಿಲ್ಲಿಬರಂ ನೆಗೞ್ವಂಚೆ ಪಾಪವ ॥
ರ್ತನಮನಯಂ ಪ್ರವರ್ತಿಸದು ವರ್ತಿಪುದೆಯ್ದೆ ಚತುರ್ಥಕಾಲವ ।
ರ್ತನಮೆನೆ ಕೂರ್ತು ಕೀರ್ತಿಸದರುಂಟೆ ವಿದೇಹ ಮಹೀವಿಳಾಸಮಂ ॥ ೧೧ ॥

ಮ ॥ ಸ್ರ ॥ ಜಿನಧರ್ಮಂ ವರ್ತಿಕುಂ ಮಿಕ್ಕಿನ ಕುನಯಚಯಕ್ಕಾವಿದೇಹಂಗಳೊಳ್ ವ ।
ರ್ತನಮಿಲ್ಲೇಕೆಂದೊಡಾ ಕೇವಳಿಗಳುಮವಧಿಜ್ಞಾನಸಂಪನ್ನರುಂ ನೆ ॥
ಟ್ಟನದೆಂದುಂ ವರ್ತಿಸುತ್ತಿರ್ಪುದಱಿನಮಳ ಭಾನೂದಯಂ ಕುಂದದಿರ್ದಂ ।
ದೆನಸುಂ ಘೋರಾಂಧಕಾರಂ ನೆಱಿಗುಮೆ ಜಗತೀಚಕ್ರಮಂ
ಕೊರ್ವಿ ಪರ್ವಲ್ ॥ ೧೨ ॥

ಕಂ ॥ ದಿವದೊಳ್ ಪುಟ್ಟಿದವರ್ ಸಂ ।
ಭವಿಪರ್ಕುಂ[ಯೋನಿ]ಗಳೊಳಲ್ಲಿ ಪುಟ್ಟಿದರ್ಸಂ ॥
ಭವಿಸುವರುತ್ತಮಗತಿಗಳೊ ।
ಳೆ ವಿದೇಹಂ ಸಗ್ಗದಿಂದಮುಗ್ಗಳಮಲ್ತೇ ॥ ೧೩ ॥

ವ ॥ ಅದು ಕಾರಣದಿಂ—

ಕಂ ॥ ಆ ವಿಷಯದೆ ಜನನಮನಾ ।
ದೇವರ್ಕಳ್ ಬಯಸುತಿರ್ಪರಲ್ಲಿಯ ಭವ್ಯರ್ ॥
ಭಾವಿಸಲೊಲ್ಲರ್ ದಿವಮನ ।
ದೇವುದನಿರ್ವೃತ್ತಿಯಪರವೊಲ್ ಸುಖತತಿಯಂ ॥ ೧೪ ॥

ದೇವಾನಾಂ ಪ್ರಿಯನೆ ವಲಂ ।
ದೇವಗತಿಪ್ರೀತರಪ್ಪವರ್ ತದ್ಗತಿಯಂ ॥
ದೇವಗತಿಯೆಂದೆ ಬಯಸರ್ ।
ಭಾವಿಸೆ ಭವ್ಯರ್ಕಳಲ್ಲಿ ನಿರ್ವೃತಿ ನಿರತರ್ ॥ ೧೫ ॥

ಪರಮಾಯು ಪೂರ್ವಕೋಟಿಯೆ ।
ನರರುದಯಂ ಪಂಚಶತಶರಾಸನಮೆ ನರೇ ॥
ಶ್ವರ ಸಂಪೂಜ್ಯಶಲಾಕಾ ।
ಪುರುಷೋತ್ತಮ ರತ್ನಖನಿಯೆನಿಪ್ಪಾ ಧರೆಯೊಳ್ ॥ ೧೬ ॥

ವ ॥ ಅಲ್ಲಿ ವಿಪಶ್ಚಿನ್ನಿವಾಸಮೆನಿಸಿದ ಪಶ್ಚಿಮವಿದೇಹಲಕ್ಷ್ಮೀ ಮಧ್ಯಮದೇಶದ ಬಾಸೆಯಂತಳಂಕರಿಸಿ—

ಮ ॥ ಗಣನಾತೀತ ತಟೋರುಭೂತರಸಸಂದೋಹಪ್ರವಾಹ ಪ್ರಧಾ ।
ರಣದಿಂ ವಾಹಿನಿ ನಾಗಯೂಥ ಜಳಕೇಳೀ ಲೀಲೆಯಿಂದಂ ತರಂ ॥
ಗಿಣಿಯೆಂಬೀ ನಿಜನಾಮಮನ್ವಿತಮೆನಿಪ್ಪಂತಂಬುಜಾವೋದೆ ವೀ ।
ಕ್ಷಣ ಸಂತೋಷಕರಪ್ರಸಾದೆಯೆನಸುಂ ಸೀತೋದೆ ಕಣ್ಗೊಪ್ಪುಗುಂ ॥ ೧೭ ॥

ಕಂ ॥ ದಕ್ಷಿಣನುತಮಾ ಸಿಂಧುವ ।
ದಕ್ಷಿಣದೊಳ್ ನಿಷಧಶೈಳದುತ್ತರ ದಿಶೆಯೊಳ್ ॥
ವಕ್ಷಾರದಿಂದೆ ಮೂಡಲ್ ।
ವೀಕ್ಷಣ ಸುಖಭದ್ರ ಶಾಳಿವನದಿಂ ಪಡುವಲ್ ॥ ೧೮ ॥

ಮ ॥ ವಿಳಸತ್ ಸೌರಭಶಾಲಿ ವಾರವನಿತಾದ್ಯಗ್ವ್ಯಾಪಿ ಷಟ್ಖಂಡಮು ।
ಜ್ಜ್ವಳಪತ್ರಕ್ಕೆಣೆಯಪ್ಪಿನಂ ವೃಷಭಶೈಳಂ ಕರ್ಣಿಕಾಕಾರಮಂ ॥
ತಳದೊಪ್ಪುತ್ತಿರೆ ರಾಜಹಂಸಸದನಂ ಪದ್ಮಂಬೊಲೊಪ್ಪಿರ್ಪುದ ।
ಸ್ಖಳಿತ ಶ್ರೀನಿಧಿಪದ್ಮೆ ಸದ್ಭ್ರಮರಲೀಲಾವಿಭ್ರಮಭ್ರಾಜಿತಂ ॥ ೧೯ ॥

ಚಂ ॥ ವಿಳಸಿತ ಸತ್ಪದಂ ಬುಧಸಮುದ್ಭವಶೋಭಿ ಸುದಾನ ಗೋ [ಮಿನೀ] ।
ಕುಳಮಬಳಾಮನೋಹರಮನಂಗಸಹಾಯಮಿಳೇಶ ಕೋಶ ಸ ॥
ಜ್ಜಳನಿಧಿವರ್ಧಕಂ ಸಕಳಸಸ್ಯಸಮೃದ್ಧಿಯನಾಂತು ಚಂದ್ರಮಂ ।
ಡಳಮನೆ ಪೋಲ್ತು ಮಂಡಳಮದಚ್ಚರಿಯೆಂದುಪಮಾನಸಂಪದಂ ॥ ೨೦ ॥

ಕಂ ॥ ಶಾಳಿನಿಜಗಂಧ ಮತ್ತಾ ।
ಶಾಳಿನಿ ಕಣ್ಗೊಳಿಸಿದತ್ತು ಪರಿಮಳಮಿಳಿತಾ ॥
ಶಾಳಿ ನಿರತಿಶಯ ಗುಣಕಣಿ ।
ಶಾಳಿನಿಯೆ ನಿಮಗ್ನ ಕೀರಕುಳ ಪರಿಕಲಿತಂ ॥ ೨೦ ॥

ಕಳಮಕಣಿಶಂಗಳಃ ಬ ।
ಲ್ಗಿಳಿಗಳ್ ನಸುಗರ್ಚಿ ಜಡಿಯೆ ಪಾಮರಿಯರ್ಮಃ ॥
ಡಳಿಸಿ ನಭದಲ್ಲಿ ತಳೆದವು ।
ವಳಯಾಕೃತಿವೆತ್ತ ಶಕ್ರಚಾಪದ ಚೆಲ್ವಂ ॥ ೨೧ ॥

ವ ॥ ಅಂತು ಬೆಳೆದ ಕಳವೆಯ ಕೆಯ್ಯೊಲಂಗಳ ಸಿರಿಯನಾವಗಂ ಗಡ ಗಿಳಿ ಸೋವುದಾ ವಿಷಯ ಭೂಮಿಯ ಕೋಮಳ ಪಾಮರೀಜನಂ—

ಚಂ ॥ ನಿರುಪಮ ಪಾಮರೀಮುಖಸರೋರುಹ ಸೌರಭಗಂಧಶಾಳಿ ಬಂ ।
ಧುರತರಗಂಧಮಂ ಮೃಗಮದಾಕಳಿತಾಚಳ ನಾಸುಗಂಧ ಸಿಂ ॥
ಧುರಮದಗಂಧಮಂ ತಳದು ಗಾಳಿ ಸುಗಂಧವಹಾಭಿಧಾನಮಂ ।
ಧರಿಯಿಸಿ ತೀಡುತಿರ್ಪುದು ನಿರಂತರಮಾ ವಿಷಯಾಂತರಾಳದೊಳ್ ॥ ೨೨ ॥

ಮ ॥ ನವನೀರೇಜವನಂ ಸಿತೇಕ್ಷು ಸಹಕಾರಶ್ರೇಣಿ ಮತ್ತೀಳೆ ನೀ ।
ರವಮುನ್ಮೀಳಿತ ಮಾಳತೀಪರಿಮಳಂ ತೆಂಗಾಳಿಯೆಲ್ಲೆಲ್ಲಿ ನೋ ॥
ಡುವಡಲ್ಲಲ್ಲಿಯೆ ರಯ್ಯಮೆಂದೆನೆ ವಿಯೋಗೋದ್ವೇಗದಿಂದಿರ್ಪ ಮಾ ।
ನವನಂ ಮರ್ದಿಸುವಂತಿರಿಲ್ಲ ಮದನಂಗಾಯಾಸಮಾದೇಶದೊಳ್ ॥ ೨೪ ॥

ಕಂ ॥ ವನಮೆನಿತನಿತುಂ ಮದನನ ।
ವನಕೇಳಿಗೆ ತಿಳಿಗೊಳಂಗಳೆನಿತನಿತುಂ ನೂ ॥
ತನ ಜಳಕೇಳಿಗೆ ಶೈಳಮ ।
ವೆನಿತನಿತುಂ ಶೈಳಕೇಳಿಗೆನೆ ಪೊಗೞದರಾರ್ ॥ ೨೫ ॥

ವ ॥ ಅಂತು ಸಕಳ ವಿಷಯಸುಖಕ್ಕಂ ವಿಷಯಮಾದಾ ವಿಷಯದೊಳ್—

ಕಂ ॥ ಶ್ರೀಪದಮಾ ಜನಪದ ಲ ।
ಕ್ಷ್ಮೀ ಪದಕಮಿದೆನಿಸಿ ವಿನುತನಾಯಕ ತೇಜೋ ॥
ವ್ಯಾಪೃತಮಶ್ವಪುರಂ ಮಣಿ ।
ಗೋಪುರಮೆಸೆಗುಂ ವಿಳಾಸಜಿತ ದಿವಿಜಪುರಂ ॥ ೨೬ ॥

ಚಂ ॥ ಅದು ವಿಬುಧಾಶ್ರಯತ್ವದಮರಾವತಿಯಂ ಧನದಾಲಯತ್ವದಿಂ ।
ದದು ವಿದಿತಾಳಕಾಪುರಮನಂತದನಂತ ಭುಜಂಗಸಂಗಮ ॥
ತ್ವದಿನಹಿರಾಜಪತ್ತನಮನೀ ತೆಱದಿಂ ನೆಱೆಪೋಲ್ತು ರಂಜಿಪಂ ।
ದೊದವಿನವರ್ಕೆ ಮೇಲೆನಿಪುದೆಂದೊಡೆ ಪೋಲಿಸಲುಂಟೆ ಪಟ್ಟಣಂ ॥ ೨೭ ॥

ಕಂ ॥ ಒಸರ್ವ ಸಿತಸಿತೇಕ್ಷುವ ರಸ ।
ವಿಸರದ ಪರಿಕಾಲ್ಗಳಿಂದೆ ಕಳಮುವನಂಗಳ್ ॥
ಪಸರಿಸಿ ಬೆಳೆದೆರಗಿದವೆರ ।
ಗಿಸುವುವು ಗಿಳಿಗಳುಮನಾಪುರದ ಪೊಱವೊೞಲೊಳ್ ॥ ೨೮ ॥

ದೆಸೆವೆಣ್ಗಳ ಪಸುರ್ವಟ್ಟೆಯು ।
ಪಸರಿಸಿ ತೋರ್ಪಂಶುಕಂಗಳೆನಿಸಿ ಶುಕಂಗ ॥
ಳ್ದೆಸೆಯಿಂ ಬಂದೆಱಗುವವಸ ।
ದೃಶ ಪರಿಮಳದಿಂ ವಿಶಾಳ ಶಾಳಿಯೊಳೊಲವಿಂ ॥ ೨೯ ॥

ಉ ॥ ತೀವಿದ ನಿರ್ಮಳಾಂಬು ಶಶಿಕಾಂತದ ಕುಟ್ಟಿಮಭೂಮಿ ಸ್ಮೇರ ಪೊಂ ।
ದಾವರೆ ಹೇಮಪೀಠಮೆಱಗಿರ್ದಳಿಮಾಳೆ ಪಿನದ್ಧ ನೀಳರ ॥
ತ್ನಾವಳಿ ರಾಜಹಂಸೆ ಪರಿಚಾರಕಿಯಾಗೆ ಮನೋಜರಾಜಲ ।
ಕ್ಷ್ಮೀವಧುವಿರ್ಪ ಮಂದಿರದವೊಲ್ ಬನದೊಳ್ ಕೊಳನಿರ್ಪುದೊಪ್ಪುತಂ ॥ ೩೦ ॥

ತುಂಗಸಿತೇಕ್ಷುದಂಡಸಹಕಾರ ರಸಾಕುಳ ಮಾತುಳಂಗ ನಾ ।
ರಂಗ ಫಲಂಗಳಿಂ ಸುರಯಿ ಸಂಪಗೆ ಮಲ್ಲಿಗೆ ಮೊಲ್ಲೆಯೆಂಬ ಪು ॥
ಷ್ಪಂಗಳಿನಲ್ಲಿ ಪಾಡುವ ಮದಾಳಿಯಿನೋದುವ ರಾಜಕೀರದಿಂ ।
ದಂಗಜರಾಜ ಮಂಗಳನಿವಾಸಮೆನಿಪ್ಪುದು ತದ್ಬಹಿಷ್ಪುರಂ ॥ ೩೧ ॥

ವ ॥ ಅಂತುಮಲ್ಲದೆ—

ಮ ॥ ಪರಿರಂಭೋರು ಪಯೋಧರಸ್ಮಿತಸರೋಜಾತಾನನಾಮೋದಸು ।
ಸ್ಥಿರ ಮತ್ತಭ್ರಮರಾವಳೀವಿಳಸಿತಂ ಸಂಪನ್ನಮಂ ನಾಗಮಂ ॥
ದಿರಮಾನಂದಿತ ರಾಜಹಂಸತತಿ ನಾನಾಚಿತ್ರಪತ್ರೋತ್ಕರಾ ।
ಕರಮಂತಾಪುರಮುಂ ಬಹಿಷ್ಪುರಮುಮಂತಾಕಾರದಿಂದೊಪ್ಪುಗುಂ ॥ ೩೨ ॥

ವ ॥ ಅಂತು ಸೊಗಯಿಸುವ ವನಮೆಲ್ಲಂ ವೇಳಾವನಂ ಸಿತಾಂಬುಜಂಗಳೆಲ್ಲಂ ಕಂಬುಗಳೆಂಬಂತೆಸೆಯೆ ಮಿಸುಪರುಣಕಂಜಕಿಂಜಲ್ಕ ರಜೋರಂಜಿತ ತರಂಗಮಾಳೆಗಳೆ ನವಪ್ರವಾಳಲತಾಮಾಳೆಗಳಾಗೆ ಸಾಗರಮೆ ಬಡಬಾನಳಭೀತಿಯಿಂ ಭೂಭೃತ್ಪತಿಯಂ ಶರಣ್ಬೊಕ್ಕುದೆಂಬಂತೆ ಕಣ್ಗೆಂಬಾಗಿ

ಕಂ ॥ ಎಲರಲೆಪದಿನುದಿರ್ದು ಪವನ ।
ದಲರ್ದಲರ್ವುಡಿಯಿಂದೆ ಪೊರೆದು ಪರಿಖಾವಳಯಂ ॥
ಸುಲಲಿತೆ ಘುಸೃಣೋಜ್ಜ್ವಳೆ ಪುರ ।
ಲಲನೆ ಜಲಕ್ರೀಡೆಯಾಡಿದವೊಲೆಸೆದಿರ್ಕುಂ ॥ ೩೩ ॥

ಬಳಸಿದುಪವನದೊಳಲರ್ದಲ ।
ರ್ಗಳ ಬಳಗಂ ಬಳಸೆ ಮುಟ್ಟಿ ಮುಗಿಲಂ ಪೊಸಪೊಂ ॥
ಗಳ ತೊಳಪ ತಾರಗೆಗಳಿಂ ।
ಬಳಸಿದ ಕನಕಾಚಳಂಬೊಲೆಸೆವುದು ನಿಸದಂ ॥ ೩೪ ॥

ವ ॥ ಮತ್ತಮದುತ್ತುಂಗ ವಿಶಾಳಾಟ್ಟಾಳ ಚೂಳಿಕಾರಧ್ದ ಚುಂಬಿತಾಂಬರಕೇತು ಹಸ್ತವಿಸ್ತಾರದಿಂ ನಿಳಿಂಪನಗರಸಂಪತ್ತಿ ತನಗೆ ಹಸ್ತಸ್ಥಿತಮೆಂಬುದನಭಿನಯ್ಸುವಂತೆ ಕಮನೀಯಮಾಗಿರ್ಪುದಕ್ಷೋಣಲಕ್ಷ್ಮೀಸಮಾಗಮನ ದ್ವಾರೋಪಮ ನಿರುಪಮ ನೂತನ ರತ್ನತೋರಣಕಳಾಪಗೋಪುರಮೆನಿಪ ಗೋಪುರದಿಂ ರೂಪುವಡೆದುದರೊಳಗಭ್ಯುದಯ ನಿಶ್ರೇಯಸ ನಿಶ್ರೇಣಿಯುಂ ನಿರೀಕ್ಷಣಸುಖ ಸಸ್ಯಕ್ಷೋಣಿಯುಮೆನಿಸಿ,

ಕಂ ॥ ಆವಾವ ಬೀದಿಯೊಳ್ ಪರಿ ।
ಭಾವಿಸೆ ಭಾವಕರ ಭಾವಮಂ ಸೋಲಿಪವೇ ॥
ಶ್ಯಾವಾಟ ರುಚಿರನವರಚ ।
ನಾವಳಿ ಮಣಿಕಳಶಕಳಿತ ಜನಗೃಹಮೆನೆಗುಂ ॥ ೪೫ ॥

ಮಾರನ ಚಾಪಾಗಮ ವಿ ।
ಸ್ತಾರಮನೀಕ್ಷಿಪ ತವಂಗಮಂಗನೆಯರ ಶೃಂ ॥
ಗಾರರಸಂ ತೀವಿದನಡು ।
ಗೇರಿಯಿದೆನೆ ಸೂಳೆಗೇರಿ ಮಿಗೆ ಸೊಗಯಿಸುಗುಂ ॥ ೪೬ ॥

ಚಂ ॥ ಮಸೆದ ಮನೋಜನಸ್ತ್ರನಿಚಯಂ ನಗೆಗಣ್ ನಿಡುವುರ್ಪು ಕರ್ಪುವಿ ।
ಲ್ಲಸದೃಶಚಿತ್ತಹಾರಿ ಪೊಗರೆತ್ತಿದ ಕೂರಸಿ ಬಾಸೆಯಂ ಕರಂ ॥
ಮಿಸುಗುವ ತೆಳ್ಪಸಿರ್ಪಳಕಮಾಗೆ ಪೊಳೆವ ತಳ್ಪಂ ವಿಳಾಸದಿಂ ।
ದಸದಳಮೇಱಿಕುಂ ಜಯನಶಾಲೆಯ ಲೀಲೆಯನಲ್ಲಿ ಬಾಲೆಯರ್ ॥ ೪೭ ॥

ಶಾ ॥ ಆಕಾಶ ಸ್ಫಟಿಕಾತ್ರಯೋಪರಿವೆ ಭೂಭಾಗಂಗಳೊಳ್ಕೇಕರಾ ।
ಳೋಕಂ ಭಾವಕ ಚಿತ್ತಮಂ ತೆಗೆಯೆ ಚಾರುಸ್ಮೇರಮಂಗೋದ್ಭವಂ ॥
ಗೇಕಚ್ಛತ್ರ ಜಗತ್ತ್ರಯ ಪ್ರಭುತೆಯುಂ ತಂದೀಯಲಂದಂಗನಾ ।
ನೀಕಂ ತಮ್ಮ ವಿಳಾಸದಿಂದಿಱಿಸುತಿರ್ಕುಂ ಖೇಚರಸ್ತ್ರೀಯರಂ ॥ ೪೮ ॥

ಮ ॥ ವಿದಿತಂ ವಪ್ರಭೆ ವಜ್ರವೇದಿಕೆ ವಧೂಲಾವಣ್ಯ ಪುಣ್ಯಾಂಬುತೀ ।
ವಿದ ತುಂಭತ್ಪುರಮಂಬುರಾಶಿಯೆನೆ ನಾನಾ ವಸ್ತುಸಂಪತ್ತಿಗೆ ॥
ತ್ತಿದ ತುಂಗಧ್ವಜದಿಂ ಮಣಿವ್ರಜದಿನೊಪ್ಪಂಬೆತ್ತು ಬಿಣ್ಗುಂಡನಿ ।
ಕ್ಕಿದ ಭೈತ್ರಕ್ಕೆಣೆಯಾಗಿ ಕಣ್ಗೊಳಿಸುಗುಂ ವೇಶ್ಯಾಳಿ ವೇಶ್ಯೋತ್ಕರಂ ॥ ೪೯ ॥

ಕಂ ॥ ಪುರದ ಮನೆಯೆನಿತವನಿತುಂ ।
ಕರುಮಾಡಂ ಮನೆಯ ಪಿಸ್ತಿಲೆನಿತನಿತುಂ ತಾಂ ॥
ಸರಸಿರುಹಾಕರಕಳಿತಂ ।
ಪುರುಷರೆನಿಬರನಿಬರುಂ ವದಾನ್ಯರ್ ಧನ್ಯರ್ ॥ ೫೦ ॥

ಚಂ ॥ ಮೃಗಮದಗಂಧಮಂ ಸುರಭಿಚಂದನಗಂಧಮನಬ್ಜಗಂಧಮಂ ।
ನಗನಿಕಟ ಪ್ರಸೂನ ನವಗಂಧಮನುತ್ಪಳಜಾಳ ಗಂಧಮಂ ॥
ತುಗೆ ಮಿಗೆ ಪೇಱಿ ನೀರೆಯರ್ಗೆ ಬೀರುತಮಾಪುರಮಂ ನಿರಂತರಂ ।
ಪುಗುವುದು ಘುಟ್ಟಿವಳ್ಳನೆನೆ ಗಂಧವಹಂ ಬಹುಗಂಧ ಬಂಧುರಂ ॥ ೫೧ ॥

ಮ ॥ ತನುಗಂಧಕ್ಕೆಱಗಿರ್ದ ತುಂಬಿ ಮುಗಿಲಂ ನೇತ್ರಾಂಶು ಮಿಂಚಂ ಸುಕಾಂ ।
ಚನ ಕಾಂಚೀರುತಿ ಮೇಘನಾದಮನನೂನಂ ಪೋಲೆ ಲಾವಣ್ಯ ವಾ ॥
ಹಿನಿ ಮೆಯ್ವೆರ್ಚೆ ಮನೋಜಕೇಕಿ ಕುಣಿವನ್ನಂ ಕಾರವೋಲಂಗನಾ ।
ಜನಮೊಯುತ್ತಮೆ ಬರ್ಪುದೊಪ್ಪಿ ಪುರದೊಳ್ ಶೃಂಗಾರ
ದಾಸಾರಮಂ ॥ ೪೨ ॥

ಕಂ॥ ಪೊಱಗಣ ಚೆಲ್ವಱಿಯದರ್ಗಳ ।
ನೆಱಗಿಸಿ ತನಗೊಳಗುಮಾಱ್ಪುದೆನೆ ಪುರದೊಳಗಂ ॥
ತುಱುಗಿದ ಚೆಲ್ವಱಿವವರ್ಗಳ ।
ನೆಱಗಿಸಿ ತನಗೊಳಗು ಮಾಱ್ಪುದೇಂ ಕೌತುಕಮೋ ॥ ೪೩ ॥

ವ ॥ ಅಂತಳವಿಗಳಿದ ಚೆಲ್ವನೊಳಕೊಂಡ ನಗರ ವಿಳಾಸಿನಿಗೆ ಮಂಡನಮೆನಿಸಿಯು ನೂನದಾನಾಮೋದ ಮತ್ತಮಧುಕರ ಝುಂಕಾರಾಕರ್ಣನಾಸಕ್ತಿತ್ಯಕ್ತದುಷ್ಟಚೇಷ್ಟ ಗಂಧಸಿಂಧುರ ರುಂದ್ರೇಂದ್ರಾನೀಳ ಶಾಲಾವಿಸರ ವಿವಸ್ವದಶ್ವಸದೃಶ ವಾಜಿರಾಜಿವಿರಾಜಿತ ವಿಶಾಲ ಶಾಲಾನಿಚಯ ರುಚಿರ ಪಂಚರತ್ನಾಂಚಿತ ಕಾಂಚನ ಪಂಚದಳ ಪ್ರಸಾದಸಂಪಾದ ಕಾಂತಃಪುರಕಾಂತಾನಿವಾಸ ಭಾಸುರಪ್ರತ್ಯಂತ ಪರ್ವತಪ್ರತಿರತ್ನರೋಚಿರ್ಜಳ ನಿರ್ಜರ ಪ್ರವಾಹದಿಂ ರೋಹಣಾಚಳಮನಿೞಿಸಿ ಮನಂಗೊಳಿಸೆ—

ಮ ॥ ಪುರಪೀತಾಂಬರ ನಾಭಿಮಂಡಳದವೋಲ್ಮಧ್ಯಪ್ರದೇಶರ್ಕಳಂ ।
ಕರಣಂ ರಾಜಿತ ರಾಜಹಂಸನಿವಹಪ್ರೀತಿಪ್ರದ ಶ್ರೀ ಸುಮಂ ॥
ದಿರ ಕಾಂತಾಸಿಪಯೋಜಗಂಧ ಸಹಿತಂ ವಿಖ್ಯಾತಿ ವಾಣೀ ವಧೂ ।
ವರ ವಿಭ್ರಾಜಿ ವಿರಾಜಿಕುಂ ಸುಖಪದೋರ್ವೀ ಪಾಳಲೀಲಾಗೃಹಂ ॥ ೪೪ ॥

ವ ॥ ಅಂತುಮಲ್ಲದೆ—

ಮ ॥ ಸ್ರ ॥ ವಿನುತ ಶ್ರೀ ಭದ್ರಶಾಲಂ ವಿಚಕಿಳವಿಳಸತ್ಪಾಂಡುಕ ಶ್ರೀ ಲಸತ್ಸಾ ।
ಮನಸಂ ಸನ್ನಂದನಂ ಬಂಧುರ ಸುರಭಿಮಧುಚ್ಛಾರ ಸಾರಪ್ರದೇಶಂ ॥
ಘನಪುನ್ನಾಗಾನ್ವಿತಂ ಸತ್ಪಥ ನುತರುಚಿಪದ್ರಾಜಹಂಸಪ್ರಸೇವ್ಯಂ ।
ಕನಕಾದ್ರೀಂದ್ರಂಬೊಲಿಂಬಾಗೆಸೆವುದು ಮಣಿವಿಭ್ರಾಜಿತಂ
ರಾಜಗೇಹಂ ॥ ೪೫ ॥

ಉ ॥ ಮಂದರದಂತೆ ರಾಜಿಸುವ ರಾಜಗೃಹಾಂತರದೊಳ್ ಜಿನಾರ್ಚನಾ ।
ನಂದವಿಳೋಕನಂ ವಿತರಣ ಪ್ರಭುವಿಕ್ರಮಶಾಳಿ ಸಂದ ಸಂ ॥
ಕ್ರಂದನನಿಂದ್ರ ಶಾಖ ಹರಿಯಿರ್ಪವೊಲೂರ್ಜಿತ ಶೌರ್ಯವಜ್ರವೀ ।
ರ್ಯಂ ದೊರೆವೆತ್ತು ರಂಜಿಸುತಮಿರ್ಪನಿಳಾವಳಯಾಧಿನಾಯಕಂ ॥ ೪೬ ॥

ಮ ॥ ಅತುಳಾನರ್ಘ್ಯಗುಣ ಪ್ರಸನ್ನವದನಂ ಸ್ವಚ್ಛಂ ಪ್ರತಾಪಾರ್ಜಿತೋ ।
ರ್ಜಿತತೇಜಂ ನಿರವದ್ಯವೃತ್ತನಬಳಾ ಹೃತ್ಕಾಂತರೂಪಂ ಸಮಾ ॥
ಶ್ರಿತ ಸರ್ವೇಷ್ಟಫಳಪ್ರದಂ ಸಮುಚಿತಾಸ್ಥಾನ ಪ್ರದೀಪಂ ಜಗ ।
ನ್ನುತನಾನಾಯಕರತ್ನದಂತಿರೆಸೆವಂ ಸರ್ವೋರ್ವರಾನಾಯಕಂ ॥ ೪೭ ॥

ಕಂ ॥ ಅಶ್ವಪುರವಲ್ಲಭಂ ಹರಿ ।
ದಶ್ವಪ್ರತಿಮಪ್ರತಾಪನಿಧಿವೈಭವನಾ ॥
ಕೇಶ್ವರನಾಕ್ರಮಿಸಿದನೀ ।
ವಿಶ್ವಾವನಿಯಂ ಮನೋರಥಾಗ್ರಸಮಗ್ರಂ ॥ ೪೮ ॥

ಸಸ್ಯನಿಧಿ ನಿಖಿಳಧರೆಯಂ ।
ಯಸ್ಯಾಶ್ವಸ್ತಸ್ಯ ಮೇದಿನಿಯೆಂಬುದಂತಾ ॥
ಬಾಸ್ಯಂ ದಿಟಮೆನಿಸಸನಾ ।
ಲಸ್ಯನನೂನಾಶ್ವನಾಳ್ದನಶ್ವಪುರೇಶಂ ॥ ೪೯ ॥

ಆರ್ಯ ಪ್ರತೋಷಕರ ಚಾ ।
ತುರ್ಯಂ ದೃಢಧೈರ್ಯನಂಗನಾ ಮೋಹನನೌಂ ॥
ದರ್ಯಂ ವಚನೋಚಿತ ಮಾ ।
ಧುರ್ಯಂ ವಿಭು ವಜ್ರವೀರ್ಯನವನಿಪವರ್ಯಂ ॥ ೫೦ ॥

ವಿಜಿಗೀಷುಮನಾನ್ನೃಪನಂ ।
ಸುಜನನನವಯವದೆ ಗೆಲ್ವ ಚೆಲ್ವಿಂ ಚದುರಿಂ ॥
ವಿಜಯಾಂಗನೆಯುಂಗಜನೃಪ ।
ವಿಜಯಾಂಗನೆಯುಂದದಿಂದದೇನೊಪ್ಪಿದಳೋ ॥ ೫೧ ॥

ತನು ಮತ್ತಿಟಿಕುಂ ಭ್ರೂಕ ।
ವಿಱನಬಿಲ್ಲಂ ಪಕ್ಷ್ಮಪಾಳಿ ತುಂಬಿಯ ತಿರುವಂ ॥
ನೆನೆಯಿಸೆ ನಯನದ್ಯುತಿ ಪೂ ।
ವಿನಸರಮುಂ ಮದನಸರಮುನಾಕೆಯ ನೋಟಂ ॥ ೫೨ ॥

ಚಂ ॥ ಮೊಗಮಲರ್ದಬ್ಜದಂತೆ ನಯನಂ ನಗುವುತ್ಪಳದಂತೆ ಮೂಗು ಸಂ ।
ಪಗೆಮುಗುಳಂತೆ ದಂತರುಚಿ ಮಲ್ಲಿಗೆಯಂತಧರಂ ಸಮಂತು ಬಂ ॥
ದುಗೆಯರಲಂತಿರೊಪ್ಪೆ ಕುಸುಮಾಯುಧಚಕ್ರಿಗೆ ಪಂಚಬಾಣಮಂ ।
ಬಗೆಗೊಳುತೀವ ಕಳ್ಪಲತೆಯಂತೆ ಲತಾಂಗಿ ಕರಂ ವಿರಾಜಿಪಳ್ ॥ ೫೩ ॥

ಕಂ ॥ ಜನನಾಥನ ವನಿತೆ ಜಗ ।
ಜ್ಜನಸಂಸ್ತುತೆಯುಗ್ರಮಹಿಷಿಯೆನೆ ಪೆಸರ್ವಡೆದುಂ ॥
ಮುನಿಜನ ಸನಾಭಿಜನ ಬುಧ ।
ಜನ ಪರಿಜನ ಕಾಮಧೇನುವೆನಿಪಳಿದಣಕಂ ॥ ೫೪ ॥

ವ ॥ ಆ ವಿಜಯಾಂಗನೆಯುಂ ಜಯಾಂಗನೆಯುಮಾ ಮಹೀಭುಜನ ಭುಜಮಂಡಲಕ್ಕೆ ಮಂಡನಮೆನಿಸಿಯುತನುಸಾಮ್ರಾಜ್ಯಸುಖಸಂಪತ್ತಿಯುಂ ಪಡೆಯುತ್ತಮಿರೆ ಪರಸ್ಪರಪ್ರಣಯವೃತ್ತಿಯಿಂದನೇಕ ದಿವಸಕ್ಷಣಂಗಳಂಗಜಸುಖರಕ್ಷಣಂಗಳಾಗಿ ಪೋಗುತ್ತಮಿರೆ ಕೆಲವು ದಿವಸದಿಂ

ಕಂ ॥ ಪುಷ್ಪವತಿಯಾಗಿ ಚೇತಃ ।
ಪುಷ್ಪಾಹಕ್ಕೆ ಹರ್ಷಮಂ ಪುಟ್ಟಿಪುದುಂ ಪತಿ ॥
ಪುಷ್ಪೇಷುಗೆ ಸಂಬಂಧಮು ।
ನಿಷ್ಪಾದಿಪುದುಂ ಲತಾಂಗಿಗನ್ವಿತಮಲ್ತೇ ॥ ೫೫ ॥

ವ ॥ ಅಂತು ನಿಜಪತಿಮನೋರಥಫಳಪ್ರದ ಕಾಮಕಳ್ಪಲತೆಯಂತೆ ಪುಷ್ಪವತಿಯಾಗಿ ಚತುರ್ಥಸ್ನಪನ ಪವಿತ್ರಗಾತ್ರತೀರ್ಥಮೆನಿಸಿ ಬೆಳ್ವಸದನಂಗೊಂಡು

ಉ ॥ ರಾಜಿತ ಮೌಕ್ತಿಕಾಭರಣಕಾಂತಿಯುಮೀಕ್ಷಣಕಾಂತಿಯುಂ ದಿಶಾ ।
ರಾಜಿಯನಾವಗಂ ಬೆಳಗೆ ಚಾರುತನೂಭವಸೌಖ್ಯರೂಪೆಯಾ ॥
ರಾಜನ ಸೂಳ್ಗೆ ರಾಗದೊದವಿಂ ಬರುತುಂ ಸ್ಮರಸಾರಸೌಖ್ಯಕೃ ।
ದ್ರಾಜನ ಸೂಳ್ಗೆವಪ್ಪಸಮರೋಹಿಣಿಯಂತಿರೆ ಕಾಂತೆಯೊಪ್ಪಿದಳ್ ॥ ೫೬ ॥

ವ ॥ ಆ ಸಮಯದೊಳ್

ಕಂ ॥ ಕನಕಶಯನಗೃಹವಾತಾ ।
ಯನದಿಂದೊಗೆವಗುರುಧೂಪಧೂಮಾವಳಿ ಕಾಂ ॥
ಚನಮಂಚರುಚಿರಮಣಿರುಚಿ ।
ಗೆನಸುಂ ತಲ್ಲಣಿಸಿ ತಳರ್ವ ಕಟ್ಟಿಲೆಯೆನಿಕುಂ ॥ ೫೭ ॥

ಕಾಂಚನಮಂಚಮುದಯಗಿರಿ ।
ಯಾಚೆಲ್ವಂ ಪೋಲೆ ತಳ್ಪತಳಲಲಿತದುಕೂ ॥
ಲಂ ಚಂದ್ರಿಕೆಯುವೊಲಿರೆ ರಾ ।
ಜಂ ಚಾರುವಿಳಾಸರಾಜನೆನೆ ರಾಜಿಸಿದಂ ॥ ೫೮ ॥

ಬೆಳ್ವೆಳಗಂ ದೆಸೆದೆಸೆಗಮು ।
ಗುಳ್ವಿಲರ್ಗಣ್ಣೊರಲ ಸರಲ ತೆಱದಿಂ ಬಗೆಯಂ ॥
ತಳ್ವಿಲ್ಲದುಗಿದು ತೆಗೆದಂ ।
ತೊಳ್ಪೊನಿದಿರ್ಗೊಳ್ವಿನಂ ಲತಾಂಗಿಯನರಸಂ ॥ ೫೯ ॥

ವ ॥ ಅನಂತರಂ

ಮ ॥ ಸ್ರ ॥ ನೆರೆದಂ ಸ್ವೇದಾಂಬುತೀರ್ಥೋದಕದಭಿಷವಮಂ ಮಾಡಿ ರೋಮಾಂಚದರ್ಭಾಂ ।
ಕುರಲಾವಣ್ಯಾಂಬು ಪೂರ್ಣಸ್ತನಕಳಶಧರಂ ಕಂಠರಾಗೋಚ್ಚ ತೂರ್ಯೋ ॥
ದ್ಧುರರಾವಂ ಪೊಣ್ಮೆ ಕಾಂತಂ ವಿಷಯಶರಶಲಾಕಾದಿಗಾಚಾರ್ಯನೆಂಬಂ ।
ತಿರೆ ಮೋಹಶ್ರೀಗೆ ತಾಂ ಕಣ್ದೆಱವಿಯನೊಸೆದಿತ್ತಂ ಬೆಚ್ಚವೋಲಾಗೆ ಕಣ್ಗಳ್ ॥ ೬೦ ॥

ವ ॥ ಅಂತಾರಂಭೋರುನಿರ್ಭರಪ್ರಣಯಪರಿರಂಭಸಂಭವಾಭಾವಶಂಕಾವಹ ಕುಂಭಿಕುಂಭಾಭೋಗ್ಯಭೋಗಸಾಗರ ಪೊರಗೆಯಾಗಿ

ಮ ॥ ವಿಳಸತ್ಕೈರವನೇತ್ರೆ ಚಂದ್ರಮನನಂಭೋಜಾಸ್ಯೆ ಬಾಳಾರ್ಕಮಂ ।
ಡಳಮಂ ಕಳ್ಪಲತಾಂಗಿ ಕಲ್ಪತರುವಂ ಗಂಭೀರೆಯಂಭೋಧಿಯಂ ॥
ಕುಳವಮಾನೋನ್ನತೆ ಮೇರುವಂ ಕಮಳಲೀಲಾಹಸ್ತೆ ಸಲ್ಲಕ್ಷ್ಮಿಯಂ ।
ಬೆಳಗಪ್ಪಾಗಳನೂನರಾಗದೊದವಿಂ ಕಂಡಳ್ ಶುಭಸ್ವಪ್ನಮಂ ॥ ೬೧ ॥

ಕಂ ॥ ತೇಜಶ್ಚಕ್ರಧರಂ ರಿಪು ।
ರಾಜ್ಯಾಪಹಾರಿ ತನ್ನವೊಲುರ್ವೀಧರನಿ ॥
ಭ್ರಾಜಿತಕರನುದಯಿಪಂ ತ ।
ನೂಜಂ ನಿನಗೆಂದು ಪೇಳ್ದುವೋಲಿನಸೊಗೆದಂ ॥ ೬೨ ॥

ವ ॥ ಆಗಳನೂನರಾಗಭರದಿಂ ಭುವನೇಶಭವನೋಪವನದ ವಸರುಪವನದೊಳ್ ನೆರೆವ ಚಕ್ರವಾಕಂಗಳ ಕಳರವಮುಂ ಚಕ್ರವಾಕಸ್ತನಿಯರಪ್ಪ ನಿಳಿಂಪಗಾಯಿನಿಯರಿನಿದೆನಿಸುವ ಗೇಯದ ರವಮುಂ ವಿಕಸಿತ ಸಿತಕಮಳಮಗ್ನಮಧುಕರಝುಂಕಾರಮುಂ ವ್ಯಾಪಾರ ಪರಿಚಕಿತ ಕಮಳಮುಖನಿಖಿಳಪರಿಚಾರಕಿ ಚಾರುತರ ಚರಣಮಣಿನೂಪುರ ಘನಜಘನಕಾಂಚೀದಾಮ ನಿಕಾಮಕೋಮಳಮಳಯಜ ಲತಾಕಳಿತ ಕಳಧೌತಕಂಕಣ ಝುಂಕಾರಮುಂ ನವಪಲ್ಲವ ಕುಸುಮವೆಸದ ಶೋಭಾವಹ ಸಹಕಾರಕಳಿಕಾಸ್ವಾದ ವಿನೋದಲಂಪಟ ಕಳಕಂಠ ಪ್ರಣಾದಮುಂ ಕಳಕಂಠ ಪ್ರಾಭಾತಿಕ ಪಠನೀಯ ಪ್ರಚುರ ಪಾರಪ್ರಣಾದಮುಂ ಸುಖಪ್ರಬೋಧಮನೀಯೆ ಪುಳಿನತಳದಿನೆರ್ದತ್ತ ರಾಜಹಂಸೆಯಂತೆ ಶಯ್ಯಾತಳದಿನೆರ್ದತ್ತು ತ್ರಿಳೋಕೀ ಮುಖ್ಯ ಮಂಗಳ ಭಗವದರ್ಹತ್ಪರಮೇಶ್ವರ ಶ್ರೀಮುಖಾದರ್ಶದರ್ಶನ ಹರ್ಷೋತ್ಕರ್ಷಪುಳಕಾಳಂಕಾರ ಕಮನೀಯ ಕಾಯೆ ವಿಮಳ ಮಣಿಮಯ ಮುಕುರಾವಳೋಕನ ಪ್ರಸಾದನ ಮಂಗಳ ಪ್ರಸಾಧನ ರಮಣೀಯ ಪರಿವಾರರಮಣೀಪರೀತೆ ನಿಜಮನೋರಮಣನ ಸಮೀಪಕ್ಕೆ ವಂದು ನಿಜಾಂಗಸಂಗಸಂಗತ ರೋಮಾಂಚದಿಂ ಸರ್ವಾಂಗಮನಳಂಕರಿಸಿ ತದರ್ಧಾಸನಮನಳಂಕರಿಸಿ ನಿಜಾದೃಷ್ಟ ದೃಷ್ಟ ಶುಭಸ್ವಪ್ನಂಗಳೆಲ್ಲಮಂ ವಲ್ಲಭಂಗೆ ನಿವೇದಿಸುವುದುಮುದಿತ ಪ್ರಮೋದ ಹೃದಯಂ ತತ್ಫಳಂಗಳನಿಂತೆಂದು ವಿದಿತಂ ಮಾಡಿ

ಮ ॥ ಪರಿಪೂರ್ಣೇಂದುವಿನಿಂದಖಂಡಧರಣೀನಾಥಂ ನಭಃಶೋಭಿ ಭಾ ।
ಸ್ಕರನಿಂ ಸತ್ಪದವರ್ತಿ ಕಳ್ಪತರುವಿಂದಂ ನಂದನೋದ್ಭಾಸಿ ಸಾ ॥
ಗರದಿಂದಂ ಜನರಕ್ಷಣಕ್ಷಮಭುಜಂ ಶ್ರೀಕಾಂತೆಯಿಂದಂ ನಗೇ ।
ಶ್ವರಪೂಜ್ಯಂ ಸುತನಾದಪಂ ನಿನಗೆ ಪಂಕೇಜಾತಪತ್ರೇಕ್ಷಣೇ ॥ ೬೩ ॥

ಕಂ ॥ ಎನಲೊಡನೆ ಪುಳಕಗರ್ಭಂ ।
ತನು ಹೃದಯಂ ಹರ್ಷಗರ್ಭಮೀಕ್ಷಣಮಾನಂ ॥
ದನ ಬಾಷ್ಪಗರ್ಭಮೆನೆದಿರೆ ।
ಜನಪತಿಸತಿ ವಿನುತ ಗರ್ಭವತಿ ಸೊಗಯಿಸಿದಳ್ ॥ ೬೪ ॥

ವ ॥ ಅನ್ನೆಗಮತ್ತಲ್

ಕಂ ॥ ಅವಸಾನ ವಿರಸಮನಿತುಂ ।
ಭವಸುಖಮೆಂದಱಿಪುವಂದದಱುದಿಂಗಳಿ ತ ॥
ದ್ದಿವಿಜಸ್ಥಿತಿಯೆನೆ ಬಾಡಿ ।
ರ್ದುವು ಸೂಡಿದ ಮಾಲೆ ಮಾಸಿತುಟ್ಟ ದುಕೂಲಂ ॥ ೬೫ ॥

ವ ॥ ಆ ಸಮಯದೊಳ್

ಕಂ ॥ ಚ್ಯುತಿಯಿಲ್ಲದ ತಾಣಂ ನಿ ।
ರ್ವೃತಿಯೆಂದೆ ದಲುಳಿದ ತಾಣವೆನಿತನಿತರೊಳಂ ॥
ಚ್ಯುತಿ ನಿಶ್ಚಯಮೆಂದಱಿದ ।
ಚ್ಯುತಸತ್ವಂ ಜೀವತತ್ವಮಂ ಭಾವಿಸಿದಂ ॥ ೬೬ ॥

ವ ॥ ಅಂತು ಪರಿತ್ಯಕ್ತ ಶರೀರಭಾರನಾಗಿಯುಚ್ಯುತಕಳ್ಪದಿಂದಚ್ಯುತೇಂದ್ರಂ ಬಂದು ವಿಜಯಾಂಗನಾ ಮಹಾದೇವಿಯ ಗರ್ಭದೊಳ್ ನೆಲಸೆ ಗರ್ಭಮಂ ತಾಳ್ದಿ

ಚಂ ॥ ಪ್ರಗುಣ ಚರಿತ್ರಗರ್ಭ ಜಿನಭಕ್ತಿಗೆ ಹೃದ್ಯನವಾರ್ಕಗರ್ಭ ಸೂ ।
ಕ್ತಿಗೆ ಜಯಗರ್ಭ ವಿಕ್ರಮ ವಿಭೂತಿಗೆ ಶಶ್ವದುದಾತ್ತಗರ್ಭಲ ॥
ಕ್ಷ್ಮಿಗೆ ಮುದಗರ್ಭ ತತ್ಸಭೆಗೆ ಭೂತಳ ಮೋಹನಗರ್ಭ ಮಂತ್ರಸಿ ।
ದ್ಧಿಗೆ ಪರಿಪೂರ್ಣಗರ್ಭವತಿಯೇಂ ಸಮನಾಗಿ ಮನಕ್ಕೆ ವಂದಳೋ ॥ ೬೭ ॥

ಕಂ ॥ ಕರ್ಪು ಪಯೋಧರಮುಖದೊ ।
ಳ್ಪೋರ್ವಡೆ ನವರೋಮರಾಜಿ ನವಲೇಖೆಯೊಳಂ ॥
ಕರ್ಪೆನೆಯಾಸ್ಯೇಂದುವಿನೊ ।
ಳ್ಪೋರ್ವುದು ಚೆಲ್ವಿದುವೆ ವಿಸ್ಮಯಂ ನೃಪಸತಿಯಾ ॥ ೬೮ ॥

ಬಿಡೆ ಕೊರ್ವುವ ಮೊಲೆಯಿಂ ನಡು ।
ವುಡಿದಪುದತಿಭರದಿನೆಂದು ಬಡನಡುವದಱೊಳ್ ॥
ಕಡು ಪುರುಡಿಂ ಬಳೆದವುದೀ ।
ಗಡೆನೆ ಪೊದಟ್ದಿನೆವುತಿರ್ಪುದಾಕೆಯ ಮಧ್ಯಂ ॥ ೬೯ ॥

ನತಗುರ್ನ್ನತಿಯಪಯಶಮು ।
ದ್ಧತಗೀಸುತನಿಂದಮಕ್ಕುಮೆಂದಱಿಪುವವೋಲ್ ॥
ನತನಾಭಿಯೊಳುನ್ನತಿಯು ।
ದ್ಧತಕುಚಮುಖದಲ್ಲಿ ಕರ್ಪು ನೆಗಟ್ದುದು ಸತಿಯಾ ॥ ೭೦ ॥

ವ ॥ ಅಂತಾ ಕಾಂತೆಗೆ ಗರ್ಭಚಿಹ್ನಂಗಳ್ ತೋಱೆಯವಿಧೇಯರಾದ ನಾಯಕರುಳ್ಳಲ್ಲಿ ಕಳಿಸಿದನೇಕ ರತ್ನೋಪಾಯನಮಂ ನಾಯಕಸ್ತ್ರೀಯರ್ಗೆ ಬಾಯಿನಮಂ ಕುಡಲುಂ ಶರಣಾಗತ ಧರಣೀಕಾಂತ ಸೀಮಂತಿನೀ ಸೀಮಂತ ರಜಃಪುಂಜದಿಂ ಪದಕಮಲಂ ರಂಜಿಸಲುಂ ಖಚರ ವಧೂಜನ ಪ್ರಧಾನೆಯರ್ ಮಾನಸಸೇವಾದತ್ತಾವಧಾನೆಯರ್ಕಳ ಹಂಸಯಾನೆಯರೆಂಬಾಖ್ಯಾನಮಂ ನನ್ನಿಮಾಡಿ ತನ್ನನಾಗಳುಮಗಲದೋಲಗಿಸೆ ಲೀಲೆಯೊಳಿರಲುಂ ಪರಿಮಳ ವಿಳಸದ್ರಮಣಿಯರ್ ಸುಮನಸ್ತ್ರೀಯರೆಂಬುದಂ ಸುಮನೋವಿ

ಭೂಷಣಮಂ ತನಗೆ ಕುಡೆ ಪಡೆಯುತ್ತಂ ಸುತ್ತಲುಮಿರೆ ಚೆಲ್ವುವೆತ್ತಿರಲುಂ ಬಯಸುವ ಳಂತುಮಲ್ಲದೆಯುಂ

ಚಂ ॥ ವರಕರಿಯಾನಕಾಂತೆಯುರ ನರ್ತನಮಿರ್ದಪೊಲನ್ಯ ವನ್ಯಕುಂ ।
ಜರಕುಳಯಾನಮಂ ನಯದಿನೀಕ್ಷಿಸಲಂಬುಜನೇತ್ರೆ ಕಂಬುಕಂ ॥
ಧರೆಯುರ ಗೇಯನಾದಮಿರೆ ಕಂಬುನಿನಾದಮನಾಲಿಸಲ್ ಮನೋ ।
ಹರಿ ಬಯಸುತ್ತಮಿರ್ಪಳತನೂಭವ ವೈಭವ ಸೂಚಕಂಗಳಂ ॥ ೭೧ ॥

ಕಂ ॥ ತರಳತರ ವಿಮಳ ಮುಕ್ತಾ ।
ಭರಣಂ ತನಗೆಸೆಯೆ ಖಳ್ಗದಳಿತಾಹಿತ ಕುಂ ॥
ಜರ ಕುಂಭ ಗಳಿತ ಮುಕ್ತಾ ।
ಭರಣಂಗಳನಬಳೆ ತಳೆಯಲೆಂತೆಸೆದಿರ್ಪಳ್ ॥ ೭೨ ॥

ವ ॥ ಅಂತಾ ಕಾಂತೆಯ ಬಯಕೆ ತನ್ನ ಬಯಕೆಯುಂ ಕೂಡಿ ರೂಢಿವಡೆಯೆ

ಮ ॥ ವಿದಳತ್ಪಂಕಜನೇತ್ರೆ ಸಚ್ಚರಿತೆ ದಾಮೋದ್ಯುಕ್ತೆ ಸಾಧೂಕ್ತೆಯೆಂ ।
ಬುದಱಿಂದಂ ಸತಿ ಭವ್ಯರಾಜಿ ಪರಿವಾರಂ ಬಂಧುಗಳ್ ಕೂಡೆ ಬೇ ॥
ಡಿದ ಕಾಡೊಳ್ ಮಱೆ ಕೊಂಡುದೆಂಬ ತೆಱದಿಂ ಸಂತೋಷಮಂ ತಾಳ್ದೆ ತಾ ।
ಳ್ದಿದಳಂದಾ ಗುಣಗರ್ಭೆ ಗರ್ಭಮನಶೇಷೋರ್ವೀಶ ಚಕ್ರೇಶನಾ ॥ ೭೩ ॥

ಕಂ ॥ ಕಾಂತೆಗೆ ಪುಂಸವನಂ ಸೀ ।
ಮಂತೋನ್ನೀಳನವೆನಿಪ್ಪ ಮಂಗಳ ವಿಧಿಯಂ ॥
ಸಂತೋಷದಿನಖಿಳ ಮಹೀ ।
ಕಾಂತಂ ಮಾಡಿಸಿದನೊಸೆಯೆ ಬಾಂಧವನಿವಹಂ ॥ ೭೪ ॥

ವ ॥ ಅಂತು ನವಮಾಸಂ ಸುರಭಿಮಾಸದಂತೆ ಮಾಕಂದನಂದನಸಂಪತ್ತಿಯುಮಂ ಧಾತ್ರೀಜನಸುಖಸಂಪತ್ತಿಯುಮಂ ಪಡೆಯುತ್ತಂ ಪರಿಪೂರ್ಣಮಾಗೆ

ಮ ॥ ಕುಲಹೇಮಾದ್ರಿ ಸುರದ್ರುಮಂ ಕುಲಧರಿತ್ರೀಭಾರ ಧಾತ್ರೀಧರಂ ।
ಕುಲವಾರಾಸಿ ಸುಧಾಕರಂ ಕುಲಮರುನ್ಮಾರ್ಗಸ್ಫುರದ್ಭಾಸ್ಕರಂ ॥
ವಿಳಸದ್ದಾನ ನಿಧಾನನುಂ ನುತಗುಣಂ ನೇತ್ರಪ್ರಿಯಾಕಾರನು ।
ಜ್ವಳತೇಜೋನಿಧಿ ಪುಟ್ಟಿದಂ ಪದನತೋರ್ವೀಚಕ್ರ ಚಕ್ರಾಧಿಪಂ ॥ ೭೫ ॥

ವ ॥ ಆಗಳ್

ಕಂ ॥ ದಸೆಯನಿತುಂ [ತಂಗದಿರನ] ।
ಜಸದವೊಲತಿ ವಿಶದಮಾದುದನಳಂ ತೇಜ ॥
ಪ್ರಸರದವೊಲೆಸೆದುದಬಳನ ।
ಮಿಸುಗುವ ಸುಯ್ಯಂತೆ ಸುರಭಿಯೆನಿಸಿತ್ತನಿಳಂ ॥ ೭೬ ॥

ಪರಿದು ಕುಮಾರೋತ್ಸವಮಂ ।
ನಿರವಿಸಿ ರೋಮಾಂಚಕಂಚುಕಮನಿತ್ತನವನೀ ॥
ಶ್ವರನಂಗಚಿತ್ತಮಂ ಸಾ ।
ದರದಿಂ ದಯೆಗೆಯ್ಯೆ ವೃದ್ಧಕಂಚುಕಿ ಪಡೆದಂ ॥ ೭೭ ॥

ಕಂ ॥ ಪರಿಚಾರಕಿಯರುಮತ್ಯಾ ।
ದರದಿಂ ಪರಿವೆಡೆಯೊಳಮಳ ಮಣಿಕಂಕಣನೂ ॥
ಪುರರಣಾರವಮುಂ ತ ।
ತ್ಪುರದೊಳ್ ನೆಗಟ್ಟಿತ್ತು ರಾಗಸಾಗರದುಲಿವೋಲ್ ॥ ೭೮ ॥

ಚಂ ॥ ಲಲನೆಯರಟ್ಟಿಱಿಂ ತಳಿಯುತಿರ್ಪ ಲಸತ್ಕುಸುಮೋಪಹಾರಮು ।
ಜ್ವಳನಖಕಾಂತಿಯುಂ ಪರಪುವಂತಿರೆ [ಸುಂದರ] ಕೌಸುಮಂ ಮನಂ ॥
ಗೊಳಿಪಧರಾಂಶುವಂ ಕೆದಱುವಂತಿರೆ ನಿರ್ಮಿಸುತಿರ್ಪ ಮೌಕ್ತಿಕಂ ।
ಗಳ ಕಡೆಗಣ್ಣ ಕಾಂತಿಯುನೆ ಬೀಱುವವೋಲಿರೆ ಲೀಲೆವೆತ್ತುದೋ ॥ ೭೯ ॥

ಕಂ ॥ ಮನದೊಳ್ ಗುಡಿಗಟ್ಟಿದುದಂ ।
ಮನೆಯೊಳ್ ಗುಡಿಕಟ್ಟಿ ಕುಂಕುಮಾಂಬುಗಳಂ ನೆ ॥
ಟ್ಟನೆ ತಳಿದಂಗಣದೊಳ್ ಮನ ।
ದನುರಾಗಮನಱಿಪಿದತ್ತು ಪುರಜನಮನಿತುಂ ॥ ೮೦ ॥

ವಿಕ್ರಮು ಚಕ್ರದೆ ವಿಕ್ರಮು ।
ದಾಕ್ರಮಿಸುಗುಮೆಂದು ಪೇೞ್ವ ತೆರದಿಂದಾಶಾ ॥
ಚಕ್ರಮನಾತನ ಜನನದೊ ।
ಳಾಕ್ರಮಿಸಿದುದಖಿಳ ಮಂಗಳಾನಕ ನಿನದಂ ॥ ೮೧ ॥

ಮಂಗಳ ಪಾಠಕರವಮಂ ।
ಮಂಗಳ ಗಾಯಕನಿಕಾಯ ಗೇಯಸ್ವನಮಂ ॥
ಮಂಗಳ ತೂರ್ಯಧ್ವನಿಯುಂ ।
ಪೊಂಗಳ ದನಿ ಮಿಕ್ಕುದವನಿಪಂ ಕುಡುವೆಡೆಯೊಳ್ ॥ ೮೨ ॥

ನಿಧಿಪುರುಷಂ ಪುಟ್ಟುವುದುಂ ।
ನಿಧಿಗಂಡುದು ನಿಖಿಳಲೋಕಮೆನೆ ಜನನದೊಳ ॥
ತ್ಯಧಿಕೋತ್ಸವದಿಂದದನ ।
ರ್ಘ ಧನಕೆ ತಲೆದೋಱದಂತು ಪಾರ್ಥಿವನಿತ್ತಂ ॥ ೮೩ ॥

ಮ ॥ ನವರತ್ನಚ್ಛವಿ ಭೂಷಣಾವಳಿಗಳೊಳ್ ಕಸ್ತೂರಿಕಾಚಂದನ ।
ದ್ರವ ಕಾಶ್ಮೀರ ಸಮಗ್ರ ಗಂಧವನುಲೇಪವ್ರಾತದೊಳ್ ಮಿಕ್ಕು ತೋ ॥
ರ್ಪವನೀಪಾಳಕ ಮಂತ್ರಿವರ್ಗ ವಿಳಸತ್ಸಾಮಂತ ಸೀಮಂತಿನೀ ।
ನಿವಹಂ ಬಂದಿರೆ ಕಣ್ಗೆವಂದುದು ಧರಿತ್ರೀಕಾಂತನಂತಃಪುರಂ ॥ ೮೪ ॥

ವ ॥ ಅಂತು ಶೋಭಿಸುವಂತಃಪುರದರಮನೆಗೆ ಸಕಳ ಮಕುಟ ಬದ್ಧರುಂ ಬಾಂಧವರುಂ ಬೆರಸರಸಂ ಬಂದು ಜಾತಕರ್ಮೋತ್ಸವಮನತ್ಯುತ್ಸವದಿಂ ಮಾಡೆ ಮಱುದಿವಸಂ

ಕಂ ॥ ಜಳಜಾನನೆ ಕುಳಿವೊಗೆ ಕ ।
ಣ್ಗೊಳಿಸುವ ಖೇಡ ಕುಳಿವೊಕ್ಕಳೆಂಬಂತೆವೊಲು ॥
ಜ್ವಳಿಸುವನುರಾಗರಸದೋ ।
ಕುಳಿಯಾಡಿದುದಾಗಳಖಿಳ ಬಾಂಧವನಿವಹಂ ॥ ೮೫ ॥

ಕಂ ॥ ಅತಿ ಚಿತ್ರಂ ಕುಳಿವೊಕ್ಕುಂ ।
ಕ್ಷಿತಿಪಾಳಕನಗ್ರಮಹಿಷಿ ಮಹಿತಳದೊಳಗು ॥
ನ್ನತಿಯುಂ ತಳೆವಳೆನುತ್ತಂ ।
ಚತುರಜನಂ ಸ್ತುತಿಯಿಸಿತ್ತು ತನತನಗಾಗಳ್ ॥ ೮೬ ॥

ವನಿತೆಯರ್ಗೆ ಬೀಱಿದರ್ ತೆಂ ।
ಗಿನ ಪೋೞಿಂ ಬೀಱುವಂತೆ ಕಪ್ಪುರವಳಿತಂ ॥
ತನತನಗೆ ಪಚ್ಚೆಗವ್ಪುರ ।
ಮನೆ ಜಳಜಾನನೆಯರಕ್ಕಿಯುಂ ಬೀಱುವವೊಲ್ ॥ ೮೭ ॥

ವಸುಧೇಶಂಗಂ ಬಾಂಧವ ।
ವಿಸರಕ್ಕಂ ಪರಿಜನಕ್ಕಮೆಯ್ದೆ ಕುಮಾರ ॥
ಪ್ರಸವಂ ಸುಖಫಳಮಂ ಪು ।
ಟ್ಟಿಸುವುದು ಕರಮುಚಿತಮೆನಿಸಿ ಜನಿಯಿಸಿತೆನಸುಂ ॥ ೮೮ ॥

ಎಡೆಗಿಱಿದೆಲ್ಲೆಡೆಗಳೊಳಂ ।
ಗುಡಿ ನಾನಾರತ್ನತೋರಣಾವಳಿ ಚೆಲ್ವಂ ॥
ಕುಡೆ ಬೇಟ್ಪಿರ್ಗಭಿಮತಮಂ ।
ಕುಡೆ ಜನಪತಿ ಸೊಗಯಿಸಿತ್ತು ಜನನೋತ್ಸಾಹಂ ॥ ೮೯ ॥

ದಶಮ ದಿನದಂದು ವಿಭು ದಶ ।
ದಿಶೆಯುಂ ಯುತದಂತೆ ತೀವೆ ತೂರ್ಯಧ್ವನಿ ವ ॥
ಜ್ರಶರೀರನೆಂಬುದಕ್ಕಸ ।
ದೃಶ ವಿಭವಂ ವಜ್ರನಾಭಿ ನಾಮುವನಿಟ್ಟಂ ॥ ೯೦ ॥

ವ ॥ ಅಂತು ಪೆಸರ್ವಡೆದಾಕುಮಾರಂ ಸುಕುಮಾರಶರೀರನುಮಾರಕ್ತ ಚಾರು ಚರಣಕರತಳಾಧರಪಲ್ಲವನುಂ ಬಂಧುಜನನಯನಕುಮುದನೌಂದರ್ಯಸಿಂಧುವುಮೆನಿಸಿ ಬಳೆಯುತ್ತಂ

ಕಂ ॥ ಸ್ಖಳನಂ ಪದದೊಳ್ ನೆಗಟ್ಟಿನ ।
ಮಿಳಾಮನೋಹರಿಯನಡಿಗಡಿಗೆ ಪಿಡಿದಪ್ಪ ॥
ಲ್ಕೆಳಸಿದವೋಲಖಿಳ ಮಹೀ ।
ತಳಪತಿ ತನುಸಂಭವಂ ತಳರ್ನಡೆ ನಡೆದಂ ॥ ೯೧ ॥

ಪೊಡೆಸೆಂಡುಗೊಂಡು ತನ್ನಯ ।
ಪಡೆಯುರವಣಿಗನಿದುಮೆಸೆವ ತೊದಳ್ನುಡಿ ಪೊದಟ್ಟಿ ॥
ನುಡಿ ಬಾಳನ ರಂಜಿಪ ತಳ ।
ರ್ನಡೆ ನಡೆಯೆನೆ ಪದುಳಮೊಸಯಿಸಿತು ತಂದೆಯುಮಂ ॥ ೯೨ ॥

ಕಂ ॥ ನೆಗಟ್ದಿ ಹಿತಮಹಿಪರೊಡನೇ ।
ಬಿಗಮಂ ಬಂದೇಱಿ ತನ್ನ ಕೀರ್ತ್ಯಂಗನೆಯೇ ॥
ಬಿಗಮನೊಸೆದೇಱಿ ಮಿಗೆ ಬಂ ।
ಧುಗಳುಮನಾತಂದೆಯೊಡನೆ ಪೊರೆಯೇಱಿಸಿದಂ ॥ ೯೩ ॥

ವದನಾಬ್ಜದೊಡನೆ ಮಾಣಿಕ ।
ದೊದವುಳ್ಳರಳೆಲೆಯ ಪುಲಿಯುಗುರ ಕೆಂಜೆಡೆಯ ॥
ಗ್ಗದ ಕಾಂತಿಯು ತಿಂತಿಣಿ ಕೆಂ ।
ಗದಿರಂತಿರೆ ಬಾಳರವಿವೊಲೆಸೆದಂ ಬಾಳಂ ॥ ೯೪ ॥

ಶೈಶವಕೇಳಿ ಮನಕ್ಕಮ್ಮ ।
ತಾಶನ ಸೇವನೆವೊಲೀಯೆ ಸುಖಮಂ ಶಿಶುಗು ॥
ರ್ವೀಶಂ ಮಾಡಿದನನ್ನ ।
ಪ್ರಾಶನ ಚೌಲೋಪನಯನ ವಿಧಿಯಂ ಕ್ರಮದಿಂ ॥ ೯೫ ॥

ವ ॥ ಮತ್ತಮಯ್ದನೆಯ ವರ್ಷಮೆಯ್ದುವನಿತರ್ಕ್ಕೆ ಶುಭಮುಹೂರ್ತದೊಳ್ ರೂಢರಾಜವಿದ್ಯಾಪ್ರೌಢಾಚಾರ್ಯವರ್ಯರಂ ಶಬ್ದಶಾಸ್ತ್ರಾದ್ಯರ್ಥಶಾಸ್ತ್ರಂಗಳುಮನ ಮುಕ್ತ ಮುಕ್ತಾಮುಕ್ತ ಕರಮುಕ್ತ ಯಂತ್ರಮುಕ್ತ ಪ್ರಭೇದ ವಿವಿಧ ಶಸ್ತ್ರವಿದ್ಯೆಗಳುಮಂ ಸೂಕರಾಶ್ವವ್ಯಾಳಶುಂಡಾಳಶಿಕ್ಷಣಾಕರ್ಷಣಾರೂಢ ವಿದ್ಯೆಗಳುಮಂ ಶಿಕ್ಷಿಸುವಂತು ನಿಯೋಜಿಸೆ

ಕಂ ॥ ಒಂದು ಕೊಡದಮೃತಮಂ ಮ ।
ತ್ತೊಂದು ಕೊಡದೊಳೆಜೀವ ಮಾಟ್ಕೆಯಾಯ್ತೆನೆ ವಿಬುಧರ್ ॥
ಸಂದೇಶಸ್ಥಿತಿಯಿಂ ಕ ।
ಲ್ತಂ ದುರ್ಗಮಶಾಸ್ತ್ರಮೆಲ್ಲಮಂ ಗುರುಮುಖದಿಂ ॥ ೯೬ ॥

। ವಿಶದಪ್ರಜ್ಞಂಗೆ ಚತು ।
ರ್ದಶವಿದ್ಯಾರತ್ನಮೆಯ್ದೆ ಸಮನಿಸಿತು ಚತು ॥
ರ್ದಶರತ್ನಮುಮೀ ತೆಱದಸ ।
ದೃಶವಿಭವಂಗಕ್ಕುಮೆಂಬುದಂ ಸೂಚಿಪವೋಲ್ ॥ ೯೭ ॥

ಚತುರಾಸ್ಯನತುಳಮತಿಯಿಂ ।
ವಿತತ ಚತುಃಷಷ್ಟಿ ಕಳೆಯನವಯುವದಿಂದ ॥
ನ್ವಿತಮೆನಿಸಿ ಕಲ್ತು ನೆಗಟ್ದಂ ।
ಚತುರ್ಗುಣಂ ಸಕಳರಾಜನೀತಿಯೊಳಾತಂ ॥ ೯೮ ॥

ಚಂಡಿಕೆ ಭೃಗು ಭೇತಾಳಂ ।
ಚಂಡತೆಯಿಂ ಕೈದುವಿಡಿದು ನಿಂದಾಂತಡೆ ಮಾ ॥
ರ್ಕೊಂಡು ಗೆಲಲ್ ನೆರೆವೆಡೆಗೆದೆ ।
ಗಂಡಿಕೆಯಾಚಾರ್ಯನೆನಿಸಿದಂ ಬಿನ್ನಣದಿಂ ॥ ೯೯ ॥

ಕಂ ॥ ತನು ಶಸ್ತ್ರಕ್ರಮದಿಂ ಬ ।
ಲ್ಪನಪ್ಪೆ ಮನಮರ್ಥಶಾಸ್ತ್ರನಿಯತಕ್ರಮದಿಂ ॥
ದನುಪಮ ವಿವೇಕದಿಂ ನೆ ।
ಟ್ಟನೆ ತಾಳ್ದಿರೆ ಶಸ್ತ್ರಶಾಸ್ತ್ರಪರಿಣತನಾದಂ ॥ ೧೦೦ ॥

ಚಂ ॥ ಪ್ರವಿಮಳ ವಿದ್ಯೆಮೂರ್ತಿ ತನಗೆಂಬರಮಾತನೆ ನನ್ನಿಮಾಡುವಂ ।
ತವಯುವ ವೃದ್ಧಿಯೊಳ್ ಬಳೆಯೆ ವಿದ್ಯೆಗಳುಂ ಶಶಿಯುಂದದಿಂದೆ ಶ್ರೀ ॥
ಶವದಿನಗಲ್ದು ಷೋಡಶಕಳಾಪರಿಪೂರ್ಣತೆಯುಂ ಕುಮಾರನೆ ।
ಯ್ದುವುದುಮಶೇಷ ಕಾಂತೆಯರ್ಗೆ ಸಜ್ಜನಸಂತತಿಗಾಯ್ತು ಸಂತಸಂ ॥೧೦೧॥

ಕಂ ॥ ಸುದತಿಯರಿಗೆ ತೋಷಂ ರಿಪು ।
ಹೃದಯಕ್ಕೆ ಭಯಂ ಧನಾರ್ಥಿಗತ್ಯುತ್ಸವಮೊ ॥
ರ್ಮೊದಲೆ ಬಳೆವಂತು ಬಳೆದಂ ।
ಮುದನಾಭಂ ವಜ್ರನಾಭಿಯುಪಗತ ಲೋಭಂ ॥ ೧೦೨ ॥

ಮ ॥ ಲಲಿತಾಸ್ಯಂ ಶಶಿಯುಂ ಪಳಂಚಲೆವ ಚೆಲ್ವಂ ತಾಳ್ದಿತೀರಾಜಮಂ ।
ಡಳಮುಂ ಭೂಪತಿ ಧಿಕ್ಕರಿಪ್ಪೆಸಕಮುಂ ಪೇೞ್ವಂತೆ ಹಸ್ತಂ ದಿಶಾ ॥
ಖಿಳ ಶುಂಡಾಳಕರಕ್ಕೆ ಮಚ್ಚರಿಸಿ ನೀಳ್ಪಂ ತಾಳ್ದಿತೀವಿಶ್ವಭೂ ।
ತಳಮಂ ತಾನಸಹಾಯವೃತ್ತಿಯೊಳೆ ತಾಳ್ದಿ ರ್ಪೇೞ್ಗೆಯಂ ಪೇೞ್ವಿವೋಲ್ ॥೧೦೩॥

ಕಂ ॥ ವಾರವಧೂ ಮದಹಾರ ಕು ।
ಮಾರನ ಸುಕುಮಾರ ಬಾಹುದಂಡಂ ಮಕರಾ ॥
ಧಾರ ಕರತಳಪ[ತಾಕ]ನ ।
ಮಾರನ ವಿಜಯಧ್ವಜೋರುದಂಡಮೆನಿಕ್ಕುಂ ॥ ೧೦೪ ॥

ಶ್ರೀರಮಣಿಯ ಸುರುಚಿರ ಕಾ ।
ಶ್ಮೀರಾರುಣ ಕಠಿಣ ಕುಚದ ಸಂಸ್ಪರ್ಶನದಿಂ ॥
ದಾರಕ್ತತೆ ಕಠಿಣತೆ ವಿ ।
ಸ್ತಾರಿಸಿತೆನೆ ನೃಪಕುಮಾರಕರತಳಮೆಸೆಗುಂ ॥ ೧೦೫ ॥

ಧರಣೀಚಕ್ರಂ ಪದಪಂ ।
ಕರುಹಮನೀ ತೆಱದಿನಗಲದೋಲಗಿಸುವುದಂ ॥
ನಿರವಿಸುತಿರ್ದುದು ನೃಪಸುತ ।
ಚರಣಾಂಬುಜ ಚಾರುಚಕ್ರಚಿಹ್ನವಿಳಾಸಂ ॥ ೧೦೬ ॥

ಲಲನಾಸಹಸ್ರಕುಚಮುಂ ।
ಡಳಕುಳಮಂ ಸಕಳಸಾರ್ವಭೌಮಶ್ರೀಯುಂ ॥
ತಳೆವ ನೃಪಾಳನ ವಕ್ಷ ।
ಸ್ಥಳದ ವಿಶಾಳತೆಯನಾವವಂ ನೆಱೆ ಪೊಗೞ್ವಂ ॥ ೧೦೭ ॥

ವ ॥ ಅಂತು ಸಂಸಾರಸುಖಮನೋಭವನಜೀವನಮಾದ ಯೌವನಂ ಬಳೆಯೆ ಬಳೆದ ನಿಜಕುಮಾರನಕ್ಷೂಣವಿಜಯಲಕ್ಷ್ಮೀವಿಳಾಸ ವಿಹರಣೋಚಿತ ವಿಶಾಳ ಕೇಳೀ ಶೈಳಮೆನಿಪ ದಕ್ಷಿಣ ಭುಜಾದಂಡಮಂ ಕರಡು ಪಲದೆವಸಕ್ಕಂ ನೀನೆನ್ನ ತೋಳ್ವಲಕ್ಕೆ ನೆರವಂ ಪಡೆದನೆಂಬ ಸಂತೋಷದಿಂ ತಿಂತಿಣಿಯನಾಂತು ವಜ್ರವೀರ್ಯಂ ಸಮಸ್ತ ಸಾಮಂತಮಂತ್ರಿಮಂಡಳಿಯಂ ಬರಿಸಿ

ಮ ॥ ವಿವಿಧಾತೋದ್ಯ ನಿನಾದಪೂವರಿಸೆ ಧಾತ್ರೀವ್ಯೋಮದಿಗ್ಭಾಗಮಂ ।
ನವಮಾಣಿಕ್ಯ ಮಣಿಪ್ರತಾನಸುವಿತಾನಾದಂ ಸುಮಧ್ಯಾಹ್ನ ಭಾ ॥
ನುವ ಬಿಂಬಕ್ಕುದಯಾರ್ಕಬಿಂಬತೆಯ ಚೆಲ್ವಂ ಬೀಱೆ ಕೊಟ್ಟಂ ಮಹೀ ।
ಶವರಂ ತನ್ನ ಸುತಂಗೆ ಚಾರು ಯುವರಾಜ್ಯ ಪ್ರಾಜ್ಯಸಂಪತ್ತಿಯಂ ॥ ೧೦೮ ॥

ವ ॥ ಅಂತು ವಜ್ರನಾಭಿಯುವರಾಜಂ ನೃಪಸಮಾಜಮಂ ನಿಜಾಜ್ಞಾವಿಧೇಯತೆಗೆ ಸಲಿಸಿ ತಾನುಂ ತನ್ನ ತಂದೆಯಾಜ್ಞೆಯೆಂಬ ವಜ್ರಪ್ರಾಕಾರಾಂಕಮಾಳದೊಳ್ ಸುಖದಿ ನಿರೆಯಿರೆ

ಉ ॥ ಅಂತು ನಿರಂತರೋಪಚಯದಿಂ ತನು ಯೌವನಮಂ ಲಸತ್ಕಳಾ ।
ಸಂತತಿ ಭಾವತತ್ವಮನುದಾರಮುದಾರ ಯಶೋವಿಳಾಸಮಂ ॥
ಸಂತತಮಿಂತಳಂಕರಿಸೆ ವಿಕ್ರಮಲಕ್ಷ್ಮಿಗೆ ಚಕ್ರರತ್ನಮೋ ।
ರಂತನುಕೂಲಮಾಗೊಗೆದುದಾಯುಧಶಾಲೆಯೊಳಾನ್ನಪಾಳನಾ ॥ ೧೦೯ ॥

ವ ॥ ಅಂತು ಚಕ್ರರತ್ನಂ ತನ್ನಗಣ್ಯಪುಣ್ಯದುದಯಮಂ ನೆಲಕ್ಕೆ ಜಲಕ್ಕನಱೆ ಪುತ್ತಮುದಯಂಗೆಯ್ವುದುಮದನಾಯುಧಾಗಾರನಿಯೋಗಿ ಬಂದು ಬಿನ್ನವಿಸೆ ಪ್ರಸನ್ನ ವದನಾರವಿಂದನಾಗಿ ಕುಮಾರನ ಮೊಗಮಂ ನೋಡಿ

ಮ ॥ ಸ್ರ ॥ ನಿನಗೇಕಚ್ಛತ್ರಮಾಯ್ತುರ್ವರೆ ಜಿನಪದರಾಜೀವಸೇವಾಸುರೇಂದ್ರಾ ।
ವನಿಜಂ ಪ್ರಾಗ್ಜನ್ಮಸಂವರ್ಧಿತಮದು ಸಫಳಂ ನೋಟ್ಪಿಡಿಂದಾದುದಿನ್ನುಂ ॥
ತನುಜಾತಪ್ರೀತಿಯಿಂ ಪೆರ್ಚಿಪುದದನೆ ಜಗನ್ಮಂಗಳಂ ಮುಖ್ಯಮಲ್ಲಿ ।
ನ್ನೆನಸುಂ ಬೇಱುಂಟೆ ಪೇೞೆಂದೆನೆ ಗುರು ಮನದೊಳ್ ಕೂರ್ತು ಕೈಕೊಂಡ
ನಾಗಳ್ ॥ ೧೧೦ ॥

ವ ॥ ಅಂತು ನಿಜಗುರೂಪದೇಶಂ ಸಹಕಾರಭೂರುಹಕ್ಕೆ ಮಧುಸಮಯಪವನ ಸಂಸ್ಪರ್ಶದಂತೀತುಕಕಳಿಕಾವಿಶೇಷಮಂ ಪಡೆಯೆ ಚಕ್ರವರ್ತಿ ನಿರ್ವರ್ತಿತಮಪ್ಪ ಮಹಾ ಮಹಿಮೆಗಳಂ ಸಮಸ್ತ ಚೈತ್ಯಾಲಯಂಗಳೊಳ್ ನಿರ್ವರ್ತಿಸಿ

ಕಂ ॥ ಉದ್ಧತ ರಾಜ್ಯಾಕರ್ಷಣ ।
ಸಿದ್ಧಿಗೆ ನಿರ್ಮಳ ಯಶೋವಶೀಕರಣಕ್ಕಾ ॥
ಯುದ್ಧಾರ್ಥಿಮಾರಣಕ್ಕೆಂ ।
ದುದ್ಧರಿಸಿದ ಸಿದ್ಧಚಕ್ರದಂತಿರೆ ಚಕ್ರಂ ॥ ೧೧೧ ॥

ಮ ॥ ಸ್ರ ॥ ಅವಧೇಯೋಚ್ಛಾವಲೇಪಾಪ್ರತಿಮ ತಿಮಿರ ವಿಚ್ಛೇದಕಚ್ಛಾಂಶು ಚಕ್ರ ।
ಕ್ಕವತಂಸಂ ಲೋಕಪಾಳರ್ಗೆನಿಸಿ ವಿವಿಧ ಮಾಂಗಲ್ಯತೂರ್ಯಪ್ರಣಾದಂ ॥
ಧವಳಾಬ್ಜವ್ರಾತದಿಂದರ್ಚಿಸಿ ರುಚಿರುಚಿರಾನರ್ಘ್ಯ ರತ್ನಂಗಳಿಂದಂ ।
ರವಿಗೀವಂತರ್ಘ್ಯಮಿತ್ತಂ ವಿಬುಧಜನಮನಃ ಪದ್ಮಿನೀಪದ್ಮಮಿತ್ರಂ ॥ ೧೧೨ ॥

॥ ಗದ್ಯಂ ॥

ಇದು

ವಿದಿತವಿಬುಧಲೋಕನಾಯಕಾಭಿಪೂಜ್ಯವಾಸುಪೂಜ್ಯಜಿನಮುನಿ
ಪ್ರಸಾದಾಸಾದಿತ ನಿರ್ಮಳಧರ್ಮವಿನುತವಿನೇಯಜನ
ವನಜವನವಿಳಸಿತ ಕವಿಕುಳತಿಳಕಪ್ರಣೀತಮಪ್ಪ
ಪಾರ್ಶ್ವನಾಥಪುರಾಣದೊಳ್ ವಜ್ರನಾಭಿ
ನಾಮಾಭಿರಾಮ ಚಕ್ರಧರ
ಚಕ್ರಾಭ್ಯುದಯ
ವರ್ಣನಂ

**ಸಪ್ತಮಾಶ್ವಾಸಂ ಸಮಾಪ್ತಂ**

---

॥ ಶ್ರೀಃ ॥

# ಅಷ್ಟಮಾಶ್ವಾಸಂ

ಕಂ ॥ ಶ್ರೀಚಕ್ರರತ್ನಮಂ ಬಾ ।
ಹಾಚಳ ಬಾಳಾರ್ಕ ವಿಭವಮಂ ಪೂಜಿಸಿ ಧಾ ॥
ತ್ರೀಚಂದನರಸ ಶ್ರೀತಳ ।
ವಾಚಂ ಮುದವಾಂತನಿಂತು ಕವಿಕುಳತಿಳಕಂ ॥ ೧ ॥

ವ ॥ ಅಂತು ಸಂತೋಷಮನಾಂತಿರೆ

ಕಂ ॥ ಜನಿಯಿಸೆ ಸುದರ್ಶನಂ ಸಂ ।
ಜನಿಯಿಕುಮಖಿಳೇಪ್ಸಿತಾರ್ಥಮೆಂದಱಿಪುವವೋಲ್ ॥
ಜನಿಯಿಸಿದವು ಚಕ್ರಧರಂ ।
ಗನಿತುಂ ಮೇಲಾದ ರತ್ನನಿವಹಂ ಕ್ರಮದಿಂ ॥ ೨ ॥

ಮಣಿವರ ಚಿಂತಾಮಣಿ ಕಾ ।
ಕಿಣಿ ಚಿಂತಾಜನನಿ ಚರ್ಮರತ್ನಂ ಜಳರ ॥
ಕ್ಷಣ ಕಾರಣ ವಜ್ರಮಯಂ ।
ರಣತರಮುದಭೇದ ಚಂಡವೇಗಂ ದಂಡಂ ॥ ೩ ॥

ಅಸಿಸೌನಂದಕಮಂಗನೆ ।
ಬಿಸಜಾಕ್ಷಿ ಸುಭದ್ರೆಭದ್ರಮುಖನಖಿಳಕಳಾ ॥
ವಸನಂ ರಕ್ಷಕರತ್ನಂ ।
ಪ್ರಸನ್ನಮತಿ ಕಾಮವೃಷ್ಟಿ ಗೃಹಪತಿರತ್ನಂ ॥ ೪ ॥

ಗಜರತ್ನಂ ತುಂಗತೆಯಿಂ ।
ನಿಜಮಸ್ತಕವರ್ತಿಗಳ್ಗೆ ಖೇಚರಪದಮಂ ॥
ಸೃಜಿಸುವುದಱಿಂ ತನಗದು ।
ವಿಜಯಾಚಳಮೆಂಬ ನಾಮಮನ್ವಿತಮೆನಿಕುಂ ॥ ೫ ॥

ಹಯರತ್ನಂ ಪವನಂಜಯ ।
ಮಯೋಧ್ಯನಾಮಂ ಚಮೂಪರತ್ನಂ ನಯಸಂ ॥
ಚಯ ಬುದ್ಧಿಸಾಗರಂ ಸ ।
ತ್ಕ್ರಿಯಾವಿಧಂ ಪತಿಹಿತಂ ಪುರೋಹಿತಛತ್ರಂ ॥ ೬ ॥

[ಚಿತ್ರಂ] ಸೂರ್ಯಪ್ರಭನತಿ ।
ಚಿತ್ರಮನೊದವಿಸುಗುಮಖಿಳ ಕುವಳಯವಿಳಸ ॥
ನ್ನೇತ್ರಾನಂದಕರಂ ಸುಚ ।
ರಿತ್ರೋರ್ಜಿತ ರಾಜನುದಯದೊಳ್ ರಾಜಿಸುಗುಂ ॥ ೭ ॥

ಕಂ ॥ ವೃತ್ತಘನಸ್ತನೆಯರ್ ತೊಂ ।
ಬತ್ತಱುಸಾಸಿರಮದಿರ್ದೊಡಂ ಸ್ತ್ರೀರತ್ನಂ ॥
ಚಿತ್ತಜಸುಖಮಂ ಚಕ್ರಿಗೆ ।
ಬಿತ್ತರಿಕುಂ ಶಶಿವೊಲುಡುಶತಂ ನೆರೆದಿರೆಯುಂ ॥ ೮ ॥

ಆ ರಾಜನ ತೇಜೋವಿ ।
ಸ್ತಾರಂ ತಾನೆನಿಪ ಚಕ್ರಧಾರಂ ತೊಡರ್ದಂ ॥
ದಾರಂ ಪರಿಭವಿಸನೊ ಕದ ।
ನಾರಂಭಕರೆನಿಪ ವೈರಿಭೂಪಾಳಕರಂ ॥ ೯ ॥

ವ ॥ ಅಂತನ್ವರ್ಥನಾಮಮಂ ಪೆತ್ತುದಯಿಸಿದ ಚಮೂಪರತ್ನಂ ಚಕ್ರರತ್ನಂ ಮೊದಲಾದ ಚತುರ್ದಶ ಜೀವಾಜೀವ ರತ್ನಂಗಳಂ ಯಥಾಕ್ರಮದಿಂ ನೃಪಚೂಡಾರತ್ನಂ ಪೂಜಿಸಿ ರಾಜಲೀಲೆಯಿಂ ವಿರಾಜಿಸುತ್ತಮಿರೆ ನಿಜದಿಗ್ವಿಜಯ ಪ್ರಯಾಣ ಶ್ರೀಯುನನುಕರಿಸಿ

ಮ ॥ ನಿರುತಂ ಸೋಗೆಯ ಸೋಗೆ ಸೀಗುರಿಯವೋಲ್ ಚೆಲ್ವಪ್ಪಿನಂ ಮೇಘಡಂ ।
ಬರಮಿಂಬಾಗಿರೆ ಮುಂದೆ ವಾಹಿನಿ ಪೊದಟ್ಟೊಪ್ಪಿರ್ಪಿನಂ ಖಡ್ಗದಂ ॥
ತಿರೆ ಮಿಂಚಳ್ಕಿಸೆ ಮಿಂಚಿ ತೀವ್ರಕರ ರಾಜಪ್ರಸ್ಫುರತ್ತೇಜದೊಳ್ ।
ಕರಮಂ ಭಂಗಿಸೆ ಪೆಂಪುವೆತ್ತನಿಳೆಯೊಳ್ ಕಾರೆಂಬ ಭೂಪಾಳಕಂ ॥ ೧೦ ॥

ವ ॥ ಅಂತುಮಲ್ಲದೆ

ಮ ॥ ಸಸಿಜಂಗಂ ಕುಡುಮಿಂಚು ಸೊನ್ನಲಿಗೆ ಚಿತ್ರಾಭ್ರಾಳಿ ಭೃಂಗಾರಮಂ ।
ಗಸಮುತ್ಸಾಹ[ಕರಂ] ಮಯೂರ ನಟನ ಪ್ರಾರಂಭ ಮೇಘಸ್ವನಂ ॥
ನಿಸದಂ ಮಂಗಳತೂರ್ಯಮಾಗೆ ಸುರಚಾಪಂ ಬಾಸಿಗಂಬೊಲ್ ವಿರಾ ।
ಜಿಸೆ ಕಾರ್ಗಾಲಮಿಳಾವಧೂವರನವೋಲೇಂ ಲೀಲೆಯಂ ತಾಳ್ದಿತೋ ॥ ೧೧ ॥

ಕಂ ॥ ಚಾದಗೆಯುತ್ಕಂಠತೆಗೊಳ ।
ಗಾದುದು ವಿರಹಿಗಳ ತೆಱದೆ ಕಡವಲದರ್ದುದು ನೃ ॥
ತ್ಯಾದರ ಶಿಖಿ ಹೃದಯದವೋ ।
ಲೂದೆ ಜನಾಹ್ಲಾದಕಾರಿ ಪಶ್ಚಿಮ ಪವನಂ ॥ ೧೨ ॥

ಚಂ ॥ ಅತಿಶಯಸಿಂಹಪೀಠ ಚಮರೀಚಮರಿಜ ವಿಭಾಸಿ ಭೂಮಿಭೃ ।
ತ್ಪತಿಗೆ ನಿದಾಘ ಸಂಜನಿತ ಘರ್ಮಮನೊಟ್ಟಿಪ ಮಜ್ಜನಾಂಬು ಸಂ ॥
ಭೃತ ನವನೀಳರತ್ನಕಳಶಂಗಳಿವೆಂಬಿನಮುನ್ನತಾಭ್ರಸಂ ।
ಗತಿ ಬಳಸಿರ್ದು ಕಣ್ಗೊಳಿಸುತಿರ್ದವು ಶೈಳವಿಶಾಳ ವಪ್ರದೊಳ್ ॥ ೧೩ ॥

ಮ ॥ ಪಗಲರ್ಕಂ ವಿಧುರಾತ್ರಿಯೊಳ್ ನಿಜಕರವ್ರಾತಂಗಳಿಂ ತಮ್ಮನಾ ।
ವಗಮೊಟ್ಟಿಟ್ಟಿದರೆಂದು ನೊಂದು ಮುಳಿಸಾಂತಾಯಿರ್ವರಂ ಗೆಲ್ವಬ ॥
ಲ್ವಗೆಯಿಂ ತೀವ್ರತಮಂಗಳಂ ಬುಧಸಮಗ್ರಾಕಾರಮಂ ಪೆತ್ತವೋಲ್ ।
ಮುಗಿಲಂ ಕಾರ್ಮುಗಿಲೆಯ್ದೆ ಪರ್ವಿದವಗುರ್ವಂ ಕೊರ್ಪಿ
ಕಾರ್ಗಾಲದೊಳ್ ॥ ೧೪ ॥

ಕಂ ॥ ಪ್ರಿಯಮೆನಿಪ ಮೇಘುವೆಟ್ಟಿರೆ ।
ನಯನಯುಗಂ ನೆರೆಯದೆಂದು ನೋಡಲ್ ಪಲವುಂ ॥
ನಯನಂಗಳನಾಂತಂತಿರೆ ।
ಮಯೂರಿ ನಲಿದತ್ತು ಕೆದಱಿ ಕಣ್ಬೀಲಿಗಳಂ ॥ ೧೫ ॥

ಮ ॥ ಸುರಚಾಪಂ ಸ್ಮರಚಾಪಮೂರ್ಜಿತಶರಾಸಾರಂ ಸದಾಸಾರಮು ।
ಭ್ರರವಂ ಜ್ಯಾರವಮೆಯ್ದೆ ಸಂಚರಿಪ ಮಿಂಚುಗ್ರಾಸಿ ದಂಭೋಳಿಭಾ ॥
ಸುರತೇಜಂ ಶಿಖಿನರ್ತನಂ ಝುಷಪತಾಕಾನರ್ತನಂ ತನ್ನೊಳಾ ।
ಗಿರೆ ಕಾಮಿಪ್ರಕರಂ ಕರಂ ಬೆದಱಿದತ್ತಭ್ರಾಗಮೋದ್ಯೋಗದೊಳ್ ॥ ೧೬ ॥

ಪರಿಕೊಂಡತ್ತು ಕಲಂಕುತುಂ ಕುಱುವಮಂ ಪೊಟ್ಟಿತ್ತು ತೀರಕ್ಕೆ ತಾಂ ।
ಸರಿಯಾದತ್ತೆರಡುಂ ತಟಂಗಳನೆ ಮೀಱಿತ್ತಂಬಿಗನರ್ಾವೆಯುಂ ॥
ಭರದಿಂದಿಕ್ಕದ ಮಾಟ್ಕೆಯಾಯ್ತು ನದಿಯೆಂದೆಂಬನ್ನೆಗಂ ಧಾತ್ರಿ ಭೋ ।
ರ್ಗರೆದೆತ್ತಂ ಕಱಿದತ್ತು ಕಾರಮುಟಿ ಝುಂಝಾಮಾರುತಪ್ರೇರಿತಂ ॥ ೧೭ ॥

ಕಂ ॥ ಜಡಹೃದಯರನಾಶ್ರಯಿಸಿ ।
ದೊರ್ಡೆ ಮೂಳೋಚ್ಛಿತ್ತಿಯಪ್ಪುದೆಂಬಿನೆಗಮೆರ ॥
ಲ್ತಿಡಿವಿಡಿದಿರ್ದ ಮರಂಗಳ ।
ನಡಿಗೆಡಪಿದುವಿರದೆ ಪರಿವ ಪೂರದೆ ನದಿಗಳ್ ॥ ೧೮ ॥

ಪಿರಿದೆನಿಸಿ ಪುಗುವ ಪೊನಲಿಂ ।
ಸರೋವರಂ ಕದಡೆ ಮಾನಸಕ್ಕೆ ಮರಾಳೋ ॥
ತ್ಕರಮಿರದೆ ಪೋಯ್ತು ವಿನುತಾ ।
ಚರಣಯುತಮರ್ಳಿನಹೃದಯರಂ ಪೊರ್ದುವರೇ ॥ ೧೯ ॥

ಚಂ ॥ ಸಿರಿಪರಿಪಾಳಿಸಲೆರೆವ ಬುದ್ಧಿಯನುಳ್ಳ ನರಂಗೆ ಸಾರೆ ಸು ।
ಸ್ಥಿರತೆಯಿನಿರ್ಕುಮಲ್ಲದೊಡೆ ನಿಲ್ಲದೆ ನೆಟ್ಟನೆ ಪೋಕುಮೆಂಬುದಂ ॥
ನಿರವಿಸುವಂತೆ ತೀವಿದವು ಪೆರ್ಗೆಱಿ ಕೋಡಿಯನುಳ್ಳವಿಲ್ಲದಿ ।
ರ್ಪರೆಗೆಱಿ ಪೂರದಿಂದೊಡೆದು ಪೋದವದಾಗಳೆ ಮೇಘುಕಾಲದೊಳ್ ॥೨೦॥

ಕಂ ॥ ಪದನರಿದೀವ ಬೊಜಂಗಂ ।
ಸುದತಿಯನನುರಾಗಸಂಪದದಿಸೊಂದಿಪವೋಲ್ ॥
ಪದವಳೆ ಸಸ್ಯಂಗಳ ಸಂ ।
ಪದದಿಂದೊಂದಿಸಿತಗುರ್ವಿನಿಂದುರ್ವರೆಯುಂ ॥ ೨೧ ॥

ವ ॥ ಅಂತು ಮಹೀಕಾಂತೆ ಸಕಳಮಹೀಕಾಂತನ ತೋಳೊಳಿರ್ದು ತಳೆದ ಪುಳ ಕಂಗಳಂತಳುಂಬಮಾಗಿ ಬಳೆದ ಸಸ್ಯಂಗಳಿಂ ಮನಂಗೊಳಿಸುತ್ತಮಿರೆ

ಚಂ ॥ ದಿವಸಪತಿಪ್ರಸಾದದೊದವಿಂ ದಿವಸಾಂಗನೆಯಾನನಾಬ್ಜದಂ ।
ತವಿರಳಮಂಬುಜಾಳಿಯುಲರ್ದೊಪ್ಪಿದವಾಸತಿಯಾಶಯ ಪ್ರಶೋ ॥
ಭೆವೊಲೆ ಜಳಾಶಯುಂ ತಿಳಿದವಾವಧುವುಟ್ಟಮಳಾಂಬರ ಪ್ರಲೀ ।
ಲೆವೊಲಮಳಾಂಬರಂ ಬಗೆಗೆವಂದುದು ರುಂದ್ರಶರತ್ಪ್ರವೇಶದೊಳ್ ॥ ೨೨ ॥

ಮ ॥ ನೆಗೞ್ದಂಭೋನಿಧಿ ನೀರಮಂ ನೆಱೆಯೆ ತಂದೀಗಳ್ಸುಧಾವಾರ್ಧಿವಾ ।
ರಿಗಳಂ ಪೇೞೆಯೆ ಬಂದುವೆಂದೆನಿಸಿ ಕಣ್ಗಿಂಬಾಗಿ ಶುಭ್ರಾಭ್ರಮಾ ॥
ಲೆಗಳೊಪ್ಪಿರ್ದವು ಮಿತ್ರನಾತ್ಮಕರದಿಂ ಶ್ರೀಮಚ್ಚರಚಕ್ರಿಗಾ ।
ವಗಮಘ್ಯಂಗುಡಲಿಂದುಕಾಂತಕಳಶಾನೀಕಂಗಳಂ ಪೊತ್ತವೋಲ್ ॥ ೨೩ ॥

ಕಂ ॥ ಗಡಣದೆ ಬಿಡೆ ಮಾನಸದಿಂ ।
ನಡೆತಪ್ಪುದುಮಾ ರಾಜಹಂಸತತಿ ನಯನಸ ।
ಕ್ಕೆಡೆಗಿಱಿದಿರದೆತ್ತಿದ ಬೆ ।
ಳ್ಗೊಡೆಗಳಿವೆನೆ ಬಿಳಿಯ ಜಳದಮೊಗೆದವು ನಭದೊಳ್ ॥ ೨೪ ॥

ಜಾದಿಯ ತನಿಗಂಪುಂ ಕಂ ।
ಜಾದಿಯ ತನಿಗಂಪುಮೆತ್ತಲುಂ ಪಸರಿಸೆ ವೇ ॥
ಟಾದಂ ಚಂದ್ರಿಕೆಯೊಳೆ ರವಿ ।
ಪಾದಮುಚಂಡತೆಯೊಳೊಂದಿ ನೆಗೞ್ದುದು ಶರದಂ ॥ ೨೫ ॥

ಶರದಂ ಬರೆ ಮದನೇಭಂ ।
ಸರದಂ ತಾನೆನಿಸಿ ಮಾಣ್ದುದೇಂ ತುಂಬಿಯ ಮೇ ॥
ಲೆರದಂದಮರಲ ಸರಲ ಪ ।
ಸರದಂದಂ ಬಿರಹಿಗೆನಿತಲರ್ದುದುತ್ಪಳದೊಳ್ ॥ ೨೬ ॥

ಮದಮುದಿತ ಪರಿಮಳಂ ಧ್ರುತಿ ।
ಮದಾಳಿಯುಲಿ ಕುಂಭಮೆನಿಸಿ ಕುಸುಮಸ್ತಬಕಂ ॥
ಮದನೇಭಮೆಂದೆ ಸಪ್ತ ।
ಚ್ಛದಕ್ಕೆ ಬೆದಱಿದುದು ವಿರಹಿ ಶರದಾಗಮದೊಳ್ ॥ ೨೭ ॥

ಚಂ ॥ ದ್ಯುಮಣಿಗೆ ತೇಜಮುಜ್ವಳಿಸೆ ಪ್ರಜ್ವಳಿಕುರ್ವಿತಳಂ ಸರೋಜಷಂ ।
ಡಮುದಲರ್ದೊಪ್ಪಿ ನಿರ್ಮಳತೆಯಂ ತಳೆಗುಂ ಬಳಬಾಶರಾಳಿಯುಂ ॥
ತ್ರಮೆ ವಲಮುಂದು ಬಂದ ಶರದಾಗಮದೊಳ್ ಪೆಱರಂ ಪ್ರಭಾವಿಸು ।
ತ್ತಮೆ ತಮಗೊಳ್ಪನಾಸುರರೇೞ್ಗೆಯೊರಾಳ್ಗಳ ಮಾಡೆ ರಂಜಿಸರ್ ॥ ೨೮ ॥

ಉ ॥ ಚಾರುತರೇಂದುವಕ್ತ್ರೆ ಚಪಳೇಕ್ಷಣೆ ಹಂಸವಿಳಾಸಯಾನೆ ನೀ ।
ಹಾರಕರಪ್ರಭಾಂಬರೆ ಸರೋವಿಮಳಾಶಯೆ ತಾರತಾರಕಾ ॥
ಹಾರಮರೀಚಿ ಪಾಂಡುರಪಯೋಧರೆ ಕೌಶಲತಾಂತ ಕಾಂತಿವಿ ।
ಸ್ತಾರ ಸಿತಪ್ರಸಾದನೆವೊಲೇಂ ಶರದಂಗನೆ ಕಣ್ಗೆವಂದಳೋ ॥ ೨೯ ॥

ವ ॥ ಅಂತು ಬಂದ ಶರಲ್ಲಕ್ಷ್ಮಿಯೆ ವಿಜಯಲಕ್ಷ್ಮಿಯು ತನಗೋತು ಕಳಿಪಿದ ದೂತಿಯಾಗೆ ವಜ್ರನಾಭಿ ದಿಗ್ವಿಜಯೋದ್ಯೋಗಮಂ ಮನದೆಗೊಂಡನೇಕ ಮೌಹೂರ್ತಿಕ ಸಂಕೀರ್ತಿತ ಶುಭಮುಹೂರ್ತದೊಳ್ ದಿಗ್ವಿಜಯ ಪ್ರಯಾಣ ಭೇರಿಯಂ ಪೊಯ್ಸಿ

ಕಂ ॥ ನವಖಂಡಾವನಿಯೊಳಗಿ ।
ರ್ಪವನೀಶರ ಹೃದಯಮೆಯ್ದೆ ಶತಖಂಡಮೆನಿ ॥
ಪ್ಪವೊಲೊಡೆಯೆ ಭೂರಿ ಭೇರೀ ।
ರವಮೊಗೆದುದು ಚಕ್ರಿವಿಜಯಯಾತ್ರೋತ್ಸವದೊಳ್ ॥ ೩೦ ॥

ವ ॥ ಆಗಳನೂನ ಸನ್ಮಾನಂ ಬೆರಸಿದ ದಾನಗುಣಮಂ ಪಡೆವ ಬಯಕೆಯಿಂ ಸನ್ಮಾನದಾನವಿನೋದಿಯಂ ಮೆಯ್ವಳಿಯಿಂದಾರಾಧಿಸಿದಪುದೆಂಬಂತಿರೆ ಹರಿಚಂದನ ರಸದಿಂ ನುಣ್ಪುವಡೆವಿನಮುಣ್ಪನಿಕ್ಕಿದ ಶೃಂಗಾರ ಗಂಗಾನದೀಕೂಲಮೆನಿಸಿದ ದುಕೂಲ ಮನುಟ್ಟು ಶತಪತ್ರನೇತ್ರೆಯರ್ಗನುರಾಗೋದಯಮನಾಗಿಸುವುದಯರಾಗದಂಗಿಗೆಯಂ ತೊಟ್ಟು ಸಕಳ ತೇಜಸ್ವಿಗಳ ತೇಜಂ ತನಗೆ ಹಸ್ತಸ್ಥಮೆಂಬುದನಱಿಪುವಂತೆನೆವ ನವಗ್ರಹದ ಕಂಕಣಮನಿಕ್ಕಿ ವಿಜಯ ರಮಣೀ ರಮಣೀಯ ಮಣಿಮಯಾಸನವಿಳಾಸನ ವಿಳಾಸಕ್ಕಾ ವಾಸಮಾಗೆ ಕೇಯೂರಮಂ ಭೂರಿಭುಜದೊಳ್ ತಳೆದು ಮನವೊಸೆದು ಮನಸಿಜಯನಂ ಮುಖಮೆಂಬ ತಾರಾಪತಿಯ ಬೆಸದಿಂ ತಾರಾವಳಿಗಳಗಲದೋಲಗಿಸುವ ಲೀಲೆಯಂತೆ ಬೆಡಂಗುವಡೆಯೆ ಕಂಠಿಕೆಯಂ ರಾಜಕಂಠೀರವಂ ರಾರಾಜಿಸುವಂತಿರಾಂತು ಲಲಿತಾಕೃತಿ ವಿಜಿತ ಮಕರಧ್ವಜಂ ಮರಕತ ಕುಂತಳಮನಿಕ್ಕಿಕೊಂಡು ಗುಣಸಮನ್ವಿತಮುಪ್ಪುತ್ತಮ ಜಾತಿಯನಾರಾದೊಡಮಾದರಿಸುವರೆಂಬುದಂ ಪ್ರಕಟಿಸುವಂತೆ ವಿನೂತ ಜಾತೀಮಾ ಳೆಯಿಂ ಮಕುಟತಟಮನಳಂಕರಿಸಿ ಮದನಂ ಮದಿರಾಕ್ಷಿಯರನೀಕ್ಷಣಮಾತ್ರದೊಳೆ ತನ್ನ ಪದಾಕ್ರಾಂತರಂ ಮಾಟ್ಪ ಮಿತ್ರನ ಚರಿತ್ರಕ್ಕೆ ಮೆಚ್ಚಿ ಚಂದ್ರಮನಮರ್ದಪ್ಪಿ ದೊಪ್ಪಮನಪ್ಪುಕೆಯ್ಯೆ ಜಗತ್ತಿಳಕಂ ಕತ್ತುರಿಯ ತಿಳಕಮನಿಟ್ಟು ಕರ್ಪೂರ ಪಾರಿಪರಿ ಚುಂಬಿತಾಂಬೂಳ ಗಾಳೋಕಿತ ಮಂಗಳ ಮಣಿದರ್ಪಣಂ ದರ್ಪಕನಂತೆ ಕಾಂತಾಹೃದಯ ಹಾರಿಯ ಶೃಂಗಾರಾಗಾರದಿಂ ಪೊಱಮಡುವ ಸಮಯದೊಳ್

ಕಂ ॥ ಕ್ಷಿತಿ ಚತುರಯುವತಿ ನವಸಂ ।
ಗತಿಯೊಳ್ ಕಂಪನಮನಾಂತುದೆಂಬಂತೆವೊಲು ॥
ನ್ನತ ದಕ್ಷಿಣಭುಜದಂಡ ।
ಕ್ಷಿತಿಧರದೊಳ್ ರಂಜಿಸಿತ್ತು ಮಂದಸ್ಪಂದಂ ॥ ೩೧ ॥

ಮದದೊದವನುಳಿದು ನಿಜ ಮೃದು ।
ಪದಮಂ ಕುಲಧನಮೆನಿತ್ತು ಧಾತ್ರೀಶರ್ ಕಾ ॥
ಣ್ಬುದನೊಲ್ದು ಕಾಣ್ಬುದಂ ಪೇ ।
ಳ್ವುದು ಚಕ್ರಧರಂಗೆ ದಕ್ಷಿಣಾಕ್ಷಿ ಸ್ಪಂದಂ ॥ ೩೨ ॥

ವ ॥ ಅಂತು ನೆಗಟ್ದೆ ಪಲತೆಱದ ಶುಭಚಿಹ್ನಕ್ಕೆ ಸಂತಸಂಬಡುತ್ತಮಿರೆ ದಿಗ್ವಿಜಯ ರಮಣೀ ಪಾಣಿಗ್ರಹಣ ಮುಹೂರ್ತಮತ್ಯಾಸನ್ನಮೆಂದು ಬಿನ್ನವಿಸೆ ಪರಸುವ ಹಿತ ಪುರೋಹಿತನ ಪರಮಾಶೀರ್ವಚನ ನಿಚಯಂಗಳಂ ಸುವರ್ಣಕರ್ಣಾವತಂಸಂ ಮಾಡುತ್ತಂ ಪಣ್ಣಿ ಬಂದಿರ್ದ ಗಜೇಂದ್ರದ ಸಮೀಪಕ್ಕೆ ವಂದಾನಂದದಿಂದಂ ನೋಡಿ

ಕಂ ॥ ವಾರಣಮಿಂತಿದು ರಿಪುಕಾ ।
ಳೋರಗನೆಂದಱಿಪುವಂದದಲ್ಲಲ್ಲಿಗೆ ಕ ॥
ಸ್ತೂರಿ ರಸದಿಂದೆ ಬರೆದಸಿ ।
ತೋರಗತತಿ ನೋಡೆ ಸಾಡೆಯುಂ ಕಣ್ಗೊಳಿಕುಂ ॥ ೩೩ ॥

ಮದಲಕ್ಷ್ಮಿಯ ಕೇಕರರುಚಿ ।
ಕೆದಱಿದವೋಲ್ ಕರ್ಣಚಾಮರಂ ಸಿಂಧೂರಂ ॥
ಮೃದುತರದ ಕೆಂಪು ಪುದಿದುದು ।
ಪದೆದು ಪಿಡಿಯೆ ಕುಂಭಯುಗಮನೆನೆ ಸೊಗಯಿಸುಗುಂ ॥ ೩೪ ॥

ವ ॥ ಮತ್ತಮಾಮತ್ತಹಸ್ತಿನಿಜಾಗ್ರಹಸ್ತಹತಿಯಿಂದುದಿರ್ದ ತಾರಾಳಿ ಮಾಲೆಗೊಂಡು ಕಟ್ಟಿದಂತೆಸೆವ ನಕ್ಷತ್ರಮಾಲೆಯಿಂ ಲೀಲೆವಡೆದು ಚಂದನದಣ್ಪನಿಕ್ಕಿದಂತೆ ಚಂದಂಬಡೆಯೆ ಪೂಸಿದ ಶಂಖದಿಂ ಬೆಳ್ಳಿಯ ಬೆಟ್ಟಮೆಂಬ ಶಂಕೆಯನಾಂಕೆಗೊಂಡು ಭೂಮಂಡಳಮನುಂಡಿಗೆಸಾಧ್ಯಂಮಾಡಿ ಕುಡುವೆನೆಂದಱಿಪುವಂದದಿಂ ದಕ್ಷಿಣಪಾದದಿಂ ಮೇದಿನಿಯುಂ ಬರಂಟುತ್ತಮುತ್ತುಂಗ ವಿಜಯಧ್ವಜಮನೆತ್ತುವಂತೆ ದಕ್ಷಿಣದಂತದೊಳ್ಕೈಯ್ಯಂ ಪೇಱಿ ಶುಭಚಿಹ್ನಮಂ ಬೀಱುತ್ತಂ ತನ್ನಂ ಪೊರೆಯೇಱಿಸುತ್ತುಮಿರ್ದ ವಿಜಯಾಚಳಮೆಂಬ ಗಜರತ್ನದ ಪೂರ್ವಾಸನ ಪೂರ್ವಾಚಳಶಿಖರಮಂ ರಮಣಿಯರ್ ತಮತಮಗೆ ತೆಕ್ಕೆಯಿಂ ತನಗಿಕ್ಕುವ ಬಿಡುಮುತ್ತಿನ ಶೇಷಂಗಳರ್ಘ್ಯಮಂ ಕುಡುವನರ್ಘ್ಯರತ್ನಂಗಳಾಗೆಯುಂ ಮಂಗಳತೂರ್ಯಗೇಯಪುಣ್ಯಪಾಠಕಕೋಳಾಹಳಮೆ ಕೊಳವಕ್ಕಿಗಳ ಕೋಳಾಹಳಮಾಗೆಯುಮಲರ್ವ ಪುಂಡರೀಕಂ [ಗಳಲರ್ವಪುಂಡರೀಕಂ] ಗಳಾಗೆಯುಂ ಬೀಸುವ ಧವಳ ಚಾಮರಂಗಳೆ ನಲಿವ ಕಳಹಂಸಸಂಕುಳಮಾಗೆಯುಮರುಣಮಣಿಕಿರಣಸಹಸ್ರಂಗಳೆ ಕಿರಣಸಹಸ್ರಂಗಳಾಗೆಯುಂ ಚಕ್ರಧರಂ ಬಂದು ಚಕ್ರಮನೋರಾಗಮಂ ಬಾಳಭಾಸ್ಕರನಂತೆ ಬಳಯಿಸುತ್ತಮಳಂಕರಿಸಿ—

ಕಂ ॥ ದ್ವಾತ್ರಿಂಶಚ್ಚಮರರುಹಂ ।
ಛತ್ರೇಂದುಮರೀಚಿ ಮದವದಿಭಮೆ ನಭಶ್ರೀ ॥
ಪಾತ್ರಮೆನೆ ಚೆಲ್ವುವಡೆಯೆ ಧ ।
ರಿತ್ರೀಪತಿ ಖಚರರಾಜನೆನೆ ರಾಜಿಸಿದಂ ॥ ೩೫ ॥

ಕುಂಭನಿಭಸ್ತನೆಯರ್ ಗಜ ।
ಕುಂಭದೊಳಿರೆ ಚಕ್ರಿ ಜಯವಧೂಪರಿಣಯನಾ ॥
ರಂಭೋಚಿತ ಪೂರ್ಣ ಚತುಃ ।
ಕುಂಭಂಗಳತೆಱದಿನೇಂ ಮನಂಗೊಳಿಸಿದರೋ ॥ ೩೬ ॥

ಶಾ ॥ ಸ್ತ್ರೀರತ್ನಂ ಸಿರಿ ಚಕ್ರಮಿಂದು ಹಯರತ್ನಂ ವಿಶ್ರುತೋಚ್ಚೈಶ್ರವಂ ।
ಮೇರೂತ್ತುಂಗಮದೇಭಮಿಂದ್ರಕರಿ ಚಂಚತ್ಚಾಮರಂ ವೀಚಿನಾ ॥
ನಾರತ್ನಂ ನಿಧಿರತ್ನಮಿಂತಮರ್ದಿರಲ್ ಕ್ಷೀರಾಬ್ಧಿ ವಿಸ್ತಾರದಿಂ ।
ಭೇರೀಭಾಂಕೃತಿ ಘೋಷಮಾಗ ನಡೆದತ್ತನ್ಯೂನ ಸೈನ್ಯೋತ್ಕರಂ ॥ ೩೭ ॥

ಮಾಳಿನೀ ॥
ನೆಗೞೆ ಪಟಹಭೇರೀ ಶಂಖ ತೂರ್ಯಪ್ರಣಾದಂ ।
ಪೊಗೞೆ ಪರಸೆ ನಾನಾವಂದಿ ವಿಪ್ರಪ್ರತಾನಂ ॥
ಮಿಗೆ ಸೊಗಯಿಸೆ ವೀಣಾಸಂಗಿಮಾಂಗಲ್ಯಗೀತಂ ।
ನೆಗೆಯೆ ಪದರಜಂ ಶ್ರೀ ಶ್ರೀವಧೂವಶ್ಯಚೂರ್ಣಂ ॥ ೩೮ ॥

ಕಂ ॥ ಶುಭವಾತಿಥಿ ಶುಭದಿವಸಂ ।
ಶುಭನಕ್ಷತ್ರಂ ಶುಭಗ್ರಹಶ್ರೇಣ್ಯುದಯಂ ॥
ಶುಭಯೋಗಂ ಶುಭಕರಣಂ ।
ಶುಭಶಕುನಂ ನೆಗೞೆ ಧರಣಿಪತಿ ಪೊಱಮಟ್ಟಂ ॥ ೩೯ ॥

ವ ॥ ಅಂತು ಚಕ್ರಾಯುಧಂ ವಜ್ರಾಯುಧನನಧಃಕರಿಸಿ, ಸಕಳ ಮಕುಟಬದ್ಧ ಪರಿವೃತಂ ರತ್ನತೋರಣರಾಜಿವಿರಾಜಿತ ರಾಜಭವನದಿಂ ಪೊಱಮಟ್ಟು ವಾರನಾರೀದೃಗ್ವಿಜಯ ಸೂಚಕಮಂ ನಿಜರೂಪಾತಿಶಯದಿಂ ಪಡೆಯುತ್ತಂ ನಡೆತರ್ಪಾಗಳ್—

ಕಂ ॥ ಮದಲೇಖೆಗೆ ಸದೃಶಂ ಮೃಗ ।
ಮದತಿಳಕಂ ಕರಿಕರಕ್ಕೆ ಸರಿ ಕರಮೆನುತಂ ॥
ಮದಗಜಮನೇಱೆ ಬರುತಿರೆ ।
ಸುದತಿ ನಿರೀಕ್ಷಿಸಿದಳೊಸೆದು ವಸುಧಾಧಿಪನಂ ॥ ೪೦ ॥

ಪಿಡಿ ಪೆತ್ತ್ರಧರಂ ಮನಮಂ ।
ಪಿಡಿವಿನಮುಗಿವೆತ್ತ ವೃತ್ತಕುಚಕುಂಭಯುಗಂ ॥
ಬಿಡದುಗಿಬಗಿ ಮಾೞ್ಪಿನೆಗಂ ।
ಬೆಡಂಗಿ ಮೆಯ್ಯಱೆದು ನೋಡಿದಳ್ ಮತ್ತೊರ್ವಳ್ ॥ ೪೧ ॥

ಗಾಡಿಗೆ ಸೋಲ್ತಂಗನೆ ಕ ।
ಣ್ಗಾಡಿಗೆ ಸರಿದಿರೆಯುಮಂತುಕಂ ಜೋಲ್ದಿರೆಯುಂ ॥
ನೋಡದೆ ಕೆಳದಿಯನಿನಿತುಂ ।
ನೋಡದೆ ನೋಡಿದಳದೊರ್ವಳುರ್ವೀಶ್ವರನಂ ॥ ೪೨ ॥

ಮದನಮದದ್ವಿರದಂ ಕದ ।
ಡಿದ ಚೇತೋನದಿಯೊಳುಣ್ಕಿ ಪೊಣ್ಮಿದ ಝುಷಯು ॥
ಗ್ಮದ ತೆಱದಿನೊಪ್ಪೆ ನಗೆಗ ।
ಣ್ಪದೆದೊರ್ವಳ್ ಸಾರ್ವಭೌಮನಂ ವೀಕ್ಷಿಸಿದಳ್ ॥ ೪೩ ॥

ಉ ॥ ಕಂಜನಿಭಾಸ್ಯೆ ಪೀವರಪಯೋಧರೆ ರತ್ನವಿಭೂಷಣಾಂಶುವಿಂ ।
ರಂಜಿತಗಾತ್ರೆ ಸೌಮ್ಯನೃಪರೂಪನಿರೀಕ್ಷಣದಿಂದೆ ಚಿತ್ರರೂ ॥
ಪಂ ಜನನೇತ್ರಹಾರಿ ತನಗಂ ದೊರೆವೆತ್ತಿರೆ ರಮ್ಯಹರ್ಮ್ಯದೊಳ್ ।
ಲಂಜಿಕೆ ಸಾಲಭಂಜಿಕೆಯನೇೞಿಸುತೀಕ್ಷಿಸಿದಳ್ ನೃಪಾಳನಂ ॥ ೪೪ ॥

ಉ ॥ ಅಂತು ಪುರಾಂಗನಾತರಳಲೋಚನಚಾರುಮರೀಚಿಮಾಳತೀ ।
ಸಂತತಿಯಂ ಸ್ವಕೀಯ ಸುಭಗತ್ವಗುಣಂ ತಳೆದೊಪ್ಪೆ ಶೇಷೆಯಂ ॥
ಸಂತಸದಿಂದೆ ತೀವಿ ಪರಸುತ್ತಿರೆ ಪುಣ್ಯವಧೂಜನಂ ಪುರೋ ।
ಪಾಂತದೊಳಿರ್ದು ತನ್ನಬರಪಾರ್ವವನೀಶ್ವರರಂ ನೃಪೇಶ್ವರಂ ॥ ೪೫ ॥

ವ ॥ ಎಯ್ದೆವಂದಾಗಳ್—

ಚಂ ॥ ಗಿರಿವರಲಾತ್ಮಸನ್ನಿಧಿಯೊಳೆಂದೆನಿಪುನ್ನತ ಮತ್ತಹಸ್ತಿಯಂ ।
ಗರುಡನುದಗ್ರವೇಗವಿಭವಂ ತುಷವೆಂಬ ತುರಂಗಮಂ ರಿಪೂ ॥
ತ್ಕರಮಣಿಸನ್ನಿಭಂ ತನಗೆನಿಪ್ಪ ರಥವ್ರಜಮಂ ರಣಾಂಗಣಂ ।
ತರುಣಿಯರಂಗಣಂ ಗಡಮೆನಿಪ್ಪ ಪದಾತಿಯನೊಲ್ದು ನೋಡಿದಂ ॥ ೪೬ ॥

ಕಂ ॥ ಪದಪಿಂದೆ ಸಾರ್ವಭೌಮನ ।
ಪದಪಂಕರುಹಕ್ಕಶೇಷನೃಪಮಕುಟಂ ರ ॥
ತ್ನದ ಕಾಂತಿ ಮಿಱುಗುವಿನಮೆಱ ।
ಗಿದುದಾಗಳ್ ದೀಪವರ್ತಿ ನಿಧಿಗೆಱಗುವವೋಲ್ ॥ ೪೭ ॥

ವ ॥ ಅಂತಾತ್ಮೀಯಮೌಳೀಕೀಳಿತ ಪದ್ಮರಾಗರಾಗದಿಂ ಪದಪದ್ಮರಾಗಮಂ ದ್ವಿಗುಣಿಸಿದಶೇಷ ದೇಶಾಧೀಶ ಮನೋರಾಗಮಂ ಪ್ರಚುರಪ್ರಸಾದದಿಂ ಸಂಪಾದಿಸುತ್ತಂ ಸ್ಥಪತಿರತ್ನಂ ನೂತನ ರತ್ನಂಗಳಿನತಿಪ್ರಯತ್ನದಿಂ ಬರ್ಮಂಗಂ ನಿರ್ಮಿಸಲಱಿದೆನಿಸಿ ಕೂರ್ಮೆಯಿಂ ನಿರ್ಮಿಸಿದುದಂ—

ಕಂ ॥ ಭೂರಮಣೀರಮಣೀ ರಣ ।
ಧೀರ ಧರಾಧೀಶವಾರನಾರೀವಿಭವಾ ॥
ಧಾರತೆಯಿಂ ವೀರರಶ್ರೃಂ ।
ಗಾರದ ನೆಲೆವೀಡೆನಿಪ್ಪ ಬೀಡಂ ಪೊಕ್ಕಂ ॥ ೪೮ ॥

ವ ॥ ಅಂತು ಕಾಂತಮಪ್ಪ ನಿಜವಿಜಯಶಿಬಿರಮಂ ಶುಭಶಕುನಂಗಳುಮಂ ಮಂಗಳತೂರ್ಯಗೇಯನಾದಂಗಳುಮನಾಲಿಸುತ್ತಮುತ್ಸಾಹಚಿತ್ತಂ ಪೊಕ್ಕನಂತರಂ—

ಕಂ ॥ ಸೊದೆವಟಿದ ಭಿತ್ತಿ ಪೊಸದುಗು ।
ಲದ ಮೇಲ್ಕಟ್ಟಿಂದುಕಾಂತಕುಟ್ಟಿಮ ಧರೆ ರ ॥
ನ್ನದ ದೀವಿಗೆಯಿವಱಿಂದಮ್ಮ ।
ತದ ಕಡಲಂ ಪೋಲ್ತುದನ್ನವಾಸವಿಳಾಸಂ ॥ ೪೯ ॥

ವ ॥ ಅದಲ್ಲದೆಯುಂ ವಿಬುಧ ಭವ್ಯಭಾವ್ಯಂ ಮಾಳ್ಪಿನೂನದಾನದಂತೆ ಸುವರ್ಣ ಸತ್ಪಾತ್ರಪವಿತ್ರಮಾಗಿ ಮನಂಗೊಳಿಸುವ ಭೋಜನಗೃಹಕ್ಕೆ ರಾಜಾಧಿರಾಜಂ ಜಾಂಗಳ ವಿದ್ಯಾವಿದುರರ್ಬೆರಸು ಬಿಜಯಂಗೆಯ್ವುದುಂ—

ಕಂ ॥ ಸರವಳಿಗೆಗಳನಿತುಂ ಪಾ ।
ಲುರುಳಿಯೊಳಿರೆ ಪಾಲೊಳೂಂದಿ ಮಗಮಗಿಸುವುದಂ ॥
ಸರವಳಿಗೆಯ ಪಾಯಸಮಂ ।
ಸುರುಚಿರಸಿತಘೃತವಿಮಿಶ್ರಿತಮನತಿಹಿತಮಂ ॥ ೫೦ ॥

ಕಂ ॥ ನಿಳ್ಪುಂ ಬೆಳ್ಪುಂ ತೆಳ್ಪುಂ ।
ತಳ್ವೊಯ್ದಿರೆ ಸುಗ್ಗಿಯಚ್ಚವೆಳ್ದಿಂಗಳನೀ ॥
ಗಳ್ವೊರೆಯೆತ್ತಿದರೆಂಬಂ ।
ತೊಳ್ಯಂ ಗೆಡೆಗೊಂಡು ಸೊಗಯಿಸುವ ಮಂಡಗೆಯಃ ॥ ೫೧ ॥

ಕ್ಷೀರಸಮವಿನಿದೆನಿಪ ಸಹ ।
ಕಾರರಸಮನಸಮಸುರಭಿಘೃತಮಂ ಸಿತಮಂ ॥
ಕ್ಷೀರಮನಮರ್ದಿರೆ ತೀವಿ ಮ ।
ನೋರಾಗದೆ ಬೇಱೆ ಬೇಱೆ ಬಟ್ಟಲೊಳಿಟ್ಟರ್ ॥ ೫೨ ॥

ಪೊಂಗಿರ್ದಂಗರವೋಳಿಗೆ ।
ಯಂ ಗರಗರನಪ್ಪ ತುಪ್ಪಮಂ ಶರ್ಕರೆಯುಂ ॥
ಪಿಂಗದೆ ಹೂರಣಮೆನಿಸಿ ಮ ।
ನಂಗೊಳಿಪುವನಮೃತಪೂರಮಂ ಪೂರಿಗೆಯಂ ॥ ೫೩ ॥

ಲಡ್ಡುಗೆಯನಿನಿದೆನಿಪ ಬಿಡು ।
ಲಡ್ಡುಗೆಯಂ ತುಪ್ಪದಲ್ಲಿ ತೇಂಕುವ ಕಂಪು ॥
ಳ್ಳಿಡ್ಡಲಿಗೆಗಳಂ ಬೇಗಂ ।
ಬಡ್ಡಿಸಿದರ್ ಜಾಣರೆಂಬಿನಂ ಬಾಣಸಿಗರ್ ॥ ೫೪ ॥

ಪ್ರಣುತಹಿಮವರಸುರಭಿ ಧಾ ।
ರಿಣಿಯಂ ಪಂಚೇಂದ್ರಿಯ ಪ್ರಿಯಾಕುಳಸುಖಕಾ ॥
ರಿಣಿಯಂ ಪೊಸತೆನಿಸುವ ಶಿಖ ।
ರಿಣಿಯಂ ರಸರಸಿಕಜನಮನೋಹಾರಿಣಿಯಂ ॥ ೫೫ ॥

ಶಾಲ್ಯಾನ್ನಸ್ಮಿತಮಲ್ಲೀ ।
ಮಾಲ್ಯಮನತಿ ಮೃದುತೆಯಿಂದೆ ಪರಿಮಳದಿಂ ನೈ ॥
ರ್ಮಲ್ಯದಿನೇೞಿಸಿ ಸಕಳ ಸ ।
ಶಾಲ್ಯಾತಯಹಾರಿಯಾಗಿಯೇಂ ಸೊಗಯಿಸಿತೋ ॥ ೫೬ ॥

ಕಳಧೌತದ ಪರಿಯಳದೊಳ್ ।
ಕಳಮಾನ್ನಂ ತನ್ನ ಬೆಳ್ಪಿನಿಂದದಱೊಂದು ॥
ಜ್ಜಳಿಕೆಯನೇೞಿಸಿ ಬೆಳ್ಪಿಯೊ ।
ಳಳವಡೆದುರ್ವರ್ಣನಾಮಮೊಸೆದುದು ನಿಸದಂ ॥ ೫೭ ॥

ಪಲತೆಱದ ಪಾನಕಂ ಪರಿ ।
ಮಳಮಂ ತೞ್ಕೈಸಿ ಹಿಮಮನೊಳಕೊಂಡಿಂಪಂ ॥
ನೆಲೆಗೊಳಿಸಿ ಪಲ್ಲವಾಧರ ।
ಫಲರಸಪಾನದವೊಲೇಂ ಮನಂಗೊಳಿಸಿದವೋ ॥ ೫೮ ॥

ಕಂ ॥ ಪಾಕವಿಶೇಷದೊಳೊಂದಿದ ।
ಶಾಕಚಯಂ ಬೇಱೆವೇಱೆ ಸಂಪ್ರೀತಿಯನ ॥
ವ್ಯಾಕುಳಮೊದವಿಸಿ ರಾಜಾ ।
ನೀಕದೊಳೊದವಿಸಿತು ಶಾಕಪಾರ್ಥಿವವೆಸರಂ ॥ ೫೯ ॥

ಸವಿದೊಡೆ ಕೂಟದ ಲಂಪಟ ।
ನವಯುವತಿಯರಧರಪಲ್ಲವಂ ಪಲ್ಲವಿಪಂ ॥
ತೆವೊಲೂಟದಲಂಪಂ ಪ ।
ಲ್ಲವಿಸಿತು ಪುಳಿಯಲ್ಲಮಿೞಿಸಿ ಪವಳದ ಕುಡಿಯುಂ ॥ ೬೦ ॥

ಚಂ ॥ ಒಡನೆ ಕುಮಾರಕರ್ ಕೆಲದೊಳಾಪ್ತನಿಯೋಗಿ ನೃಪಾಳಪಾಳಿ ಕಾ ।
ಣ್ಬೆಡೆಯೊಳೆ ಪಂಡಿತಪ್ರತತಿ ಕಣ್ಗೊಳಿಸಿರ್ಪ ವಿಳಾಸಿನೀಜನಂ ॥
ಬಿಡದಿರೆ ಸುತ್ತಲುಂ ಮಧುರಗಾಯಕಗಾಯಿನಿಯರ್ ನಿರಂತರಂ ।
ಗಡಣಿಪೆ ಚಕ್ರಿಯಾರೊಗಿಸಿದಂ ಸುರರಾಜನವೊಲ್ ಸುಧಾನ್ನಮಂ ॥ ೬೧ ॥

ಮ ॥ ಸಕಳೋರ್ವೀಪತಿಸಾರವಸ್ತುತತಿಯುಂ ಕಾರುಣ್ಯದಿಂದಟ್ಟೆ ಗಾ ।
ಯಕರ್ಗಂ [ಪಂಡಿತರ್ಗಂ] ವಿಳಾಸವತಿಯರ್ಗಂ ವ್ಯಂಜನಾಂತಾರ್ಥವಾ ॥
ತ್ರಕಮೆಂಬೀನುಡಿ ಹೀನಮಾಗೆ ತಣಿದತ್ತೆಲ್ಲಾಜನಂ ಪಾಲ್ಗಳಿಂ ।
ದೆ ಕುಳಿಕೊರ್ಡುಪ ಕಂಪುವೆತ್ತ ದಧಿಯಿಂದಿಂಪುಳ್ಳ ತಕ್ರಂಗಳಿಂ ॥ ೬೨ ॥

ಕಂ ॥ ಕಾರುಣ್ಯಾಮೃತದಿಂ ಪರಿ ।
ವಾರಂ ತಣಿದೊಡಮುದಾರವಿಭವಂ ವಿನಯಾ ॥
ಧಾರಂ ತಣಿಪಿದನಮೃತಾ ।
ಹಾರದೆ ಪುನರುಕ್ತಮುಪ್ಪಿನಂ ಚಕ್ರಧರಂ ॥ ೬೩ ॥

ವ ॥ ಅಂತು ಕಲ್ಯಾಣಕಾಹಾರಮನಾರೋಗಿಸಿ ಸಾರಘನಸಾರಮಿಶ್ರಿತ ಶ್ರೀಖಂಡಮಂ ಕೈಗಟ್ಟಿಗೊಂಡಖಂಡ ಪರಿಮಳಪಿಂಡಖದಿರಘುಟ್ಟಿಕಾ ಕರ್ಪೂರವಾರಿಪರಿಕಳಿತ ತಾಂಬೂಳರಾಗದ್ವಿಗುಣಿತಾಧರರಾಗಂ ಸುಖವಿಹಾರಾಧಾರಂ ಕತಿಪಯ ಪದಂಗಳಂ ವಿಹಾರಿಸಿ ವಿಸ್ತಾರಿತ ಕಸ್ತೂರೀವಿಲೇಪನನುಮುನ್ಮೀಳಿತ ಮಾಳತೀಮಾಲಾಳಂಕೃತನುಮಾಗಿ—

ಚಂ ॥ ಕೆಲದೊಳತಿಪ್ರಸಿದ್ಧ ಕವಿಪುಂಗವರಗ್ರವಿಭಾಗದೊಳ್ ಸಮಂ ।
ತೊಲಿಸುವ ಗಾಯಿನೀಪ್ರತತಿ ಪಿಂತೆ ಚಳಚ್ಚಮರೀಜ ಧಾರಿಣೀ ॥
ವಳಯ ಕಳಸ್ವನಂ ನೆಗೞೆ ಚಕ್ರಮರಾಳ ಸುತೂಳತಲ್ಪದೊಳ್ ।
ನೆಲಸಿ ವಿಳಾಸಿನೀ ಪರಿವೃತಂ ಕರಮೊಪ್ಪಿದನನ್ನವಾಸದೊಳ್ ॥ ೬೪ ॥

ವ ॥ ಆ ಸಮಯದೊಳ್—

ಕಂ ॥ ರಸನೆಯಿನಮೃತಮನಾಸ್ವಾ ।
ದಿಸಿ ತಣಿದ ರಸಜ್ಞ ಜನಮೆ ಪೊಸತೆನಿಪ ಸುಧಾ ॥
ರಸಮಂ ಕಿವಿಯಿಂದಾಸ್ವಾ ।
ದಿಸುವಿನಮಿನಿದೆನಿಸಿ ಪಾಡಿದರ್ ಗಾಯಿನಿಯರ್ ॥ ೬೫ ॥

ಕಂ ॥ ಇದು ಗಾಯಿನಿಯರ ಕಳರವ ।
ಮಿದು ವೀಣಾನಾದಮೆಂದು ತೋಱದವೋಲ್ ಪಾ ॥
ಡಿದೊಡೊಂದೆ ಶ್ರುತಿಯೊಳಚ್ಚರಿ ।
ಯೊದವಿಸಿತು ಪಲವು ಶ್ರುತಿಯೊಳೊಲವಂ ಬುಧರಾ ॥ ೬೬ ॥
ಕಿವಿಯಂ ತಾಗುವ ಸರಮಾ ।
ಳಿವಿಚಿತ್ರಂ ಬಾಜಿಪೋಜೆಯಿಂ ವೈಣಿಕರಾ ॥
ಭುವನೇಶನ ಮನಮಂ ತಾ ।
ಗುವ ಮೆಲ್ಪಿನ ಪೂವಿನಯ್ಬು ಸರಮೆಂದೆನಿಕುಂ ॥ ೬೭ ॥
ಅಂದಿನ ದಿನಮಂ ಪರಮಾ ।
ನಂದದಿನೀಯುಂದದಿಂದೆ ಕಳಿದು ಸುಖಶ್ರೀ ॥
ಮಂದಿರನಧಿಪಂ ಮರುದೇವ ।
ಸಂ ದಿನಪೋದಯದೊಳತುಳ ಭಾಗ್ಯಾಭ್ಯುದಯಂ ॥ ೬೮ ॥
ಪೊಯ್ಸಲೊಡಮವನಿಪತಿ ತ ।
ಳ್ಕಿಯ್ಸಿದುದೆಣ್ದೆಸೆಯನಬ್ಧಿ ಘನಘೋಷಮನೊ ॥
ಟ್ಟಯ್ಸಿದುದು ರಿಪುಮದಮನು ।
ಜ್ಜಯ್ಸಿದುದುರುಶಂಖ ಪಟಹಭೇರೀನಿನದಂ ॥ ೬೯ ॥
ಅಂಭೋಧಿಕೃತಧರಿತ್ರೀ ।
ಸಂಭೂತಾರಾತಿಭೂಪ ಗಂಭೀರತೆಯಂ ॥
ಸ್ತಂಭಿಪ ರವದಿಂ ಪಡೆದವು ।
ಗಂಭೀರಾವರ್ತನಾಮಮಂ ಶಂಖಂಗಳ್ ॥ ೭೦ ॥
ಪಟುಪಟಹರವಮೆ ಧೂಳೀ ।
ಪಟಮಂ ಮಾಡಿದುದು ರೂಢಿವೆತ್ತವನೀಭೃತ್ ॥
ಕಟಕಮುಮಂ ರಿಪುಭೂಭೃತ್ ।
ಕಟಕಮುಮಂ ತನ್ನಿತಂಬಿನೀಕಟಕಮುಮಂ ॥ ೭೧ ॥
ಪನ್ನೆರಡುಂ ಭೇರಿಗಳಾ ।
ತ್ಮೋನ್ನತಘೋಷಂ ಸಮುದ್ರಘೋಷಮಿದೆನಿಪಂ ॥
ತುಂ ನೂನಮೊಗೆವುತಿರ್ಪುದ ।
ಱಿಂ ನೆಗಱ್ದು ಸಮುದ್ರಘೋಷವೆಸರಿಂದೆಸೆಗುಂ ॥ ೭೨ ॥

ವ ॥ ಅಂತು ನೆಗೆದು ಸೊಗಯಿಸುವ ಶಂಖಪಟಹಭೇರೀರವಂ ದಿಕ್ತಟಸಂಚಯ ಮಂ ಪಳಂಚಲೆಯೆ—

ಕಂ ॥ ಗೋತ್ರೋನ್ನತಂಗಳಖಿಳ ।
ಕ್ಷತ್ರಿಯ ಪೂಜ್ಯಂಗಳತುಳದಾನಯುತಂಗಳ್ ॥
ಧಾತ್ರೀಶನಂತೆ ಸುಮಹಾ ।
ಮಾತ್ರಂಗಳ್ ಚತುರಶೀತಿಲಕ್ಷಗಜಂಗಳ್ ॥ ೭೩ ॥

ಸ್ರ ॥ ಮತ್ತಸ್ತಂಭೇರಮಕ್ಕೀಗಗನವಳಯಮಿನ್ನೆಯ್ದದೆಂದೇಟ್ಗೆಯಿಂದಂ ।
ಪೊತ್ತಿತ್ತುತ್ತಿರ್ಪವೋಲೆತ್ತಿದ ಕದಳಿಕೆ ಚೆಲ್ವಾಗೆ ಘಂಟಾರವಂ ದಿ ॥
ಗ್ಭಿತ್ತಿವ್ರಾತಕ್ಕೆ ಧಿಂಕಿಟ್ಟೆಱಗಿಮೆಱಗಿಪಾಶಾಂಘ್ರಿಯೊಳ್ ಭೂಪರೆಂಬಂ ।
ತೆತ್ತಂ ತಾಂ ತೀವೆ ಕಣ್ಗೊಪ್ಪಿದುದು ನೆರೆಯದೆಂಬನ್ನೆಗಂ ಭೂಮಿಭಾಗಂ ॥ ೭೪ ॥

ಕಂ ॥ ಪವನಗತಿಪ್ರಯುತಂಗಳ್ ।
ಧ್ರುವಾಭಿರಾಮಂಗಳುದ್ಧಕಲಿಗಳ್ ಚಾರು ॥
ಶ್ರವಣಂಗಳ್ ನಭದವೊಲೆಸೆ ।
ದವು ಮಿಗೆ ಪದಿನೆಂಟುಕೋಟಿಜಾತ್ಯಶ್ವಂಗಳ್ ॥ ೭೫ ॥

ಅನತ ನೃಪಕುವಳಯದ ಸಿರಿ ।
ಯನನಾರತಮಲ್ತೆೀವುದುಚಿತಮಿದು ಚೋದ್ಯಂ ॥
ದಿನರಥಸಮುದಯಮಸುಹೃ ।
ಜ್ಜನಪಮನೋರಥರಥಾಂಗಮಂ ವಿಘಟಿಸುಗುಂ ॥ ೭೬ ॥

ಆರ್ಕಪ್ಪಮನೀಯದೆ ತೋ ।
ರ್ಪರ್ಕಡುಪಂ ಚಕ್ರಿಗೊಂದೆ ಮೆಯ್ಯೊಳಜೇಯರ್ ॥
ಸೊಕ್ಕಾನೆಯನಿದಿರ್ಚುವರೆಣ ।
ಕರ್ಕಶರೆಣ್ಬತ್ತುನಾಲ್ಕುಕೋಟಿ ಭಟರ್ಕಳ್ ॥ ೭೭ ॥

ಚಂ॥ ಶರಧಿಸಮಗ್ರಬಂಧನಿಪುಣಂ ಗುಣಸಂಪದುದಾತ್ತ ನಾಯಕಂ ।
ನಿರುಪಮ ಧರ್ಮಧಾರಣವಿವೇಕನಿದಾನಮಮೋಘಬಾಣಮಾ ॥
ಸುರರಣರಂಗಸಂಗತಜಯಂ ನೆಱೆಪೋಲ್ತುದುರೋಮನಂ ಧನು ।
ರ್ಧರಬಳಮತ್ಯುದಗ್ರರಿಪುಭೇದನ ಭಾಸ್ವದಖರ್ವದೋರ್ವಳಂ ॥ ೭೮ ॥

ಕಂ ॥ ಒದವಿದ ಪದಾತಿಬಳಮೆ ।
ತ್ತಿದ ತೃಷೆಯಿಂದೀಂಟಿ ನೆರೆಯೆ ಬತ್ತಿದ ನದಿಗಳ್ ॥
ಮದಲಾಳಾಜಳದಿಂ ತೀ ।
ವಿದುವೆನೆ ಪವಣಿಸುವರಾರೊ ಚಕ್ರಿಯ ಪಡೆಯುಂ ॥ ೭೯ ॥

ಪಡೆಗೀನೆಲನೆಯ್ದದು ಕಾ ।
ಲಿಡಲೆಂದಱಿದಂತೆ ದೇವವಿದ್ಯಾಧರರಾ ॥
ಗಡೆ ನೆಗೆದು ಗಗನಮಂ ನೇ ।
ರ್ಪಡೆ ತೀವಿದರೆನೆ ವಿಮಾನಮೆಸೆದವು ನಭದೊಳ್ ॥ ೮೦ ॥

ವ ॥ ಅಂತು ಪೆಂಪನೊಳಕೊಂಡತುಳಷಡಂಗ ಬಲಂಗಳೊಳ್

ಕಂ ॥ ವಿಪುಳಪ್ರತಾಪಮಂ ತೋ ।
ರ್ಪ ಪಗೆವರಾರೆಂದು ಚುಂಬಿಸುತ್ತಂಬರಮಂ ॥
ತಪನಪ್ರತಾಪಮಂ ಲೋ ।
ಪಿಪ ನಾಲ್ವತ್ತೆಂಟುಕೋಟಿ ಪಱಿಯಿಗೆಯೆಸೆಗುಂ ॥ ೮೧ ॥

ಉ ॥ ವಾರಣದಿಂದಮಂಕಿತಮರಾತಿ ನೃಪಾಳಕವಂಶಹಾರಿ ಕಂ ।
ಠೀರವಲಾಂಛಿತಂ ರಿಪುಮದೇಭವಿದಾರಿ ಗರುತ್ಮಲಕ್ಷಿತಂ ॥
ವೈರಿನೃಪಾಹಿವೀರವಿಷಭೇದಿಯೆನಿಪ್ಪುದಸೆಯ್ದೆ ಪೇೞ್ವುವೋ ।
ಲ್ನೀರದಮಾರ್ಗಮೊಳ್ ಪವನರೋದಕಮಾದುವು ಕೇತನೋತ್ಕರಂ ॥ ೮೨ ॥

ಕಂ ॥ ಪದರಜದಿಂ ಗಿರಿದುರ್ಗಂ ।
ಮದಲಾಳಾಜಳಕುಳಂಗಳಿಂ ಜಳದುರ್ಗಂ ॥
ಪುದಿದುತ್ತುಂಗಧ್ವಜದಂ ।
ಡದಿನದು ವನದುರ್ಗಮೆನಿಸಿದುದು ನೃಪಸೈನ್ಯಂ ॥ ೮೩ ॥

ನೆಗೆದುದು ಬಳಪಾದರಜಂ ।
ಗಗನಮನಾವರಿಸೆ ಧರಣಿಗೆತ್ತಿನನ ಹಯಂ ॥
ಗಗನಾಧ್ವಶ್ರಮಮಂ ಗೆಲ ।
ಲೆ ಗಡಂ ಖುರಪುಟಮನೂಱಲೆಂದನುಗೆಯ್ಗುಂ ॥ ೮೪ ॥

ಪರವಾಹಿನಿಗಳ ಪೆಂಪಂ ।
ಶರದದವೋಲ್ ಕಿಡಿಸಿ ಕೀರ್ತಿಚಂದ್ರಿಕೆಗಿನಸು ॥
ದ್ಧುರತೇಜಕ್ಕುನ್ನತಿಯಂ ।
ನಿರಂತರಂ ಪಡೆದು ನಡೆಯೆ ಪಡೆ ಕಡುಪಿಂದಂ ॥ ೮೫ ॥

ವ ॥ ದಿಕ್ಚಕ್ರಮಂ ತನ್ನಂತೆ ತೇಜಶ್ಚಕ್ರದಿನಾಕ್ರಮಿಸುವ ಚಕ್ರರತ್ನಪುರಸ್ಸರನಾಗಿ,

ಕಂ ॥ ಕ್ಷಿತಿಭೃತ್ಕುಳದೌದ್ಧತ್ಯಮ ।
ನತುಳಬಳಂ ಕಿಡಿಸಿ ನಮ್ರಧರಣಿಗೆ ನೆಗೞ್ದು ॥
ನ್ನತಿಯನೊದವಿಸುತೆ ಸೇನಾ ।
ಪತಿರತ್ನಂ ಮುಂದೆ ನಡೆಯೆ ತನಯನ ಬೆಸದಿಂ ॥ ೮೬ ॥

ಆಕ್ರಮಿಸಲ್ಕಿರ್ದೆಡೆಯಿಂ ।
ಚಕ್ರಂ ನೆರೆಪೊಡಮಶೇಷ ದಿಗ್ವಿಜಯಕ್ಕಾ ॥
ಚಕ್ರರವಿನಭಮನಂಶುಗ ।
ಳಾಕ್ರಮಿಸೆಯುಮಿರದೆ ನಡೆವ ತೆಱದಿಂ ನಡೆದಂ ॥ ೮೭ ॥

ಮಯುಮಂ ವೇಗೋಚಿತಗತಿ ।
ಮಯುಮಂ ಮುಂತೇಱಿ ತೋಱುತಂ ಕೂಡೆ ನಿರಾ ॥
ಮಯುಮಂದು ಬಂದುದೊಡನೆ ಸ ।
ಮಯುಮಂ ಪಾರ್ದೆಯ್ದೆ ಸುದ್ದಿಯಂ ಪೇೞ್ವ ಜನಂ ॥ ೮೮ ॥

ಗಜಗಮನೆಯರ್ಗಿದು ಯುಕ್ತಂ ।
[ಗಜ]ಗಮನಮೆನುತ್ತೆ ಕೀರ್ತಿಸುತ್ತಿರೆ ಸುಜನರ್ ॥
ಗಜಕುಂಭಸ್ಥಳಮಂ ಮದ ।
ಗಜಕುಂಭಸ್ತನೆಯರೇಱಿ ನೀರೆಯರೆಸೆದರ್ ॥ ೮೯ ॥

ಉ ॥ ಪೀಲಿಯ ದಡ್ಡಿ ಪೀಲಿದಟಿ ವಾರುವ ಚೋದರ ಚೆಲ್ವುವೆತ್ತ ಕಣ್ ।
ಪೀಲಿಯದೆತ್ತಲುಂ ಕುಸುಮಸೌರಭಚಂದನಗಂಧಮೆತ್ತಮು ॥
ತ್ತಾಳಿಗಳೊಪ್ಪೆ ನಂದನವನಕ್ಕೆಣೆಯಾಗಿ ವಸಂತಲಕ್ಷ್ಮಿಯೊಲ್ ।
ಲೀಲೆಯನಪ್ಪುಕೆಯ್ದು ನಡೆತಂದುದು ರಾಣಿಯವಾಸಮೊತನಾ ॥ ೯೦ ॥

ಗಾಡಿಯ ಬೀಡು ಕೂರ್ಮೆಯ ತವರ್ಮನೆ ಕಂಪಿನ ಪೆಂಪು ಕಂತು ಕೊಂ ।
ಡಾಡುವ ದೇಸಿಯಾಸೆವನೆ ಕಾಂತಿಯ ತಿಂತಿಣಿ ಮೆಲ್ಪಿನೊಳ್ಪು ಮೆ ॥
ಯ್ಮಾಡಿದ ಭೋಗದಾಗರಮಲಂಪಿನ ಪೊಂಪುಳಿ ಜಾಣ ಜವ್ವನಂ ।
ರೂಢಿಯ ಪೆಂಡವಾಸಮೆಸೆದೇನೊಡವಂದುದೊ ಚಕ್ರವರ್ತಿಯಾ ॥ ೯೧ ॥

ಕಂ ॥ ಶೃಂಗಾರಮೆ ಸಹವಾಸಿಯು ।
ನಂಗನೆ ಮೆಯ್ಗಾಪಿನಂಗರಕ್ಷಕನೆನೆ ಚೆ ॥
ಲ್ವಿಂಗೆ ತವರ್ಮನೆಯೆನಿಸಿ ।
ರ್ದಂಗನೆಯರ್ ನಡೆದರೊಡನೆ ಚಕ್ರಾಯುಧನಾ ॥ ೯೨ ॥

ಉ ॥ ರಾಣಿಯವಾಸದಂದಳಕೆ ದಡ್ಡಿ ಮುಸುಂಕುವುದುಂಟು ತಮ್ಮನೇ ।
ರಾಣಿಯ ಪೊಂಗಳಂದಳಕೆ ದಡ್ಡಿ ಮುಸುಂಕಿದನಿತ್ತೆ ಭೇದಮಾ ॥
ರಾಣಿಯವಾಸದೊಳ್ ತಮಗೆನಿಪ್ಪ ವಿಳಾಸಿನಿಯರ್ ವಿಳಾಸದಿಂ ।
ಜಾಣರ ಚಿತ್ತಮಂ ಪಿಡಿಯುತಂ ನಡೆತಂದರದೊಂದು ಲೀಲೆಯಿಂ ॥ ೯೩ ॥

ಚ ॥ ಕವಿದಿರೆ ದಡ್ಡಿ ರಾಣಿಯರ್ಗೆ ತಮ್ಮೊಳವಿಲ್ಲದೊಡೊಪ್ಪುತಿರ್ದರೀ ।
ಯುವಯುವ ಶೋಭೆಯಿಲ್ಲವರೊಳುಳ್ಳೊಡದೇಕೆ ಮುಸುಂಕಲೆಂದು ನೋ ॥
ಡುವರೊಲವಿಂದೆ ನೋಡೆ ಪರಿಚಾರಕಿಯರ್ ಬರುತಿರ್ದರೊಡ್ಡಿಸು ।
ತ್ತವರನೆ ಕೆಯ್ತುದಿಂ ಮೊಗವಡಂಗಳೆದಂಗಜಕುಂಭಿಯೆಂಬಿನಂ ॥ ೯೪ ॥

ವದನಸರೋಜ ಸೌರಭಕೆ ಮುಂಡಳಿಸಿರ್ದ ಮದಾಳಿಯಿಂದಮೆ ।
ತ್ತಿದ ಧವಳಾತಪತ್ರಮದು ಪೀಲಿಯ ಸತ್ತಿಗೆಯಂತೆ ತೋಱೆ ಚೆ ॥
ಲ್ವಿದಿರ್ಗೊಳುತಿರ್ಪ ಪೀಲಿದಟಿ ಬೆಳ್ಗೊಡೆಯಂತೆ ಕಟಾಕ್ಷಕಾಂತಿಯಿಂ ।
ಪುದಿದೆಸೆವಂತೆ ಲೀಲೆಯೊಳೆ ಬಂದುದು ವಾರವಧೂಕದಂಬಕಂ ॥ ೯೫ ॥

ಮ ॥ ಕರಿದಾನಾಂಬುಗಳಿಂದಮಬ್ದಸಮಯಂ ಶ್ವೇತಾತಪತ್ರಾಭ್ರದಿಂ ।
ಸರದಂ ಚಾಮರವಾತದಿಂದೆ ಹಿಮಕಾಲಂ ಚಂದನಾಲೇಪಮು ॥
ಬ್ಬರದಿಂದಂ ಶಿಶಿರಂ ವಧೂತನುಲತಾಶ್ರೀಯಿಂ ವಸಂತಂ ನೃಪಾ ।
ಭರಣಾಸ್ತ್ರದ್ಯುತಿಯಿಂದೆ ಬೇಸಗೆ ಕರಂ ಮೆಯ್ದೋಱಿತಾಸೈನ್ಯದೊಳ್ ॥ ೯೬ ॥

ಕರಿಘುಂಟಾರುತಿ ವಾಜಿರಾಜಿ ಖುರಹೇಷಾನಿಸ್ವನಂ ಸ್ಯಂದನೋ ।
ತ್ಕರಚಕ್ರವ್ರಜಚೀತ್ಕೃತಂ ಪಟಹಭೇರೀಶಂಖನಾದಂ ದಿಶಾಂ ॥
ತರಮಂ ತೀವಿದುದಾವ ಚೋದ್ಯಮವನೀಚಕ್ರಂ ದಿಶಾಚಕ್ರಮಂ ।
ಬರಚಕ್ರಂ ಕಿಱಿದಾಯ್ತು ಚಕ್ರಿಯ ಚಮೂಚಕ್ರಕ್ಕೆ ತದ್ಯಾತ್ರೆಯೊಳ್ ॥ ೯೭ ॥

ವ ॥ ಅಂತು ಪಗೆವರ ಬಗೆಗಂ ಸಂದಣಿಯಾಗೆ ಸಂದಣಿಸಿ ಬಲ್ಕಣಿಯೆನಿಸಿ ಬರುತ್ತಮಿರೆ ದುರ್ವಾರಪೌರುಷಂ ವಾರುಣವಾಯವ್ಯದಿಶಾಮುಖಕ್ಕೆ ಅಭಿಮುಖನಾಗಿ,

ಕಂ ॥ ಎಡೆಯಣ ಬಡವುಗಳಂ ಗಡ ।
ಕಿಡಿಸುವುದಂ ಮಾಣ್ದು ಕೆಱೆಯನಗಲ್ವಿಡೆ ಕೊರಡಂ ॥
ಕಡಿಯಲ್ವೇಟ್ಕುಮೆ ಪೇೞೆನೆ ।
ನಡೆದಂ ಬಲ್ಲಿದರ ಮೇಲೆ ಮುಂ ಚಕ್ರಧರಂ ॥ ೯೮ ॥

ಚಂ॥ ನಡೆಯದ ಮುನ್ನೆ ಬಂದು ಸರಣೆಂದು ಬರ್ದುಂಕುವೆವೆಂಬ ಭೂಭುಜರ್ ।
ನಡೆದೊಡೆ ಬಂದು ಕಂಡರೆನೆ ವಿಸ್ಮಯಮಲ್ಲೆನೆ ಚಕ್ರವಲ್ಲಭಂ ॥
ನಡೆವದಿಶಾಮುಖಸ್ಥಿತಿಮಹೀಶರವೋಲಿತರಾಶೆಯಲ್ಲಿ ನೇ ।
ರ್ಪಡೆ ನೆಲಸಿರ್ದ ಭೂಭುಜರ ಕಾಣ್ಬೆನೆಗಂ ನಡೆದಂ ಜಯಾತ್ರಯಂ ॥ ೯೯ ॥

ವ ॥ ಅಂತು ನಿಖಿಳಭುವನತಳವಿಳಸಿತ ಸರೋಜರಾಜಿ ರಾಜತೇಜಕ್ಕೆ ಸುಗಿದೊರ್ಮೊದಲಾತ್ಮೀಯ ಶ್ರೀಯನೊಪ್ಪಿಸಿ ತಲೆವಾಗುವಂತೆ ಪ್ರಸ್ಥಾನಗಭೀರಭೇರೀಭಾಂಕಾರ ಛಿನ್ನಹೃದಯನಾಗಿ—

ಉ ॥ ಸುಸ್ವರ ಗಾಯಕಪ್ರತತಿ ಜಾತಿಹಯಂ ಮದಗಂಧಸಿಂಧುರಂ ।
ಭಾಸ್ವರರತ್ನಭೂಷಣಗಣಂ ಮೃಗನಾಭಿಮೃಗಾಯತಾಕ್ಷಿಕಾ ॥
ರ್ತಸ್ವರರಾಶಿಸಾರವಸನಂ ಘನಸಾರಮಿವಾದಿಯಾದಸ ।
ರ್ವಸ್ವಮನಿತ್ತು ಚಕ್ರಿಯ ಮನಂ ಬಡೆಯಿತ್ತು ನೃಪಾಳಜಾಳಕಂ ॥ ೧೦೦ ॥

ನೋಡಲಗಮ್ಯಮಪ್ಪಡವಿಯಂ ಗಿರಿಸಾನುವಿನಗ್ರದಿಕ್ಕೆಯಂ ।
ಮಾಡಿದ ಬೇಡರಂ ಪುಲಿಯ ಚರ್ಮಮನಾನೆಯ ದಂತಮಂ ತಡಂ ॥
ಮಾಡದೆ ತಂದು ತಮ್ಮೊಡಮೆಯಂ ವಿಭುಗೊಪ್ಪಿಸಿ ಕಂಡರೆಂದೊಡಿಂ ।
ನಾಡು ಪೊದಲ್ದಿ ಬೀಡು ತಮಗುಳ್ಳವರಾರ್ಗಳ ಕಪ್ಪಮಿಾಯದರ್ ॥ ೧೦೧ ॥

ವ ॥ ಅಂತು ಸಕಳದಿಶಾನೀಕಸ್ಥಿತ ರಾಜಲೋಕಮೊರ್ಮೊದಲೆ ತಲೆವಾಗಿ ನಿಜಕುಳಧನಕುಳಮನೊಪ್ಪಿಸಿಯಾಳ್ವೆಸಮನಪ್ಪುಕೆಯ್ವಿನಮಾಜ್ಞಾವಿಧೇಯಮಂ ಮಾಡುತ್ತಂ

ಕಂ ॥ ಸುದತಿಯ ಸೌಮ್ಯಾಕೃತಿಯಂ ।
ಮುದದಿಂದೀಕ್ಷಿಸುವತೀವಭಾವಕನನಯಾ ॥
ಸ್ಪದನಯನದಂತೆ ರಮ್ಯ ।
ಪ್ರದೇಶದೊಳ್ ಚಕ್ರಿ ಬೀಡುವಿಡುತಂ ನಡೆದಂ ॥ ೧೦೨ ॥

ಮ ॥ ವನಜಾಮೋದಮನಂಗನಾವ್ಯಸನಜಾತಾಮೋದದೊಳ್ವಾರಿಬಿಂ ।
ದುನಿಕಾಯಂಗಳನುದ್ಘಘರ್ಮಜಳದೊಳ್ ಸಪ್ತಚ್ಛದಾಮೋದಮಂ ॥
ಘನಮಾತಂಗ ಮದೋತ್ಥ ಸೌರಭದೊಳೋತಂತೊಂದಿಸುತ್ತಂ ನದೀ ।
ವನಮಂದಾನಿಳನೊಂದಿಸಿತ್ತು ಪಡೆಗತ್ಯಾನಂದ ಸಂದೋಹಮಂ ॥ ೧೦೩ ॥

ವ ॥ ಅಂತು ವನಜಳಕೇಳಿಗನುಕೂಳಮಾದ ನದ್ಯುದ್ಯಾನವಿಳಾಸಪ್ರದೇಶದೊಳೇನುಮನುಧಾಸೀನಂ ಮಾಡದೆ ಬೀಡುವಿಡುತ್ತಂ ಪೋಗೆವೋಗೆ,

ಮ ॥ ಪನಿಪುಲ್ಕುಂಭಿಮದಾಂಬುವಿಂ ಹಿಮಸಮೀರಂ ಸಾರಕರ್ಪೂರ ಚಂ ।
ದನಗಂಧೋಚಿತ ಚಾಮರಾನಿಳನಿನಾಗಂತುಕ್ಕೆ ಚಕ್ರೇಶಸಾ ॥
ಧನಮಂ ಪೋಲ್ತೊದವಿತ್ತು ತೀವ್ರಕರ ತೇಜೋವೈಭವಂ ವಿದ್ವಿಷ ।
ದ್ವನಿತಾಸ್ಯಾಂಬುಜಲಕ್ಷ್ಮಿಯೋಸರಿಪಿನಂ ಹೇಮಂತವೇಂ ಮಂತಣಂ ॥೧೦೪॥

ಚಂ ॥ ದಿವದೊಳವೌಷ್ಣ್ಯಮಂ ಬಿಸುಟು ಶೀತಕರಂಗೆಣೆಯಾಗೆ ಭಾನು ಕೈ ।
ರವಮಲರ್ದಿರ್ದುದಂಬುಜವನಂ ಮುಗಿದಿರ್ದುವು ಬೆಳ್ಳಿಗಿಲ್ತಳ ॥
ದುವು ಹಿಮಮಂ ಕರುತ್ತು ಕರೆದಂತೆ ಚರಕ್ಕಚರತ್ವಮಾಗೆ ಕೋ ।
ಡುವ ಪವನಂ ಪೊದಟ್ದುದು ಪೊದಟ್ದಿರೆ ಮಾಗಿ ಮಹೀವಿಭಾಗದೊಳ್ ॥೧೦೫॥

ಕಂ ॥ ಹಿಮಮಂ ಪೊತ್ತೆಸಪನಿಳ ।
ಶ್ರಮಜಳಮಲ್ಲೊಕ್ಕವೆನೆ ಸುರಿವಾಪನಿ ಪುಲ್ಗ ॥
ಳ ಮನಕ್ಕೆ ಜಳಾಂಜಳಿಯಂ ।
ನಿಮಿರ್ಚಿ ಪಥಿಕರ್ಗೆ ಪೆರ್ಚಿದುದು ಹೇಮಂತಂ ॥ ೧೦೬ ॥

ಹಿಮಸಮಯದೊಳಹಿಮಕರಂ ।
ಹಿಮಹತಿಗುಳ್ಳಳ್ಕಿ ಕರಮನುಡುಗುವನುಱಿದಂ ॥
ತಮಳಕ್ಕಮಳಂಗಳೆ ಕೊ ।
ಪ್ಪಮರಲ್ ಪರಿವಾ ಬಿಸಿಲ ಪಸರಮ್ಮೈಕಿಲ್ಗಳ್ ॥ ೧೦೭ ॥

ದಿವಸವಧು ಕುಂದುವಳ್ ರಾ ।
ತ್ರಿವನಿತೆ ಪೆರ್ಚುವಳದುಚಿತಮೀಯುವನಿಯೊಳೊ ॥
ಪ್ಪುವಪತಿಯ ಹಾನಿವೃದ್ಧಿಯೆ ।
ಯುವತಿಯರೊಳಮಕ್ಕುಮೆಂಬುದದು ತಕ್ಕುದೆ ದಲ್ ॥ ೧೦೮ ॥

ಕರಚರಣಂಗಳ್ ಹಿಮ [ವಿಡಿ] ।
ದಿರೆ ಕೋಡಗಗಟ್ಟುಗಟ್ಟಿದಂತಿರೆ ಶಾಖಾ ॥
ಚರವಾಗಿಯುಮೇಂ ಶಾಖಾ ।
ಚರಮೆನಿಸಿದುವಂದು ಕೋಟಿಕೋಡಗಮನಿತುಂ ॥ ೧೦೯ ॥

ಚಂ ॥ ಕರಿ ನಗದೊತ್ತುಗೊಂಡು ಮಿಡುಕಲ್ಕಣಮಾಱದೆ ನಿಂದೊಡಂದು ಕೇ ।
ಸರಿ ಹಿಮಸಂಗಮಕ್ಕಗಿದಳುರ್ಕೆಯನೊಕ್ಕು ಕರೀಂದ್ರಪಾರ್ಶ್ವಮಂ ॥
ಗಿರಿಯ ನಿತಂಬಮೆಂದು ಗಡ ನಾರ್ದು ನಿಕುಂಚಿತ ಗಾತ್ರಮಿರ್ದುದಾ ।
ಯೆರಡರ ಕೋಪವಹ್ನಿಯುಮಡಂಗಿದುದಕ್ಕುಮೆ ಶೀತಘಾತದಿಂ ॥ ೧೧೦ ॥

ಕಂ ॥ ಸರದೊಳ್ ಸಲಿಲಮುಮಮಳ ।
ಸ್ವರೂಪಮಂ ಪಡೆದು ಮಾಗಿಯೊಳ್ ಶೈತ್ಯಗುಣಾ ॥
ಕರಮೆನಿಸಿತಂತೆ ಶಾಂತತೆ ।
ದೊರೆಕೊಳ್ವುದು ಸುಪ್ರಸನ್ನಹೃದಯರ್ಗರಿದೇ ॥ ೧೧೧ ॥

ಕಂ ॥ ಒದವಿಸೆ ಸರದಂ ಸಪ್ತ ।
ಚ್ಛದದೊಳ್ ಸಮ್ಮದಮನಳಿಗೆ ಮನುಜಾಳಿಗೆ ತಾ ॥
ನೊದವಿಸಿತೆಸೆವನವಪ್ರ ।
ಚ್ಛದದೊಳ್ ಸಮ್ಮದಮನೊರ್ಮೆಯುಂ ಹಿಮಸಮಯಂ ॥ ೧೧೨ ॥

ಘುಸಘುಸೃಣಮಲ್ಲದನುಲೇ ।
ಪನಮುಂ ಸಂಶ್ಲೇಷಮಲ್ಲದಣಮೊಲ್ಲದು ಮಿ ॥
ಕ್ಕಿನ ಕಾಮಕೇಳಿಯುಂ ವಿಷ ।
ಯನಿಮಗ್ನಂ ಭಗ್ನಮಾಗಿ ಮಾಗಿಯೊಳೆ ಜನಂ ॥ ೧೧೩ ॥

ಚ ॥ ಮಡದಿಯರಾತ್ಮಕೇಕರವಿಳೋಕನದಿಂ ಜನಚಿತ್ತಮುಂ ಪದಂ ।
ಬಡಿಸೆ ಬಱಿಕ್ಕೆ ತಮ್ಮ ಕೆಲಸಂ ಗಡದಲ್ಲದೆ ಮಾಗಿಯಲ್ಲಿ ತಾ ॥
ವೆಡೆವಱಿಯುತ್ತಮಿರ್ದಪುವಿವೇವುವೆನುತ್ತಿಱಿಕೆಯ್ದು ಪೂಗಳಂ ।
ಗಡ ಕಡೆಗಣ್ಣ ಕೂರ್ಗಣೆಗಳಿಂದಿಸುವಂ ಮದನಂ ವಿಯೋಗಿಯಂ ॥ ೧೧೪ ॥

ಜಗಕಪಕಾರಿ ತೀವ್ರನೆನಿಸಿರ್ದಧಿಕಾರಿ ನಿರಾಕುಳಂ ಕುಟುಂ ।
ಬಿಗಳ ಧನಂಗಳಂ ಕವರ್ದು ಮೇಲುದುಮುಂ ಸುಗಿವಂತೆ ವೃಕ್ಷರಾ ॥
ಜಿಗಳ ನವಪ್ರಸೂನಫಳಮುಂ ಶಿಶಿರಾನಿಳನೀಱ್ದುಕೊಂಡು ನೆ ।
ಟ್ಟಗೆ ನೆಲಸಿರ್ದ ಪರ್ಣ್ಣಲೆಯನೆಯ್ದೆ ಕಱಿಲ್ಚಿದುದೆಲ್ಲಿ ನೋಱ್ಪೊಡಂ ॥ ೧೧೫ ॥

ಮ ॥ ಘನಸಾರಾನುಭವಕ್ಕೆ ಚಂದನರಸಾಲೇಪಕ್ಕೆ ವಿದ್ವೇಷಿಯಾ ।
ಗಿ ನಿತಾಂತಂ ಶಿಶಿರಂ ವಸಂತಸಮಯಶ್ರೀಪ್ರೀತಿಯಂ ಪುಟ್ಟಿಸಿ ॥
ತ್ತೆನಸುಂ ಭೂವಳಯಕ್ಕನಿಷ್ಟದೊದವಂ ಸಂಪಾದಿಸುತ್ತಿರ್ಪ ಭೂ ।
ಪನ ಸಂಪತ್ತಿ ಜನಪ್ರಸನ್ನನೃಪತಿ ಶ್ರೀಪ್ರೀತಿಯಂ ಮಾಳ್ಪವೋಲ್ ॥ ೧೧೬ ॥

ಚ ॥ ಹಿಮವಿಭವಂ ಪ್ರತೀತಶಿಶಿರಂ ಸಮಯಂ ಸಮಯಜ್ಞನಂದದಿಂ ।
ದಮೆ ಪೆಱಪಿಂಗಿದತ್ತು ಜಳಕೇಳಿಗೊಡರ್ಚಿದಪಂ ಸಮಸ್ತ ಭೂ ॥
ರಮಣನದಕ್ಕೆ ತಮ್ಮಿರವು ಸಲ್ಲದೆನುತ್ತಱಿದಂತೆ ಸಿಂಧುತೀ ।
ರಮನವನೀಜ ಪುಷ್ಪಫಲಸಾರಮನೆಯ್ದದ ಮುನ್ನಮಾವಗಂ ॥ ೧೧೭ ॥

ಕಂ ॥ ವಿಶದಸುಮನಸ್ಸಮೂಹ ।
ಪ್ರಶಸ್ತವಿಭವಾಪಹಾರಿಯೆಂಬೀ ಮುಳಿಸಿಂ ॥
ಕುಶಳನ್ನಪನಂತೆ ಬಂದುದು ।
ಶಿಶಿರಮನದಟಲೆದು ಕಾಂತಮೆನಿಸಿ ವಸಂತಂ ॥ ೧೧೮ ॥

ವ ॥ ಅದೆಂತೆನೆ—

ಚ ॥ ಅಲರ್ದಲರ್ಗಣ್ಗಳೊಪ್ಪಿನಳಿನಾನನಮಾಗೆ ವಿಕಾಸಮುಂ ಸುಪಾ ।
ಟಳ ದಶನಚ್ಛದಂ ಸ್ಮಿತದೊಳೊಂದೆ ಸಮುನ್ನತರಾವದಂತೆ ಕೋ ॥
ಕಿಳಕಳರಾವಮುಣ್ಮೆ ನವನಂದನ ಪುಷ್ಪದಾಮ ಕೋ ।
ಮಳೆಗಸುವಂದು ಬಪ್ಪತೆಱದಿಂದಮೆ ಬಂದುದು ದಕ್ಷಿಣಾನಿಳಂ ॥ ೧೧೯ ॥

ಮ ॥ ಸ್ರ ॥ ಲಲನಾಲಾವಣ್ಯವಾರಾಶಿಯೊಳೆ ಗುರುಕುಚಂ ಪೊನ್ನ ಬಿಣ್ಗುಂಡು ಕುಂಭ ।
ತ್ರಳಿತಾಮ್ರಂ ಕೂವಕಂಬಂ ಪಿಚಕಿಳಮೆಸಳ್ಗಂ ಚಂದ್ರಮಂ ಕೂವಕಂಭ ॥
ಕ್ಕೆಳಸಿರ್ಪಂಕಂತುಸಾಯಾತ್ರ್ಯತನೆನಿಸೆ ಮನೋವೇಗದಿಂ ದಕ್ಷಿಣಾಶಾ ।
ನಿಳಸಂಪಚ್ಛೋದಿತಂ ಬಂದುದು ಸುಖಭರಿತಂ
ಭೈತ್ರಮಂ ಪೋಲ್ತು ಚೈತ್ರಂ ॥ ೧೨೦ ॥

ಮ ॥ ಹರಿಪುನ್ನಾಗದಿನುದ್ಘಖೇಟನ ಮರುದ್ವ್ರಾತಂಗಳಿಂ ಚಾರು ಬಾ ।
ಣರುಚಿಸ್ಯಂದನದಿಂ ವನೇಚರಪದಾತಿವ್ಯೂಹದಿಂ ಷಡ್ವಿಧಂ ॥
ಪರಿವಾರಂ ತನಗೊಪ್ಪೆ ಚಕ್ರಪದವೀ ಸಂಪೂಜಿತಂ ರಾಜನಂ ।
ತಿರೆ ವಿಭ್ರಾಜಿಸಿ ಬಂದದೇನೆಱಗಿಸಿತ್ತೋ ಚೈತ್ರಮಿಾಧಾತ್ರಿಯಂ ॥ ೧೨೧ ॥

ಚ ॥ ಸುರಗಿಮನೋಹರಂ ಸುರಭಿಕಳ್ಪಕುಜಂ ಸಹಕಾರಭೂರುಹಂ ।
ವಿರಹಿಗತಿಪ್ರಭೇದಕಳಕಂಠರವಂ ಪವಿಬಿಂಬಕುಂಭ ಭಾ ॥
ಸ್ವರಶತಿಕಾಂತಿ ದಂತಿಯೆನೆ ಬಂಧುರಗಂಧ ಮರುದ್ವಿಳಾಸ ಭಾ ।
ಸುರತರ ನಂದನಪ್ರಭು ಸುರೇಶ್ವರನಂತೆ ವಸಂತಮೊಪ್ಪುಗುಂ ॥ ೧೨೨ ॥

ಮ ॥ ಸ್ರ ॥ ಲತಿಕಾಲಕ್ಷ್ಮೀವಿಳಾಸಂ ಮಳಯಪವನವಿನ್ಯಾಸಮುಜ್ಜಪ್ರಹಾಸಂ ।
ಚತುರಾಶ್ವಾಸಂ ಸಮುತ್ಪಾದಿತ ವಿರಹಿಜನತ್ರಾಸಮುರ್ಕಪ್ರತಾಪಾ ॥
ಪ್ರತಿಮವ್ಯಾಸಂ ಶಶಾಂಕದ್ಯುತಿ ವಿಭವವಿಭಾಸಂ ವರಸ್ತ್ರೀವಿಳಾಸಂ ।
ಕ್ಷಿತಿಗತ್ಯಾನಂದಮಂ ಸಂದಿಸಿತು ಸುರಭಿಮಾಸಂ ಸ್ಮರಶ್ರೀನಿವಾಸಂ ॥ ೧೨೩ ॥

ವ ॥ ಅಂತು ಸಮಸ್ತಧಾತ್ರಿಯೊಳಂ ಪ್ರಶಸ್ತಪ್ರಮೋದಮಂ ಪಿಸ್ತಾರಿಸಿ—

ಉ ॥ ಇತ್ತುದಶೇಷರಾಜನಿವಹಂ ತಮಗುಳ್ಳ ಸುವಸ್ತುವಾಹಮಂ ।
ತೆತ್ತಪೆನಾನುಮೆಂಬ ಬಗೆಯಿಂದಮೆ ಬಂದು ವಸಂತರಾಜನೇ ॥
ನಿತ್ತನೊ ಪಲ್ಲವಪ್ರಸವಸತ್ಫಳಮಂ ಕಳಕಂಠಗಾಯಕೋ ।
ದ್ವೃತ್ತತಿಯಂ ಜಗತ್ಪ್ರಭುಗೆ ದಕ್ಷಿಣಮಾರುತ ಚಾಮರೌಘಮಂ ॥ ೧೨೪ ॥

ವ ॥ ಅಂತು ವಸಂತರಾಜಂ ತನಗಿತ್ತಪೂರ್ವ ವಸ್ತುಗಳಂ ಸಮಸ್ತಧಾತ್ರೀಪತಿ ಕೈಕೊಳುತ್ತಂ

ಮ ॥ ಸ್ರ ॥ ಅನುಕೂಲಾಗಾಧ ಪದ್ಮಾಕರ ಗುಣವಿಳಸದ್ರಾಜಹಂಸಾಳಿ ವಿಭ್ರಾ ।
ಜಿನಿಯಂ ದಾನಾಂಬುವಾಹೋಚಿತ ಗತಿವಿಳಸಚ್ಚಕ್ರಸಂರಾವ ಸಂಶೋ ॥
ಭಿನಿಯಂ ತನ್ನೊಪ್ಪುಪೀವಾಹಿನಿಯವೊಲೆಸವುತ್ತಿರ್ಪ ರಕ್ತಾಖ್ಯೆಯಂ ವಾ ।
ಹಿನಿಯಂ ತಾನೆಯ್ದೆವಂದಂ ಸುಕವಿಜನಮನೋಹರ್ಷ
ಸಸ್ಯಪ್ರವರ್ಷಂ ॥ ೧೨೫ ॥

— ಗದ್ಯಂ —

ಇದು

ವಿದಿತವಿಬುಧಲೋಕನಾಯಕಾಭಿಪೂಜ್ಯವಾಸುಪೂಜ್ಯಜಿನಮುನಿ
ಪ್ರಸಾದಾಸಾದಿತನಿರ್ಮಳಧರ್ಮ ವಿನುತವಿನೇಯಜನ
ವನಜವನವಿಳಸಿತ ಕವಿಕುಳತಿಳಕಪ್ರಣೀತಮಪ್ಪ
ಪಾರ್ಶ್ವನಾಥ ಪುರಾಣದೊಳ್
ವಸಂತಾಗಮವರ್ಣನಂ

**ಅಷ್ಟಮಾಶ್ವಾಸಂ ಸಮಾಪ್ತಂ**

---

*

॥ ಶ್ರೀಃ ॥

# ನವಮಾಶ್ವಾಸಂ

ಕಂ ॥ ಶ್ರೀವಲ್ಲಭನಖಿಳ ಕಳಾ ।
ಕೋವಿದನೀಕ್ಷಿಸೆ ನಿರೀಕ್ಷಣಾಕ್ಷೂಣ ಸುಖೋ ॥
ಜ್ಜೀವನ ಜೀವನ ಮನಶೋ ।
ಭಾವಿಳಸಿತ ನದಿಯನೊಸೆದು ಕವಿಕುಳತಿಳಕಂ ॥ ೧ ॥

ಅಳಿಪಿಂ ಪೆಂಡಿರ ಪೊಕ್ಕುಳ ।
ಸುೞಿಯೊಳ್ ಸುೞಿದಪ್ಪ ನೃಪನ ಕಣ್ಬೊಣರ್ಗಳನೇ ॥
ನಿೞಿಸಿದವೊ ನದಿಯೊಳೊದವಿದ ।
ಸುೞಿಗಳ ಬೞಿವಿಡಿದು ಸುೞಿದು ಪೊಳೆವೆಳೆಮೀಂಗಳ್ ॥ ೨ ॥

ವ ॥ ಅಂತಾಮಹೀಕಾಂತನನುರಕ್ತತೆಯಿಂ ರಕ್ತಾಖ್ಯಾನದೀಲಕ್ಷ್ಮಿಯಂ ನಿರೀಕ್ಷಿಸುತ್ತಮಿರೆ—

ಕಂ ॥ ಭೂಮೀಶನ ಮನಮಱಿದುಮ ।
ಹಾಮಾತ್ಯಂ ನಿಲಿಸಿ ದಂತಿಯುಂ ಬಿನ್ನವಿಕುಂ ॥
ಪ್ರೇಮದ ಮಡದಿಯ ನುಡಿಯುವೊ ।
ಲೇ ಮಾತಿದು ದಾಂಟಲರಿದು ನದಿ ನೃಪತಿಳಕಾ ॥ ೩ ॥

ಚ ॥ ಅನುಪಮ ಪುಂಡರೀಕಪರಿಶೋಭಿ ವಿನೋದನಿಮಗ್ನ ಕಾಮಿನೀ ।
ಘನಕುಚ ಕುಂಕುಮಾಂಕಮಭಿನಂದಿತ ನಂದನರಾಜಿ ರಾಜಹಂ ॥
ಸನಿವಹ ಸೇವಿತಂ ವಿಧೃತಚಕ್ರಮುದಾರ ಪರೋಪಕಾರಜೀ ।
ವನನಿಧಿ ನಿನ್ನವೋಲಧಿಪ ರಂಜಿಪುದೀನದಿಯಾತ್ತ ಸಮ್ಮದಂ ॥ ೪ ॥

ಉ ॥ ಈವನವೀಥಿಯೊಳ್ ಬಳೆದ ಬಾಳದ ಬೇರ್ಗಳ ಚಂದನಂಗಳಿಂ ।
ದೀವರದೊಕ್ಕ ಪಾದರಿಯ ಜಾದಿಯ ಕೇದಗೆಯಿಂಪುವೆತ್ತ ಕಂ ॥
ಪಾವಗಮಿಲ್ಲಿ ಪಲ್ಲವಿಸೆ ಪಾಣಿಯುವಾಸಮನಿಕ್ಕಿದಂತೆ ಸೌ ।
ಖ್ಯಾವಹಮೆಂದೊಡೀನದಿಯನೀಕ್ಷಿಸೆ ಪಾಂಥನತೃಷ್ಣೆ ಪೋಗದೇ ॥ ೫ ॥

ಕಂ ॥ ಇಂಬಾದಿದಱಿತ್ತಡಿಯ ಬ ।
ನಂ ಬಯ್ತುಲೆದೆಗೆದ ಕೇಶವನಮೆನಿಸೆ ಪರಾ ॥
ಗಂಬೊರೆದ ಸಿಂಧುಸೀಮಂ ।
ತಂಬೊಲಿಳಾಕಾಂತೆಗಧಿಪ ಮಿಗೆ ಸೊಗಯಿಸುಗುಂ ॥ ೬ ॥

ಕಂ ॥ ಭುವನಪತಿ ಬೆಸಸೆ ಸಂಚಳಿ ।
ಸುವರಸಿಯಂ ಮೀಱಲಱಿಯದೊಯ್ವಾಸಹವಾ ॥
ಸಿವೊಲಿದಱ ವಜ್ರವೇದಿಕೆ ।
ನವವೇತ್ರಲತಾವನಂ ಕರಂ ಕಣ್ಗೊಳಿಕುಂ ॥ ೭ ॥

ವ ॥ ಅಂತುಮಲ್ಲದೆಯುಂ—

ಕಂ ॥ ಪ್ರವಿಪುಳ ಲಕ್ಷ್ಮೀನಂದನ ।
ಮವಿಲಂಘ್ಯಂ ಭುವನರಕ್ಷಕಂ ಪ್ರಾಪ್ತಮಹಾ ॥
ರ್ಣವಮಪ್ಪುದಱಿಂದವನಿಪ ।
ಭವದಾಜ್ಞೆವೊಲಿದಱ ಕನಕವೇದಿಕೆಯೆಸೆಗುಂ ॥ ೮ ॥

ಮ ॥ ತನಿವಣ್ಣಾದವು ಮ್ಯೆಂದವಾಟಿ ಸವಿಗಂ ಕಂಪಿಂಗವಾಯ್ತಿರ್ಕೆ ಪ ।
ಣ್ತೆನಸುಂ ಬರ್ಕೆ ರಸಕ್ಕೆ ಪಕ್ಕೆನಿಸಿ ಕೊರ್ವಿತ್ತಾವಗಂ ಕರ್ವು ಸಾ ॥
ಲ್ವನಿತುಂ ಕಾಯ್ತುದು ತೆಂಗು ಪಣ್ಣಡಕೆಯುಂ ಪೇಱಿರ್ದುದೀಕಾಂಗು ಪ ॥
ಣ್ಣನೆ ತಿಣ್ಣಂ ತಳೆದತ್ತು ಮಾವೆನೆ ವನಂ ಚಿತ್ತೋತ್ಸವಾಲಂಬನಂ ॥ ೯ ॥

ಕಂ ॥ ತಿಳಿನೀರಿಂದಂ ತೆಂಗಂ ।
ಬಳೆಯಿಸೆ ನದನದಿಯಿನೊಸರ್ವ ತಿಳಿನೀರಿಂದಂ ॥
ಬಳೆಯಿಸೆ ತೆಂಗೊಪ್ಪಿದವವಿ ।
ರಳವೊಂದಱ ಕಡವನೊಂದು ನೀಗುವ ತೆಱದಿಂ ॥ ೧೦ ॥

ಕಟ್ಟಲಿಸೆಲೆವಳ್ಳಿಗಳಿಂ ।
ತಳ್ತಿಳೆಗೌಂಗಲ್ಲಿ ಮಲ್ಲಿಗೆಯ ವಲ್ಲರಿಯಿಂ ॥
ತಳ್ತಿಳೆಮಾವು ಲತಾಂಗಿಯ ।
ತೋಳ್ತಳ್ತಿರ್ದೆಸೆವ ಕಾಂತನಂತೆಸೆದಿರ್ಕುಂ ॥ ೧೧ ॥

ಪೊಂಕಂಪಂ ಪಡೆದತ್ತೆನೆ ।
ಪೊಂಕಂ ಪಂಚೇಷುಗೂದವೆ ಚೈತ್ರದ ಪೆಸರ್ವೆ ॥
ತ್ತಂಕಂ ಬಿರಯಿಗೆ ನೆಗಱ್ದ ।
ತಂಕಂ ಬಿಡದಡರೆ ಪೂತ ಸಂಪಗೆಯೆಸೆಗುಂ ॥ ೧೨ ॥

ಝುಂಕಾರದಿಂದೆ ವಿರಹಿಯ ।
ಹಂಕಾರಮನುಗಿಯೆ ಚೈತ್ರಮೊಸೆದಳಿಮಾಳಾ ॥
ಕಿಂಕರಗೆ ಕೊಟ್ಟ ಕಣಗಿಲೆ ।
ಯುಂ ಕಣಗಿಲೆ ಪೋಲ್ತು ಪೂತು ಮಿಗೆ ಸೊಗಯಿಸುಗುಂ ॥ ೧೩ ॥

ತಣ್ಗಂಪು ಬೆಳ್ಪು ಚಂದ್ರನ ।
ತಣ್ಗದಿರೆಂತಂತೆ ಬಗೆಯನಿಱ್ಕುಳಿಗೊಳೆ ತಾಂ ॥
ಕಣ್ಗೆಸೆವುದೆಂದು ಪೊಗೞ್ವುದು ।
ನುಣ್ಗೊರಲಳಿ ಬಳಸಿ ಮಿಸುಪ ಸೇವಂತಿಗೆಯಂ ॥ ೧೪ ॥

ಕಂ ॥ ಕತ್ತುರಿತನುಲೇಪಂ ಕಂ ।
ಪೊತ್ತಿರಿಸಿತು ವೈರಿಗಲರ್ಗಣೆಯಿಲ್ಲೆನುತಂ ॥
ಚಿತ್ತಭವನಿತ್ತ ಜಯಸಂ ।
ಪತ್ತಿಯ ಕಹಳಾರವಂಬೊಲಳಿರವಮೆಸೆಗುಂ ॥ ೧೫ ॥

ಮಧುಬಿಂದು ಮಲ್ಲಿಗೆಯೊಳಿರೆ ।
ಮಧುಕರರುತಿ ಮಂತ್ರಮೆನಿಪಿನಂ ದ್ವಿಜರಾಜಂ ॥
ಮಧುಮಿತ್ರನ ಮದುವೆಗೆ ಮಿಗೆ ।
ಮಧುಪರ್ಕಮನಿಟ್ಟುಱಿಂದೆ ಮಾಳ್ಪಂತೆಸೆಗುಂ ॥ ೧೬ ॥

ಶ್ರೀಗಂಧವಿನೂತನವರ ।
ಶ್ರೀಗಂಧ ಹಿಮಾಬ್ಜ ಸುರಭಿಸುರಭಿತ ಸಲಿಳಾ ॥
× × × × × × ।
ಭೋಗಕ್ಕಂಗನೆಯುರೆಳಸಿದರ್ ನೃಪತಿಳಕಾ ॥ ೧೭ ॥

ಕಾಂತಿಯುನಾಂತೆಸೆವ ಲಲಾ ।
ಟಂ ತೊಳಗುವ ಸಸಿವೊಲೊಪ್ಪಿ ಕಾಯ್ವಂತೆ ಲಲಾ ॥
ಟಂ ತಪನಾದಂತಪನಂ ।
ಶ್ರಾಂತಿಗೆ ನೆಲೆಯಾಂಪರಂತವುರದಂಗನೆಯುರ್ ॥ ೧೮ ॥

ಇನನಾರಂ ಮನ್ನಿಪನವ ।
ರನೆ ಪೊರ್ದುವುದುಚಿತಮೆಂಬ ತೆಱದಿಂದಂ ನೆ ॥
ಟ್ಟನೆ ಕಾಯೆ ತಪನನಂಬುಜ ।
ವನಮಂ ಪೊರ್ದಿದುದು ರಾಜಹಂಸಸಮಾಜಂ ॥ ೧೯ ॥

ಕಡುಗಾಯ್ದಂ ರವಿ ಲೇಸಂ ।
ಕಡೆಗಣಿಸಲ್ಕಾಗದೆಂಬ ತೆಱದಿಂ ಲೇಸಿಂ ॥
ಗೆಡೆಗೊಂಡಿರ್ದುದು ನದಿಯಾ ।
ತಡಿವಿಡಿದೀ ಬನಮುಮಿಲ್ಲ ಬಿಡಿವುದು ಬೇಡಂ ॥ ೨೦ ॥

ಈ ವನಲಕ್ಷ್ಮಿ ದಿಟಂ ನಿ ।
ನ್ನೀವನ ಲಕ್ಷ್ಮಿವೊಲೆ ಸರ್ವಜನಸೇವ್ಯಮಿದಂ ॥
ಭಾವಿಸಿ ತಡೆಯದೆ ನಡೆವುದು ।
ದೇವವರ್ನಕೇಳಿಗುಚಿವುದಾಳೋಚನಮಂ ॥ ೨೧ ॥

ಎನೆ ಮನದೆಗೊಂಡು ಬೀಡಂ ।
ಜನಪತಿ ಬಿಡಿಸಲ್ಕೆ ಪೇೞ್ದು ತಡೆಯದ ನಿಜವಾ ॥
ಹನದಿನಿೞಿದು ಗಜಪತಿಯುಂ ।
ನೆನೆಯಿಸುತೀವನಮನವನಿಪತಿ ಪುಗುತಂದಂ ॥ ೨೨ ॥

ವ ॥ ಆ ಸಮಯದೊಳ್—

ಚಂ॥ ಕಱಿಯೆ ಬಱಲ್ದುತ್ತೋರಮುಡಿ ಜೋಲ್ದುಡೆ ಘರ್ಮಜಳಂಗಳಿಂದೆ ನಾಂ।
ದಱಿದ ಲಲಾಮಕಂ ನಿಮಿರ್ವ ಸೂರ್ಯಮದೊರ್ಪ್ಪಿರೆ ವಾಹನಂಗಳಿಂ॥
ದಿಱಿಯುತಮೀಕ್ಷಿಪರ್ಗೆ ವಿಪರೀತರತಕ್ಕೆಳಸಿರ್ದ ಮಂಚದಿಂ।
ದಿಱಿವ ಬೆಡಂಗು ಸಂಗಳಿಸೆ ಕಣ್ಗೊಳಿಸಿತ್ತು ವಿಳಾಸಿನೀಜನಂ ॥ ೨೩ ॥

ಕಂ॥ ಲಲನೆಯರ ಲಲಾಟದಿನು।
ಚ್ಚಳಿಸುವ ಬೆಮರಿಂದೆ ನಾಂದು ಪತ್ತಿದ ಮೃದುಕುಂ॥
ತಳಮೆಸೆದವು ಸಾದ್ರ್ರತೆ ಸಂ।
ಚಳರುಮನಳವಡಿಸಿ ಪಿಡಿಗುಮೆಂದಱಿಪುವವೋಲ್ ॥ ೨೪ ॥

ವೃತ್ತಕುಚೆಯರ್ಗೆ ಬೆಮರಿಂ।
ದೊತ್ತರಿಸಿತ್ತಂಗದಲ್ಲಿ ಕತ್ತುರಿಯ ಪದಂ॥
ಬೆತ್ತಂತೆಲರೊಳ್ ನೀರ್ದಳಿ।
ದತ್ತೆನೆ ಮೊರೆವೆತ್ತು ಸುರಭಿಪರಿಮಳಮಾಗಳ್ ॥ ೨೫ ॥

ಕಳಿಕೆಯನರಲಂ ತಳಿರಂ।
ತಳೆವುತ್ಕಳಿಕೆಯೊಳೆ ಮಱೆದು ಗಮನ ಶ್ರಮಮಂ॥
ಗಳಗಳನೆ ನಡೆದರಬಲೆಯ।
ರೆಳಸಂತೊಲ್ವೆಡೆಗೆ ಪಾದಪಂ ಪುಟ್ಟುಗುಮೇ ॥ ೨೬ ॥

ಪಿಡಿಗಳ್ ಮನೋಭವನ ಕ।
ಯ್ಪಿಡಿಗಳ್ ವನಕೇಳಿಗೆಳಸಿ ಗಜರಾಜನ ಬೆಂ॥
ಬಿಡಿದು ನಡೆತಪ್ಪ ತೆಱದಿಂ।
ನಡೆದರ್ನೃಪನೊಡನೆ ಲಲಿತಗತಿಯರ್ ಸತಿಯರ್ ॥ ೨೭ ॥

ಗುರುಕುಚತದ ಪತ್ರಭಂಗಂ।
ಪರೆದುದು ಬೆಮರಿಂದೆ ಪಲ್ಲವಗ್ರಾಹಿಣಿಯರ್॥
ತರುಣಿಯರಾಗದ ಮುನ್ನಂ।
ಪರಿಹರಿಸುವುದೆಂದು ವಿಟರ್ಗೆ ಸೂಚಿಪ ತೆಱದಿಂ ॥ ೨೮ ॥

ವ॥ ಅಂತು ಬಟ್ಟೆವಯಣದಾಯಾಸದಿಂ ಘಾಸಿಯಾಗಿಯುಂ ಕತ್ತುರಿಯಂ ಪೂಸಿ ಮಾಡಿದಂತೆ ಲೇಸೆನಿಸುವ ಪರಿಮಳಮಂ ಸೂಸುತ್ತುಂ ಬರ್ಪ ವಿಳಾಸಿನೀ ಜನಂಬೆರಸ ರಸಂ ಬೆಮರ್ತ ಮೆಯ್ಗೆ ತಂಗಾಳಿಯಂತೆ ತನ್ನ ಮೇಳದಿಂದಾ ಲತಾಲಲಿತಾಂಗಿಯರನ ಲರ್ಚಿ ನವಯುವತಿಯೌವನವನವಸಂತನೆಂಬುದನಿಂಬಾಗಱಿಪುತ್ತಂ ಬಂದು ವಿರಹಿಗಳಂ ಪುಗಲ್ಪುಗಲೆಂದು ಜಡಿವ ಪಡಿಯರವಕ್ಕಿಗಿರ್ಕೆಯಾಗಿ ತೋರಣಮಾಗಿ ಬಳೆದ ಬಾಳಸಹ ಕಾರ ಭೂರುಹಂಗಳ ವಾರವಟ್ಟದಿಂದಳವಟ್ಟ ಚೆಲ್ವಿಂಗಡರ್ಪಾದ ಪಾದರಿಯೊಳ್ ಕೋದು ಬಳೆದ ಪೊಂಗೇದಗೆಯ ಬಲ್ಲಾಳ್ದಟ್ಟೆಯಿಂದೊಳಗೆ ದಿಟ್ಟಿಗಲಂಪಂ ಪುಟ್ಟಿಸುವ ಸಂಪಗೆಯ ಚಂಪೆಯದಿಂದುಳ್ಳಲರ್ದ ಬಳ್ಳಿಮಲ್ಲಿಗೆಯ ಮೊಗಸಾಲೆಯ ಲೀಲೆಯಂತೆಡೆಗೊಂಡು

ಮಡಲ್ತ ಮಾಮರದ ಮಂಡಪಿಗೆಯುಂ ಮನೋರಾಜರಾಜಂಗೆ ವಸಂತರಾಜಂ ವಿರಚಿಸಿದ ವಿಜಯ ಶಿಬಿರದಂತೆ ಸಮುಲ್ಲಸಿತ ಪಲ್ಲವಲಕ್ಷ್ಮ್ಯಾಗಾರಮಾದಶೋಕಭೂಜರಾಜಿಯುಂ ರಾಜವಿದ್ಯಾಧರನಳಂಕರಿಸುವುದುಮಲ್ಲಿ—

ಕಂ ॥ ತಳಿರ ನೆಲಗಟ್ಟು ಪೊಸದಳಿ ।
ರ್ಗಳ ಕಂಬಂ ತಳಿರ ಭಿತ್ತಿ ತಳಿರ ಲೋವೆ ಕೆಂ ॥
ದಳಿರ್ಗಳ ಜಂತೆಗಳೊಪ್ಪಿರೆ ।
ತಳಿರಾವಳಿ ತಳಿರ ಸದನಮೆನೆ ಕಣ್ಗೊಳಿಕುಂ ॥ ೨೯ ॥

ವ ॥ ಅದಱೊಳಗೆ—

ಕಂ ॥ ಅಲರೆ ಮನಮವನಿಪಾಳಕ ।
ನಲರ್ಗಳ ತಲೆಗಿಂಬಿನಿಂದಮಲರ ಮಲಂಗಿಂ ॥
ದಲರ ದಳಿಂಬದಿನಿಂಬಾ ।
ದಲರ್ವಾಸಿನ ಮೇಲೆ ಲೀಲೆಯಿಂ ಕುಳ್ಳಿರ್ದಂ ॥ ೩೦ ॥

ವ ॥ ಅಂತವಿಶ್ರಾಂತ ವಿದ್ಯಾವಿನೋದಮಂದಿರ ಮಂದಾನಿಳಾಂದೋಳಿತ ಬಾಳ ಚೂತಲತಿಕಾನರ್ತನಕ್ಕನುಗತಮಾದ ಕೋಕಿಳಕಳನಾದಗೀತನಾದದಿಂ ಮಧುಕರನಿಕರ ಝುಂಕಾರ ಝೋಂಕಾರದಿಂ ಮನಂಗೊಳಿಸಿ ಸಂಗೀತಕಾಶ್ರಯಮೆನಿಪ ಲತಿಕಾಶ್ರಯದೊಳ್ ವಿಶ್ರಮಿಸಿರೆ ಸಮಗ್ರಸೌಭಾಗ್ಯದ ಮದದೊದವಿಂದೊರ್ವರೊರ್ವರ ಗಂಧಕ್ಕೆ ಬಾರದೆ ತಮ್ಮ ತನುಗಂಧಕ್ಕೆಱಗಿ ಮಱಿದುಂಬಿವಿಂಡು ಮುಂಡಳಿಸಿ ಮೊರೆಯುತ್ತಂ ಮುದದಿಂ ಡಿಮಮನನುಕರಿಸೆ ಕಪ್ಪುರದೊಪ್ಪುವ ಜಗಲಿ ಧೂಳಿ ನೆಜ್ಜರಮೆನಿಸೆ ಮನೋಭವನೆ ಬೆನ್ನ ತಕ್ಕಿನವನಾಗೆ ಶಿಶಿರೋಪಚಾರಮೆ ಮದೋಪಚಾರಮಾಗೆ ಚಾರುಕುಚಕುಂಭಿನಿಭೃತೆಯರ್—

ಕಂ ॥ ಷಣ್ಣವತಿಸಹಸ್ರಂ ಪಸು ।
ವರ್ಣರ್ದಲಸಗತಿಯುರಸೆಪದಂತದ್ಯುತಿಯಿಂ ॥
ಸುಣ್ಣಿಸುತಂ ತರುಷಂಡದ ।
ತಣ್ಣೆೞಲೊಳ್ ಮದನಮತ್ತಗಜದವೋಲೆಸೆದರ್ ॥ ೩೧ ॥

ವ ॥ ಅಂತಂತಃಪುರಪುರಂಧ್ರಿಯರೊಪ್ಪಮನಪ್ಪುಕೆಯ್ದುಪುರ್ದುಮುಱಿದ ವಿಳಾಸವತಿಯರ್—

ಚಂ ॥ ತಿಳಕದೊಳಂಗನಾತಿಳಕೆಯರ್ಲತಿಕಾಭವನಂಗಳೊಳ್ ಲತಾ ।
ಲಲಿತೆಯರುಲ್ಲಸತ್ಕುಸುಮಪಾಟಳದೊಳ್ ನವಪಾಟಳಾಧರಾ ॥
ಕಳಿತೆಯರುದ್ಧಚಂದನದೊಳುಜ್ವಳ ಚಂದನಗಂಧಿಯರ್ ಕರಂ ।
ಕೆಳೆತನಮೊಪ್ಪೆ ನಿಂದು ಗಮನಶ್ರಮಮಂ ಕಳೆದರ್ ಲತಾಂಗಿಯರ್ ॥ ೩೨ ॥

ವ ॥ ಅಂತು ಕಾಂತೆಯರ್ ತಂತಮ್ಮ ಮನಕ್ಕಿಂಬಾದ ತಣ್ಬುಳಿಲ್ಗಳೊಳಂ ರತಿರಹಸ್ಯಗೃಹಂಗಳೆನಿಪ ಧಾರಾಗೃಹಂಗಳೊಳಮನಂಗಭವನಂಗಳೆನಿಪ ಲತಾಭವನಂಗಳೊಳಂ ಸುಕುಮಾರ ಮುಕುಳ ಪರಿಮಳಮುಗ್ಧ ಮಧುಕರ ಸಂರಾವಕುಳಮೆನಿಪ ವಕುಳ

ಚಂ॥ ಕಱಿಯ ಬಱಿಲ್ದ ತೋರಮುಡಿ ಜೋಲ್ದುಡೆ ಘರ್ಮಜಳಂಗಳಿಂದೆ ನಾಂ ।
ದಱಿದ ಲಲಾಮಕಂ ನಿಮಿರ್ವ ಸೂರ್ಯಮದೊಪ್ಪಿರೆ ವಾಹನಂಗಳಿಂ ॥
ದಿಱಿಯುತಮೊಕ್ಕಿ ಪರ್ಗೆ ವಿಪರೀತರತಕ್ಕೆಳಸಿರ್ದು ಮಂಚದಿಂ ।
ದಿಱಿವ ಬೆಡಂಗು ಸಂಗಳಿಸೆ ಕಣ್ಗೊಳಿಸಿತ್ತು ವಿಳಾಸಿನೀಜನಂ ॥ ೨೩ ॥

ಕಂ ॥ ಲಲನೆಯರ ಲಲಾಟದಿನು ।
ಚ್ಚಳಿಸುವ ಬೆಮರಿಂದೆ ನಾಂದು ಪತ್ತಿದ ಮೃದುಕುಂ ॥
ತಳಮೆಸೆದವು ಸಾದ್ರ್ರತೆ ಸಂ ।
ಚಳರುಮನಳವಡಿಸಿ ಪಿಡಿಗುಮೆಂದಱಿಪುವವೋಲ್ ॥ ೨೪ ॥

ವೃತ್ತಕುಚೆಯರ್ಗೆ ಬೆಮರಿಂ ।
ದೊತ್ತರಿಸಿತ್ತಂಗದಲ್ಲಿ ಕತ್ತುರಿಯ ಪದಂ ॥
ಬೆತ್ತಂತೆಲರೊಳ್ ನೀರ್ದಳಿ ।
ದತ್ತೆನೆ ದೊರೆವೆತ್ತು ಸುರಭಿಪರಿಮಳಮಾಗಳ್ ॥ ೨೫ ॥

ಕಳಿಕೆಯನರಲಂ ತಳಿರಂ ।
ತಳೆವುತ್ಕಳಿಕೆಯೊಳೆ ಮಱೆದು ಗಮನ ಶ್ರಮಮಂ ॥
ಗಳಗಳನೆ ನಡೆದರಬಲೆಯ ।
ರೆಳಸಂತೊಲ್ವೆಡೆಗೆ ಪಾದಪಂ ಪುಟ್ಟುಗುಮೇ ॥ ೨೬ ॥

ಪಿಡಿಗಳ್ ಮನೋಭವನ ಕ ।
ಯ್ಪಿಡಿಗಳ್ ವನಕೇಳಿಗೆಳಸಿ ಗಜರಾಜನ ಬೆಂ ॥
ಬಿಡಿದು ನಡೆತಪ್ಪ ತೆಱದಿಂ ।
ನಡೆದರ್ ನೃಪನೊಡನೆ ಲಲಿತಗತಿಯರ್ ಸತಿಯರ್ ॥ ೨೭ ॥

ಗುರುಕುಚತದ ಪತ್ರಭಂಗಂ ।
ಪರೆದುದು ಬೆಮರಿಂದೆ ಪಲ್ಲವಗ್ರಾಹಿಣಿಯರ್ ॥
ತರುಣಿಯರಾಗದ ಮುನ್ನಂ ।
ಪರಿಹರಿಸುವುದೆಂದು ವಿಟರ್ಗೆ ಸೂಚಿಪ ತೆಱದಿಂ ॥ ೨೮ ॥

ವ ॥ ಅಂತು ಬಟ್ಟೆವಯಣದಾಯಾಸದಿಂ ಘಾಸಿಯಾಗಿಯುಂ ಕತ್ತುರಿಯಂ ಪೂಸಿ ಮಾಡಿದಂತೆ ಲೇಸೆನಿಸುವ ಪರಿಮಳಮಂ ಸೂಸುತ್ತುಂ ಬರ್ಪ ವಿಳಾಸಿನೀ ಜನಂಬೆರಸ ರಸಂ ಬೆಮರ್ತ ಮೆಯ್ಗೆ ತಂಗಾಳಿಯಂತೆ ತನ್ನ ಮೇಳದಿಂದಾ ಲತಾಲಲಿತಾಂಗಿಯರನ ಲರ್ಚಿ ನವಯುವತಿಯೌವನವನವಸಂತನೆಂಬುದನಿಂಬಾಗಱಿಪುತ್ತಂ ಬಂದು ವಿರಹಿಗಳಂ ಪುಗಲ್ಪುಗಲೆಂದು ಜಡಿವ ಪಡಿಯರವಕ್ಕಿಗಿರ್ಕೆಯಾಗಿ ತೋರಣಮಾಗಿ ಬಳೆದ ಬಾಳಸಹ ಕಾರ ಭೂರುಹಂಗಳ ವಾರವಟ್ಟದಿಂದಳವಟ್ಟ ಚೆಲ್ವಿಂಗಡಪ್ಪಾದ ಪಾದರಿಯೊಳ್ ಕೋದು ಬಳೆದ ಪೊಂಗೇದಗೆಯ ಬಲ್ಲಾಳ್ದಟ್ಟಿಯಿಂದೊಳಗೆ ದಿಟ್ಟಿಗಲಂಪಂ ಪುಟ್ಟಿಸುವ ಸಂಪಗೆಯ ಚಂಪೆಯದಿಂದುಳ್ಳಲರ್ದ ಬಳ್ಳಿಮಲ್ಲಿಗೆಯ ಮೊಗಸಾಲೆಯ ಲೀಲೆಯಂತೆಡೆಗೊಂಡು

ಮಡಲ್ತ ಮಾಮರದ ಮಂಡಪಿಗೆಯಂ ಮನೋರಾಜರಾಜಂಗೆ ವಸಂತರಾಜಂ ವಿರಚಿಸಿದ ವಿಜಯ ಶಿಬಿರದಂತೆ ಸಮುಲ್ಲಸಿತ ಪಲ್ಲವಲಕ್ಷ್ಮೀಗಾಗರಮಾದಶೋಕಭೂಜರಾಜಿಯಂ ರಾಜವಿದ್ಯಾಧರನಳಂಕರಿಸುವುದುಮಲ್ಲಿ—

ಕಂ ॥ ತಳಿರ ನೆಲಗಟ್ಟು ಪೊಸದಳಿ ।
ರ್ಗಳ ಕಂಬಂ ತಳಿರ ಭಿತ್ತಿ ತಳಿರ ಲೋವೆ ಕೆಂ ॥
ದಳಿರ್ಗಳ ಜಂತೆಗಳೊಪ್ಪಿರೆ ।
ತಳಿರಾವಳಿ ತಳಿರ ಸದನಮೆನೆ ಕಣ್ಗೊಳಿಕುಂ ॥ ೨೯ ॥

ವ ॥ ಅದಱೊಳಗೆ—

ಕಂ ॥ ಅಲರೆ ಮನಮುವನಿಪಾಳಕ ।
ನಲರ್ಗಳ ತಲೆಗಿಂಬಿನಿಂದಮಲರ ಮಲಂಗಿಂ ॥
ದಲರ ದಳಿಂಬದಿನಿಂಬಾ ।
ದಲರ್ವಾಸಿನ ಮೇಲೆ ಲೀಲೆಯಿಂ ಕುಳ್ಳಿರ್ದಂ ॥ ೩೦ ॥

ವ ॥ ಅಂತವಿಶ್ರಾಂತ ವಿದ್ಯಾವಿನೋದಮಂದಿರ ಮಂದಾನಿಳಾಂದೋಳಿತ ಬಾಳ ಚೂತಲತಿಕಾನರ್ತನಕ್ಕನುಗತಮಾದ ಕೋಕಿಳಕಳನಾದಗೀತನಾದದಿಂ ಮಧುಕರನಿಕರ ಝುಂಕಾರ ಝೇಂಕಾರದಿಂ ಮನಂಗೊಳಿಸಿ ಸಂಗೀತಕಾಶ್ರಯಮೆನಿಪ ಲತಿಕಾಶ್ರಯದೊಳ್ ವಿಶ್ರಮಿಸಿರೆ ಸಮಗ್ರಸೌಭಾಗ್ಯದ ಮದದೊದವಿಂದೊರ್ವರೊರ್ವರ ಗಂಧಕ್ಕೆ ಬಾರದೆ ತಮ್ಮ ತನುಗಂಧಕ್ಕೆಱಗಿ ಮಱಿದುಂಬಿವಿಂಡು ಮುಂಡಳಿಸಿ ಮೊರೆಯುತ್ತಂ ಮುದದಿಂ ಡಿಮುಮನನುಕರಿಸೆ ಕಪ್ಪುರದೊಪ್ಪುವ ಜಗಲಿ ಧೂಳಿ ಸೆಜ್ಜರಮೆನಿಸೆ ಮನೋಭವನೆ ಬೆನ್ನ ತಕ್ಕಿನವನಾಗೆ ಶಿಶಿರೋಪಚಾರಮೆ ಮದೋಪಚಾರಮಾಗೆ ಚಾರುಕುಚಕುಂಭಿನಿಭೃತೆಯರ್—

ಕಂ ॥ ಷಣ್ಣವತಿಸಹಸ್ರಂ ಪಸು ।
ರ್ವರ್ಣದಲಸಗತಿಯುರನೆಪದಂತದ್ಯುತಿಯಿಂ ॥
ಸುರ್ಣ್ಣಿಸುತಂ ತರುಷಂಡದ ।
ತರ್ಣ್ಣಿಳಲೊಳ್ ಮದನಮತ್ತಗಜದವೊಲೆಸೆದರ್ ॥ ೩೧ ॥

ಮ ॥ ಅಂತಂತಃಪುರಪುರಂಧ್ರಿಯರೊಪ್ಪಮನಪ್ಪುಕೆಯ್ದಿರ್ಪುದುಮುಱಿದ ವಿಳಾಸವತಿಯರ್—

ಚಂ ॥ ತಿಳಕದೊಳಂಗನಾತಿಳಕೆಯರ್ಲತಿಕಾಭವನಂಗಳೊಳ್ ಲತಾ ।
ಲಲಿತೆಯರುಲ್ಲಸತ್ಕುಸುಮಪಾಟಳದೊಳ್ ನವಪಾಟಳಾಧರಾ ॥
ಕಳಿತೆಯರುದ್ಧಚಂದನದೊಳುಜ್ವಳ ಚಂದನಗಂಧಿಯರ್ ಕರಂ ।
ಕೆಳೆತನಮೊಪ್ಪೆ ನಿಂದು ಗಮನಶ್ರಮಮಂ ಕಳೆದರ್ ಲತಾಂಗಿಯರ್ ॥ ೩೨ ॥

ವ ॥ ಅಂತು ಕಾಂತೆಯರ್ ತಂತಮ್ಮ ಮನಕ್ಕಿಂಬಾದ ತಣ್ಪುಳಿಲ್ಗಳೊಳಂ ರತಿರಹಸ್ಯಗೃಹಂಗಳೆನಿಪ ಧಾರಾಗೃಹಂಗಳೊಳಮನಂಗಭವನಂಗಳೆನಿಪ ಲತಾಭವನಂಗಳೊಳಂ ಸುಕುಮಾರ ಮುಕುಳ ಪರಿಮಳಮುಗ್ಧ ಮಧುಕರ ಸಂರಾವಕುಳಮೆನಿಪ ವಕುಳ

ಚಂ॥ ಕಱಿಯೆ ಬಱಿಲ್ದ ತೋರಮುಡಿ ಜೋಲ್ದುಡೆ ಘರ್ಮಜಳಂಗಳಿಂದೆ ನಾಂ ।
ದಱಿದ ಲಲಾಮಕಂ ನಿಮಿರ್ವ ಸೂರ್ಯಮದೋರ್ಪ್ಪಿರೆ ವಾಹನಂಗಳಿಂ ॥
ದಿಱಿಯುತಮೊಕ್ಕ ಪರ್ಗೆ ವಿಪರೀತರತಕ್ಕೆಳಸಿರ್ದು ಮಂಚದಿಂ ।
ದಿಱಿವ ಬೆಡಂಗು ಸಂಗಳಿಸೆ ಕಣ್ಗೊಳಿಸಿತ್ತು ವಿಳಾಸಿನೀಜನಂ ॥ ೨೪ ॥

ಕಂ ॥ ಲಲನೆಯರ ಲಲಾಟದಿನು ।
ಚ್ಚಳಿಸುವ ಬೆಮರಿಂದೆ ನಾಂದು ಪತ್ತಿದ ಮೃದುಕುಂ ॥
ತಳಮೆಸೆದವು ಸಾದ್ರ್ರತೆ ಸಂ ।
ಚಳರುಮನಳವಡಿಸಿ ಪಿಡಿಗುಮೆಂದಱಿಪುವವೋಲ್ ॥ ೨೫ ॥

ವೃತ್ತಕುಚೆಯರ್ಗೆ ಬೆಮರಿಂ ।
ದೊತ್ತರಿಸಿತ್ತಂಗದಲ್ಲಿ ಕತ್ತುರಿಯೆ ಪದಂ ॥
ಬೆತ್ತಂತೆಲರೊಳ್ ನೀರ್ದಳಿ ।
ದತ್ತನೆ ದೊರೆವೆತ್ತು ಸುರಭಿಪರಿಮಳಮಾಗಳ್ ॥ ೨೬ ॥

ಕಳಿಕೆಯನರಲಂ ತಳಿರಂ ।
ತಳೆವುತ್ಕಳಿಕೆಯೊಳೆ ಮಱೆದು ಗಮನ ಶ್ರಮಮಂ ॥
ಗಳಗಳನೆ ನಡೆದರಬಲೆಯ ।
ರೆಳಸಂತೊಲ್ದೆಡೆಗೆ ಪಾದಪಂ ಪುಟ್ಟುಗುಮೇ ॥ ೨೭ ॥

ಪಿಡಿಗಳ್ ಮನೋಭವನ ಕ ।
ಯ್ಪಿಡಿಗಳ್ ವನಕೇಳಿಗೆಳಸಿ ಗಜರಾಜನ ಬೆಂ ॥
ಬಿಡಿದು ನಡೆತಪ್ಪ ತೆಱದಿಂ ।
ನಡೆದರ್ನೃಪನೊಡನೆ ಲಲಿತಗತಿಯರ್ ಸತಿಯರ್ ॥ ೨೮ ॥

ಗುರುಕುಚತದ ಪತ್ರಭಂಗಂ ।
ಪರೆದುದು ಬೆಮರಿಂದೆ ಪಲ್ಲವಗ್ರಾಹಿಣಿಯರ್ ॥
ತರುಣಿಯರಾಗದ ಮುನ್ನಂ ।
ಪರಿಹರಿಸುವುದೆಂದು ವಿಟರ್ಗೆ ಸೂಚಿಪ ತೆಱದಿಂ ॥ ೨೯ ॥

ವ ॥ ಅಂತು ಬಟ್ಟೆವಯಣದಾಯಾಸದಿಂ ಘಾಸಿಯಾಗಿಯುಂ ಕತ್ತುರಿಯಂ ಪೂಸಿ ಮಾಡಿದಂತೆ ಲೇಸೆನಿಸುವ ಪರಿಮಳಮಂ ಸೂಸುತ್ತುಂ ಬರ್ಪ ವಿಳಾಸಿನೀ ಜನಂಬೆರಸ ರಸಂ ಬೆಮರ್ತ ಮೆಯ್ಗೆ ತಂಗಾಳಿಯಂತೆ ತನ್ನ ಮೇಳದಿಂದಾ ಲತಾಲಲಿತಾಂಗಿಯರನ ಲರ್ಚಿ ನವಯುವತಿಯೌವನವನವಸಂತನೆಂಬುದನಿಂಬಾಗಱಿಪುತ್ತಂ ಬಂದು ವಿರಹಿಗಳಂ ಪುಗಲ್ಪುಗಲೆಂದು ಜಡಿವ ಪಡಿಯರವಕ್ಕಿಗಿರ್ಕೆಯಾಗಿ ತೋರಣಮಾಗಿ ಬಳೆದ ಬಾಳಸಹ ಕಾರ ಭೂರುಹಂಗಳ ದಾರವಟ್ಟದಿಂದಳವಟ್ಟ ಚೆಲ್ವಿಂಗಡಪ್ಪಾದ ಪಾದರಿಯೊಳ್ ಕೋದು ಬಳೆದ ಪೊಂಗೇದಗೆಯ ಬಲ್ಲಾಳ್ದಟ್ಟಿಯಿಂದೊಳಗೆ ದಿಟ್ಟಿಗಲಂಪಂ ಪುಟ್ಟಿಸುವ ಸಂಪಗೆಯ ಚಂಪೆಯದಿಂದುಳ್ಳಲರ್ದ ಬಳ್ಳಿಮಲ್ಲಿಗೆಯ ಮೊಗಸಾಲೆಯ ಲೀಲೆಯಂತೆಡೆಗೊಂಡು

ಮಡಲ್ತ ಮಾಮರದ ಮಂಡಪಿಗೆಯಂ ಮನೋರಾಜರಾಜಂಗೆ ವಸಂತರಾಜಂ ವಿರಚಿಸಿದ ವಿಜಯ ಶಿಬಿರದಂತೆ ಸಮುಲ್ಲಸಿತ ಪಲ್ಲವಲಕ್ಷ್ಮೀಗಾಗರಮಾದಶೋಕಭೂಜರಾಜಿಯಂ ರಾಜವಿದ್ಯಾಧರನಳಂಕರಿಸುವುದುಮಲ್ಲಿ—

ಕಂ ॥ ತಳಿರ ನೆಲಗಟ್ಟು ಪೊಸದಳಿ ।
ರ್ಗಳ ಕಂಬಂ ತಳಿರ ಭಿತ್ತಿ ತಳಿರ ಲೋವೆ ಕೆಂ ॥
ದಳಿರ್ಗಳ ಜಂತೆಗಳೊಪ್ಪಿರೆ ।
ತಳಿರಾವಳಿ ತಳಿರ ಸದನಮೆನೆ ಕಣ್ಗೊಳಿಕುಂ ॥ ೨೯ ॥

ವ ॥ ಅದಱೊಳಗೆ—

ಕಂ ॥ ಅಲರೆ ಮನಮುವನಿಪಾಳಕ ।
ನಲರ್ಗಳ ತಲೆಗಿಂಬಿನಿಂದಮಲರ ಮಲಂಗಿಂ ॥
ದಲರ ದಳಿಂಬದಿನಿಂಬಾ ।
ದಲರ್ವಾಸಿನ ಮೇಲೆ ಲೀಲೆಯಿಂ ಕುಳ್ಳಿರ್ದಂ ॥ ೩೦ ॥

ವ ॥ ಅಂತವಿಶ್ರಾಂತ ವಿದ್ಯಾವಿನೋದಮಂದಿರ ಮಂದಾನಿಳಾಂದೋಳಿತ ಬಾಳ ಚೂತಲತಿಕಾನರ್ತನಕ್ಕನುಗತಮಾದ ಕೋಕಿಳಕಳನಾದಗೀತನಾದದಿಂ ಮಧುಕರನಿಕರ ಝುಂಕಾರ ಝೇಂಕಾರದಿಂ ಮನಂಗೊಳಿಸಿ ಸಂಗೀತಕಾಶ್ರಯಮೆನಿಪ ಲತಿಕಾಶ್ರಯದೊಳ್ ವಿಶ್ರಮಿಸಿರೆ ಸಮಗ್ರಸೌಭಾಗ್ಯದ ಮದದೊದವಿಂದೊರ್ವರೊರ್ವರ ಗಂಧಕ್ಕೆ ಬಾರದೆ ತಮ್ಮ ತನುಗಂಧಕ್ಕೆಱಗಿ ಮಱಿದುಂಬಿವಿಂಡು ಮಂಡಳಿಸಿ ಮೊರೆಯುತ್ತಂ ಮುದದಿಂ ಡಿಮುಮನನುಕರಿಸೆ ಕಪ್ಪುರದೊಪ್ಪುವ ಜಗಲಿ ಧೂಳಿ ಸೆಜ್ಜರಮೆನಿಸೆ ಮನೋಭವನೆ ಬೆನ್ನ ತಕ್ಕಿನವನಾಗೆ ಶಿಶಿರೋಪಚಾರಮೆ ಮದೋಪಚಾರಮಾಗೆ ಚಾರುಕುಚಕುಂಭಿನಿಭೃತೆಯರ್—

ಕಂ ॥ ಷಣ್ಣವತಿಸಹಸ್ರಂ ಪಸು ।
ರ್ವಣ್ಣದಲಸಗತಿಯುರಸಿಪದಂತದ್ಯುತಿಯಿಂ ॥
ಸುಣ್ಣಿಸುತಂ ತರುಷಂಡದ ।
ತಣ್ಣೆಳಲೊಳ್ ಮದನಮತ್ತಗಜದವೊಲೆಸೆದರ್ ॥ ೩೧ ॥

ವ ॥ ಅಂತಂತಃಪುರಪುರಂಧ್ರಿಯರೊಪ್ಪಮನಪ್ಪುಕೆಯ್ದುವರ್ದುಮುಟಿದ ವಿಳಾಸವತಿಯರ್—

ಚಂ ॥ ತಿಳಕದೊಳಂಗನಾತಿಳಕೆಯರ್ಲತಿಕಾಭವನಂಗಳೊಳ್ ಲತಾ ।
ಲಲಿತೆಯರುಲ್ಲಸತ್ಕುಸುಮಪಾಟಳದೊಳ್ ನವಪಾಟಳಾಧರಾ ॥
ಕಳಿತೆಯರುದ್ಧಚಂದನದೊಳುಜ್ವಳ ಚಂದನಗಂಧಿಯರ್ ಕರಂ ।
ಕೆಳೆತನಮೊಪ್ಪೆ ನಿಂದು ಗಮನಶ್ರಮಮಂ ಕಳೆದರ್ ಲತಾಂಗಿಯರ್ ॥ ೩೨ ॥

ವ ॥ ಅಂತು ಕಾಂತೆಯರ್ ತಂತಮ್ಮ ಮನಕ್ಕಿಂಬಾದ ತಣ್ಬುಳಿಲ್ಗಳೊಳಂ ರತಿರಹಸ್ಯಗೃಹಂಗಳೆನಿಪ ಧಾರಾಗೃಹಂಗಳೊಳಮನಂಗಭವನಂಗಳೆನಿಪ ಲತಾಭವನಂಗಳೊಳಂ ಸುಕುಮಾರ ಮುಕುಳ ಪರಿಮಳಮಗ್ನ ಮಧುಕರ ಸಂರಾವಕುಳಮೆನಿಪ ವಕುಳ

ದೊಳಂ ಸುರತರಪಾರಾಪತಮಾಳಮೆನಿಪ ತಮಾಳವನದೊಳಂ ಮನಮೆಳಸಿ ನಿಲ್ವುದು ಮಲ್ಲಿ—

ಕಂ ॥ ಕುಸುಮದ ಪರಿಮಳದಿಂದಲ ।
ರ್ವಾಸಲರ್ದಂಬುರುಹ ಬಹಳ ಸೌರಭದಿಂ ನೀ ॥
ರ್ವಾಸು ಪೊರೆದಿರ್ದು ಕಂಪಿನ ।
ರಾತಿಯೆ ಪರಕಲಿಸಿದಂತೆ ಕರಮೆಸೆದಿರ್ಕುಂ ॥ ೩೩ ॥

ವ ॥ ಅಂತು ರಯ್ಯಮಪ್ಪ ಶಯ್ಯೆಗಳೊಳೊಯ್ಯನೆ ಮೆಯ್ವಳಿಯನೆ ಮೆಯ್ನವಿರಂ ಕೊನರಿಸುತ್ತಂ ಸೋಂಕುವಿನಿಯನಂತೆ ಸೋಂಕುವ ತೆಂಕಣೆಲರ್ಗೆ ಲಲನೆಯರ್ ಮೆಯ್ಯಂ ಸಾರ್ಚಿ ಕುಳ್ಳಿರೆ ಪರಿಚಾರಕಿಯರ್ ಪದಪಲ್ಲವಕ್ಕೆ ಮೆಲ್ಲಿದುವಪ್ಪ ಪಲ್ಲವಮಂ ಮೆಲ್ಲನಿಚ್ಚೈಯುಱಿದು ಸಾರ್ಚೆ—

ಕಂ ॥ ಬಾಲೆಯರಸುಕೆಯ ತಳಿಗರ್ಳ ।
ಮೇಲಿಡೆ ಕಾಲಂ ವಿಳಾಸದಿಂ ಮೇಲೆಂತುಂ ॥
ಮೇಲೆನಿಪುದುಚಿತಮಾಯ್ತೆನೆ ।
ಮೇಲೆನಿಸಿದುದೆಸೆವ ಕೆಂಪಿನಿಂ ಮೆಲ್ಪಿಂದಂ ॥ ೩೪ ॥

ವ ॥ ಅಂತು ವಿಳಾಸಕ್ಕಾವಾಸಮಾಗಿರ್ದು—

ಕಂ ॥ ಕೇಳಿಯ ತನಿವಣ್ಣಂ ಸ್ಮರ ।
ಕೇಳಿಯನೀವಿಕ್ಷು ರಸಮನಾಸ್ವಾದಿಸಿ ಮೆ ॥
ಲ್ಲಾಳಿಗೆ ಮೆಯ್ಯಂ ತಮತಮ ।
ಗಾಳಿಗೆ ಕಪ್ಪುರಮನಿತ್ತರೊಸೆದಂಗನೆಯರ್ ॥ ೩೫ ॥

ಉಳ್ಳಲರ್ದ ಬಳ್ಳಿಮಲ್ಲಿಗೆ ।
ಯೊಳ್ಳಲರಂ ಮುಡಿದು ಮುದದಿನೆಳೆ ಅಡಕೆಯನಿಂ ॥
ಪುಳ್ಳವನೊಪ್ಪುವ ಕಪ್ಪುರ ।
ವಳ್ಳಿಯ ಬಿಳಿಯೆಲೆಯನೊಲ್ದು ಮೆಲ್ದರ್ ಸತಿಯರ್ ॥ ೩೬ ॥

ರಾಗಾನ್ವಿತೆಯರ್ ಪಾಡಿದ ।
ರಾಗಳ್ ರಮಣರ್ಗೆ ಚುಂಬನಾಲಿಂಗನಸಂ ॥
ಭೋಗಂಗಳಂತಿರೊದವಿಸೆ ।
ರಾಗಮನುದ್ಗ್ರಾಹಮೇಳದಾಭೋಗಂಗಳ್ ॥ ೩೭ ॥

ವ ॥ ಅಂತು ಚಾಪಳವಿಳೋಚನೆಯರಭಿರೂಪರೂಪಕಳಾಕಳಾಪಮುದ್ದೀಪನ ಭಾವಮಂ ಪಡೆಯೆ—

ಕಂ ॥ ತಳಿದು ಮಳಯರುಹಜಳಮಂ ।
ತಳಿರ್ವಾಸಿನೊಳಿರಿಸಿ ಬೀಸಿ ತಳಿಗರ್ಳಿನಿನಿಯು ॥
ರ್ಕಳೆದಧ್ವಶ್ರಮಮನದೇಂ ।
ಬಳಯಿಸಿದರೊ ತರುಣಿಯರ್ಗೆ ಸುರತಶ್ರಮಮಂ ॥ ೩೮ ॥

ಮ ॥ ತಳಿರ್ಗಳ್ತಳ್ತತಳಂ ಲಸತ್ಕುಸುಮಪುಂಜಂ ಪ್ರಚ್ಛದಂ ಸೌರಭ ।
ಕ್ಕೆಳಸುತ್ತಿರ್ಪಳಿಸಂಕುಳಂ ಶಕುನಿ ನೀರ್ವೇರಿರ್ದ ಚೆಂದೆಂಗು ತ ॥
ಣ್ಗಳಸಂ ತಣ್ಪಿನಗಾಳಿ ಬಿಜ್ಜಣಿಗೆಯೆಂಬಂತೊಪ್ಪೆ ಸಂಭೋಗಲಂ ।
ಪಳರಾದಂಪತಿಗಳ್ ಲತಾಭವನದೊಳ್ ಸಂಭೋಗಮಂ ಮಾಡಿದರ್ ॥ ೪೯ ॥

ಪುಳಕಾನೀಕಲತಾಂತಮುಣ್ಮೆ ತನುವಲ್ಲೀ ಶ್ರೀಯೊಳತ್ಯಂತ ಕೋ ।
ಮಳಕಾಂತಾಧರನೂತ್ನ ಚೂತಕಳಿಕಾಸ್ವಾದಪ್ರಮೋದೋತ್ಥಿತಂ ॥
ಕಳಕಂಠಧ್ವನಿ ಪೊಣ್ಮೆ ಚಂದನ ಸುಗಂಧೋಚ್ಛ್ವಾಸದಿಂ ದಕ್ಷಿಣಾ ।
ನಿಳನಂತಂತೆಸಗುತ್ತಮೊಪ್ಪೆ ರತಿಯೇಂ ಚೈತ್ರಂಬೊಲಿಂಬಾದುದೋ ॥ ೫೦ ॥

ವ ॥ ಅಂತು ನಿಜಪ್ರಿಯರ ಬಯಕೆಯುಂ ತೀರ್ಚಿ ತರುಚಯದ ಬಯಕೆಯುಂ ತೀರ್ಚಲೆಂದು—

ಕಂ ॥ ನಲ್ಲಳೊಸೆದೊದೆಯೆ ರಾಗಂ ।
ಪಲ್ಲವಿಸುವ ನಲ್ಲನಂತೆ ಪಲ್ಲವಿಸಿತು ಕಂ ॥
ಕೆಲ್ಲಿ ನವಯುವತಿ ಮೃದುಪದ ।
ಪಲ್ಲವದಿಂದೊದೆಯೆ ಕೆಲ್ವು ಪಲ್ಲವಿಸುವಿನಂ ॥ ೫೧ ॥

ಎತ್ತಾನುಮೊರ್ವ ತಾನೊದೆ ।
ಪೆತ್ತುಂ ಕಂಕೆಲ್ಲಿ ರಾಗಪಲ್ಲವಮಂ ತಾ ॥
ಳ್ದಿತ್ತೆನೆ ಸಲೆ ಸತಿಯರಿನೊದೆ ।
ಪೆತ್ತಿನಿಯರ್ತಳೆವುದೆಂಬುದೇಂ ವಿಸ್ಮಯಮೋ ॥ ೫೨ ॥

ವ ॥ ಮತ್ತೊರ್ವಳುತ್ತುಂಗ ಪೀನಪಯೋಧರೆ ಮನಃಪ್ರಿಯನಂ ಸೋಂಕಿ ಪುಳಕಾಂಕುರಮಂ ಕೊನರಿಸುವುದಂ ತೋರ್ಪಂತೆ ಬಿಗಿದಪ್ಪಿ ಕುರವಕಮನಂಕುರಿತಂ ಮಾಡೆ ಪ್ರೌಢೆಯೊರ್ವಳಿಂತೆಂದಳ್—

ಕಂ ॥ ಕುರವಕತರುಗಂಕುರಮಂ ।
ಪರಿರಂಭಾರಂಭದಿಂದಮೊದವಿಸಿ ನಿರುತಂ ॥
ನಿರುಪಮಲಾವಣ್ಯಪಯೋ ।
ಧರತ್ವಮಂ ತಳೆದವಮಳಕುಚಕುಂಭಂಗಳ್ ॥ ೫೩ ॥

ಅವಳೋಕನದಿಂ ತಿಳಕದೊ ।
ಳವಿರಳ ಕಳಿಕೆಗಳನಿತ್ತಳುತ್ಕಳಿಕೆಗಳಂ ॥
ನವಯುವರೊಳ್ ಪಡೆವುದನವ ।
ಯವದಿಂ ತೋರ್ಪಂತೆ ಲೋಲಲೋಚನೆಯೊರ್ವಳ್ ॥ ೫೪ ॥

ವ ॥ ಮತ್ತೊರ್ವಳಾಸವಾಸೇಕದಿಂ ಸುರಭಿನಿಶ್ವಾಸೆ ವಕುಳಮಂ ಮುಕುಳದಿನಳಂಕರಿಸಿ—

ಕಂ ॥ ಸೂಸುವ ಸುದತಿಯ ಮುಖಕಮ ।
ಳಾಸವದಿಂದಲರ್ದ ವಕುಳಮಳಿಯಂ ಸ್ಮಿತವು ॥
ಹ್ವಾಸವದಿಂ ಸೊರ್ಕಿಸುವ ವಿ ।
ಳಾಸಮುಚಿತಮೆಂದು ಚತುರಭಾಷಿಣಿ ನುಡಿದಳ್ ॥ ೪೫ ॥

ಅಂಗನೆಯರ ಸೊಗಯಿಪ ಕೆ ।
ಯ್ತಂಗಳೊಳೊಂದೊಂದೆ ತರುಚಯಕ್ಕಮಲಂಪಂ ॥
ಸಂಗಳಿಕುಮೆಂದೊಡನಿತ ।
ರ್ಕ್ಕಂ ಗುಱಿಯೆನಿಸಿದರ ಸುಖಮನಾನೇವೊಗೞ್ವೆಂ ॥ ೪೬ ॥

ವ ॥ ಅಂತಾ ಕಾಂತೆಯರ್ ತರುಸಂದೋಹದ ದೋಹದಮಂ ತೀರ್ಚಯಲ್ಲಿ ಯೊರ್ವಳ್ ಮಲ್ಲಿಗೆಯ ಮುಗುಳ ಹಾರಕ್ಕೊಯ್ಯಾರಮಪ್ಪ ಪಚ್ಚೆಸಾರಮಂ ಸಮೆಯ ಲೆಂದು ಮಿಡಿದೊಡೊಡೆದಪುದೆನಿಪೆಳಂಜವ್ವನದ ಮಡದಿ ಮಾಮಿಡಿಯಂ ಮಾಮರದ ಮೆಲ್ಗೊಂಬಿಂಗಿಂಬಾಗಿ ನಿಳ್ಕಿ ತಿರಿಯೆ ನುಡಿಜಾಣೆಯೆನಿಪ ಕೆಳದಿಯಾಕೆಗಿಂತೆಂದಳ್—

ಕಂ ॥ ನಿಡಿದಡರೆ ಮಿಗೆ ಬಳೆದ ಮೊಲೆ ।
ಗೊಡನಂ ಪೊರವಾರುಮೆಲಗೆ ಮಾಮಿಡಿಯಂ ಚೆ ॥
ಲ್ವಡರಿಸಿರೆ ನಿಳ್ಕಿ ನೀಂ ತಿರಿ ।
ವೆಡೆಯೊಳ್ ತೆರವಾದುದಲ್ತೆ ಲಲಿತಲತಾಂಗೀ ॥ ೪೭ ॥

ವ ॥ ಮತ್ತೊರ್ವಳ್ ಸಹಜಸೌಂದರ್ಯಸಂಪನ್ನೆ ತನ್ನಂತೆ ಕಂತುವಿಜಯ ಸಹಕಾರಿಯಾದ ಸಹಕಾರಮಂ ನೋಡಿ—

ಕಂ ॥ ಬರಲೊಡನೆ ಮಲ್ಲಿಕಾವ ।
ಲ್ಲರಿ ತಳ್ತಮರ್ದಪ್ಪೆ ಘರ್ಮಜಳಮುಂ ಪುಳಕಾಂ ॥
ಕುರಮುಮೊಗೆದಂತೆ ಸೊನೆಬಿಡು ।
ತಿರೆ ಕಳಿಕೆಗಳೊದವೆ ಬಾಳಚೂತಮಿದೆಸೆಗುಂ ॥ ೪೮ ॥

ಚಂ ॥ ಸೊನೆತನಗಿಂಬುವೆತ್ತ ಮದಧಾರೆ ಕವಲ್ತೆಳೆಗೊಂಬು ಕೊಂಬು ಮೆ ।
ಲ್ಲನೆ ತೊನೆದಾಡುತಿರ್ಪ ಸೆಳೆಗೊಂಬು ಕರಂ ತಳಿರಗ್ರಪಲ್ಲವಂ ॥
ಧ್ವನಿ ಮಧುಪಸ್ವನಂ ಕುಸುಮಮಂಜರಿ ರಂಜಿಸುತಿರ್ಪ ಕುಂಭಮೆಂ ।
ಬಿನಮಿದೆ ಬಂದು ಕೊಂದಪುದು ಕಾಮಿಗಳಂ ಸಹಕಾರ ಕುಂಜರಂ ॥ ೪೯ ॥

ವ ॥ ಅಂತುಮಲ್ಲದೆ—

ಚಂ ॥ ತುರುಗಿದ ಕೆಂದಳಿರ್ತಟದ ಶೋಣಮಣಿಪ್ರಭೆ ಪುಷ್ಪಸಂಚಯ ।
ಕ್ಕೆಱಗಿದ ಚಂಚರೀಕತತಿ ಮೇಘಚಯಂ ಸೊನೆ ನಿರ್ಝರಾಂಬು ಕಾಯ್ ॥
ಮಿರುಗುವ ಪಚ್ಚೆಗಲ್ಲೆನೆ ಮನೋಜಮಹೀಶನ ಕೇಳಿಶೈಳಮಂ ।
ನೆರೆ ನಗುತಿರ್ಪುದೊಪ್ಪಿ ಸಹಕಾರಕುಜಂ ಜನತಾಮನೋಹರಂ ॥ ೫೦ ॥

ಮ ॥ ಕಳಕಂಠಂ ಕಳಿಕಾರಸಕ್ಕಳಿಕುಳಂ ಪುಷ್ಪಕ್ಕೆ ಕೀರಂ ಫಳಾ ।
ವಳಿಗೆನ್ನಂ ಬಳಸಿರ್ಪುವಾನವನವಕ್ಕಾನಂದದಿಂದೀವೆನೆಂ ॥
ದೆಳಮಾವೊಂದೆಳಗೊಂಬಿನೊಳ್ ಕಳಿಕೆಯಂ ಮತ್ತೊಂದರೊಳ್ ಪೂಗಳಂ ।
ಫಳಮಂ ಮಿಕ್ಕಿನ ಕೊಂಬಿನೊಳ್ ತಳೆದುದೆಂದಾನಂದದಿಂ
ನೋಡಿದಳ್ ॥ ೫೧ ॥

ಚಂ ॥ ಚಿಗುರ್ಗಳನೊರ್ಮೆ ಕರ್ಚಿ ತಳಿರ್ದೊಂಗಲನೊರ್ಮೆ ಕರ್ದುಂಕಿ
ಕೋಕಿಳಂ ।
ಮುಗುಳನದೊರ್ಮೆ ಜಕ್ಕುಲಿಸಿ ಪೂಗಳನೊರ್ಮೆದಲೀಂಟಿ ಷಟ್ಪದಂ ॥
ಬಗೆಗೊಳೆ ಬಂದಮಾವುಗಳ ಕಾಯ್ಗಳನೊರ್ಮೆ ತುಡುಂಕಿ ತುಂಡದಿಂ ।
ಸೊಗಯಿಪ ಪಣ್ಣನೊರ್ಮೆ ಸವಿದೇಂ ಸೊಗಮಂ ಶುಕನೊಲ್ದು
ತಾಳ್ದಿತೋ ॥ ೫೨ ॥

ಕಂ ॥ ನನೆವೊಱೆಯಿಂ ಬಳ್ಕಿದ ಮಾ ।
ವಿನ ಕೊಂಬಿನೊಳಳಿಯ ಮಾಲೆ ಮೊರೆಯುತ್ತಂ ಪೂ ॥
ವಿನ ಬಿಲ್ಲನತನು ಜೇವೊಡೆ ।
ದನುಗೆಯ್ದೇಱಿಸುವ ಚೆಲ್ವನೇಂ ಬೀಱಿದುದೋ ॥ ೫೩ ॥

ಸುಚ್ಛಾಯಮಲರಗೊಂಚಲ ।
ಗುಚ್ಛಂ ಮೇಗಣ್ಗೆ ನೆಗೆಯೆ ಕೊಂಬಿನೊಳಿರ್ದಾ ॥
ಹೃಚ್ಛಯನಂ ಕೂರ್ತಿತ್ತಸಿ ।
ತಚ್ಛತ್ರಮಿದೆನಿಸಿ ಚೂತರಾಜಂಗೆಸೆಗುಂ ॥ ೫೪ ॥

ಒಂದೊಂದಱಿಂದೆ ಚೆಲ್ವಂ ।
ಸಂದಿಸುವುವು ಸಕಳತರುಗಳುಂ ಕಳಿಕೆ ಚಿಗು ॥
ರ್ಗೊಂದಳಿರಲರ್ ಮಿಡಿ ಕಾಯ್ ಪ ।
ಣ್ಗೊಂದಿವಱಿಂದೆ ಚೆಲ್ವುವೆತ್ತುದೀ ಚೂತಕುಜಂ ॥ ೫೫ ॥

ವ ॥ ಎಂದು ತನ್ನ ಮನೋನಯನವಲ್ಲಭನಂತೆ ಸರ್ವಾಂಗಸೌಂದರ್ಯಮ ನಂಗೀಕರಿಸಿದ ಚೂತಕುಜಾತಮನತಿಪ್ರೀತಿಯಿಂ ಗುಣಪ್ರಿಯೆ ಪೊಗಟ್ದಳ್. ಮತ್ತೊ ರ್ವಳಪೂರ್ವವಿಭ್ರಮಸಮನ್ವಿತೆ ಭ್ರಮರಸಮುದಯಮಂ ಸಮುಲ್ಲಸಿತ ಹಸಿತದಿಂ ತಮ್ಮಲ್ಲಿಗೆ ತೆಗೆವ ಮಲ್ಲಿಗೆಯಲ್ಲಿಗೆ ಪಂದು—

ಕಂ ॥ ನನೆಯೊತ್ತೆ ಮಿಸುಪ ಮಲ್ಲಿಗೆ ।
ನನೆಯೊತ್ತುವುದತನುಪತಿಯ ಲಾವಣ್ಯರಸಾ ॥
ಭಿನವನದಿ ಸುರಭಿಗಂಧದಿ ।
ನೆನಸುಂ ತೀವಿದೊಡೆ ತೀವುವುದು ತೊದಳುಂಟೇ ॥ ೫೬ ॥

ಕಂ ॥ ವರನೆನಿಸಿದ ಸಹಕಾರದ ।
ಬರವಂ ಪೇೞ್ವಂತೆ ಕೆಲೆಯೆ ಕೋಗಿಲೆ ಕೇಳ್ದು ॥
ಬ್ಬರಿಸಿದ ಹರ್ಷದೆ ಬಿರಿವಂ ।
ತಿರೆ ಬಿರಿದುವು ಸುರಭಿವಾಸದೊಳ್ ಮಲ್ಲಿಗೆಗಳ್ ॥ ೫೭ ॥
ನನೆಯಿಂದಂ ತುಱುಗಿರೆ ತ ।
ನ್ನನೆಯಿಂದಿರ್ಮ್ಮಾವು ಕೂರ್ಮೆಯಿಂದಪ್ಪಿದುದೆಂ ॥
ದನುರಾಗದಿಂದೆ ಮಲ್ಲಿಗೆ ।
ಘನಪುಳಕಮನಾಂತುದೆನಿಸಿ ಮುಗುಳ್ಗಳಿನೆಸೆಗುಂ ॥ ೫೮ ॥
ಅಲರಲರ್ದಪ್ಪದೆ ಪದಪಿಂ ।
ನೆಲಸಿರೆ ಮಱಿದುಂಬಿ ತುಂಬಿಗಱಿಗಟ್ಟಿದ ಕೂ ॥
ರಲರ್ಗಣೆಯು ದೊಣೆಯಿದೆನೆ ವಿಚ ।
ಕಿಲ ವಿಕಸಿತಲತೆಯದೇಂ ಮನಂಗೊಳಿಸಿದುದೋ ॥ ೫೯ ॥
ತನಿಗಂಪನುಗುೞ್ವ ಪಗಲೊಳ ।
ಮನುನಯದಿಂದೊಪ್ಪುತಿರ್ಪ ತಾರಗೆಯೋ ಪಾ ॥
ಸನೆವೆತ್ತ ಮುತ್ತೊ ಪೇೞೆನೆ ।
ನನೆಗಳ್ ಮಿಗೆ ತುಱುಗಿದವು ಮಲ್ಲಿಗೆಯೊಳ್ ॥ ೬೦ ॥

ವ ॥ ಎಂದೊರ್ವಳ್ ಮಲ್ಲಿಕಾಕುಸುಮಕೋಮಳೆ ಮಲ್ಲಿಗೆಯನೆ ಕೊಂಡು ಕೊನೆಯುತ್ತಮಿರೆ, ಮತ್ತೊರ್ವಳ್ ಚಂಪಕಚಾರುವರ್ಣಸೌರಭಾಕರ್ಣೆ ಚಂಪಕ ಪಾದಪಮಂ ಪೊರ್ದಿ—

ಚಂ ॥ ಇದು ಕುಸುಮಾಸ್ತ್ರನೋಲಗದ ಶಾಲೆಯೊಳೊಪ್ಪುವ ಕಲ್ಪವೃಕ್ಷಮ ।
ಲ್ಲಿದು ಮದನಂಗೆ ಚೈತ್ರನೊಸೆದೆತ್ತುವ ಮಂಗಳದೀಪಜಾಳಮ ॥
ಲ್ಲಿದು ರತಿದೇವಿಗೆಂದು ಮಧುಮಾಡಿದ ರನ್ನದ ಚೆನ್ನಮಾಡಮ ।
ಲ್ಲಿದು ನವರಾಗಮಂ ಕಱಿವ ಮೇಘಮದಲ್ಲಿದು ಪೂತ ಚಂಪಕಂ ॥ ೬೧ ॥

ಕಂ ॥ ಬಿಡೆ ಮಧುವನೆ ಕುಡಿವಾಱಿಡಿ ।
ಯೊಡನಿರ್ಪತಿ ಮಳಿನವರ್ಣಮೆಂದಳಿಸಂಗ ॥
ಕ್ಕೆಡೆಗುಡದು ಸುವರ್ಣತೆಯುಂ ।
ಪಡೆದುದಱಿಂದುಂತೆ ಚಂಪಕಕ್ಕೆಱಗದುದೇ ॥ ೬೨ ॥

ವ ॥ ಎಂದು ತುಂಬಿಗಳೊಳ್ ಸಂಪಗೆಪಗೆಗೊಂಡುದಕ್ಕೆ ನಿಮಿತ್ತಮನುತ್ಪ್ರೇಕ್ಷಿಸುತ್ತಮಿರೆ ಮತ್ತೋರ್ವಳತಿ ಚದುರ ದೂತಿಕಾಪ್ರೇಷಣ ಪ್ರವೀಣೆ ವಸಂತದೂತಿಯೆನಿಸಿದ ವಾಸಂತೀಕಾಂತೆಯಂತಿಕಕ್ಕೆ ವಂದು—

ಉ ॥ ತಾನಿದು ಮುನ್ನಮುಲ್ಲಸಿತ ಪಲ್ಲವದಿಂ ಗುಡಿಗಟ್ಟಿ ತೊಟ್ಟು ಭೂ ।
ಷಾನಿಚಯಂಗಳಂತಲರನೀಮಧು ಬಂದಪನೆಂದು ಮಂದಮಂ ॥
ದಾನಿಳಮೆಯ್ದೆ ವಂದುದೆನೆ ನೀಮುಮಳಂಕೃತೆಯರ್ಕಳಾಗಿಮೆಂ ।
ದೀನವವಲ್ಲಕೀವನಿತೆಯುರ್ಗುಸಿರ್ವಂತಳಿರಾವಮೊಪ್ಪುಗುಂ ॥ ೬೩ ॥

ಉ ॥ ಇಂತು ವಸಂತದೂತಿವೆಸರೀ ಲತೆಗಾದುದದೊಂದೆ ಕಾಮಸೀ ।
ಮಂತಿನಿ ಗೌಳಿಗಾಳಿಯಗುಣಕ್ಕೆಡೆ ತುಂಬಿಯು ಪಾಡುತಿರ್ಪ ನಿ ॥
ಶ್ಚಿಂತಗೃಹಂ ಲತಾವಳಿಗಳಳಂಕರಿಸಲ್ಕಳಿಯುಂ ಸುಗಂಧಮಿ ।
ತ್ತಂತಿರೆ ಪೋಷಿಸಲ್ಕಲಿಪನಾಯುಕಿ ಕಾಮುನಿಕಾಮಸಂಪದಂ ॥ ೬೪ ॥

ಕಂ ॥ ಕಾಂತಾತಿಚತುರಮೆನಿಪ ವ ।
ಸಂತಂ ಬರೆ ಹರ್ಷಪುಳಕಮೆನಿಪಲರಂ ವಾ ॥
ಸಂತಿ ತಳೆದಿರ್ದುದುಂತುಂ ।
ಕಾಂತರ ಬರವಾರ್ಗೆ ಹರ್ಷಮಂ ಪುಟ್ಟಿಸದೋ ॥ ೬೫ ॥

ವ ॥ ಎಂದು ತನ್ನ ಬಗೆಯ ಬಯಕೆಯನಾವಾಸಂತಿಯು ಮೇಲೆ ಲತಾಂಗಿಯಿಕ್ಕಿ ಜಲಕ್ಕನಱಿಪಿದಳ್. ಮತ್ತೊರ್ವಳ್ ಬಂದುಗೆಯುಂದಮಂ ತಳೆದ ಬಾಯ್ಪೊಱೆಯ ಬಿನ್ನಾಣಗಿತ್ತಿ ಬಂದುಗೆಯ ಕೆಲದೊಳ್ ನಿಂದು—

ಕಂ ॥ ರಾಗಂ ರತಿಸತಿಯಧರದ ।
ರಾಗಮನನುಕರಿಸಿ ಕಂತುಕಾಂತಂಗೆ ಮನೋ ॥
ರಾಗಮನೊದವಿಸೆ ನನೆಯಿಂ ।
ಬಾಗಿರ್ದುದು ಚಂಚರೀಕವೃತಬಂಧೂಕಂ ॥ ೬೬ ॥

ಪೋಗದೆ ಬಿರಯಿಗಳಿರ್ದೆಯುಂ ।
ಪೂಗಣೆಯವನೆಚ್ಚೊಡುರ್ಚಿ ನೆತ್ತರ್ಪೊರ್ರೆದಿಂ ॥
ತೀಗಳೆ ಬಂದಂತಿರೆ ಕೆಂ ।
ಪಾಗಿರ್ದುದು ಗಂಧಬಂಧುರಂ ಬಂಧೂಕಂ ॥ ೬೭ ॥

ಬಂದುಗೆಯ ಕುಸುಮ ರಸಮಂ ।
ಬಂದುರೆ ಮಿಗೆ ಪೀರ್ವ ಷಟ್ಪದಂ ನೆನೆಯಿಸಿತೆ ॥
ಯ್ತಂದು ನಯದಿಂದೆ ಪತಿಸಾ ।
ರ್ತಂದರುಣಾಧರಮನೀಂಟುವುದನಂಗನೆಯಾ ॥ ೬೮ ॥

ವ ॥ ಎಂದು ಚಿತ್ರವಲ್ಲಭನ ಚುಂಬನದಿಂಬನಿಂಬಾಗಿ ನುಡಿಯುದಂತು ನುಡಿದಳ್. ಮತ್ತೊರ್ವಳಭಿಜಾತಕೇತಕೀದಳಧವಳಾಪಾಂಗೆ ಕೇತಕೀದಳಂಗಳನಪಾಂಗದ ನೀಳ್ಪಿನೊಳ್ಪಡಿಯಿಡುವಂತದರಿದೊಡೆ—

ಕಂ ॥ ಬೆಳ್ಪಿಂಗಳನಂಗಭವಂ ।
ನೀಳ್ದಿರೆ ಪೊರೆಯೆತ್ತಿ ರತಿಯ ಮುಖಗಂಧಮನಂ ॥
ತಾಳ್ದಿರೆ ತೊಯ್ದುವೊಲೊಳ್ಪಂ ।
ತಾಳ್ದಿದುವೆನೆ ಸುರಭಿ ಕೇತಕೀಕುಸುಮಂಗಳ್ ॥ ೬೯ ॥

ವ ॥ ಎಂದದಱ ಮೆಯ್ಸಿರಿಗನುಸಾರಿಯಾಗಿರಿಸಿ ನಿರವಿಸಿದಳ್. ಮತ್ತೊರ್ವಳು ದ್ದಾಮಮಾಳತೀಧಾಮಕೋಮಳೆ ವಿರಹಾಕುಳೆಯುಲರ್ದಲತೆಗಳಂ ಪೊರ್ದಲಣ್ಮದೆ ತನ್ನಂತೆ ಬಂಬಣಂ ಬಾಡಿರ್ದ ಜಾದಿಯುಂ ನೋಡಿಯುದಱ ನೆವದಿಂ ವಸಂತಮನಿಂ ತೆಂದಳ್—

ಕಂ ॥ ನೀತಿಯನೊಕ್ಕು ವಿಜಾತಿಯ ।
ಮಾತನೆ ಮನ್ನಿಪ ವಸಂತನೃಪನಿಂ ಕಿಡುಗುಂ ॥
ಜಾತಿಯಸಿರಿಯುಱಿದಿದ್ದು ಕು ।
ಜಾತಕುಲದ ಲಕ್ಷ್ಮಿ ಬಳೆವುದೇಂ ವಿಸ್ಮಯಮೇ ॥ ೭೦ ॥

ವ ॥ ಎಂದು ತೆಱವಱಿದು ವಸಂತನಂ ತೆಗಳ್ದು ಮಗುಟ್ದಳ್ಕಿಯದಂ ಮಱೆಯಿಸ ಲೆಂದಿಂತೆಂದಳ್—

ಉ ॥ ಪಾದರಿ ಪಂಕಜಂ ಸುರಯಿ ಸಂಪಗೆ ಮಲ್ಲಿಗೆ ಪೊಲ್ಲೆ ಕೈರವಂ ।
ಕೇದಗೆಯಾದಿಯಾದ ಕುಸುಮಾವಳಿ ನೀನಲರ್ದಿರ್ದೊಡೆಮ್ಮನಾ ॥
ರಾದರಿಪನ್ನರೀಸಮಯಮಂ ಕುಡು ನೀನೆಮಗೆಂದೊಡೆಂದುದಂ ।
ಜಾದಿ ವಸಂತದೊಳ್ ಸಲಿಸಿ ಮಾಣ್ಬುದು ತನ್ನ ವಿಕಾಸಲಕ್ಷ್ಮಿಯಂ ॥ ೭೧ ॥

ವ ॥ ಎಂದುತ್ಪ್ರೇಕ್ಷಿಸುತ್ತಮಿರೆ ಮತ್ತೊರ್ವಳತ್ಯಭಿನವ ಸುರಭಿನಿಶ್ವಾಸೆ—

ಕಂ ॥ ಪರಿಮಳದಿಂದಮೆ ದಳಮಂ ।
ವಿರಚಿಸಿದಂ ಸುರಯಿಗಬ್ಜಭವನಲ್ಲದೊಡೋ ॥
ಸರಿಸದ ಕಂಪಿನ ಪೊಂಪುಳಿ ।
ಮರುಳ್ಚಿ ಮಧುಕರಮನೆಂತು ಸೆಱೆವಿಡಿದಪುದೋ ॥ ೭೨ ॥

ಕುಸುಮಾಪಚಯಕ್ಕೆಳಸಿದ ।
ಬಿಸಜಾನನೆಯೆಸೆದಳಂಗಜಂಗಲರಂಬಂ ॥
ಪೊಸನನೆಯನಾಯ್ದು ರತಿರಚಿ ।
ಯಿಸುತಿರ್ದಪಳೆಂಬ ಶಂಕೆಯಂ ಕೊನರಿಸುತಂ ॥ ೭೩ ॥

ಬಂದುಗೆಯ ನನೆಗಳೊಳ್ತರ ।
ದಿಂದಂ ಮಲ್ಲಿಗೆಯ ನನೆಗಳಂ ಕೊಯ್ದೊರ್ವಳ್ ॥
ಬಂದಂಬಡದಿರೆ ಚಳಕಿಗೆ ।
ಯಂ ದರಹಸಿತಾಸ್ಯೆ ಮಾಡಿ ತೊಟ್ಟಳ್ ಮುದದಿಂ ॥ ೭೪ ॥

ಎಳವೆಱೆಯುವೊಲಿರೆ ಕೇದಗೆ ।
ಗಳ ಗಱೆಯಿಂ ಸಮೆದ ಚಿನ್ನಪೂಗಳ್ ತಾರಾ ॥
ವಳಿವೊಲಿರೆ ತುಱುಬು ಮಿಱುಗಿದ ।
ಳೆಳವೆಂಡಿರ್ ಮುಗಿಲನಿಱಿಸಿ ಸೊಗಯಿಸೆ ಮುಡಿಗಳ್ ॥ ೭೫ ॥

ಚಂ॥ ಸುರಯಿಯ ಚಿನ್ನಪೂವು ಸುರಹೊನ್ನೆಯ ಕನ್ನವುರಂ ಪೊದಟ್ದ ಕೇ।
ಸರದಲರ್ವೊಟ್ಟು ಮೊಲ್ಲೆಯ ಬೞಿಲ್ಮುಡಿ ಬಣ್ಣದ ಬಣ್ಣದೈಸರಂ॥
ಸುರುಚಿರಮಪ್ಪ ಸಂಪಗೆಯ ಕಂಕಣಮಂಬುಜನಾಳದುಂಗುರಂ।
ತರುಣಿಯರ್ಗಚ್ಚ ಮಲ್ಲಿಗೆಯರಲ್ಗಳ ಹಾರಮದೊಪ್ಪಿತಾಗಳುಂ ॥ ೭೬ ॥

ಕಂ॥ ಕರಕಂಜಂ ತಿಶಿರದವೋಲ್।
ವಿರಚಿಸೆ ಪುಷ್ಪಾಪಚಯಮನುಗುರ್ವೆಳಗುಂ ಪೆಂ॥
ಡಿರ ಕಣ್ಬೆಳಗುಂ ಚೈತ್ರದ।
ದೊರೆಯೆನೆ ಕುಸುಮೋಪಚಯಮನಿತ್ತವು ಲತೆಯೊಳ್ ॥ ೭೭ ॥

ಕಡುಗೆಂಪಿಂದಧರಂ ಪ।
ಣ್ಣಾಡಕೆವೊಲಿರೆ ಕೊರಳರೇಖೆಯಿಂ ಪೂಂಬಳೆಯುಂ॥
ನಿಡಿದಿರವಿಂ ಕೋಮಳಿಕೆಯ।
[ನಡರ್ದಿರೆ] ಸಸಿಯಂತಿರಸಿಯಳೆಸೆದಳ್ ನಿಸದಂ ॥ ೭೮ ॥

ಯುವತಿಯರ್ಗೆ ಚೂತಪಲ್ಲವ।
ದವತಂಸಂ ಕಿವಿಗೆ ಸಾರ್ದು ನಲ್ಲರನಗಲ್ದಿ॥
ರ್ದವರಂ ಸ್ಮರನೆಚ್ಚಪನೆಂ।
ದವು ಮಧುಕರ ಮಧುರರವದಿನುಸಿರ್ವಂತೆಸೆಗುಂ ॥ ೭೯ ॥

ಮಳಯಜದಣ್ಪಿಂದಂ ಕೋ।
ಮಳೆಯರ ಕುಚಮಂಡಳಂಗಳಂಗಜರಾಜಂ॥
ಗಳವಡೆ ಪಿಡಿದಿರ್ದಮಳ್ಗೊಡೆ।
ಗಳಿವೆನೆ ತೊಳಗಿದವು ಸುರಭಿಮಾಸೋದಯದೊಳ್ ॥ ೮೦ ॥

ವನಿತೆ ಮಕರಂದಮಂ ಕೊಸ।
ಗಿನ ಕುಸುಮದೊಳಿರಿಸೆ ಕರ್ಣಿಕಾರಕ್ಕೊಲವಿಂ॥
ವನದೇವತೆ ತನಿಗಂಪಂ।
ಜನಿಯಿಸಲೆಂದಿರಿಸಿದಂದಮಂ ನೆನೆಯಿಸುಗುಂ ॥ ೮೧ ॥

ಒಗೆದ ಕುಚದಲ್ಲಿ ಪೊಸಮ।
ಲ್ಲಿಗೆಗಳ ಮುತ್ತುಗಳ ಹಾರಮಂ ರಮಣಿ ಸಮಂ॥
ಬಗೆದಿಕ್ಕೆ ಮಿಕ್ಕು ಚೆಲ್ವಿಂ।
ನಗುವಂತವನಲರ್ದುವಾಗ ವಿಚಕಿಳ ಮುಕುಳಂ ॥ ೮೨ ॥

ಬೀಸುವ ತೆಂಬೆಲರಲರ್ಗಂ।
ಬೀಸುವ ತೆಪ್ಪಮನೆ ಪೋಲೆ ಕಂಪಂ ತನ್ನಿಂ॥
ದೀಸುವಲರ್ದಲರ ಕಂಪಿನೊ।
ಳೀಸುವವೊಲ್ ಮೆಲ್ಲನಂದು ಬಂದುದು ಬನದೊಳ್ ॥ ೮೩ ॥

ಕಂ ॥ ಅಲರ್ವಚ್ಚಮನಚ್ಚರಿಯೆನೆ ।
ಜಲಜಾಕ್ಷಿಯರಿಟ್ಟು ನೆಟ್ಟನೆ ತಮಗ ॥
ಗ್ಗಲಿಸಿದ ಚೆಲ್ವಿಂದೆ ಲತಾ ।
ಲಲಿತಾಂಗಿಯರೆಂಬ ಪೆಸರಿನಸದಳಮೆಸೆದರ್ ॥ ೮೪ ॥

ವ ॥ ಅಂತು ತಮ್ಮ ಬಗೆಗೆವಂದಳಂಕಾರಕ್ಕಾಧಾರಮಾದ ಸಾರಭೂರುಹಂಗಳಂ ಮೆಚ್ಚಿ ಬಿಚ್ಚಱಿಸಿಯಿಚ್ಛೆಗೆವಂದಲರ್ವಚ್ಚಮನಚ್ಚರಿಪುಟ್ಟೆ ತೊಟ್ಟು ಚಿತ್ತಜನ ಚಿತ್ತಮ ನಲರ್ಚುತ್ತಂ—

ಚಂ ॥ ಇದು ಕಳಕಂಠನಾದಮಿದು ಕಾಮಿನಿಯರ್ಕಳ ಗೇಯನಾದಮಿಂ ।
ತಿದು ಕಳಹಂಸಯಾನಮಿದು ಮಾನಿನಿಯರ್ಕಳ ಮಂದಯಾನಮಿಂ ॥
ತಿದು ನವಪದ್ಮಗಂಧಮಿದು ಸೌಂದರಿಯರ್ಕಳ ವಕ್ತ್ರಗಂಧಮೆಂ ।
ಬುದನಱಿವನ್ನರಿಲ್ಲೆನಿಸಿದರ್ ವನಕೇಳಿಯೊಳಾ ಲತಾಂಗಿಯರ್ ॥ ೮೫ ॥

ವ ॥ ಅಂತು ವನಕೇಳೀಪರಿಶ್ರಮಸಮನ್ವಿತೆಯರ್ ಜಳಕೇಳೀಲೀಲೆಯಂ ಬಯಸುತ್ತಮಿರ್ಪುದುಮಿತ್ತಲ್—

ಮ ॥ ಕಳಕಂಠಧ್ವನಿ ಪಂಚಮಸ್ವರಮುದಂ ವೀಣಾಪ್ರವೀಣಾಂಗನಾ ।
ವಳಿಯೊಗಳ್ ಶ್ರುತಿನಿಶ್ಚಯಕ್ಕೆಳಸಿ ಮೆಲ್ಪಿಂ ಬಾಜಿಸುತ್ತುಂ ಮನಂ ॥
ಗೊಳೆ ಪಾಡುತ್ತಿರೆ ತಂತ್ರಗಾತ್ರಮೆರಡುಂ ಸಮ್ಮೇಳನಂಬೆತ್ತುವೀ ।
ಗಳೆನುತ್ತಂ ಪತಿ ಮೆಚ್ಚಿ ಬಿಚ್ಚಱಿಸಿದಂ ನಾನಾಕಳಾಕೋವಿದಂ ॥ ೮೬ ॥

ವ ॥ ಅಂತು ಚಕ್ರವರ್ತಿ ಮೆಚ್ಚುತ್ತಮಿರ್ಪುದುಮಾ ಪ್ರಸ್ತಾವದೊಳ್—

ಚಂ ॥ ಅನುಪಮ ಪದ್ಮವಕ್ತ್ರೆಯ ನವೋತ್ಪಳನೇತ್ರೆಯ ಪುಷ್ಪಮಂಜರೀ ।
ಸ್ತನಿಯ ಲತಾಂಗಿಯಪ್ಪ ವನಲಕ್ಷ್ಮಿಯ ಯೌವನಲಕ್ಷ್ಮಿ ದೇವನಿ ॥
ನ್ನನುಭವ ಸೌಖ್ಯದಿಂದೆ ಸಫಳಂ ಬಿಜಯಂಗೆಯುವೇೞ್ಕುಮೆಂಬ ತ ।
ದ್ವನಿತೆಯ ದೂತನಂದದೊಳೆ ಬಂದುದು ನಂದನಮಂದಮಾರುತಂ ॥ ೮೭ ॥

ವ ॥ ಅಂತು ಬಂದ ಮಂದಮೆನಿಪ ರಾಗಮನೀವ ಪರಾಗಮಂ ಸ್ತುತ್ಯಮೆನಿಪ ಶೈತ್ಯಮನಲಭ್ಯಮೆನಿಪ ಸೌರಭ್ಯಮನೋಲಗಿಸಿ ತನ್ನ ಗುಣಕ್ಕನುಚರಂಗಳೆನಿಸಿದ ಚಂಚರೀಕಂಗಳಿಂಚರಂಗಳಿಂ ಬಿನ್ನವಿಸುವ ಮಂದಾನಿಳನ ಮಾತಂ ಮನ್ನಿಸಿ—

ಚಂ ॥ ಬಿಡದೆಡಗೆಯ್ಯೊಳೊಪ್ಪೆ ಮಱಿದುಂಬಿಯುನಾಂತಲಗೊಂಬು ಚಿತ್ತಮಂ ।
ಪಿಡಿಯೆ ಪೊದಲ್ದ ಮಲ್ಲಿಗೆಯಲರ್ ಬಲಗಯ್ಯೊಳುದಾತ್ತಚೈತ್ರನಂ ॥
ತೊಡವರುತೊಪ್ಪೆ ನರ್ಮಸಚಿವಂ ರತಿಯುಂ ಸತಿ ಪೋಲೆ ಮೂರ್ತಿಯಂ ।
ಪಡೆದ ಮನೋಜನಂತೆ ನಡೆತಂದನಿಳೇಶ್ವರನಾ ವನಾಂತದೊಳ್ ॥ ೮೮ ॥

ವ ॥ ಆಗಳಶೇಷಭಾಷಾವಿದುರ ವಿದೂಷಕನಿಂತೆಂದಂ—

ಚಂ ॥ ಜಡಮೆನಿಸಿರ್ದ ಮೇಘಸಮಯಂ ನಿಜಜೀವನಮಂ ಲತಾಂಗಿಗಿ ।
ತ್ತೊಡಮಲರ್ದೊಪ್ಪದೂರ್ಜಿತ ಕಳಾಧರಮೂರ್ತಿ ವಸಂತಮೊಯದಿ ॥
ರ್ದೊಡಮಲರ್ದೊಪ್ಪುತಿರ್ದಪು ಲತಾಂಗಿಯರೀವನನೊಲ್ಲದಿಚ್ಛೆಯೊಳ್ ।
ನಡೆವನನೊಲ್ದು ಮನ್ನಿಸುವರೆಂಬುದನಿಂಬಿನೆ ಸೂಚಿಪಂದದಿಂ ॥ ೮೯ ॥

ವ ॥ ಅಂತು ವಸಂತವರ್ಣನಾ ಪ್ರಸ್ತಾವಮಂ ವಿಸ್ತಾರಿಸಿ ಮತ್ತಮಿಂತೆಂದಂ—

ಕಂ ॥ ಇಂದೋಳಗೀತದಾಗರ ।
ಮಿಂದುವಿನ ವಿಳಾಸಮಖಿಳಲತೆಗಳ ಕಾಂತಂ ॥
ಸುಂದರಿಯರ ಸುರತಸುಖಂ ।
ಬಂದುದು ಮಧುಮಾಸಮತನುವಿಭವಾವಾಸಂ ॥ ೯೦ ॥

ಎಳಮಾವುಗಳೊಡನಿಳಿಗಂ ।
ಪುಳಕಾಂಕುರಮೊದವೆ ಮಳಯರುಹ ಪರಿಮಳಮಂ ॥
ತಳೆದು ಮಳಯಾನಿಳಂ ಬಂ ।
ದೆಳಸುತ್ತಿರೆ ಸುರಭಿಮಾಸಮಾದುದು ಚೈತ್ರಂ ॥ ೯೧ ॥

ಚಂ ॥ ಸ್ಮರಶಶಿಯಿಂದಮೊಂದಿ ಶಶಿರಶ್ಮಿ ಶರದ್ಗುಣಮಂ ನಿದಾಘಮಂ ।
ತರೆ ತಮಗಂಬುಸೇಚನದೆ ವೃಷ್ಟಿಯನಂಬುಜಪತ್ರವೀಜನೋ ॥
ತ್ಕರದೊಳೆ ಮಾಗಿಯಂ ಬರಿಸುತಂ ರಿತು ಸಂಕರಮಾಗೆ ಮಾಡಿದರ್ ।
ವಿರಹಿಗಳಿಂತಿದಚ್ಚರಿ ವಸಂತದೊಳಂ ಶಿಶಿರೋಪಚಾರಮಂ ॥ ೯೨ ॥

ವ ॥ ಅಂತು ವಸಂತವಿಭವಮಂ ವ್ಯಾವರ್ಣಿಸಿಯುದರ್ಕೆ ಮಂಡನಮಾಗಿ ಬಂದ ಮಾಕಂದಮನಿಂತೆಂದಂ—

ಮ ॥ ಸ್ರ ॥ ಕಳಕಂಠಾಖ್ಯಾನಮಂ ಕೋಕಿಳಕೇಕಳಿಕೆಯಿಂ ಮಾಡಿ ಮತ್ತಂ ವಸಂತ ।
ಕ್ಕೆಳತಾಂತಶ್ರೇಣಿಯಿಂದಂ ಸುರಭಿಸಮಯಮುದ್ಯನ್ಮಧುವ್ರಾತದಿಂದಂ ॥
ವಿಳಸಚ್ಛ್ರೀಮಾಧವಂ ಪಲ್ಲವಕುಸುಮಫಳಾನೇಕವರ್ಣಂಗಳಿಂ ಕೈ ।
ಕೊಳಿಸುತ್ತಂ ಚೈತ್ರಮೆಂಬೀ ಪೆಸರಿನಸದಳಂ ಕಣ್ಗೆವಂದತ್ತು ಚೂತಂ ॥ ೯೩ ॥

ಮ ॥ ತಳಿರಿಂ ಮಂಗಳಗೇಹಮಚ್ಚ ನನೆಯಿಂ ಭೂಷಾಗೃಹಂ ಪುಷ್ಪಸಂ ।
ಕುಳದಿಂ ಕಾಮನ ಶಸ್ತ್ರಶಾಲೆ ಮಿಡಿಯಿಂ ಭಂಡಾರಮಿಪ್ಪಾಲಯಂ ॥
ಫಳದಿಂ ಸಿದ್ಧರಸಪ್ರಪೂರ್ಣಕಳಶಸ್ಥಾನಂ ರುವತ್ಕೋಕಿಳಾ ।
ವಳಿಯಿಂದೋಲಗಶಾಲೆಯೆಂಬ ತೆಱದಿಂ ಚೆಲ್ವಾಯ್ತು ಚೂತದ್ರುಮಂ ॥ ೯೪ ॥

ಉ ॥ ಕಾಮನ ವೀರಮಂಕುರಿಸಿತಂಕುರಿಸುತ್ತಿರೆ ಭೂಮನೋಜ ತೇ ।
ಜೋಮಯಮಾಯ್ತು ಕೆಂದಳಿರ್ಗಳಿಂ ತುಱುಗುತ್ತಿರೆ ಚಿತ್ತಜನ್ಮನು ॥
ದ್ದಾಮಯಶಂ ವಿಶೇಷತರಮಾದುದು ಪುಷ್ಪಿತಮಾಗೆ ಕಂತುನಿಸ್ಸೀ ।
ಮಮನೋರಥಂ ಸಫಳಮಾಯ್ತು ಫಳಾನ್ವಿತಮಾಗೆ ಮಾಮರಂ ॥ ೯೫ ॥

ಕಂ ॥ ಶ್ರುತಿಸುಭಗರವದ್ವಿಜಸಂ ।
ತತಿಯಿಂದಂ ಸಾಮರುಚಿರ ಶಾಲೆಗಳಿಂದ ॥
ಸ್ವಿತಮೆನಿಸಿ ರಂಜಿಕುಂ ರತಿ ।
ಪತಿಸರ್ವಸ್ವದಂದದಿಂದಂ ಮಾಕಂದಂ ॥ ೯೬ ॥

ಕಂ ॥ ಎಳಗಿಳಿಯ ತುಂಡಮುಂ ಕೆಂ ।
ದಳಿಕೆಯಿದೆಂದೆಳಸಿ ಕೋಕಿಳಂ ಕರ್ದು ಕಿತ್ತಂ ॥
ತಳೆಯೊಳಱಿವಕ್ಕುಮೇ ಸಂ ।
ಚಳಿಸುವ ಪರಪುಷ್ಟಪಲ್ಲವಗ್ರಾಹಕದೊಳ್ ॥ ೯೭ ॥

ವ ॥ ಅಂತು ಚೂತ ಕುಜಾತಮಮಂ ಸಮವೆನಿಪ್ಪ ಮಾತುಗಳಿಂ ಪೊಗೞ್ದು ಚೂತ ವಲ್ಲಭನ ಮನೋವಲ್ಲಭೆಯಪ್ಪ ಮಲ್ಲಿಕಾವಲ್ಲರಿಯ ಸಮುಲ್ಲಸಿತ ಕುಸುಮಂಗಳಂ ನೋಡಿ—

ಚಂ ॥ ಕುಸುಮಶರಾಸ್ತ್ರಮಂ ಸಸಿಯು ಸಾಣೆಯೊಳೀ ಮಧುವೆಂಬ ಕಮ್ಮರಂ ।
ಮಸೆಯಲೆ ವೇಡಿ ತೀಡಿದನೊ ಮುನ್ನೆ ಪಸುರ್ಪಿನೊಳೆಂಬವೊಲ್ ಪಸು ॥
ರ್ಪೆಸೆದುದು ಮುಂ ಬಿೞಿಕ್ಕೆ ಮುಸದಂತಿರೆ ಬೆಳ್ಪುಮನಿತ್ತು ಕಂಪನೆ ।
ಣ್ದೆಸೆಗಮಲಂಪಿಸಿಂ ಪರೆಯೆ ಚೆಲ್ಲುವ ಮಲ್ಲಿಗೆಯೊಳ್ ಮಹೀಪತೀ ॥ ೯೮ ॥

ವ ॥ ಎಂದು ತನ್ನ ಮೆಚ್ಚುಗೞಿದು ಬಿಚ್ಚುಗೞಿಸಿದ ಚತುರವಚನವಿಚಕ್ಷಣಂಗಾಕ್ಷಣ ದೊಳೆ ಮೆಚ್ಚುಗೊಟ್ಟೆಲ್ಲಾಮೆಯ್ಯಿಂ ಮೆಚ್ಚಿಸಿದ ಮಾಕಂದಕ್ಕೆ—

ಚಂ ॥ ಇದು ತಳಿರೊಂದು ಚೆಲ್ವಿಗಿದುನಿನ್ನಯೆ ಬಲ್ಲನೆಯೊಂದು ಲಕ್ಷ್ಮಿಗಿಂ ।
ತಿದು ಕುಸುಮಂಗಳೊಂದೆಸಕಕಿಂತಿದು ಕಾಯ್ಗಳದೊಂದು ಕಾಂತಿಗಿಂ ॥
ತಿದು ಪೊಸಪಣ್ಗಳೊಂದುರಸಪುಷ್ಟಿಗೆನುತ್ತಮೆ ಚಕ್ರವರ್ತಿ ಸಂ ।
ಮದದೊದವಿಂದೆ ಚೂತತರುಗಿತ್ತನಶೇಷವಿಭೂಷಣಂಗಳಂ ॥ ೯೯ ॥

ಕಂ ॥ ಪಾದರಿ ವಸಂತನೊಸೆದಿ ।
ರ್ಪಾದರಿಸುವ ರಮಣಿಯಲ್ಲದಂದೇಕೆಯೊ ಮೇ ॥
ಲಾದಲತೆಗಿನಿತು ಸಿರಿಯಿ ।
ಲ್ಲಾದಮೆನುತ್ತದನೆ ನೋಡಿದಂ ನೃಪತಿಳಕಂ ॥ ೧೦೦ ॥

ಚಂ ॥ ಸ್ಮರರಿಪುದರ್ಪಕಂಗಿದುವೆ ಕೇದಗೆ ಕೈಪಿಡಿಯೆಂಬ ಕೋಪದಿಂ ।
ಪರಿಹರಿಸಿರ್ಪನುಂತಿದಱೆಸಳ್ಗಳ ಚೆಲ್ವಿದಱೊಂದು ಗಂಧಬಂ ॥
ಧುರತೆಯೊಳಾವ ಪೂವುಗಳೊಳುಂಟಿದನೇೞಿಸುಪಲ್ಲಿಗೆಂದು ನಿಂ ।
ದರಸನದಂ ಮುದಂಬೆರಸು ಬಣ್ಣಿಸಿದಂ ಕವಿರಾಜಶೇಖರಂ ॥ ೧೦೧ ॥

ಪರಿಮಳಕೆ ಮಧುವ್ರತಮೆ ಪಾಯ್ದೊಡೆ ಕಾಂಪ್ದನನಂಗನೆಂದದಂ ।
ಪೊರೆಯಲೆವೇಡಿ ಮಾಡಿದನೆಸಳ್ಪುದಿದಿರ್ಪವೊಲೆಯ್ದೆ ಕಂಟಕಂ ॥
ಬೆರಸು ಬಸಂತನೆಂಬ ತೆಱದಿಂದೆಸೆದಿರ್ದಪುದೆಂದು ನಿಂದು ಭೂ ।
ವರವಿಭು ಮೆಚ್ಚಿ ಬಿಚ್ಚುಗೞಿಸಿದಂ ಸ್ಮಿತಕೇತಕಿಯುಂ ಕೃತೀಶ್ವರಂ ॥ ೧೦೨ ॥

ಕಂ ॥ ಸ್ವೀಕೃತರಾಗಂ ರಾಗಮ ।
ನಾಕಂದರ್ಪಂಗೆ ಪಡೆಗದುಚಿತಂ ವಿದಿತಾ ॥
ಶೋಕಮೆನಿಸಿರ್ದು ವಿರಹಿಗೆ ।
ಶೋಕಮನೊದವಿಪುದಿದನುಚಿತಂ ಪಲ್ಲವಿತಂ ॥ ೧೦೩ ॥

ಕಂ ॥ ತಳಿರ್ದೊಂಗಲನುಟ್ಟಲರ್ದಲ ।
ಗಳಗುಂಚೆಯ ಭೂಷಣಂಗಳಂ ತೊಟ್ಟು ಮನಂ ॥
ಗೊಳಿಸಿರ್ದಶೋಕಲತೆ ದುವ ।
ದಳಿಮಿಳಿತಂ ಪಾಡುತಿರ್ಪ ಬೇಡಿತಿಯೆನಿಕುಂ ॥ ೧೦೪ ॥

ಪಂಬಲಿಸಿ ಪಾಯ್ವ ಮಧುಪ ಕ ।
ದಂಬಂ ನವಕರ್ಣಿಕಾರಕುಸುಮದೊಳೆನಸುಂ ॥
ಚೆಂಬೊನ್ನ ಬಟ್ಟಲೊಳ್ ರತಿ ।
ತುಂಬಿದ ಕತ್ತುರಿಯ ತೆಱನನುರು ಸೆಱೆವಿಡಿಗುಂ ॥ ೧೦೫ ॥

ವ ॥ ಎಂದದಱ ಮೆಯ್ಸಿರಿಯಱಿದು ಪೊಗೞ್ದು ಜಗತೀವಲ್ಲಭಂಗಾ ಸಮಯದೊಳ್ ಸಮಯಂಬಡೆದು ಮೆಚ್ಚುಗುಡುವಂತೆ—

ಮ ॥ ಬರೆ ಭೂಪಂ ವನದೇವಿಯರ್ ಪದೆಪಿನಿಂದೆಲ್ಲರ್ಗಮಭ್ಯಾಗತಾ ।
ಗುರುವೆಂದರ್ಘ್ಯಮನಿತ್ತನರ್ಘ್ಯ ಮಣಿಯಂ ಪ್ರಸ್ತುತ್ಯ ವಸ್ತ್ರಂಗಳಂ ॥
ನಿರವದ್ಯಾಮೃತಹೃದ್ಯಪಕ್ವ ಫಳಮಂ ದಿವ್ಯಾನುಲೇಪಂಗಳಂ ।
ಧರಣೀಶಂಗೆ ಮನಃಪ್ರಮೋದದೊದವಿಂದಿತ್ತರ್
ಗುಣೋದ್ಯುಕ್ತೆಯರ್ ॥ ೧೦೬ ॥

ವ ॥ ಅಂತು ವನದೇವತೆಯರ್ ಸಂಭಾವಿಸಿದಭ್ಯಾಗತಿಯುಮಂ ವನಲಕ್ಷ್ಮಿಯೋಲಗಿಸಿದ ಸರಸಕಿಸಲಯ ಕುಸುಮ ಫಳಾನೀಕಂಗಳುಮಂ ಕೈಕೊಳುತ್ತಂ ಚಿತ್ತಜ ಚಕ್ರವರ್ತಿ ಜಳಕ್ರೀಡೆಯಾಡುವ ಖೇಡಕುಟಿಯ ಚೆಲ್ವನೊಳಗೊಂಡ ಸರೋಜಷಂಡಮಂ ಕಂಡನದೆಂತಪ್ಪೊಪ್ಪಮಂ ತಳೆದಿರ್ದುದೆಂದೊಡೆ—

ಕಂ ॥ ವರನೃಪತಿಯಂತೆ ವಸುಧಾ ।
ಭರಣಂ ಪ್ರಾಸಾದದಂತೆ ಕುಮುದಾಕೀರ್ಣಂ ॥
ಧುರದಂತರಣ್ಯದಂತಿರೆ ।
ತರಭಾಕೀರ್ಣಂ ಸರೋವರಂ ಕರಮೆಸೆಗುಂ ॥ ೧೦೭ ॥

ಮ ॥ ವರಕಾಂತಾಮುಖದಂತೆ ಸಸ್ಮಿತ ಸರೋಜ ಶ್ರೀವಿಳಾಸಂ ದ್ವಿಜೋ ।
ತ್ಕರಕಾಂತಂಪ್ರಚುರ ಪ್ರಸಾದಸಹಿತಂ ಕಿಂಜಲ್ಕ ಸೀಮಂತ ಭಾ ॥
ಸುರಮುನ್ಮತ್ತಮಧುವ್ರತಪ್ರಿಯತರ ಶ್ರೀರಾಜಹಂಸಾವಳೀ ।
ಪರಿಸೇವ್ಯಂ ಮಧುರಾಮೃತಂ ಸೊಗಯಿಕುಂ ಶ್ರೀಸದ್ಮಪದ್ಮಾಕರಂ ॥ ೧೦೮ ॥

ವ ॥ ಎಂದದಱ ಸೌಂದರ್ಯಮಂ ರಾಜಹಂಸಂ ಪ್ರಶಂಸೆಯಂ ಮಾಡುತ್ತಂ ತನ್ನ ವಿನೋದಕ್ಕನುರಕ್ತೆಯಪ್ಪ ರಕ್ತೆಯನೆಯ್ದೆವರ್ಪುದುಮಾ ಪ್ರಸ್ತಾವದೊಳ್—

ಕಂ ॥ ನೀರ್ವೂಗಳ ಪರಿಮಳಮಂ ।
ಪೇರ್ವಾಳಿಗಳ ಕಳಕಳಂಗಳೊಗೆದವು ನದಿಯೊಳ್ ॥
ನೇರ್ವಡೆ ಮಕರಪತಾಕನ ।
ದುರ್ವಾರ ಜಯಪ್ರಶಸ್ತಿಯಂ ಪಾಡುವವೋಲ್ ॥ ೧೦೯ ॥

ಉ ॥ ಭೂರಮಣಂ ಮಣಿಪ್ರಕರಮಂ ನದಿಸಿಂಧು ಸಮಾಖ್ಯೆಗಾಗಳಾ ।
ದೋರಮೆನಿಪ್ಪಿನಂ ಕೆದಱಿ ಮಿಶ್ರಿತ ವಿಶ್ರುತ ಯಕ್ಷಕರ್ದಮೋ ॥
ದಾರರಸಪ್ರಸಂಗಪರಿಶೋಭಿತ ತುಂಗತರಂಗದಿಂದೆ ಶೃಂ ।
ಗಾರ ನದೀವಿಳಾಸಮನೆ ತಾಳ್ದಿರೆ ರಕ್ತೆವಿನೋದತತ್ಪರಂ ॥ ೧೧೦ ॥

ವ ॥ ಅಂತು ನಿಜಾಂತರಂಗಮಂ ಪೋಲೆ ನದೀತರಂಗಮಂ ಕಸ್ತೂರಿಕರ್ಪೂರ ಕಾಶ್ಮೀರಕಾಳಾಗರುವಿಂದನುರಾಗಿಯಾಗೆ ಮಾಡಿ—

ಕಂ ॥ ನೀರಾಟಕ್ಕಾತುರದಿಂ ।
ದೈರಾವತಮಂದು ಸಿಂಧುವಂ ಪುಗುವವೊಲು ॥
ವೀರರಮಣನಿಂದ್ರವಿಭವಾ ।
ಧಾರಂ ಪೊಕ್ಕಂ ಪ್ರಸನ್ನಗುಣಸಂಪನ್ನಂ ॥ ೧೧೧ ॥

ಪರವಾಹಿನಿಯ ಮಹತ್ವಂ ।
ಸ್ಥಿರ ತೇಜೋನಿಧಿಯ ಸನ್ನಿಧಿಯೊಳಿರದೆಂಬಂ ॥
ತಿರೆ ದೇವೀ ಪ್ರೇರಣೆಯಿಂ ।
ನರವಾಹಿನಿಯಾದುವಾಗಳೂರುದ್ವಯಸಂ ॥ ೧೧೨ ॥

ವ ॥ ಅಂತು ಪೊಕ್ಕು ಮಹೀತಳಪತಿ ತಮ್ಮ ಶಂಕೆಯುಂ ಕಳೆವುದುಮವನಿಪ ಹೃದಯಮನೊಳಪುಗುವಂತೆ ನದೀಹೃದಯಮಂ ಮೃಗನಯನೆಯರ್ ಪುಗಲೊಡನೆ—

ಕಂ ॥ ಶೃಂಗಾರ ವಾರಿನಿಧಿಯನ ।
ನಂಗನೃಪಂ ಸೇತುಗಟ್ಟಿದಂತೆಸೆಗುಂ ವಾ ॥
ರಾಂಗನೆಯರ ಕುಚಗಿರಿಯ ಬೆ ।
ಡಂಗಿಡಿದಿರೆ ಮೃಗಮದಾಂಬು ಸಂಭೃತನದಿಯೊಳ್ ॥ ೧೧೩ ॥

ಸರಸಿರುಹದೆ ಸತಿಯರ ಮುಖ ।
ಸರಸಿರುಹಕ್ಕಾಸ್ಯ ಕಮಳದಿಂ ಪೀನಪಯೋ ॥
ಧರಹತ ವೀಚೀ ವಿತತಿಗೆ ।
ಪರಿಮಳ ಲೋಭದೊಳೆ ಪರಿದವಳಿಗಳ ಬಳಗಂ ॥ ೧೧೪ ॥

ತರುಣಿಯರ ಕುಚದ ಕತ್ತುರಿ ।
ಪೊರೆದಿರ್ದ ತರಂಗಮಾಳೆಗಳ ಬಱಿಯಿಂದಂ ॥
ಪರಿವಳಿಮಾಳೆಗಳೆಸೆದವು ।
ತೆರೆತೆರೆಗಳನಟ್ಟುತಿರ್ಪ ತೆಱದಿಂ ನದಿಯೊಳ್ ॥ ೧೧೫ ॥

ಊರುದ್ವಯಸಂ ದೇವೀ ।
ಪ್ರೇರಣೆಯಿಂದಾಗಿ ರಕ್ತೆ ನಿಜಸತಿಯರ ಶೃಂ ॥
ಗಾರರಸದಿಂದೆ ಮಗುಳ್ಬಿಂ ।
ಪೂರಿಸಿಯವಲಂಘ್ಯಮಾದುದವನಿಪನಿಂದಂ ॥ ೧೧೬ ॥

ವ ॥ ಅಂತು ಪುಣ್ಯನದಿಯನಗಣ್ಯಲಾವಣ್ಯತೋಯದಿಂ ತೀವಿ—

ಚಂ ॥ ಜಳರುಹವಕ್ತ್ರೆಯರ್ ಜಳರುಹೋಪಮಮಂ ಕಳಹಂಸಯಾನೆಯರ್ ।
ಸುಲಲಿತ ಹಂಸಸನ್ನಿಭಮನುತ್ಪಳನೇತ್ರೆಯರುತ್ಪಳಾಭಮಂ ॥
ವಿಳಸಿತ ಚಕ್ರವಾಕಕುಚೆಯರ್ ಘನಚಕ್ರಸಮಾನಮಂ ಸಮು ।
ಜ್ಜ್ವಳ ಜಳಯಂತ್ರಮಂ ತಳೆದುಕೊಂಡರಿಳೇಶನ ವಾರನಾರಿಯರ್ ॥ ೧೧೭ ॥
ಕರಿಣಿಗಳಟ್ಟಿಱಿಂದಮೆ ಕರೀಂದ್ರದ ಮೇಲೆ ಪರಾಗಪುಂಜಪಿಂ ।
ಜರಿತಜಲಂಗಳಂ ನಿಜಕರಂಗಳಿನಾಂತು ತುಳುಂಕುವಂದದಿಂ ॥
ನಿರುಪಮ ಭದ್ರಲಕ್ಷಣ ನೃಪಾಳನ ಮೇಲೆ ಸಕುಂಕುಮಾಂಬುವಂ ।
ಗುರುಕುಚಕುಂಭೆಯರ್ ಲಲಿತಯಾನೆಯರಾದರದಿಂ ತುಳುಂಕಿದರ್॥೧೧೮॥
ಉ ॥ ಕುಂಕುಮಪಂಕದಿಂದುದಯಿಪಿಂದುವಿನಂದಮನಪ್ಪುಕೆಯ್ಯೆ ವ ।
ಕ್ತ್ರಂ ಕುಡೆ ಕುಂಕುಮಾಂಬುಜಳಯಂತ್ರದಿನಂಗನೆಯೊತ್ತೆ ತತ್ಪ್ರಭಾ ॥
ಳಂಕೃತಲಕ್ಷ್ಮಿಯಂ ನೃಪನಹೃತ್ಕುಮುದಂ ಮುದವೇರಿರಂಗಸ ।
ಸ್ಯಂ ಕಡು ಚೆಲ್ವನೆಯ್ದಿದುದು ನರ್ತಿಸುತಿರ್ದವು ದೃಕ್ಚಕೋರಿಗಳ್ ॥ ೧೧೯ ॥
ಕಂ ॥ ಲಲನೆ ಜಲಯಂತ್ರಮಂ ಕುಚ ।
ಕಳಶದೊಳಿಟ್ಟೊತ್ತೆ ನೃಪತಿಯುರದೊಳ್ ಘುಸೃಣೋ ॥
ಜ್ಜ್ವಳರಸಮೆಸೆದುದು ರಾಗಂ ।
ಬಳೆದಿರೆ ತನ್ನೃಪನ ಮನಮುಮಂ ತೀವುವವೋಲ್ ॥ ೧೨೦ ॥
ಮ ॥ ಪ್ರಿಯಕಾಂತಾಕುಚಕುಂಭಕುಂಕುಮ ಸುಪಂಕಕ್ಲೇಶದಿಂದಂ ಜಡಾ ।
ಶಯಮುಂ ರಾಗದೊಳೊಂದಿತೆಂದೊಡಬಳಾಸಂಸರ್ಗದಿಂ ಚಕ್ರವ ॥
ರ್ತಿಯ ಚೇತಕ್ಕನುರಾಗಮಪ್ಪುದರಿದೇ ಪೇೞೆಂಬವೋಲ್ ವಾರಿಕೇ ।
ಳಿಯೊಳಾದತ್ತು ಸುವರ್ಣಶೃಂಗವಿಳಸತ್ಕಾಶ್ಮೀರ ನೀರಂಗಳಿಂ ॥ ೧೨೧ ॥

ವ ॥ ಅನಂತರಂ ಮಹೀಕಾಂತಂ ಶಶಿಕಾಂತಮುಖಿಂ ಶಶಿಕಾಂತಜಳಯಂತ್ರಮಂ ತಳೆದುಕೊಂಡು—

ಕಂ ॥ ವಾರಾಂಗನೆಯರ ಕಬರೀ ।
ಭಾರಕ್ಕನುರೂಪಮಪ್ಪ ಕರ್ಪಂ ಕಂಪಂ ॥
ಭೂರಮಣಂ ಪಡೆಯಲ್ ಕ ।
ಸ್ತೂರೀಪ್ರಸ್ತುತ್ಯ ಜಳಮನೇನೊತ್ತಿದನೋ ॥ ೧೨೨ ॥
ಕುಂದನಿಭದಶನೆಯರ ವದ ।
ನೇಂದುಗೆ ಮುದದಿಂದೆ ಚಂದ್ರಿಕೆಯನಧಿರಾಜಂ ॥
ತಂದೋಲಗಿಸುವ ತೆಱದಿಂ ।
ಚಂದನ ಸಂಮ್ಮಿಶ್ರ ಜಳಮನೊತ್ತಿದನಾಗಳ್ ॥ ೧೨೩ ॥
ರಮಣಿಯರ ವಿಮಳಲೋಚನ ।
ಕುಮುದಕ್ಕೆ ವಿಕಾಸಲಕ್ಷ್ಮಿ ಪಸರಿಸುವಿನೆಗಂ ॥
ಹಿಮಕಳಿತ ಮಳಯರುಹ ತೋ ।
ಯಮನೊತ್ತಿದನಿಂದು ರಶ್ಮಿಯಂ ಸೂಸುವವೋಲ್ ॥ ೧೨೪ ॥

ಕಂ ॥ ಬಾಲೆಯರ ಬಾಹುಲತಿಕೆ ಮೃ ।
ಣಾಳಕ್ಕೆಣೆ ಕಂಟಕೌಘದಿಂ ಪುದಿದಡೆನು ॥
ತ್ತಾಳೋಚಿಸಿ ಭೂಪಂ ಭುಜ ।
ಮೂಳಕ್ಕೊತ್ತಿದನತೀವ ಹಿಮಯುತ ಜಳಮಂ ॥ ೧೨೫ ॥

ವೃತ್ತಸ್ತನೆಯರ ಕುಚತಟ ।
ಕೊತ್ತಿ ನೃಪಂ ಮೃಗಮದಾಂಬುವಂ ಬಗೆಗೊಳಿಕುಂ ॥
ಚಿತ್ರಜಗಜಕುಂಭತಟಾ ।
ಯತ್ತಾಯತ ದಾನವಾರಿ ವಾರಿಯ ತೆಱದಿಂ ॥ ೧೨೬ ॥

ಮಳಯಜ ಮೃಗಮದ ಕುಂಕುಮ ।
ಜಳಮಂ ಜಳಜಾತದೆಲೆಗಳಿಂ ಕಟ್ಟಿ ಮಸಂ ॥
ಗೊಳಿಸುತ ಪೊಟ್ಟಳದಿಂದವಿ ।
ಚಳನಿಟ್ಟಂ ಕರಿಣಕುಚೆಯರಂ ಚಕ್ರಧರಂ ॥ ೧೨೭ ॥

ಕರಮುಚ್ಚರಿ ಕಾಮಿನಿಯರ ।
ಗುರುಕುಚದೊಳ್ ತೊಳಪ ಕದಪಿನೊಳ್ ಕತ್ತುರಿಯಿಂ ॥
ವಿರಚಿಸಿದ ಪತ್ರಭಂಗಮ ।
ನರಸಂ ವಿರಚಿಸಿದನೊತ್ತಿ ವಾರ್ಧಾರೆಗಳಿಂ ॥ ೧೨೮ ॥

ಸೂಸಿದ ಮೃಗಮದ ಜಲದಿಂ ।
ಬಾಸೆ ಕುಚಂ ಕರ್ಪನಾಳ್ದು ಕಂದರ್ಪಜಯ ॥
ಶ್ರೀಸಂಪತ್ತಂ ಪಡೆವ ವಿ ।
ಳಾಸಿನಿಯರ ಗರ್ಭಚಿಹ್ನಮೆನೆ ಸೊಗಯಿಸುಗುಂ ॥ ೧೨೯ ॥

ಜಳಯಂತ್ರದಿಂದೆ ಮೃಗಮದ ।
ಜಳಮಂ ನೃಪನೊತ್ತೆ ನಾಭಿಮಂಡಳಮೇಂ ಕ ॥
ಪ್ಳೊಳಿಸಿತೊ ಶೃಂಗಾರಸರೋ ।
ವಿಳಾಸಮಂ ತಳೆದು ವಿಮಳ ಕಮಳಾಸ್ಯೆಯರಾ ॥ ೧೩೦ ॥

ವಾರಿಯ ಬಱಿಯನೆ ಸವತಿಯ ।
ತೋರಿದವೆನಿಸಿರ್ದ ಮೊಲೆಯ ಮೇಲಧಿಪನ ಕ ॥
ಣ್ಣೋರಂತೆ ಪರಿದು ನೆಲಸಿರೆ ।
ನೀರೊಳಗಿರ್ದುಂ ಬೆಮರ್ತರೊರ್ವಳ್ ಮುಳಿಸಿಂ ॥ ೧೩೧ ॥

ಸವತಿಯ ಗಾಡಿಗೆ ಸೋಲ್ತಾ ।
ಡುವುದಂ ಮಱಿದೀಕ್ಷಿಪಿನಿಯನಲರ್ಗಣ್ಗಳೊಳಾ ॥
ಡುವ ನೆವದಿಂ ತುಳ್ಕಿದಳಂ ।
ಬುವನೊರ್ವಳ್ ತರುಣಿಯರ್ಗೆ ಪುರುಡಿಪುದೆ ನಿಜಂ ॥ ೧೩೨ ॥

ಕಂ ॥ ತುಳ್ಕುವ ಜಳದಿಂ ಮುನ್ನಮೆ ।
ತುಳ್ಕುವ ಜಲಕ್ಕೆ ಸೋಲ್ತು ಪೂಗಣೆ ಮನಮಂ ॥
ಪೆಳ್ಕುವರಂ ನಡೆ ನೀರಿಂ ।
ತುಳ್ಕುವುದಂ ಮಱೆದು ಮೊಗಮನಿನನೀಕ್ಷಿಸಿದಂ ॥ ೧೩೩ ॥

ಮ ॥ ಜನಚೇತೋಮೃಗಮಂ ಸಮಂತಿಸಲೆ ಕೊಂಬಾಗಿರ್ದ ಸೌಭಾಗ್ಯನಂ ।
ದನಕಂಗೋದ್ಭವನೊಲ್ದು ನೀರೆರೆವ ಚೆಲ್ವಂ ಬೀಱೆತಾಪುಷ್ಪಮಂ ॥
ಡನಸಂಶೋಭಿತ ಕಾಮಿನೀತನುಲತಾನೀಕಂಗಳೊಳ್ ಚಕ್ರವ ।
ರ್ತಿ ನಿತಾಂತಂ ಜಳಯಂತ್ರದಿಂ ತಳಿಯೆ ತುಂಭಚ್ಚಂದನಾಚ್ಛಾಂಬುವಂ ॥೧೩೪॥
ನಯಸಂಪಲ್ಲತೆಯುಂ ವಸಂತನೃಪನುಂ ಶ್ರೀಕಾಮದೇವ ಪ್ರತಿ ।
ಷ್ಠೆಯನೊಪ್ಪುತ್ತಿರೆ ಮಾಡಿ ಮಿಕ್ಕವಭ್ಯೃತಸ್ನಾನೋಚಿತೋತ್ಸಾಹದೇ ॥
ಟ್ಗೆಯೊಳಾಳ್ದೋಕುಳಿಯಾಡುವಂತೆ ವನಿತಾಸಂದೋಹಮುಂ ಚಕ್ರವ ।
ರ್ತಿಯುಮಾಡುತ್ತಿರೆ ಮಾಡಿದತ್ತು ಪದೆಪಂ ವಾರ್ಕೇಳಿ
ಲೀಲೋದ್ಯಮಂ ॥ ೧೩೫ ॥

ವ ॥ ಅಂತು ರತಾಂತದೊಳ್ ತನ್ನ ವಿಮಳಾಶಯದೊಳುತ್ಕಳಿಕೆಯಂ ಬಳೆಯಿಸುವಂತೆ ಜಳಕ್ರೀಡಾಂತದೊಳಾ ಜಳಾಶಯದೊಳುತ್ಕಳಿಕೆಯಂ ಕರಿಣಕುಚಹತಿಯಿಂ ಬಳೆಯಿಸುತ್ತಮಿರ್ದ ವೃತ್ತಸ್ತನೆಯರ್ ಬೆರಸು ಜಳಕ್ರೀಡೆಯಂ ನಿರ್ವರ್ತಿಸಿ ಚಕ್ರವರ್ತಿ **ಪೊಱಮಡಲೊಡನೆ**—

ಕಂ ॥ ಕೆದಱಿದ ಕುಂಕುಮದಿಂ ಮೃಗ ।
ಮದ ಜಲದಿಂ ಮಳಯಜದೆ ಪೊರೆದ ತೆರೆಗಳ್ ಬಹುವ ॥
ರ್ಣದ ರಂಗವಲಿವೊಲಿರೆ ನದಿ ।
ಮದನನ ಮಂಗಳಗೃಹಾಂಗಣಕ್ಕೆಣೆಯಾಯ್ತೋ ॥ ೧೩೬. ॥

ವ ॥ ಅಂತುಮಲ್ಲದೆ—

ಚಂ ॥ ಮಳಯಜಪಂಕದಿಂ ಮೃಗಮದದ್ರವದಿಂ ಘುಸೃಣಾನುಲೇಪದಿಂ ।
ವಿಳಸಿತ ಯಕ್ಷಕರ್ದಮದ ಕರ್ದಮದಿಂ ಘನಸಾರದಿಂ ಮನಂ ॥
ಗೊಳಿಪ ತರಂಗಸಂಗದೆ ತರಂಗಿಣಿ ಕಣ್ಗೆಸೆದಿರ್ದುದಾಗಳು ।
ಜ್ವಳಿಸುವ ಪಂಚರತ್ನರುಚಿಯಿಂ ಪುದಿದಿರ್ದ ಸಮುದ್ರದಂದದಿಂ ॥ ೧೩೭ ॥

ಕಂ ॥ ಮುಂ ಪೂಸಿದ ಕುಂಕುಮಪಂ ।
ಕಂ ಪೊದೆಟ್ಟಿರೆ ರಕ್ತಕಂಜಕಿಂಜಲ್ಕಂ ಮೆ ॥
ಯ್ಯಂ ಪುದಿದಿರೆ ನವಯೌವನ ।
ಸಂಪನ್ನೆಯುರಂದು ಮುನ್ನಿನಂದದಿನೆಸೆದರ್ ॥ ೧೩೮ ॥
ಚಿತ್ರಿಸಲೆಂದಂಗೋದ್ಭವ ।
ಚಿತ್ರಕನೊಲವಿಂದಮಿತ್ತ ಪಟವಾಸದವೋಲ್ ॥
ನೇತ್ರಕ್ಕೆಸೆದಿರ್ದುದು ತತ ।
ಪತ್ರಾಕ್ಷಿಯರಂಗದಲ್ಲಿ ಪತ್ತಿದ ದುಗುಲಂ ॥ ೧೩೯ ॥

ಕಂ ॥ ವನಕೇಳಿ ಯುವತಿ ಯೌವನ ।
ವನಕೇಳಿಗೆ ಸುಜನಕೇಳಿ ಶೃಂಗಾರನದೀ ॥
ಘನ ಜಳಕೇಳಿಗೆ ಕಾರಣ ।
ಮೆನೆ ಮಱೆದಂ ಚಕ್ರಿ ತಾಂ ಸಕಲ ಭೋಗಮುಮಂ ॥ ೧೪೦ ॥

ಮ ॥ ಸ್ರ ॥ ಅರಸಂ ನಾನಾವಿನೋದಪ್ರಿಯನಮಳ ಜಳಕ್ರೀಡೆಯೊಳ್ ನಗ್ನರಾಗಿ ।
ರ್ದರನುದ್ಯದ್ರತ್ನನೂತ್ನಾಭರಣ ವಿವಿಧವಸ್ತ್ರಂಗಳಂ ಕೊಟ್ಟು ಶೃಂಗಾ ॥
ರರಸಕ್ರೀಡಾವಿಮಗ್ನಾಶಯರೆನಿಸಿ ವರಸ್ತ್ರೀಯರಂ ಕೀರ್ತಿಸುತ್ತಂ ।
ಸುರಭೂಜೋದಾರವೃತ್ತಂ ವಿಬುಧ ಜನಮನಃ ಪದ್ಮಿನೀಪದ್ಮಮಿತ್ರಂ ॥ ೧೪೧ ॥

॥ ಗದ್ಯಂ ॥

ಇದು

ವಿದಿತವಿಬುಧಲೋಕನಾಯಕಾಭಿಪೂಜ್ಯವಾಸುಪೂಜ್ಯಜಿನಮುನಿ
ಪ್ರಸಾದಾಸಾದಿತ ನಿರ್ಮಳಧರ್ಮವಿನುತ ವಿನಯಜನ
ವನಜವನವಿಳಸಿತ ಕವಿಕುಳತಿಳಕಪ್ರಣೀತಮಪ್ಪ
ಪಾರ್ಶ್ವನಾಥ ಪುರಾಣದೊಳ್
ವಜ್ರನಾಭಿ ಚಕ್ರವರ್ತಿ
ಜಳಕೇಳೀವರ್ಣನಂ

## ನವಮಾಶ್ವಾಸಂ ಸಮಾಪ್ತಂ

---

॥ ಶ್ರೀಃ ॥

# ದಶಮಾಶ್ವಾಸಂ

ಕಂ ॥ ಶ್ರೀಲಲನಾಪತಿ ಕೃತ ಜಳ ।
ಕೇಳಿವಿಳಾಸಾವಭಾಸಿ ಶಿಬಿರಕ್ಕವನೀ ॥
ಪಾಳಂ ನಡೆತಂದಂ ಸುಖ ।
ಲೋಲಂ ಕುಸುಮಾಸ್ತ್ರಮೂರ್ತಿ ಕವಿಕುಳತಿಳಕಂ ॥ ೧ ॥

ವ ॥ ಅಂತು ಕುವಳಯ ವಿಳಸಿತ ವಿಳೋಕನ ಜಳಯಂತ್ರದಿಂ ಕಾಂತಿಮಳಯರುಹಜಳಮಂ ತಳಿಯುತ್ತಮಪೂರ್ವ ಜಳಕೇಳಿಯ ಲೀಲೆಯಂ ಪಾಳಿಸುತ್ತಂ ಸುತ್ತಲುಂ ಬರ್ಪ ಬಳಾಜನಂ ಬೆರಸು ನಿಜಶಿಬಿರಕ್ಕೆ ಬಿಜಯಂಗೆಯ್ದು ನೂತನ ರತ್ನಂಗಳಿಂ ಸ್ಥಪತಿರತ್ನಂ ರಚಿಯಿಸಿದ ರಾಜಮಂದಿರಮಂ ರಾಜಾಧಿರಾಜಂ ಪುಗುವುದುಂ ನೀರಾಜನ ವಿಧಾನಕ್ಕಂಬಾಗೆ ಕೆಂಬರಲ ಪರಿಯಳಂಗಳೊಳ್ಬೆಳಗಿದ ಮಂಗಳ ಮಣಿದೀಪಂಗಳ ಬೆಳಗು ನವಯುವತಿಯರ ಕರತಳದ ರಮಣೀಯ ಕೆಂಪಿನಿಂ ಪುದಿದು ಪರಕಲಿಸಿದುದೆಂಬಂತೆ ಸಂಜೆಗೆಂಪು ರಂಜಿಸಿತ್ತದಲ್ಲದೆಯುಂ—

ಕಂ ॥ ಪಗಲೆಂಬಂಬುಜಮುಖಿಯುಂ ।
ಗಗನಮಣಿಯುಮೆಳಸಿ ಸಲಿಲಕೇಳಿಗೆ ತಾಮುಂ ॥
ಮಿಗೆ ಪೂಸಿದ ಕುಂಕುಮಮೆನೆ ।
ಸೊಗಯಿಸಿದತ್ತಾಗಳೊಗೆದ ಸಂಧ್ಯಾರಾಗಂ ॥ ೨ ॥

ವ ॥ ಅಂತುಮಲ್ಲದೆಯುಂ—

ಕಂ ॥ ತಡೆಯದಿನನಪರಯುವತಿಯೊ ।
ಳೊಡಗೂಡಲ್ ಪೋಪ ತೇಜನನಱಿದರುಣಂ ಕೆಂ ॥
ಪಿಡಿದಿರ್ದ ಕಾಂಡಪಟಮಂ ।
ಪಿಡಿದಿರ್ದವೊಲೆಸೆದುದಂದು ಸಂಧ್ಯಾರಾಗಂ ॥ ೩ ॥

ಉ ॥ ತಾಂ ಬಹುತಾಪಮಂ ಪಡೆದನೀ ಸಚರಾಚರ ಜೀವಸಂಕುಳ ।
ಕ್ಕೆಂಬ ವಿರಕ್ತಿಯಿಂ ತರಣಿ ಮುನ್ನಿನ ತಿಕ್ಷ್ಣತೆಯುಂ ಬಿಸುಟ್ಟು ಲೀ ॥
ಲಾಂಬುಜಲಕ್ಷ್ಮಿ ಪತ್ರಕರಮಂ ಮುಗಿಯುತ್ತಿರೆ ಮೊಱೆ ತಾಂ ಕಷಾ ।
ಯಾಂಬರಧಾರಿಯಾದನೆನೆ ಸಂಜೆಯನಾಂತಪರಾದ್ರಿಗೆಯ್ದಿದಂ ॥ ೪ ॥

ಕಂ ॥ ಕಟಿಕುಟಿಮಸ್ತಾಚಳದಿಂ ।
ದಿಱಿವೆಡೆಗಳೊಳಾಗೆ ರವಿರಥಂ ಕೋಕಂಗಳ್ ॥
ಚಳಿಯೊಳೆ ರಥಾಂಗವೆಸರಂ ।
ಕಟಿಕುಟಿಮಾಗಿಯೆ ಜಲಕ್ಕನಱಿಪಿದುವಾಗಳ್ ॥ ೫ ॥

ಉ ॥ ರೋಚಿಗಳಂ ದಿಶಾಂಬರ ಮಹೀತಳವರ್ತಿಗಳಂಬರಾಂಶು ಸಂ ।
ಕೋಚಿಸಿ ಪೊರ್ದೆ ಪಶ್ಚಿಮಪಯೋನಿಧಿಯಂ ಕಮಳಂಬೊಲಾತ್ಮಕಾಂ ॥
ತಾಚಳಲಕ್ಷ್ಮಿ ಪಿಂಗೆ ಮದನಾಗ್ನಿ ಪರಾಗವಿಳಾಸಭಾಸಿ ಸಂ ।
ಕೋಚಿತ ಚಿತ್ರಮಂದತುಳ ಶೋಕಮನಾಂತುದು ಕೋಕಮಾವಗಂ ॥ ೬ ॥

ಕಂ ॥ ಇನನಗಲಲೊಡನೆ ಮುಗಿವ ।
ಬ್ಜಿನಿಯೊಳಮೊಳಪೊಕ್ಕು ಮೊರೆವುದಂ ಮಾಣ್ದಳಿ ಕಾ ॥
ಮನ ಕಣೆಯ ಕೂರ್ಪು ಉರೆ ನ ।
ಟ್ಟಿನಸುಂ ದನಿಯುಡುಗಿದಂದಮಂ ನೆನೆಯಿಸುಗುಂ ॥ ೭ ॥

ಉ ॥ ಏವಿರಿದಾದೊಡಂ ಸಿರಿಯದೇವುದಿನಂ ಪ್ರಿಯಕಾಂತೆಯೆಂಬಿದಂ ।
ಭಾವಿಸದೆನ್ನನೀಗಳನುರಾಗದೆ ಸಂಜೆಯೊಳಿರ್ದನೆಂಬ ತ ॥
ನ್ನೀವದಿನತ್ತಪಳ್ಪಿರಿದುಮಬ್ಜಿನಿಯೆಂಬವೊಲಸ್ತಕಾಲದೊ ।
ಳ್ಭಾವಿಸುತ್ತಮಿರ್ದುದಳಿಸಂಕುಳಮಂಬುರುಹಾನನಂಗಳೊಳ್ ॥ ೮ ॥

ಕಂ ॥ ಇನನ ಬಱಿಸಲಲಿ ಸಲೆ ಜೀ ।
ವನಮಂ ಬಿಟ್ಟಿರ್ಪ ವನಜವಧು ನಿಜಪತಿ ನೆ ॥
ಟ್ಟನೆ ಪೋಗೆ ಸಿರಿಯುನುಱಿವುದು ।
ಮನುನಯಮಂ ವಿಧುಗೆ ಮಾಡದುದುಮಚ್ಚರಿಯೋ ॥ ೯ ॥

ಇನನನುರಾಗದೆ ಸಂಧ್ಯಾಂ ।
ಗನೆಯೊಳ್ ನೆರೆದಿರೆ ವಿಷಾದಮಂ ತಳೆವವೊಲ ॥
ಬ್ಜಿನಿ ಮೊಗಸಿದಳಿಯನೊಳಕೊಂ ।
ಡೆನಸುಂ ಮುಗಿದುದು ದಿನಾವಸಾನದೊಳಾಗಳ್ ॥ ೧೦ ॥

ವ ॥ ಅಂತು ಪಸರಿಸಿದ ಸಂಧ್ಯಾಸಮಯಮನವಂಧ್ಯಮಂ ಮಾಡಲೆಂದು—

ಕಂ ॥ ಲಯಜನಕ ಜಿನೇಂದ್ರಪದ ।
ದ್ವಯಕ್ಕೆ ಮಣಿಮಕುಟಕಿರಣನೀರಾಜನಮಂ ॥
ಪ್ರಿಯದಿಂದೊಡರಿಸೆ ಸಂಧ್ಯಾ ।
ನಿಯಮಮನಾ ಚಕ್ರವರ್ತಿ ನಿರ್ವರ್ತಿಸಿದಂ ॥ ೧೧ ॥

ವ ॥ ಅಂತು ಸಂಧ್ಯಾಸಮಯ ನಿಯಮಮಂ ನಿರ್ವರ್ತಿಸಿ ವಜ್ರನಾಭಿ ವಜ್ರಾಯುಧನಂದದಿಂ ಜಿನೇಂದ್ರಚಂದ್ರಚರಣಾರವಿಂದಮಂ ದಿವ್ಯಾರ್ಚನಾದ್ರವ್ಯಂಗಳಿಂದರ್ಚಿಸಿ ನಿಜಪದಾಂಬುಜ ಸೇವಾಸಕ್ತ ಸಕಳ ಮಕುಟಬದ್ಧ ಮೌಳಿಕೀಳಿತ ಶೋಣಮಾಣಿಕ್ಯ ರಶ್ಮಿಕಾಶ್ಮೀರಾರುಣಿತ ಪಾದನಾಸ್ಥಾನಮಂಡಳ ನಭೋಮಂಡಳ ಮಂಡನಂ ಮಂತ್ರಿಕವಿ ಬುಧಸಮನ್ವಿತಂ ಚತುರವಾರನಾರೀ ಚಕೋರಂಗಳಂ ಕಾರುಣ್ಯಾಮೃತದಿಂ ತಣಿಪುತ್ತಂ ನವಯುವತೀನಯನಕುವಳಯಮನಲಂಚರ್ಚಿತಂ ನರೇಂದ್ರಚಂದ್ರಮಂ [ಸತಿ] ವೆರಸೋಲಗಂ ಗೊಟ್ಟಿರೆ—

ಚಂ ॥ ಉದಯವಿಶಾಳಶೈಳದ ತಮಾಳವನಂ ನವನೀಳರತ್ನಜಾ ।
ಳದ ರುಚಿ ನೀರಜಾಕರದ ನೀರರುಹಂ ಮುಗಿದಿರ್ದೊಡಿಂದ್ರದಿ ॥
ಗ್ಗದಗಜದಾನಸೌರಭಕೆ ಬಂದೆಱಗಿರ್ದ ಮದಾಳಿಯೆಂಬವೋ ।
ಲಿದು ಬಗೆಗುಣ್ಮೆ ಪರ್ವಿದುದು ಪೂರ್ವದಿಗಂತಮನಾವಗಂ ತಮಂ ॥ ೧೨ ॥

ವ ॥ ಅಂತುಮಲ್ಲದೆ—

ಕಂ ॥ ದಿಗಧೀಶಕಾಂತೆಯರ್ ಮಿಂ ।
ದೊಗೆದಾಗಳ್ತಂದು ಕೇಶಸಂಸ್ಕಾರಕ್ಕಾ ॥
ವಗಮುಂತಧೂಪವರ್ತಿಯೆ ।
ಪೊಗೆದತ್ತೆನಿಸಿ ದೆಸೆದೆಸೆಯೊಳೆಸೆದತ್ತು ತಮಂ ॥ ೧೩ ॥

। ಸ್ರ ॥ ಒದವಿರ್ದನ್ಮಾರ್ಗವರ್ತಿತ್ವಮನಖಿಳಪದಾರ್ಥಂಗಳೊಳ್ ಸಂದ ಸಂವೇ ।
ಹದ ಕೊರ್ವಂ ಪರ್ವಿಸುತ್ತಂ ಜನತತಿಗಕಳಂಕಾಗಮದ್ವೇಷಿ ಸೌಖ್ಯ ॥
ಪ್ರದ ಸಮ್ಯಗ್ದರ್ಶನ ಶ್ರೀವಿದಳನ ಗುಣಸಂರೋಧಕಂ ತೀವ್ರಮಿಥ್ಯಾ ।
ತ್ವದವೋಲ್ ಭೀಮಾಂಧಕಾರಂ ಭುವನಭವನಮಂ
ತೀವಿತತ್ಯಂತಘೋರಂ ॥ ೧೪ ॥

ಕಂ ॥ ವರ್ಣವ್ಯವಸ್ಥೆ ವಾಸ್ತವ ।
ನಿರ್ಣಯಮುಕಳಂಕ ಸುಜನವರ್ತನಮಿನಿತುಂ ॥
ದುರ್ಣಯ ನೃಪರಾಜ್ಯದೊಳವ ।
ಕರ್ಣಿತಮಪ್ಪಂತೆ ತಮದೊಳಾದತ್ತಾಗಳ್ ॥ ೧೫ ॥

ಶಾ ॥ ದುರ್ವಾರಂ ವಿಪುಳಾಂಧಕಾರಮನಯಾಧಾರಂ ಮಹಾ ಘೋರಮಂ ।
ತುರ್ವೀವ್ಯೋಮದಿಶಾಂಬುಧಿಪ್ರಕರ ನಾನಾವಸ್ತುವಿಸ್ತಾರಮಂ ॥
ಪರ್ವುತ್ತಿಳ್ಕಿಸುತುರ್ವಿಯೊಜಗಮುಮಂ ಕೃಷ್ಣತ್ವದಿಂ ಕೂಡೆ ತಾಂ ।
ಸರ್ವಂ ಕೃಷ್ಣಮಯಂ ಜಗತ್ತೆನಿಪ ಮಾತೇಂ ತಥ್ಯಮಾಗಿರ್ದುದೋ ॥ ೧೬ ॥

ಕಂ ॥ ಮರಕತ ಮಣಿಕುಟ್ಟಿಮದೊಳ್ ।
ಪರಪಿದ ಪೂವಲಿಯನಿಱಿಸಿ ತೊಳಗಿದುದಸಿತಾಂ ॥
ಬರ ವಿಪುಳಸ್ಥಳದೊಳ್ ಸುರು ।
ಚಿರ ತಾರಾನಿಕರಮುಸಮರೋಚಿಃಪ್ರಕರಂ ॥ ೧೭ ॥

ಬಿತ್ತರದಿಂ ಬೆಳ್ದಿಂಗಳ ।
ಬಿತ್ತೆನೆ ತೊಳತೊಳಗಿ ತೊಳಪ ತಾರಗೆಯಿಂ ತಾ ॥
ಳ್ದಿತ್ತದು ಮದನಂಗೆತ್ತಿದ ।
ಮುತ್ತಿನ ಮಂಡವಿಗೆಯೊಪ್ಪಮಂ ಗಗನತಳಂ ॥ ೧೮ ॥

ವ ॥ ಅಂತು ಸ್ವೈರಿಣೀ ಸ್ವೈರಭಾವಕ್ಕುಪಕಾರಿಯಾಗಿ ಕಾಮಾಂಧಕಾರದಂತೆ

ಚಂ ॥ ಮಸುಳ್ದಿರೆ ಕಾಂತಿ ನೀಳಪಟದಿಂ ಮುಸಿಗಪ್ಪಡದಿಂದೆ ರತ್ನಮಂ ।
ಮುಸುಕುವ ಭಂಗಿಯಿಂ ಮುಸುಕನಿಕ್ಕಿದೊಡಂ ನಱುಸುಯ್ಗೆ ಪಾಯ್ದು ಸೂ॥
ಚಿಸೆ ನಿಜಮಾರ್ಗಮಂ ಮುಡಿದ ಪೂಗಳನಾಱುಳಿಗೊತ್ತುಗೊಳ್ವದಿ ।
ತ್ತ್ರಸತಿಯರಳ್ಕುತಂ ನಡೆದರಂತೆ ಸಶಂಕಿತರಲ್ತೆ ದೋಷಿಗಳ್ ॥ ೧೯ ॥

ವ ॥ ಅಂತು ತಮಸ್ಸಮುದಯಂ ಸೂಚೀನಿರ್ಭೇದ್ಯಮುಂ ಸ್ವೈರಿಣೀಹೃದ್ಯಮುಮಾಗಿರೆ—

ಶಾ ॥ ದಿಕ್ಕಾಂತಾಧರಪಲ್ಲವಕ್ಕೆ ಬಱಿಕಾ ದಿಕ್ಕಾಮಿನೀಭಾಳಪ ।
ಟ್ಟಕ್ಕಂ ತಾಂ ಬಱಿಕಾ ದಿಶಾಂಗನೆಯ ಕಾಶ್ಮೀರಾಂಗರಾಗೋಜ್ವಳಾ ॥
ಸ್ಯಕ್ಕಾರಯ್ಯೆ ಸಮಾನಮಾಗಿ ನಯನಕ್ಕಿಂಬಾಗಿ ಪೂರ್ವಾದ್ರಿಕೂ ।
ಟಕ್ಕೆಲ್ತಿಂದನೊಡರ್ಚುತುಂ ಕುವಳಯಕ್ಕಾನಂದಮಂ ಚಂದ್ರಮಂ ॥ ೨೦ ॥

ವ ॥ ಅಂತುಮಲ್ಲದೆ—

ಚಂ ॥ ಸ್ಮರರತಿಖಿಯಂ ವಿಯೋಗಿಪ್ರದಯಕ್ಕನುರಾಗಮನಾಗಳಾಗಳುಂ ।
ನೆರೆದೆಸೆದಿರ್ಪ ಕಾಮುಕಜನಾತ್ರಯಕೊರ್ಮೊದಲೀಯಲೆಂದು ಬಿ ॥
ತ್ತರಿಸಿರೆ ತಾಳ್ದಿದಂತುದಯಶೋಣತೆ ಶೋಭೆಯನೀಯೆ ಪೂರ್ವದಿ ।
ಕ್ತರುಣಿಯ ಪದ್ಮರಾಗ ಮಣಿದರ್ಪಣದಂತೆಸೆದಂ ಸುಧಾಕರಂ ॥ ೨೧ ॥

ಕಂ ॥ ಅಲರ್ವಿಲ್ಲನ ತೇಜೋಮಂ ।
ಡಳಮೆನೆ ಬಗೆಗೊಂಡು ಮಂಡಳಂ ವಿರಹಿಗಳೊಳ್ ॥
ತಲೆದೋಱುವ ಧೈರ್ಯಮನದ ।
ಟಲೆವಿನಮುದಯಿಸಿದನುತ್ಪಳೇಂದ್ರಂ ಚಂದ್ರಂ ॥ ೨೨ ॥

ಬಳೆದ ತಮಂ ಮಿತ್ರನ ಮಂ ।
ಡಳಮಂ ಬೆದಱಿಟ್ಟೆ ಮುಳಿದ ರಾಜನ ಕೋಪಾ ॥
ನಳಮುಗುಳ್ವ ತೋರಗಿಡಿಯೆನೆ ।
ತೊಳಗಿದವರುಣಾಂಶುರುಚಿರ ತಾರಾನಿಕರಂ ॥ ೨೩ ॥

ವೃತ್ತಮುಮಖಿಳಕಳಾಸಂ ।
ಪತ್ತಿಯುಮತಿವಿಶದಮೆನಿಕುಮಾತೆಯನುಱಿದಂ ॥
ದುತ್ತಮರ್ಗೆಂದಱಿಪುವವೊಲು ।
ದಾತ್ತಂ ವಿಧುವುಱಿದು ಬಱಿಕೆ ಧವಳತೆವೆತ್ತಂ ॥ ೨೪ ॥

ಮ ॥ ಸ್ರ ॥ ಚಲದಿಂದಂ ಸಾಂದ್ರಚಂದ್ರದ್ಯುತಿಗಳುಗಿವುತಂ ಕೊರ್ವಿಪರ್ವಿರ್ದಬಲ್ಲ ।
ತ್ತಿಲೆಯಂ ಬೆನ್ನಟ್ಟಿ ಮುನ್ನಂಬರಮನುಱಿದು ತೋರ್ಪಾಶೆಯೊಳ್ ನಿಲ್ಲದೆಲ್ಲಾ ॥
ನೆಲನಂ ಬಿಟ್ಟೋಡಿ ಬೆಟ್ಟಂಗಳ ಗುಹೆಗಳನಾ ಕುಂಜದೇಶಂಗಳಂ ತಾಂ ।
ತಲೆದೋಱಲ್ಕಳ್ಕಿ ಪೊಕ್ಕುಂ ಮಿಸುಕದೆ
ಶಶಿಕಾಂತೇಭದಂತಾಂಶುವಿಂದಂ ॥ ೨೫ ॥

ಮ ॥ ಅಮೃತಾಂಭೋನಿಧಿಯಿಂ ಶಶಾಂಕಘಟಸಂಭೂತಂ ಭರಂಗೆಯ್ದು ಪೀ ।
ದರ್ೞಮುದಂ ಮತ್ತ್ತುಗುಳ್ವಂತೆ ಚಂದ್ರಮಣಿಧಾರಾಯಂತ್ರದಿಂ ವಾರಿಪೂ ॥
ರಮನಾ ಚಂದನಸಾರಸಂಸ್ಕೃತಮನಾದಂ ಪೂರ್ವದಿಕ್ಕಾಂತೆ ದಿ ।
ಗ್ರಮಣೀಜಾಳದ ಮೇಲೆ ಸೂಸುವವೊಲಾ ಚಂದ್ರಾಂಶುವೇಂ ಸೂಸಿತೋ ॥ ೨೬ ॥

ಚಂ ॥ ಕುವಳಯದಂದದಿಂ ಕುವಳಯಂ ಸಿರಿಯಂ ಕರಮೊಲ್ದು ತಾಳ್ದೆ ಕೈ ।
ರವದೆಸಳಂದದಿಂ ದೆಸೆ ವಿರಾಜಿಸೆ ರಾಜಿಪ ಲಕ್ಷ್ಮಿಗೆತ್ತಿತೋ ॥
ರುವ ಧವಳಾತಪತ್ರದವೊಲೊಪ್ಪಿ ನಭಂ ಪರಿಪೂರ್ಣಮಂ ಸುಧಾ ।
ರ್ಣವಮೆನೆ ಚಂದ್ರನಪ್ಪಿದವೊಲಿರ್ದುದು ಚಂದ್ರಿಕೆ ಸಾಂದ್ರಭಾವದಿಂ ॥ ೨೭ ॥

ಉ ॥ ಅಂಗಜಭೂಭುಜಂಗೆ ವಸುರಾತಿ ಸುಕೋಶಮತುಚ್ಛಮುಚ್ಛ್ರವೆ ।
ಳ್ದಿಂಗಳೆ ನಾಡು ಮಂಡಳ ಕೋಟಿ ಕಳಾಳಿಯೆ ಸೈನಿಕಂ ಪ್ರಧಾ ॥
ನಂ ಗಡ ತಾಂ ಪ್ರಸನ್ನತೆ ಸಹಾಯನೆನುತ್ತಿರೆ ತನ್ನ ಪೆಂಪು ಸ ।
ಪ್ತಾಂಗ ಸಮೃದ್ಧಿಯಂ ಪಡೆಯೆ ಕಣ್ಗೆಸೆದಂ ನಿಸದಂ ಸುಧಾಕರಂ ॥ ೨೮ ॥

ಚಂ ॥ ಮಸೆದು ಮನೋಜನಸ್ತ್ರಮನಲಂಪಿನೊಳೇಱಿಸಿ ಪುಷ್ಪಚಾಪಮಂ ।
ಪೊಸಯಿಸಿ ಶೌರ್ಯಮಂ ಮೆಱೆದು ಮೆಯ್ಮೆಯನಾಗಿಸಿ ರಾಗಮಂ ನಿಮಿ ॥
ರ್ಚಿಸಿ ಜಸಮಂ ಪೊಗೞ್ಚಿ ವಿರಹಾರ್ತರನಂಗಜನಂ ಜನಕ್ಕೆ ತೋ ।
ರಿಸಿ ಕರದಿಂದಮಿಂದುವೆಸದಂ ನಿಸದಂ ಕುಸುಮಾಯುಧಪ್ರಿಯಂ ॥ ೨೯ ॥

ಸಮಧಿಕಕಾಮ ಕಾರ್ಮುಕಮನೇಱಿಸಿ ಪುಷ್ಪಶರಕ್ಕೆ ಕೂರ್ಪನಿ ।
ತ್ತಮೃತಕರಂ ಕರಪ್ರಕರದಿಂ ವಿರಹಾರ್ತರ ಮೂರ್ತಿಚಿತ್ತಲ ॥
ಕ್ಷ್ಯಮನುರೆ ತೋಱಿ ಮಿತ್ರತೆಗೆ ಪೂಗಣೆಯಂ ತಿರುವಾಯೊಳಿಟ್ಟು ತೊ ।
ಟ್ಟಮುರೆ ಮನೋಜನಾರ್ದಿಸುವ ತಾಣದೊಳಂ ನೆರವಾದನೂರ್ಜಿತಂ ॥ ೩೦ ॥

ಉ ॥ ಕಾಡೆ ಮನೋಭವಂ ವಿರಹಿಯಂ ಸಕಳೋರ್ವಿ ಸುಧಾಂಶುವಿಂದೆ ತೇಂ ।
ಕಾಡೆ ಚಕೋರಮುಂ ಯುವತಿಲೋಚನಕೈರವಮುಂ ಪ್ರಮೋದಮಂ ॥
ಮಾಡೆ ಶಶಾಂಕಕಾಂತಮಣಿಭಿತ್ತಿಗಳಂತೆ ದಿಶೋರು ಭಿತ್ತಿಗಳ್ ।
ಕೂಡೆ ವಿರಾಜಿಸುತ್ತೆ ನೆಱೆ ಕಣ್ಗೆಸೆದತ್ತಮೃತಾಂಶುಮಂಡಳಂ ॥ ೩೧ ॥

ಚಂ ॥ ಇದು ವಿಧುಮಂಡಳಂ ಭಗಣಮಿಂತಿದು ಕಾಂತಿಯಿದೆಂಬ ಭೇದಮಾ ।
ದುದು ಮೊದಲೊಳ್ಪಱಿಕ್ಕೆ ವಿಧು ತಾರಗೆ ಕಾಂತಿಯಿದೆಂಬ ಭೇದಮಿ ॥
ಲ್ಲದೆ ಗುಣಿಗಂ ಗುಣಾಳಿಗಮಭೇದಮೆನಿಪ್ಪ ಮತಾನುಸಾರಮಾ ।
ದುದು ನೆಲೆವೆರ್ಚೆ ಸಾಂಪ್ರತರಚಂದ್ರಿಕೆ ರುಂದ್ರನಭೋವಿಭಾಗದೊಳ್ ॥ ೩೨ ॥

ಕಂ ॥ ಕುವಳಯಮಂ ರಾಜನ ಪೆಂ ।
ಡವಾಸಮೆಂದಱಿದು ಮಂಡಳಾಗ್ರದ್ಯುತಿಗೋ ॥
ಡುವ ತಿಮಿರತತಿ ಶರಣ್ಬೊ ।
ಕ್ಕವೊಲೊಪ್ಪಿದುವೆಳಸಿ ಬಳಸಿ ಮೊರೆವಳಿನಿವಹಂ ॥ ೩೩ ॥

ಕಂ ॥ ಉದಯದೊಳೀಕ್ಷೀರಾಗಮು ।
ನೊದವಿಪುದುಚಿತಂ ಬೞಿಕ್ಕಮತಿ ಧವಳತೆಗಾ ॥
ಸ್ಪದಮೆನಿಸಿಯುಮೊದವಿಸಿದಪ ।
ನಿದು ಚಿತ್ರಂ ಧಾತ್ರಿಗೆಲ್ಲಮುತ್ಪಳಮಿತ್ರಂ ॥ ೩೪ ॥

ಅತನು ತಮಮಂ ನಿವಾರಿಸು ।
ತತನು ತಮಮನೀವುದತನುತಾಪಮಸುಗಿಯು ॥
ತ್ತತಸು ಪ್ರತಾಪಮಂ ಮ ।
ತ್ತತಿಶಯಿಪುದು ಚಿತ್ರಮಮೃತಕರನ ಚರಿತ್ರಂ ॥ ೩೫ ॥

ಸನ್ನುತ ಚಂದ್ರಿಕೆ ವಿರಹಿಗ ।
ಳಂ ನೋಯಿಸಿ ನನ್ನಿಮಾಡಿದುದು ಜಗದೊಳ್ ಕ ॥
ಯ್ಗ್ನಿಸ್ನಡಿಯೆನಿಸಿದ ರಾಜಾ ।
ಸನ್ನಃ ಕೋ ನಾಮ ಸಾಧುವೆಂಬೀ ನುಡಿಯುಂ ॥ ೩೬ ॥

ಮ ॥ ಮಿಗೆ ಸಸ್ಯೋನ್ನತಿಯಂ ನಿಮಿರ್ಚಿ ಘನಕಾಲಂ ಕೂಡೆ ನೈರ್ಮಲ್ಯಮಂ ।
ಮುಗಿಲೊಳ್ಪುಟ್ಟಿಪ ಪೆಂಪಿನಿಂದೆ ಶರದಂ ಶೀತಕ್ಕೆ ಪಕ್ಕಾಗಿ ಮಾ ॥
ಡಿ ಗುರುಶ್ರೀಶಿಶಿರಂ ಜನೋತ್ಸವಕರಶ್ರೀಯಿಂದೆ ಚೈತ್ರಂ ವಿಯೋ ।
ಗಿಗೆ ಸಂತೋಷಮನಿತ್ತು ಬೇಸಗೆಯೆನಿಕ್ಕುಂ ಚಾರುಚಂದ್ರಾತಪಂ ॥ ೩೭ ॥

ವ ॥ ಅಂತಾತ್ಮೀಯ ಸಾಮ್ರಾಜ್ಯಶ್ರೀಯಂತೆ ಸಾರ್ವಭೌಮಮುಂ ಉದ್ಧಾಮ ಸುದರ್ಶನಾಭಿರಾಮಮುಮಾದ ಕೌಮುದೀಮಹೋತ್ಸವದೊಳ್ ವಾರಾಂಗನಾಶೃಂಗಾರ ಜಲನಿಧಿ ನೆಲೆವೆರ್ಚಿ ಪೆರ್ಚಿದುತ್ಸವದಿನದನಾಳೋಕಿಸಲೆಂದೋಲಗಂ ಪರಿಯಲೆ ಬೞ್ದೊಂದೆ ಹರೆಯದ ತನ್ನ ಮನದನ್ನರಪ್ಪತಿಚತುರಜನಂಬೆರಸರಮನೆಯಂ ಪೊಱಮಟ್ಟು ಪುಷ್ಪಾಯುಧನಂದದಿಂ ಮೆಯ್ಗರೆದು ಚಕ್ರಾಯುಧಂ ರಾಜಬೀದಿಯೊಳಗನೆ ಬರೆವರೆ—

ಚಂ ॥ ವಿರಹಿಗೆ ತಾಪಮಂ ಪ್ರಿಯಜನಕ್ಕನುರಾಗಮನೀವುತಾವಗಂ ।
ಮರುಗಮನಾಳ್ದ ಮಲ್ಲಿಗೆಯಸಂದಿರವಂತಿಯೊಳೊಂದಿನಿಂದು ಪಾ ॥
ದರಿಯಲರಚ್ಚಗಂಪನಜಿದೋಲಗಿಸಿತ್ತು ವಸಂತನಟ್ಟಿ ಮುಂ ।
ಪರಿಚಿತನಂತೆ ಬಂದು ಭುವನಪ್ರಭುಗಂದತಿ ಮಂದಮಾರುತಂ ॥ ೩೮ ॥

ವ ॥ ಅಂತು ಪರಿಮಳಮಾಳಾಧಾರಿಣಿಯರಪ್ಪ ಮಾಳಾಧಾರಿಣಿಯರ ನಱುಸುಯ್ಯ ಕಂಪಿನಿಂ ಬೆರಸಿದ ಬೆರಕೆಗಂಪನುಪಾಯನಮನಿತ್ತು ಚಿತ್ತಮನಿಟ್ಟುಳಿಗೊಳುತ್ತಂ ಬಂದ ಮಂದಾನಿಳದ ಪರಿಮಳದ ಪಜ್ಜೆವಿಡಿದು ಪೋಗಿ—

ಕಂ ॥ ಕಂತು ನೃಪಾಯುಧಶಾಲೆ ವ ।
ಸಂತದ ಸಿರಿಯೆೞ್ಗೆ ಮಧುಪಮಧುಪಾನಗೃಹಂ ॥
ಭ್ರಾಂತೆನಿಸುತಿರ್ಪ ಪೂವಿನ ।
ಸಂತೆಯನೀಕ್ಷಿಸಿದನೊಸೆದು ವಸುಧಾಧೀಶಂ ॥ ೩೯ ॥

ಕಂ ॥ ಕಂಡರಿಸಿದ ಕಪ್ಪುರದ ಕ ।
ರಂಡಗೆಯುಂ ನಗುವ ಬಾಯ್ಪೆಱಗೆ ನೃಪನಯನಂ ॥
ಮಂಡನಮೆನಿಸಿರ್ದರಲಕ ।
ರಂಡಗೆಗಳಿಯೆಱಗೆ ಮಾಲೆಗಾರ್ತಿಯರೆಸೆದರ್ ॥ ೪೦ ॥

ಉ ॥ ತೋಳೊ ಶಿರೀಷಮಾಲೆಯೊ ವಿಳೋಕನಕಾಂತಿಯೊ ಫುಲ್ಲಮಲ್ಲಿಕಾ ।
ಮಾಲೆಯೊ ಕುಂತಳೋತ್ಕರಮೊ ವಕ್ತ್ರಸರೋರುಹಗಂಧಮಗ್ನ ಮ ॥
ತ್ತಾಳಿಯೊ ಪೇೞನುತ್ತಮೊಸೆದೀಕ್ಷಿಪರಕ್ಷಿಯುಮಂ ಬೆಡಂಗಿನಿಂ ।
ಮಾಲೆಯುಮಂ ಕರಂ ತಳೆದು ರಂಜಿಸಿದರ್ ಪೊಸಮಾಲೆಗಾರ್ತಿಯರ್ ॥೪೧॥

ಚಂ ॥ ಮಿಱುಗೆ ಮನೋಜಭೂಪತಿಮನೋಗೃಹಮಂ ಪುಗೆಯಾನಮೆಂದುಮ ।
ಟ್ಕಿಱಿಯೊಳೆ ಮೃಣಾಳನಾಳದೊಳೊಡಂಬಡೆ ದೀಪ್ತಿ ದುಕೂಲವಸ್ತ್ರಮುಂ ॥
ನಿಱಿಪಿಡಿದೊಪ್ಪೆ ಕಟ್ಟಿದವೊಲಳ್ಳದಿಯಂ ಪಿಡಿದಿರ್ದದೊರ್ಮೆಯುಂ ।
ತುಱುಗಿರೆ ತುಂಬಿ ಮಲ್ಲಿಗೆಯ ಮಾಲೆಯನಗ್ಗದಮಾಲೆಗಾರ್ತಿಯರ್ ॥ ೪೨ ॥

ಹೃದಯದೊಳಿರ್ದನಂಗಪತಿಗೆಮ್ಮಯ ನಿರ್ಮಳಕೇಕರಾಸ್ತ್ರಪಾ ।
ತದೊಳೆ ಮುಗುಳ್ದು ನೋೞ್ಪರೆರ್ದೆಗಳ್ ಮೃದುವಾದುವು ನೋಡಿ ಮುನ್ನ ಮೆ॥
ಚ್ಚಿದ ಕುಸುಮಾಸ್ತ್ರದಿಂದಿಸುವುದೆಂದವನೀವವೊಲೆತ್ತಿ ಪೂಗಳಂ ।
ಪದೆದು ಕಟಾಕ್ಷದಿಂ ನೃಪನನೀಕ್ಷಿಸಿದರ್ ಮಿಗೆ ಮಾಲೆಗಾರ್ತಿಯರ್ ॥ ೪೩ ॥

ವ ॥ ಅಂತೊಪ್ಪಮನಪ್ಪುಕೆಯ್ದು ಪುಷ್ಪಲಾವಿನಿವಹಧವಳಕಟಾಕ್ಷ ಕುವಳಯ ಮಾಳೆಯಂ ಕುವಳಯಪತಿ ನಿಜನವಸೌಂದರ್ಯ ಸಂಪೂರ್ಣ ಸುವರ್ಣಸಂಪತ್ತಿಯಂ ಬೀಱಿ ಮಾಱುಗೊಳುತ್ತಮಿಾಪ್ರಸೂನಂಗಳನೂನ ಸೌರಭಕ್ಕಂ ಸುಕುಮಾರತೆಗಂ ಸೈರಿಸದೆ ನಿಚ್ಚಂ ಮಚ್ಚರಿಸುವವೆಂದು ಪಿಡಿಕಟ್ಟಿಂಗೊಳಗುಮಾಡಿದುದೆಂಬಂತೆ ಪುಷ್ಪಲಾವಿಕದಂಬಂ ಪುಷ್ಪಮಾಲೆಗಳಂ ಪಿಡಿದಿರ್ಪುದೆಂದುತ್ಪ್ರೇಕ್ಷಿಸುತ್ತಂ ಚತುರರಂ ಚಾತುರ್ಯ ಚತುರ್ಮುಖಂ ಮೆಚ್ಚಿಸುತ್ತಂ ಪೋಗಿ ಸೂಳೆಗೇರಿಗಳಂಕಾರಮಾಗೆ ಮಕರಧ್ವಜಂ ಮರಕತದ ಮಕರತೋರಣಮುಂ ವಿರಚಿಸಿದಂತೆ ವಿಚಿತ್ರ ಪತ್ರಕಳಿಕಾಸಂಕುಳಂಗಳಂ ಮನಂಗೊಳಿಸುವ ಸಹಕಾರಭೂರುಹಂಗಳ ಕಂಬಂಗಳೊಳಿಂಬಾಗೆ ಕಟ್ಟಿದಿಟ್ಟಿಗಳವಟ್ಟಿರೆ—

ಉ ॥ ಏಱಿ ಪೊಗರ್ಕೆದಂಪಿನೊಡನಂಗಜರಾಜನ ಕೋಳ ಬಾಳ್ಗೆ ಕೂ ।
ರ್ಪೇಱಿ ಕಟಾಕ್ಷಬಾಣದೊಡನಂಗಭವಾಸ್ತ್ರಕುಳಕ್ಕೆ ಕಾಮುನು ॥
ಕ್ಕೇಱಿ ಘನಸ್ತನಂಗಳೊಡನುತ್ಸವದಿಂ ಪೊರೆಯೇಱಿ ರೂಪು ಕ ।
ಣ್ಗೇಱಿ ವಿಳಾಸದಿಂದೆ ತಳಿರುಯ್ಯಲನೇಱಿದಳೊರ್ವಳೊಪ್ಪಿದಳ್ ॥ ೪೪ ॥

ವ ॥ ಈಕೆಯನಾಳೋಕಿಸಲೊಡಂ ಇಂದೋಳದಂತಾರಮನಮುಂ ಡೋಳಾಯಮಾನಮಾಗದಿರದೆನುತ್ತಮವಳ ಮೇಲೆ ನಟ್ಟದಿಟ್ಟಿಯನೆಂತಾನುಂ ತೆಗೆದು ಪೋಗೆವೋಗೆ ಮುಂದೊಂದಿಂದುಕಾಂತದ ಕಾಂತಮಾದ ಕುಡುವಾಟಮಲ್ಲದೆ ಮತ್ತೊಂದಲ್ಲವೆಂದು ಸೌಂದರ್ಯಮುಂ ಸೌಂದರ್ಯಸಂಕ್ರಂದನಂ ಪೊಗೞುತ್ತಂ ನಡೆಯೆ ನಡೆಯೆ ಮುಂದೊಂದೆಡೆಯೊಳ್—

ಮ ॥ ಸ್ರ ॥ ಅಲರ್ಗಣ್ಗಳ್ ಬೀಱೆ ಪೂಮಾಲೆಗಳನೆ ಬೆಳಗಂ ಬೀಱೆ ದಂತಚ್ಛದಂ ಪಾ ।
ಟಳವರ್ಣಂ ಬೀಱೆ ಕಾಶ್ಮೀರಮನನುನಯದಿಂ ಬೀಱೆ ತಾನುಂ ಲತಾಕೋ ॥
ಮಳೆ ಕಾಂತಾಸಂಕುಳಕ್ಕಾ ಕುಸುಮ ಘುಸೃಣಮಂ ಬೀಱೆ ತನ್ನಂದದಿಂದಂ ।
ಸಲೆ ಚೆಲ್ವಂ ಬೀಱುತಿರ್ಪುಯ್ಯಲನತಿಮುದದಿಂದೇಱಿದಳ್
ನೀರೆಯೊರ್ವಳ್ ॥ ೪೫ ॥

ಉ ॥ ಚಾರುವಿಳಾಸಮೊಕ್ಷಿ ಸುವರೀಕ್ಷಣಮಂ ಸೆಱೆಗೆಯ್ಯೆ ಪೀನವ ।
ಕ್ಷೋರುಹಪಾತದಿಂದಮೊಲೆದಾಡುವ ನಾಯಕರತ್ನರಂಜಿತಂ ॥
ಹಾರಮನಂಗನುಯ್ಯಲವೊಲೊಪ್ಪಿರೆ ತಾನೊಸೆದಾಡಿದಂದದಿಂ ।
ಮಾರನುಮಾಡುತಿರ್ಪುದನೆ ತೋರ್ಪವೊಲಾಡಿದ
ಳೊರ್ವಳುಯ್ಯಲಂ ॥ ೪೬ ॥

ವ ॥ ಅಂತುಮಲ್ಲದೆ—

ಚಂ ॥ ಲಲಿತಪಯೋಧರೋನ್ನತಿಗೆ ನರ್ತಿಸುವಂತೆವೊಲಾಗಳೇಱಿದು ।
ಯ್ಯಲೆ ನವಿಲುಯ್ಯಲೆಂದೆನಿಸೆ ಸೋರ್ಮುಡಿ ಸೋಗೆವೊಲಾಡೆ ಕಾಮನೆ ॥
ಚ್ಚಲರ್ಗಣೆಯಂತೆ ಕೇಳ್ವರೆರ್ದೆಯಂ ಕಳನಾದಮೆ ತಾಗೆ ರಾಗಮು ।
ಗ್ಗಲಿಸೆ ವಸಂತರಾಗದೊಳೆ ಪಾಡುತುಮಾಡಿದಳೋರ್ವಳುಯ್ಯಲಂ ॥ ೪೭ ॥

ಉ ॥ ಇಂಚರಮೊಂಟಿಪಂತಮೃತಮಂ ಕಿವಿಯಿಂ ಸವಿಯಪ್ಪ ನುಣ್ಪಿನಿಂ ।
ದಂಚೆಯ ತುಪ್ಪುಳಂ ತಿರಿಪಿದಂತೆವೊಲಾ ತಿರಿಪೆಯ್ದೆ ಮೆಲ್ಪನಾ ॥
ಳ್ದಂ ಚಿರಮಲ್ಲದೊಪ್ಪೆ ವಳಿ ನಲ್ಲಳಮೆಯ್ವಳಿಯಂತೆ ರಾಗಮಂ ।
ಸಂಚಿಸೆ ನಾಯಕೀಮಧುರಗೇಯಮದೇಂ ಮನಮಂ ಮರುಳ್ಚಿತೋ ॥ ೪೮ ॥

ವ ॥ ಅದಂ ಕೇಳ್ದು ಕುಸುಮಸುಕುಮಾರಿಯರ ಸರಸಗೇಯಮರಲಂಬಿನ ತನಿ ಗಂಪಿನಂತೆ ಮನಮನನುರಾಗದಿಂ ಪೊರೆದಪುದೆಂದು ಭರತಕಳಾಪರಿಣತರಂ ನಿರವಿಸುತ್ತಂ ನಡೆಯೆ ಮುಂದೊಂದು ಸಮುತ್ತುಂಗ ಮತ್ತವಾರಣದೊಳ್—

ಉ ॥ ಆರ ಮನಕ್ಕಮೊಕ್ಷಿಪೊಡೆ ಮೂರ್ಛೆಯನರ್ಪಿಸುತಿರ್ಪ ಕಾಮಕಾ ।
ಳೋರಗವಕ್ತ್ರದುಣ್ಮುವ ವಿಷಂಬೊಲಳುಂಬಮೆನಿಪ್ಪ ಕೇಶಸಂ ॥
ಸ್ಕಾರದ ಧೂಪವರ್ತಿಗಳ ಧೂಮಲತಾವಳಿ ಸುತ್ತೆ ಮನ್ಮಥಾ ।
ಕಾರರೆ ಮುಂದುಗಾಣದಿರೆ ಮೋಹಿಸಿದರ್ ಮಿಗೆ ವಾರನಾರಿಯರ್ ॥ ೪೯ ॥

ವ ॥ ಆ ಲತಾಕೋಮಳೆಯರೊಳಗೆ—

ಚಂ ॥ ವಿಳಸಿತ ಚಂದ್ರಮಂಡಳಮನೊಪ್ಪಿರೆ ರೋಹಿಣಿಯಪ್ಪಿದಂತೆ ನಿ ।
ರ್ಮಳಮುಖಚಂದ್ರನೊಳ್ತೊಳಗೆ ಮುತ್ತಿನ ಮೂಕುತಿ
ಲೋಳಲೋಚನೋ ॥
ತ್ಪಳರುಚಿವಿಭ್ರಮಂ ಭ್ರಮರಸಂಕುಳಮಂ ತೆಗೆವುತ್ತಮೊಪ್ಪಿ ಕೋ ।
ಮಳೆ ಮದನಾಜ್ಞೆ ಮೂರ್ತಿವಡೆದಿರ್ದವೊಲೊತ್ತೆಗೆ
ನಿಂದಳೊಪ್ಪಿದಳ್ ॥ ೫೦ ॥

ವ ॥ ವೃತ್ತಸ್ತನೆ ಮತ್ತೊರ್ವಳ್—

ಉ ॥ ಪಂಕಜನೇತ್ರೆ ಹಂಸಗಮನಾನ್ವಿತೆ ನಿರ್ಮಳೆ ಚಂಚರೀಕನೀ ।
ಳಾಂಕಿತಕೇಶಪಾಶೆ ಕಮನೀಯಪಯೋಧರೆ ನಣ್ಪುವೆತ್ತ ಸ ॥
ತ್ಕುಂಕುಮದಣ್ಪಿನಿಂದೆಳವಿಸಿಲ್ ಮುಸುಕಿರ್ದ ಸರೋವಿಳಾಸಮಂ ।
ಮಾಂಕರಿಪಾಕೆ ಪೇೞ್ ಭ್ರಮರಜಾಳಮನೇೞಿಸಿ ಪೋಗಲೀಗುಮೇ ॥೫೧॥

ಸಂಗತಮಧ್ಯಲಕ್ಷ್ಮಿ ಮದನಾಧಿಪ ದಿಗ್ವಿಜಯಕ್ಕೆ ಹರ್ಷದಿಂ ।
ಪೊಂಗಳಸಂಗಳಂ ರುಚಿರಪಲ್ಲವದರ್ಪಣಶೋಭಿತಂಗಳಂ ॥
ಪಿಂಗದೆ ಪೊತ್ತವೋಲ್ ಕುಚಯುಗಂ ಲಲಿತಾಧರಗಂಡಮಂಡಳಾ ।
ಲಿಂಗಿತಮೊಪ್ಪಿದತ್ತೆನುತೆ ನೋಡಿದನೊರ್ವಳನುರ್ವರೇಶ್ವರಂ ॥ ೫೨ ॥

ವ ॥ ಮತ್ತೊರ್ವಳ್ ಚಿತ್ತಪ್ರಿಯನಿನಿಸು ಪೊೞ್ತಂ ತಡೆಯೆ ಮನಮಂ ಸೈತಿಡಲಾಱದೆ ರೂಪಕಂದರ್ಪನ ಬರ್ಪ ಬಟ್ಟೆಯತ್ತಲೆ ದತ್ತದೃಷ್ಟಿಯಾಗಿ—

ಉ ॥ ಬಂಬಣ ಬಾಡಿ ಮುಂಬಗಲನೆಯ್ದಿದ ನೆಯ್ದಿಲವೋಲ್ ಕುರುಳ್ಗಳಾ ।
ತುಂಬಿಯ ಮಾೞ್ಕೆಯಿಂ ಪರೆಯೆ ದೂರಿಸಿ ತನ್ನನೆ ಕಣ್ಣನೀರ ಘು ॥
ರ್ಮಾಂಬುವ ಕಾೞ್ಪುರಂಗಳೊಳೆ ತೇಂಕುವ ಕಾಂತೆಯನೆಯ್ದೆವಂದು ಚಂ ।
ದ್ರಂಬೊಲಲರ್ಚಿದಂ ಕರದಿನಪ್ಪಿ ಕಳಾನಿಳಯಂ ಮನಃಪ್ರಿಯಂ ॥ ೫೩ ॥

ವ ॥ ಮತ್ತೊರ್ವಳೆಂತೆಂತು ಕಂತುಪ್ರತಾಪದಂತೆ ಚಂದ್ರಾತಪಂ ಪಸರಿಸುಗುಮಂತಂತರಂಗಮಂ ಸಂತಯ್ಸಲಾಱದಿಂತೆಂದಳ್—

ಚಂ ॥ ಎನಗೆ ಮನಃಪ್ರಿಯಂ ಮುನಿದು ಪೋದನವಂ ನನೆಗೋಲ ಕೋೞ್ಗೆದೆ ।
ನ್ನನೆ ಗುಱಿಮಾಡಿದಂ ಮನಸಿಜಂ ಪತಿಯುಂ ಗುಱಿಮಾಡನಕ್ಕ ಮ ॥
ನ್ನನದೊಳಹರ್ನಿಶಂ ನೆಲಸಿ ನಿಂದೊಡನಾಡಿಗಳಾದ ದೂಸಱಿಂ ।
ದಿನಿಯನದರ್ಕೆ ಬಾರನವನಂ ಬರಿಸಲ್ಲದೊಡಿಲ್ಲ ಜೀವನಂ ॥ ೫೪ ॥

ವ ॥ ಮತ್ತೊರ್ವಳುರ್ವಿದ ಬೆಳ್ದಿಂಗಳನಂಗಜನೆಂಬ ಬೇಂಟೆಕಾಱಿಂ ತಗುಳ್ಚಿದ ಕಾೞ್ಕಿಚ್ಚೆ ಗೆತ್ತು ಮೃಗನಯನೆ ಭಯಂಗೊಂಡು—

ಚಂ ॥ ಇನನುಳಿದಿಂದುರಾತ್ರಿಗಿನನಾಗಿಯೆ ನಿಂದವನಲ್ಲನಿಂದು ಕೇ ।
ಳೆನಗಮಿನಂ ದಲಾಗಿ ಸಖಿ ಸಾಧಿಸಿ ಕಾಯ್ದಪನೇವೆನೆಂದು ಕಾ ॥
ಮಿನಿ ಬಿಸುಸುಯ್ದು ಪಾಸಿದ ತಳಿರ್ಗನೆಯೊಳ್ ತನುತಾಪದಿಂದೆ ಕ ।
ಣ್ಪನಿಗಳನಾವಗಂ ಸೆಗಪಿದಂತಿರೆ ತಾಪಮನೋಪಳೆಯ್ದಿದಳ್ ॥ ೫೫ ॥

ವ ॥ ಮತ್ತೊರ್ವಳಿಂದುಮುಖಿ ಪೂರ್ಣೇಂದುವಂ ನೋಡಿ—

ಕಂ ॥ ಅಗಲೆ ಮದೀಶ್ವರನೆರ್ದೆವೊ ।
ಕ್ಕುಗೆ ಮಾಡಿರಿಸಿದ ಮನೋಜನುಗಿಬಗಿ ಮಾೞ್ಕುಂ ॥
ಬಗೆಯುನೆನೆ ಮಾಡದಿರ್ಕುಮೆ ।
ಮೊಗದೊಳ್ ಮಚ್ಚರಿಪ ಚಂದ್ರನೆಂದಳವಟಿದಳ್ ॥ ೫೬ ॥

ವ ॥ ಮತ್ತೊರ್ವಳ್ ಕುಂಟಣಿಯ ನಿವಹಕ್ಕೆ ಕಿನಿಸಿ ಗೆಂಟಾದ ಕಾದಲನಂ ನೆನೆದು—

ಕಂ ॥ ಇನಿಯನೊಡವಾೞ್ದೀ[ತನುಂ] ।
ಮುನಿದಿಸುವಂಗಜನುಮಲೆವ ತೆಂಬೆಲರುಂ ಕೇ ॥
ಳೆನಗೆ ಪಗೆಯಲ್ಲಗಲ್ಚಿದ ।
ಜನನಿಯೆ ಪಗೆಯೆಂದು ನೊಂದು ಕೆಳದಿಗೆ ನುಡಿದಳ್ ॥ ೫೭ ॥

ವ ॥ ಮತ್ತೊರ್ವಳ್ ತನ್ನ ಕನ್ನೆವೇಟದ ಕಾಂತಂ ಗ್ರಾಮಾಂತರಕ್ಕೆ ಪೋಗಿ ತಡೆಯೆ—

ಕಂ ॥ ಸ್ತನದ ಕಠಿಣತೆಯ ನೆವದಿಂ ।
ಮನದೊಳ್ ನೆಲಸಿರ್ದ ಕಠಿಣ ಭಾವಂ ಪೋದ ॥
ತ್ತಣಮೆಲ್ಪುವಡೆದು ಸೆಡೆದುದು ।
ವನಿತೆಯ ಮನಮುರಲಸರಲಪರಿಗತನುವಿನಾ ॥ ೫೮ ॥

ವ ॥ ಅಂತು ಕಂತುಶರಜಾಳದುರುಬೆಗೆ ಬೆಗಡುಗೊಂಡು ಗಂಡುನೊಳದ ಸೋಂಕುವಂ ಸೈರಿಸದೆ—

ಕಂ ॥ ಇನಿಯವನಿಲ್ಲದೊಡೂರ್ಕಾ ।
ನನಮೆನಗದಱಿಂದಮೆನ್ನ ಜವ್ವನದೊದವಂ ॥
ಗನೆ ಮೊಲದ ಜವ್ವನಂ ಗಿಡು ।
ವಿನೊಳಳ್ಕಾಡುವವೊಲಕ್ಕುಮೆಂದುರೆ ಸುಯ್ದಳ್ ॥ ೫೯ ॥

ವ ॥ ಮತ್ತೊರ್ವಳ್ ತನಗೆ ಶಿಶಿರೋಪಚಾರಮಂ ಮಾಡಲೆಂದು ಚಂದನಮಂ ತಂದ ಕೆಳದಿಗಿಂತೆಂದಳ್—

ಕಂ ॥ ಅಮೃತಕರಂ ಧೃತಿಯಂ ಕೌ ।
ಸುಮಹಾರಂ ದುಃಖಮಂ ನಿಜಾಂಗಭವಂ ತಾ ॥
ಪಮುನಕ್ಕ ಮಾೞ್ಕುಮೆನೆ ತಾ ।
ಪಮನೀಯದೇಂ ಪೇೞ್ ಚಂದನಂ ವಿಷಜನಿತಂ ॥ ೬೦ ॥

ವ ॥ ಮತ್ತೊರ್ವಳ್ ತನ್ನನಹರ್ನಿಶಮಿಸುವ ಕುಸುಮಶರನ ವಿದ್ಯೆ ಚೋದ್ಯಾವಹಮೆಂದಿಂತೆಂದಳ್—

ಕಂ ॥ ಪೂವಿಲ್ಲದೆಯುಂ ಪಲಸು ಫ ।
ಳಾವಳಿಯಂ ತಳೆವ ತೆಱದೆ ಪುಣ್ಣಿಲ್ಲದೆಯುಂ ॥
ಪೂವಿಲ್ಲನ ಶರಹತಿಯಿಂ ।
ನೋವನೆ ತಳೆದಪುದಿದೆನ್ನ ಹೃದಯಂ ಕೆಳದೀ ॥ ೬೧ ॥

ವ ॥ ಮತ್ತೊರ್ವಳ್ ವಿರಹಾನಳದಗ್ಧೆಯಪ್ಪತಿವಿದಗ್ಧೆ "ಸಂಸರ್ಗಜಾ ದೋಷಗುಣಾ ಭವಂತಿ"ಯೆಂಬ ನುಡಿಯೆನ್ನೊಳ್ ತಪ್ಪದಾದುದೆಂದು ನೊಂದು ನಿಜಸಖಿಗಿಂತೆಂದಳ್—

ಕಂ ॥ ವಿಷಸಂಗಮದಿಂ ಪಾಲುಂ ।
ವಿಷಮಪ್ಪವೊಲೆಯ್ದೆ ವಿಷಮಬಾಣನ ಕೆಳೆಯಿಂ ॥
ವಿಷಮಕರನಾಗಿ ನಿಂದನೆ ।
ವಿಷಯುತಕರನಾಗಿ ಕೊಲ್ಗುಮೆಯಮೃತಕರಂ ॥ ೬೨ ॥

ವ ॥ ಅಂತು ನೆಗೞ್ದ ವಿರಹಾಕ್ರಾಂತೆಯರಪ್ಪ ಕಾಂತೆಯರ ಕರುಣಾರಸದುಚಿತ ವಚನಂಗಳಂ ಕೇಳ್ದು ದುಃಖಿತೇ ಮನಸಿ ಸರ್ವಮಸಹ್ಯಮೆಂಬ ನುಡಿಯಿವಳ್ದಿರೊಳ್ದೊದ ೞ್ದುದೆಂದೋರೋರ್ವರೊಳೋರೋರ್ವರ್ನುಡಿಯುತ್ತಂ ಪೋಗೆವೋಗೆ ಮುಂದೊಂದೆಡೆ ಯೊಳ್ ಸೂಳೆಕೆಳೆಯರೆಲ್ಲಂ ನೆರೆದಿರ್ದಲ್ಲಿಯೊರ್ವನಿಂತೆಂದಂ—

ಉ ॥ ಆಳ್ಗಣೆ ಭೋಗಿ ಚಾಗಿ ಚದುರಂ ಸುಭಗಂ ಮೃದುಚಿತ್ತನುತ್ತಮಂ ।
ತೋಳ್ಗಿಸೆವಂ ಗಭೀರನವರಿಚ್ಛೆಯ ಮೆಚ್ಚುವ ರೂಪುಗೊಂಡವೋ ॥
ಲೇೞ್ಗೆ ಸೊಕಕ್ಕೆ ಪೆರ್ಚು ಹರಿಸಕ್ಕೊದವೊಲ್ಮೆಗೆ ಕೂಡೆ ಕೂಡಿ ತ ।
ನ್ನೊಳ್ಗಣಿಕಾಳಿಯಂ ನಿಲಿಪನಲ್ಲದೆ ಸೂಳೆಗೆಯಲ್ಕೆ ಬಲ್ಲನೇ ॥ ೬೩ ॥

ವ ॥ ಮತ್ತೊರ್ವ ವಚನರಚನಾಚತುರನಿಂತೆಂದಂ—

ಚಂ ॥ ಒಲಿಸುವ ಗಾಡಿ ಪಂಬಲಿಸುವಿಂಬಿನ ಚುಂಬನಮರ್ಥಿತಾರ್ಥಮಂ ।
ಸಲಿಸುವ ಚಾಗಮಗ್ಗಲಿಪ ಭೋಗಮೊಡಂಬಡೆ ಕೂಡೆ ಪೆರ್ಮೆಯಿಂ ॥
ನಿಲಿಸುವ ಪೆಂಪು ಗೊಟ್ಟಿಗಳವಟ್ಟಿರೆಯೋದುವ ಪಾಡುವೋಜೆಯಂ ।
ಕಲಿಸುವ ಬಲ್ಮೆಯುಳ್ಳ ವಿಟನಂಗನೆಗಂಗಜನಸ್ತ್ರಮಲ್ಲನೇ ॥ ೬೪ ॥

ವ ॥ ಮತ್ತೊರ್ವ ವಾತ್ಸ್ಯಾಯನ ತಾತ್ಪರ್ಯವಿಚಕ್ಷಣನಿಂತೆಂದಂ—

ಉ ॥ ಲೋಳಕಟಾಕ್ಷ ತೀಕ್ಷ್ಣಕರದಿಂ ತೆಗೆದಿಚ್ಛೆಗೆ ಸಲ್ವ ಮೇಳದಿಂ ।
ಮೇಳಿಸಿ ಕೇಳಿಯಿಂ ಪರಿಚಯಂ ಬಳೆದಂದೊಳಗಾದ ನಲ್ಲನಂ ॥
ತೋಳ ತೊಡರ್ಪಿನಿಂ ಪಿಡಿದು ಚುಂಬನದಿಂದೆ ಮರಳ್ಚಿ ಸೌಖ್ಯಮಂ ।
ಪಾಳಿಪ ಕೂಟದಿಂದೊಲಿಸುವಾಕೆಯೆ ಕಾಮನ ಲೀಲೆಗಾಲಯಂ ॥ ೬೫ ॥

ವ ॥ ಮತ್ತೊರ್ವಂ ಕಾಮಕಳಾಕಳಾಪಕುಶಳನಿಂತೆಂದಂ—

ಉ ॥ ರೂಪು ಮನೋಹರಂ ಹರೆಯವೀಕ್ಷಣಸೌಖ್ಯಕರಂ ಕಳಾಕಳಾ ।
ಪೋಪಚಯಂ ಪ್ರಗಲ್ಭಜನಮೋಹನಸಂಜನಕಂ ಸ್ವಭಾವಮಿ ॥
ಚ್ಛಾಪರಿಪಾಳಕಂ ರಸಿಕಸಂತತಿಗೆಂಬ ಸಿತಾಂಬುಜಾಕ್ಷಿಯು ।
ದ್ದೀಪನಭಾವನಾಯಕಿಯೆ ನಾಯಕಿಯಲ್ತೆ ಮನೋಜರಾಜನಾ ॥ ೬೬ ॥

ವ ॥ ಮತ್ತೊರ್ವ ಸಂಭೋಗಸಂಭೂತಸುಖಸಾರಸರ್ವಸ್ವಸ್ವೀಕಾರಲೋಲುಪ ನಿಂತೆಂದಂ—

ಉ ॥ ಚುಂಬನದಿಂಬು ಚುಂಬನದ ವಾಂಛೆಯನಪ್ಪಿನೊಳಪ್ಪ ಸೌಖ್ಯಮಂ ।
ದುಂ ಬಿಡದಪ್ಪುತಿರ್ಪುದನೊಡಂಬಡೆ ಕೂಡುವ ಬಲ್ಮೆ ಕೂಟಮಂ ॥
ಪಂಬಲಿಸುತ್ತಮಿರ್ಪುದನೆ ಮಾೞ್ಪುವೆನಿಪ್ಪ ಕಳಾಪ್ರಗಲ್ಭೆಯಂ ।
ಚುಂಬಿಸುವಪ್ಪುವೊಲ್ದೆರೆದು ಕೂಡುವ ನಲ್ಲನೆ ಧನ್ಯನಲ್ಲನೇ ॥ ೬೭ ॥

ವ ॥ ಮತ್ತೊರ್ವನೊಲ್ದೊಲಿಸಿ ಬಲ್ಲ ಬಸನದ ಲವಲವಿಕೆ ಕುಸಿಯದ ಬಸನಿಯಿಂತೆಂದಂ—

ಚಂ ॥ ಘನಜಘನಂ ಘನಸ್ತನಯುಗಂ ಘನವೇಣಿ ಮನಕ್ಕೆ ರಾಗಮಂ ।
ಜನಿಯಿಸುವಂದದಿಂ ಕುಸುಮಕೋಮಳೆಗಾದೊಡಮಿಂಪನೀವ ನ ॥
ಲ್ಲನ ರತಿಕೇಳಿ ಭಾರವೆನಿತುಂ ಘನಮಾದುದೆನುತ್ತೆ ರಾಗಮಂ ।
ಜನಿಯಿಕುಮಂತೆ ಬೇಟಮಿರೆ ಕೂಟದೊಳಿಂ
ತಣಿವರ್ಗೆ ಸಾರ್ಗುಮೇ ॥ ೭೮ ॥

ವ ॥ ಮತ್ತೊರ್ವನೊರ್ವಳ ಗರ್ವದುರ್ವು ಮನಕ್ಕುಬ್ಬೆಗಮಂ ಕೊರ್ವಿಸೆ ಮುಳಿದುಱಿದು ಬಂದಿಂತೆಂದಂ—

ಚಂ ॥ ಬಗೆಯದ ಬಾರ್ತೆಗೆಯ್ಯದೊಲವಂ ಪ್ರತಿಪಾಳಿಸದಾಱಿದೋರ್ಪ ಬ ।
ಲ್ಕೆಗೆ ಬೆಸದಿರ್ಪ ಭಾವಮಱಿದಪ್ಪದ ಕಣ್ಗೆನಿಸೊಪ್ಪದಿಚ್ಛೆಗ ॥
ಚ್ಚೆಗವನೆ ಮಾಡ್ವ ಬೇಟ್ಪುದನೆ ಪೋಗೆನಿತಿತ್ತೊಡಮಿತ್ತನೆಂಬ ಮೆ ।
ಚ್ಚುಗೆ ತನಗಿಲ್ಲದಂಗನೆಗೆ ಕೂರ್ತವನಗ್ಗದ ಕಟ್ಟೆಯಲ್ಲನೇ ॥ ೭೯ ॥

ವ ॥ ಮತ್ತೊರ್ವನೆಲ್ಲಾ ತೆಱದಿಂ ತನ್ನ ಮನವಱಿದು ನಡೆವ ವನಿತೆಯಂ ನೆನೆದಿಂತೆಂದಂ—

ಉ ॥ ದಿಟ್ಟಿಯನಾಣೆಯಿಟ್ಟ ತೆಱದಿಂ ತೆಗೆವಾಕೃತಿ ಪಾಡುವೋದುವೀ ।
ಗೊಟ್ಟಿಗೆ ಸಲ್ವ ಬಲ್ಮೆ ಪಣಮುಳ್ಳವನಿಂ ಗುಣಮುಳ್ಳ ನಲ್ಲನಂ ॥
ಕೊಟ್ಟುದೆ ಕೋಟಿಯೆಂದಱಿದು ಮನ್ನಿಪ ಮೆಯ್ಮೆ ನಿಮಿರ್ಕೆ ಕೂಟದೊಳ್ ।
ಪುಟ್ಟುವ ಸೋಂಕನುಳ್ಳವಳೆ ಕಾಮವಶೀಕರಣಾಸ್ತ್ರಮಲ್ಲಳೇ ॥ ೮೦ ॥

ವ ॥ ಎಂದಿಂತು ತಂತಮ್ಮ ಬಗೆಗೆವಂದ ಭಂಗಿಯಿಂದಂ ನುಡಿವುದುಮುದಂ ವಿದೂಷಕಂ ಕೇಳ್ದಿವಂದಿರ ವಚನಂ ಭಿನ್ನರುಚಿಯಾದೊಡಂ ರಸಾವಹಮಾದುದೆನುತ್ತಮ ರಸನಂ ಮೆಚ್ಚಿಸುತ್ತಂ ಪೋಗೆ ವೃದ್ಧ ವಿಟೆಯೊರ್ವಳ್ ತನ್ನ ಮೊಗದ ತೆರೆಯುಮಂ ಮಂಡೆಯ ನರೆಯುಮಂ ಕಂಡಪರೆಂದಡಿಗಡಿಗೆ ಮೊಗಕ್ಕೆ ತೆರೆಯಂ ತೆಗೆವುದಂ ಕಂಡು "ಅಯಃಪಟಃಸಂವೃತಮೇವ ಶೋಭತೇ" ಎಂಬ ನೀತಿಯಿಂ ಸಂವರಿಸುವ ಮುಸುಕಿನಿಂ ಮುಪ್ಪನೊಪ್ಪಮಂ ಮಾಡಿಕೊಂಡಿರ್ದಪ್ಪಳೆಂದಱಿದವಳ ಕೆಲಕ್ಕೆ ಪೋಗಿ—

ಮ ॥ ಇದು ಚಿತ್ರಂ ಮೃದುಪಾದಪಲ್ಲವದ ಮೆಲ್ಪಂ ನೋಟ್ಪೋಡೀಕೇಶಪಾ ।
ಶದ ನೀಳ್ಪಂ ಮೊಲೆಯಲ್ಲಿ ಲೋಚನದ ಬೆಳ್ಪಂ ಮಧ್ಯದಲ್ಪತ್ವಮ ॥
ಪ್ಪುದನಿಂತೀ ಮುಡಿಯಲ್ಲಿ ಮಾನಿನಿ ಕರಂ ಲಾವಣ್ಯವಾರಾಶಿ ಬ ।
ತ್ತಿದೊಡಂ ಪೇೞ್ತೆಱ ಕಾಣಲಾದವುದಿದೇಂ ನಿನ್ನೊಂದು
ಸಾಮರ್ಥ್ಯಮೋ ॥ ೮೧ ॥

ವ ॥ ಎಂದವಳಂ ಮುಗುಳ್ನಗೆತ್ತೆಗೆ ಪೋಱಮಡದಂತು ಕೂಂಟಿಮಾಡಿ ಜಗತೀಪತಿಯ ಮೊಗಕ್ಕೆ ಮುಗುಳ್ನಗೆಯನೋಲಗಿಸುತ್ತಂ ಪೋಗೆ ಮುಂದೊಂದಿಂದುಕಾಂತ ರಮ್ಯಹರ್ಮ್ಯವಿಳಾಸನಿವಾಸ ವಾಸನಿಳಯದೊಳ್—

ಉ ॥ ಈ ರತಿರಾಗಸಾಗರೆಯೆನಿಪ್ಪ ಲತಾಂಗಿಯೊಳನ್ಯರಾಗಮಂ ।
ಸ್ವೈರಿಸೆನೆಂಬವೋಲಧರಪಲ್ಲವರಾಗಮುಮಂ ಕಪೋಳ ಕಾ ॥
ಶ್ಮೀರ ಸುಪತ್ರರಾಗಮುಮನೀಂಟಿದನಾಳಿಂಗೊಳಂಗರಾಗಮಂ ।
ಸಾರೆಡೆವೊಕ್ಕೆಯೇಕೆನುತೆ ಮರ್ದಿಪವೋಲ್ ಬಿಗಿದಪ್ಪಿದಂ ಪ್ರಿಯಂ ॥ ೭೨ ॥

ಚಂ ॥ ಇನಿಯಳ ಮೆಯ್ಗೆ ಮೆಯ್ವಿರನಕ್ಷಿಗಸಂಚಳವೃತ್ತಿಯಂ ಮನ ।
ಕ್ಕನುಪಮ ಹರ್ಷಮಂ ಪಡೆದು ಕೂಡಿ ಕಳಾಕುಶಳಂ ನಿರಂತರಂ ॥
ಘನಕುಚದೊಳ್ಕಪೋಳತಳದೊಳ್ನಳಿತೋಳ್ಗಳೊಳೊಪನಿತ್ತನೂ ।
ತನ ನಖರೇಖೆಗಳ್ ಸೊಗಯಿಸಿರ್ದುವು ರಾಗದ ಬಳ್ಳಿವಳ್ಳಿವೋಲ್ ॥ ೭೩ ॥

ವ ॥ ಮತ್ತೊಂದುತ್ತುಂಗ ಮನಃಪ್ರಸಾದಕ ಪ್ರಾಸಾದೋಪರಿಮ ಭೂಮಿಭಾಗದೊಳ್—

ಚಂ ॥ ಲಲನೆ ಮನೋಭವಾಂಬುದದ ಮಾಟ್ಕೆಯುವೋಲ್ಪದನಿತ್ತು ಪೂಣೆ ಕ ।
ಣ್ಬೊಳೆಯುದೆ ಮಿಂಚಿನಂತಿರೆ ಗಳಧ್ವನಿ ಪೊರ್ಮೆರೆ ಮೇಘನಾದದಂ ॥
ತಳವಡೆ ಕೇಶಪಾಶವಲೆದಾಡದೆ ಕೇಕಿಯುವೋಲ್ ರತಾಂತಮಂ ।
ತಲಘುತರೋಪಶಾಂತ ಘನಕಾಲದ ಲೀಲೆಯನಾಂತುದಾವಗಂ ॥ ೭೪ ॥

ವ ॥ ಅಂತು ಮದನೋನ್ಮಾದಮಂಡಿತಮಾದ ನಿಜಕಟಕವಿಟವಿಟೀಜನಜನಿತ ವಿನೋದಮಂ ವಿನೋದಚತುರಂ ನಿರೀಕ್ಷಿಸುತ್ತಮಿರೆ ರಾಗಸಾಗರದ ವೇಳೆಯಂತೆ ವೇಳಾತಿಕ್ರಮಮಾದುದೆಂದು ವಿದೂಷಕನಿಂತೆಂದಂ—

ಕಂ ॥ ಕಡೆಗಣ್ಣಳ ಸೆಳೆಯಿಂ ಪೊ ।
ಯ್ವೊಡೆ ತಡೆದಿರ್ಪುದಲ್ಲದಿರ್ದೊಡೆ ದೇವ ॥
ನಡೆವುದು ದೇವಿಯರ ಮನಂ ।
ಬಿಡಿವುದು ಕಾಲ್ವಿಡಿದು ಕೇಳ್ವೊಡೆನ್ನಯ ನುಡಿಯಂ ॥ ೭೫ ॥

ವ ॥ ಎನೆ ದರಹಸಿತ ಸುಮುಖಸರಸಿರುಹನರಮನೆಯತ್ತಲಭಿಮುಖನಾಗಿ ಪೋಗಿ ನರ್ಮಸಚಿವರಂ ಕಪ್ಪುರಂ ಬೆರಸಿದ ವೀಳೆಯಂಗಳಂ ಕೊಟ್ಟು ಕಳಿಪಿ ರಾಜಮನೋಜಂ ರತಿಗೃಹಮಂ ಪುಗುವಂತೆ ರಯ್ಯಮಪ್ಪ ಶಯ್ಯಾಗೃಹಮಂ ಪುಗುವುದುಂ ಮುನ್ನಮೆ ತನ್ನ ಬರವಂ ಪಾರುತ್ತಮಿರ್ದು ತಡೆದು ಬಂದುದರ್ಕೆ ಮುನಿದುಂ ಮುನಿದಿರಲಱಿಯದತಿಮುಗ್ಧೆ ಪುಸಿನಿದ್ರೆಯಂ ಮೊಗಕ್ಕೆ ತಂದು ಪಟ್ಟಿರ್ದುದನಱಿದು ನಿದ್ರೆ ಕೆಟ್ಟಪುದೆನುತ್ತಂ ಮೆಲ್ಲನೆ ಸೋಂಕುವುದುಮೆಚ್ಚತ್ತ ಮೆಯ್ಮವಿರ್ಗಳೆರ್ತರ್ಪುದನಱಿಪೆ ಮುನಿಸುಮಂ ನಿದ್ರೆಯುಮನುಜ್ಜಯಿಸಿ ಲಜ್ಜೆಯನುಜ್ಜೀವಿಸುತ್ತಮಿರ್ದ ಬಾಳೆಯಂ ಮೇಳದಿಂ ಮೇಳಯಿಸಿ—

ಚಂ ॥ ಪಲವು ಮತಂಗಳಿಂ ನೆಗೞ್ದ ಚುಂಬನದಿಂ ಪಲವಪ್ಪುವಪ್ಪಿನಿಂ ।
ಪಲವು ತೆಱಂಗಳಾಸನದಿನಂಬುರುಹಾಸ್ಯೆಗೆ ರಾಗದೇೞ್ಗೆಯುಂ ॥
ಪುಳಕಮುಮಪ್ಪಿನಂ ಸಮರತಂ ಸಮನಿಪ್ಪಿನಮೋತು ಕೂಡಿ ಭೂ ।
ತಳಪತಿ ಮಾಡಿದಂ ಸುಖದ ಸೊರ್ಕನಶೇಷಕಳಾವಿಚಕ್ಷಣಂ ॥ ೭೬ ॥

ವ ॥ ಅಂತು ಸಂತೋಷಮಂ ಬಳೆಯಿಸುತ್ತಂ ಬೆಳೆದ ಸುರತಶ್ರಾಂತಿಯೆ ಸುಖ ಸುಪ್ತಿಯನೀಯೆ ಕಾಂತೆಯ ನಳಿತೋಳ ತಳ್ಪಿಂಗೊಳಗಾಗಿ ಮೃದುತಳ್ಪತಳದೊಳವನೀತಳ ನಾಥಂ ಪವಡಿಸಿರೆ—

ಚಂ ॥ ವಿರಹಿಯ ಮನ್ಮಥಾನಳಮುಖೋದಿತ ಧೂಮದೆ ಕಂದಿದಂತೆ ಕಂ ।
ದಿರೆ ಶಶಿಬಿಂಬಮಸ್ತಗಿರಿಮಸ್ತಕದೊಳ್ ಭಗಣಂ ನಿಶಾಂಗನಾ ॥
ಭರಣದ ಮೌಕ್ತಿಕಂಬೊಲೊಡವೋಗೆ ಸುರೇಶದಿಶಾವಧೂಮುಖಾಂ ।
ಬುರುಹ ಪರಾಗರಾಗಮೆನೆ ಸಂಜೆ ಪೊದಱ್ದುದು ಪೂರ್ವದಿಕ್ಕಿನೊಳ್ ॥ ೭೭ ॥

ಬಿಸಜದೆಸಳ್ಗಳಂ ಬಿಡೆ ಸಡಿಲ್ಚಿ ವಿಯೋಗವಿಷಾದದಿಂದೆ ಮೂ ।
ರ್ಛಿಸುವ ರಥಾಂಗಯುಗ್ಮಮನಲರ್ಚಿ ಸರೋವರವೀಚಿಮಾಳೆಯೊಳ್ ॥
ಪಸರಿಸಿ ಕೇಳಿಪುಷ್ಪಿತ ಲತಾವಳಿಯುಂ ನಲವಿಂದೆ ಸೋಂಕಿ ಬಂ ।
ದೆಸಗಿತು ಸುಪ್ರಭಾತದಸಮೀರಣಮಾಶ್ರಿತ ಸೌಖ್ಯಕಾರಣಂ ॥ ೭೮ ॥

ಕಂ ॥ ಉದಯಗಿರಿಯರುಣಮಣಿಗಳ್ ।
ಪೊದಱ್ದಿ ಪರಿತಪ್ಪ ಹರಿಯ ಹರಿಪದರಥಚ ॥
ಕ್ರದ ಹತಿಯಿನೊಡೆಯೆ ರಜಮೊಗೆ ।
ದದೆ ತೋಱುವುದೆನಿಸಿತೆಸೆವ ಸಂಧ್ಯಾರಾಗಂ ॥ ೭೯ ॥

ನೆರೆಯೆ ರುಚಿ ಚಕ್ರವಾಕಂ ।
ನೆರೆಯೆ ತಮಂ ಪರಿಯೆ ಪರೆಯೆ ನಿಜದೀಧಿತಿ ಭಾ ॥
ಸ್ಕರನಬ್ಜನಿಕರಲಕ್ಷ್ಮೀ ।
ಕರನನುಪಮನೊಗೆದನುದಯಗಿರಿಮಸ್ತಕದೊಳ್ ॥ ೮೦ ॥

ಮ ॥ ಜಿನಪೂಜ್ಯಾಷ್ಟವಿಧಾರ್ಚನಾವಿವಿಧ ದಿವ್ಯಾಮೋದದೊಳ್ ತ್ರವ್ಯನೂ ।
ತನಸಂಗೀತನಿನಾದದೊಳ್ ವನಲತಾಂತಾಮೋದಮಂ ಮತ್ತ ಭೃಂ ॥
ಗನಿನಾದಂಗಳನೊಯ್ದು ಕೂಡಿ ಜನತಾಸಂಪ್ರೀತಿಯುಂ ಮಾಡಿ ಮೆ ।
ಲ್ಲನೆ ತೀಡಿತ್ತಘುಜಾಳಜಾಳನ ಸುಶೀಳಂ ಸುಪ್ರಭಾತಾನಿಳಂ ॥ ೮೧ ॥

ವ ॥ ಅಂತು ನೇಸಮೂರ್ಡುವುದುಮಾ ಸಮಯದೊಳ್ ಮಂಗಳಪಾಠಕಂ ಬಂದು—

ಚಂ ॥ ಕಿಡೆ ರಿಪು ರಾಜತೇಜದೊಡನೂರ್ಜಿತ ರಾಜನ ತೇಜಮನ್ಯರೊ ।
ಳ್ದೊಡೆಗಳೊಳೊಂದಿ ಕಣ್ಗೆಸೆವ ಮಿಂಗಳಡಂಗೆ ವಿರೋಧಿಭೂಪರೊಳ್ ॥
ಪಿಡಿದಸಹಾಯ ಹರ್ಷದೊಡನೊಂದಿ ಚಕೋರದ ಹರ್ಷಮೋಡೆ ಪೆಂ ।
ಪೊಡರಿಪ ನಿನ್ನ ತೇಜದುದಯಕ್ಕೆಣೆಯಾಯ್ತುದಯಂ ದಿನೇಶನಾ ॥ ೮೨ ॥

ಕಂ ॥ ರವಿರಥಹಯದಂತೆ ದಿಶಾ ।
ನಿವಹಮನಾಕ್ರಮಿಸಲೆಂದು ನಿಜಹಯಮಾಶಾ ॥
ಪ್ರವರಗಜದಂತೆ ಗಜತತಿ ।
ಭುವನಾಧಿಪ ದಿಗ್ಗಜಕ್ಕೆ ಬಯಸಿದುದಲ್ತೇ ॥ ೮೩ ॥

ವ ॥ ಎಂದು ಬಿನ್ನವಿಸಿದನಂತರಂ—

ಕಂ ॥ ಜಿನಪದನಖಮಣಿದೀಧಿತಿ ।
ಜಿನಮುಖಮಣಿದರ್ಪಣಂ ಜಿನಾಭಿಷವಾದ್ಯಂ ॥
ಜಿನದಿವ್ಯಾಷ್ಟವಿಧಾರ್ಚನೆ ।
ಯನವರತಂ ಚಕ್ರವರ್ತಿಗೊದವಿಸುಗೊಳ್ವಂ ॥ ೮೪ ॥

ವ ॥ ಎಂದು ಪೊಗಟ್ಟಿ ಪುಣ್ಯಪಾಠಕರವದೊಡನೆ ನೆಗಟ್ಟಿ ಸುಪ್ರಭಾತ ಶಂಖ ತೂರ್ಯರವಮುಂ ಹಯಘೋಷಾರವದೊಡನೆ ಪೊಡರ್ವ ಸಮದಗಜಸಂಹತಿರವಮು ಮುಪವನ ವನರುಹಷಂಡ ಚಂಡಾಳಿರವದೊಡನೆ ಸಮನಾಗಿ ನೆಗೆವ ಭಂಡಾಳಿ ಮಧುರ ಗೇಯರವಮುಂ ಕಿವಿಗವತಂಸಮಪ್ಪುದುಮುಪ್ಪವಡಿಸಿ—

ಕಂ ॥ ನಯನಿಳಯಂ ಪ್ರಾಭಾತಿಕ ।
ನಿಯಮಮನಾಚರಿಸಿ ತೊಟ್ಟು ಮಣಿಭೂಷಣಮಂ ॥
ಜಯಜೀಯರವಂ ನೆಗಟೆ ವಿ ।
ಜಯ ಪರ್ವತಗಜದ ಬೆಂಗೆವಂದು ನರೇಂದ್ರಂ ॥ ೮೫ ॥

ಪಡೆಮಾತೇಂ ಮಾಗಧನಂ ।
ಪಿಡಿದಲ್ಲದೆ ಮಾಣೆನೆಂದು ತನ್ನಯ ಪಡೆಯಂ ॥
ಪಡೆವಳ ಬಡಗಮೊಗದೆನೀಂ ।
ನಡೆಯಿಸುವುದೆನುತ್ತೆ ಕರೆದು ನಿಯಮಮನಿತ್ತಂ ॥ ೮೬ ॥

ವ ॥ ಅಂತು ಬಳಾಧ್ಯಕ್ಷನಂ ಬರಿಸಿ ನಿಯಮಿಸುವುದುಮಾತನಮಾತಂ ಕೇಳ್ದು ನಡೆಯೆ ನಡೆಯೆ—

ಕಂ ॥ ಆದರದೆ ರಕ್ತೆಯಿಂ ಗಂ ।
ಗೋದೆವರೆಗಮುಗಟನಗಿದು ಮಾಗಧ ವಿಭು ಸೀ ॥
ತೋದೆಗೆ ನೇರ್ಗಿಱಿದೆನೆ ಸಂ ।
ಪಾದಿಸಿದವೋಲೆಸೆದುದು ನದೀಜಲಪೂರಂ ॥ ೮೭ ॥

ವ ॥ ಅದಂ ರಕ್ತಾನದೀವೇದಿಕೆವಿಡಿದು ದಾಂಟಿ—

ಮ ॥ ಪಡೆಯೆಯ್ದಿತ್ತಧಿನಾಥನೆಂದ ತೆಱದಿಂ ರಕ್ತಾನದೀತೀರಮಂ ।
ಪಿಡಿದಂತಾನದಿಯುಂ ನಿಸರ್ಗ ವಿಳಸತ್ಸೀತೋದೆಯುಂ ಕೂಡಿದೊಂ ॥
ದೆಡೆಯುಂ ಭೂಪತಿ ಬರ್ಪ ಸಂತಸದೆ ಸೀತೋದಾನದೀದೇವಿ ನೇ ।
ರ್ಪಡೆ ತಾಂ ಕಟ್ಟಿದ ತೋರಣಂಬೊಲೆಸೆದತ್ತಾ ತೋರಣ ದ್ವಾರಮುಂ ॥ ೮೮ ॥

ಕಂ ॥ ಪನ್ನೆರಡು ಯೋಜನಂ ನೀ ।
ಳಂ ನವಯೋಜನಮುದಗಲಮೆನೆ ಬಿಡಿಸಲ್ ಬೀ ॥
ಡನ್ನೆಲನೆಯ್ದದೆ ಪಡೆವಳ ।
[ನಿನ್ನಿಂತು] ನೆರೆಯೆ ಕುರುಂಬುಗೊಳಿಸಿದನಾಗಳ್ ॥ ೮೯ ॥

ಕಂ ॥ ಭೃಂಗವೃತವನಜಸುರಭಿತ ।
ರಂಗೋಭಯಸಿಂಧು ಸಂಗಮೋದಿತ ಮರುದಾ ॥
ಸಂಗಮಮಭಿನವಮಂ ಸುಖ ।
ಸಂಗಮಮಂ ಪಡೆಗೆ ಪಡೆಗದೇಂ ಸೊಗಯಿಸಿತೋ ॥ ೯೦ ॥

ಚಕ್ರಧರಂ ವಾಹನದಿಂ ।
ಚಕ್ರಘನಸ್ತನಿಯರೊಡನೆ ಕಡೆಗಣ್ಗಳ್ ದಿ ॥
ಕ್ಚಕ್ರಮನೆಳವೆಳಗುಗಳಿಂ ।
ದಾಕ್ರಮಿಸುತ್ತಿಱಿಯೆ ಮೂರ್ತಿ ಮನ್ಮಥನಿಱಿದಂ ॥ ೯೧ ॥

ವ ॥ ಅಂತು ಪೆರ್ವಿಡಿಗಳಿನಿಱಿದ ವಿಳಾಸಿನೀಜನಂ ಬೆರಸು ನದೀವಿಳಾಸಮಂ ನೋಡಿ—

ಮ ॥ ಇದು ಕೂಡುತ್ತಿರೆ ವಾರಿರಾಶಿವೆಸರಂ ತಾಳ್ದಿತ್ತು ಗಂಭೀರಮಾ ।
ದುದು ಮುನ್ನೀರೆನೆ ಪೆಂಪನೊಪ್ಪುವ ನಿಳಿಂಪರ್ ಕ್ರೀಡಿಪರ್ ಬಂದು ಸ ।
ಮ್ಮದದಿಂದೆಂದೊಡೆ ಚೆಲ್ವನಾರ್ಪೊಗಟಿರೆಂದುರ್ವೀಶ್ವರಂ ಸಮ್ಮದ ।
ಪ್ರದ ಸೀತೋದೆಯನಱ್ತಿವಟ್ಟು ಪೊಗಟ್ಟಿಂ ವಿಶ್ವಾರ್ಥಿವಿಚ್ಛೇದೆಯಂ ॥ ೯೨ ॥

ಗಗನಂ ತನ್ನವೊಲಾವಗಂ ಭುವನಮಂ ತಾಳ್ದಿರ್ಪುದೆಂಬೊಂದು ಮೆ ।
ಯ್ಮಗೆ ಮುಯ್ಯಾಂತುಮದೊಪ್ಪುವಂತೆ ನಳಿತೋಳಿಂ ತೋರ ಮುಕ್ತಾಫಳಾ ॥
ಳಿಗಳಂ ತಾರಗೆಯಲ್ಲಿ ತಾಂ ಪಡಿಯಿಡಲ್ಪೋದಪ್ಪುದೆಂಬಂತೆ ನೆ ।
ಟ್ಟಗೆ ಸೀತೋದೆ ಪೊದಟ್ದ ಪೆರ್ದೆರೆಗಳಿಂ ತಟ್ಟೈಸಿತಾಕಾಶಮಂ ॥ ೯೩ ॥

ವ ॥ ಎಂದು ಗುಣಸಿಂಧು ಸಿಂಧುವಿನ ಗಭೀರತೆಯನಭಿವರ್ಣಿಸಿ—

ಕಂ ॥ ಜಲಮಂ ಪೊಕ್ಕಿರ್ದಪನೆನೆ ।
ಜಲಮಂ ಮಾಗಧನೊಳಜಿಸಲಲ್ಲಿ ವಿಲಂಘ್ಯಂ ॥
ದಲಿದೆಂದು ಬಂದು ಕಾಣದೆ ।
ನಿಲೆ ತವಿಸುವೆನದನೆ ಬಟಿಕವನ ಜೀವನಮಂ ॥ ೯೪ ॥

ತವಿಸುವೆನೆಂದುದ್ಯೋಗಿಪ ।
ಭುವನಾಧೀಶ್ವರನನಖಿಳಕುಳವೃದ್ಧರ್ ಬಿ ॥
ನ್ನವಿಸಿದರಂತುಟೆ ದೇವ ।
ರ್ಗವಿಧೇಯಮೆನಿಪ್ಪ ಜನಕೆ ಜೀವನಮುಂಟೇ ॥ ೯೫ ॥

ಆದೊಡಮೇನವನಿಪನೀ ।
ನಾದಿ ನೃಪಾಳಕ ಚರಿತ್ರನದರಿಂದಾದ್ಯ ॥
ಶ್ರೀದಯಿತ ಚಕ್ರಿಗಳ್ ಪರ ।
ಮಾದರದಿಂ ನೆಗಟ್ದ ತೆಱದೆ ನೆಗಟಲೆವೇಟ್ಕುಂ ॥ ೯೬ ॥

ಧೃತಧವಳವಸ್ತ್ರನಧಿವಾ ।
ಸಿತ ಚೈತ್ರ ಶರಾಸನಾಸ್ತ್ರಭಯನುಪವಾಸ ॥
ತ್ರಿತಯಯುತಂ ಜಲ್ಪಿತ ಜಲ ।
ನುತಮಂತ್ರಂ ದರ್ಭಶಯ್ಯೆಯೊಳ್ ವಿಭುವಿರ್ದಂ ॥ ೯೭ ॥

ಕಂ ॥ ಇರೆ ದರ್ಭಶಯ್ಯೆಯೊಳ್ ವಿಭು ।
ವಿರಚಿಸಿ ಪರಮೇಷ್ಠಿ ಪೂಜೆಯಂ ಶಾಂತಿಕಮಂ ॥
ನಿರುತಂ ಪೌಷ್ಟಿಕಮಂ ಹಿತ ।
ಪುರೋಹಿತಂ ಮಾಡೆ ಸಿದ್ಧಮಾದುದು ಮಂತ್ರಂ ॥ ೯೮ ॥

ವ ॥ ಅಂತು ಸಿದ್ಧಮಂತ್ರನಾಗಿ ಮಱುದೆವಸಂ ಪ್ರಾತಸ್ಸಮಯದೊಳ್—

ಕಂ ॥ ಮಂಗಳಪಸದನದಿಂದೆ ಮ ।
ನಂಗೊಳಿಸುತಮಿರ್ದು ಪಡೆಯ ಕಾಪಂ ಪಡೆವ ॥
ಳ್ವಂಗೆ ಸಮರ್ಪಿಸಿ ಮಾಗಧ ।
ನಂ ಗೆಲ್ವುದ್ಯೋಗದಿರ್ದನುತ್ತಮ ಸತ್ವಂ ॥ ೯೯ ॥

ರವಿರಥಹಯದೋಲ್ ಸಂಚರಿ ।
ಸುವ ಮಾಗಧ ಗಿಳಿಯ ಬಣ್ಣದಶ್ವಂಗಳನೊ ॥
ಪ್ಪುವಿನಂ ಪೂರಿತನೇಱಿದ ।
ನವನೀಶ್ವರನೊಸೆದು ರಥಮನಜಿತಂಜಯಮಂ ॥ ೧೦೦ ॥

ವ ॥ ಅಂತು ವಿವಿಧಾಯುಧಂಗಳಿಂ ಮನಂಗೊಳಿಸುವ ಮನೋರಥಮಂ ತೀರ್ಚುವ ರಥಮನೇಱಿ ಮಾಗಧನ ವಿಕ್ರಮಮನತಿಕ್ರಮಿಸುವುದಂ ನಿವೇದಿಸಿ ವಜ್ರ ವೇದಿಕೆಯಂ ದಾಂಟಿ ಸೀತೋದೆಯಂ ತೋರಣದ್ವಾರದಿಂ ಪೊಕ್ಕು ಚೋದಿಸೆನೆ—

ಕಂ ॥ ಸಾರಥಿ ಮನೋರಥಕ್ಕಂ ।
ಸಾರಥಿಯೆನೆ ಹರ್ಷಮೊದವೆ ಚಕ್ರಿಗೆ ರಥಮಂ ॥
ಧಾರಿಣಿಯೊಳ್ ಪರಿಯಿಪವಂ ।
ನೀರೊಳ್ ಚೋದಿಸಿದನೇನವಂ ಪರಿಣತನೋ ॥ ೧೦೧ ॥

ತೆರೆಮುಗಿಲ ಬಟ್ಟೆವಿಡಿದು ಭಾ ।
ಸ್ಕರರಥ ಪರಿಪರಿವ ತೆಱದೆ ತೇಜಶ್ಚಕ್ರಾ ॥
ಭರಣನ ರಥ ಪರಿಪರಿದವು ।
ತೆರೆದುಱುಗಲನಟ್ಟುವಂದದಿಂ ಸಿಂಧುವಿನೊಳ್ ॥ ೧೦೨ ॥

ಹಯಖುರಮುಂ ಚಕ್ರದ ನೇ ।
ಮಿಯುಮೂರ್ಜಿತ ವಜ್ರಮಕ್ಕುಮೆನೆ ವಾಹಿನಿಯೊಳ್ ॥
ನಿಯತ ಮರಾಳದೆ ಸಮುಭೂ ।
ಮಿಯೊಳದಿರದೆ ಪರಿವ ತೆಱದೆ ಪರಿದತ್ತು ರಥಂ ॥ ೧೦೩ ॥

ಸರಸಿಜ ಪರಾಗದಿಂದಂ ।
ಪೊರೆದ ತರಂಗಾಳಿ ರಂಗವಲಿಯಂ ಭೂಪಂ ॥
ಬರುತಿರೆ ತಜ್ಜಲದೇವತೆ ।
ವಿರಚಿಸಿದವೊಲೆಸೆದವಸದಳಂ ಸಿಂಧುವಿನೊಳ್ ॥ ೧೦೪ ॥

ಮ ॥ ಸಕಳೋರ್ವೀಶನಲಂಘ್ಯಮೆಂದಿರದೆ ಕೇಳಿಕ್ಲೇಶದಿಂ ವಜ್ರವೇ ।
ದಿಕೆಯಂ ದಾಂಟಿದನೆನ್ನಗುಣ್ಪನೆನಸುಂ ಕೀಟ್ಮಾಡಿದಂ ನಿನ್ನನಿಂ ॥
ಪ್ರಕಟಂ ರಕ್ಷಿಪರಿಲ್ಲ ಮಾಗಧ ಶರಣ್ಬೊಕ್ಕೆಯ್ದೆ ಬಾಟೆಂದು ವೀ ।
ಚಿಕಳಾಪಧ್ವನಿಯಿಂದೆ ಪೇೞ್ವ ತೆಱದಿಂ ಸೀತೋದೆಯೋನೊಪ್ಪಿತೋ ॥ ೧೦೫ ॥

ಕಂ ॥ ಪನ್ನೆರಡು ಯೋಜನಂಬರೆ ।
ಗಂ ನಿಲ್ಲದೆ ಪರಿದು ಜಳಚರಂ ರಥಹತಿಯಿಂ ॥
ದಂ ನೊಂದವುವೆಂದಾ ನದಿ ।
ಯುನ್ನತ ದೇವತೆಯೆ ಕರುಣದಿಂ ನಿಲಿಸಿದವೋಲ್ ॥ ೧೦೬ ॥

ಪರಿಯದೆ ನಿಲೆ ರಥಮುರಿಪರಿ ।
ವರಿದಧಿಪನ ಕೋಪಮುಳುರ್ವ ಬಡಬಾನಳನಂ ॥
ತುರಿಪಲೊಡರ್ಚಿತ್ತುಹಿತನ ।
ಪುರದೊಡನಂಬುಧಿಗೆ ಸದೃಶಮೆನಿಸಿದ ನದಿಯಂ ॥ ೧೦೭ ॥

ಮುಳಿದು ಕುಳುಂಪೆಯ ಜಳಮಿೞಿ ।
ಜಳಮೆಂದು ತುಳುಂಕುತಿದಱ ಜಳಚರಮನಿತುಂ ॥
ಪೆಳಱುಗುಮೆಂದೊಲ್ಲದೆ ರಿಪು ।
ನಿಳಯಮನನಳಾಸ್ತ್ರದಿಂದಮುರಿಪುವೆನೆನುತಂ ॥ ೧೦೮ ॥

ಪೊಡವಿ ಪೆಳಱಿತ್ತು ಕುಳಗಿರಿ ।
ನಡುಗಿತ್ತಾಶಾಗಜಾಳಿ ಮದವುಡುಗಿತ್ತಾ ॥
ಜಡಧಿ ಕಲಂಕಿತ್ತರಿಯೆರ್ದೆ ।
ಯೊಡೆವಿನೆಗಂ ನೃಪತಿ ಜೇವೊಡೆಯೆ ನಿಜಧನುವಂ ॥ ೧೦೯ ॥

ಮ ॥ ಸ್ರ ॥ ಅರಿದರ್ಪೋಚ್ಚಾಟನಾನ್ಯಕ್ಷಿತಿಪತಿವಿಭವಾಕರ್ಷಣಾಕ್ಷೋಣಮಂತ್ರಾ ।
ಕ್ಷರಮೆಂಬಂತಿರ್ದ ನಾಮಾಕ್ಷರಮನೆ ತಳೆದಿರ್ದತ್ರಮುಂ ಜ್ಯಾರವಂ ಮೋ ॥
ಘರವಪ್ರಸ್ಪರ್ಧಿ ಪೊಣ್ಮುತ್ತಿರೆ ನರಪತಿ ತೊಟ್ಟೆಚ್ಚೊಡುರ್ಚಿತ್ತು ವಜ್ರ ।
ಸ್ಫುರಿತಾಂಗಂ ಮಾಗಧಾತ್ಯುನ್ನತನಿಳಯಶಿಳಾಸ್ತಂಭಮುಂ
ಚಕ್ರಿಬಾಣಂ ॥ ೧೧೦ ॥

ಕಂ ॥ ಸ್ತಂಭಮನಂಬುರ್ಚೆ ಗತಿ ।
ಸ್ತಂಭಂ ಕೆಲಬರ್ಗೆ ಕೆಲರ್ಗೆ ದೋರ್ವಳ ಗರ್ವ ॥
ಸ್ತಂಭಂ ಕೆಲಬರ್ಗೆ ಮತಿ ।
ಸ್ತಂಭಂ ಸಂಭವಿಸಿತಮರವಿಭುವಿನ ಸಭೆಯೊಳ್ ॥ ೧೧೧ ॥

ವ ॥ ಅಂತಾಶಿಳೀಮುಖಸಂಭವರವಕ್ಕೆ ವಿರಹಿಗಳಂತೆ ಭಯಾಕ್ರಾಂತಸ್ವಾಂತರಾದರಂ ವೀರಾಂಗನಾಸಂಗತರಾದರೆಂತಾನುಂ ಸಂತೈಸಿ ಹಸ್ತಾಂಜಳಿ ಮೌಳಿಯೊಳ್ ಲೀಲೆವಡೆಯೆ ತಮ್ಮೊಡೆಯಂಗಿಂತೆಂದರ್—

ಕಂ ॥ ಪಲದೆವಸಕ್ಕೆತ್ತಾನುಂ ।
ಕಲಹಂ ದೊರೆಕೊಂಡೊಡಿಲ್ಲಿ ನೋರ್ವರ್ಗಳದಿಂ ಮಾ ॥
ರ್ಬಲಮನದಟಲೆಯುದಿರ್ದೊಡೆ ।
ನಲವಿಂ ರಕ್ಷಿಸಿತು ದೇವ ನಿಷ್ಫಳಮಲ್ತೇ ॥ ೧೧೨ ॥

ವ ॥ ಎಂದು ನುಡಿವ ಸುಭಟಾಳಾಪಮೆ ಕೋಪಾನಳಕ್ಕುದ್ದೀಪನ ವಿಭಾವಮಂ ಪಡೆಯೆ—

ಕಂ ॥ ಬಿಡದ ಮಱಿಯೊಡನೆ ಕಾಯ್ಪಂ ।
ಸಿಡಿಲೊಡರಿಪ ತೆಱದೆ ಘರ್ಮಜಳದೊಡನೆ ಪೊಡ ॥
ರ್ಪುಡುಗದ ಕೋಪಾನಳಮಂ ।
ದೊಡರಿಸಿದುದು ಘನಮದಾಂಧನೊಳ್ ಮಾಗಧನೊಳ್ ॥ ೧೧೩ ॥
ಮೆಚ್ಚನನುವರದೊಳೆಂಬಿನ ।
ಮೆಚ್ಚನನೀ ಶರಮೆ ಮಗುಟ್ಟಿ ತಾಗಿದ ತೆಱದು ॥
ಮ್ಮೆಚ್ಚಮಿರದೊದವೆ ಮನದೊಳ್ ।
ಮಚ್ಚರಮಱಿವಿನೆಗಮಳರಿಪೆಂ ದೋರ್ವರ್ಗಳದಿಂ ॥ ೧೧೪ ॥
ಆರಿದನೆಚ್ಚವರೆಂಬುದ ।
ನಾರಯ್ಯದೆ ವೀರವೃತ್ತಿಯುಂ ನುಡಿವುದೆ ಸಾ ॥
ಧಾರಣನೋ ರಣಧೀರನೊ ।
ಬಾರಿಸಿ ನೋಡುವುದು ತತ್ಪ್ರಶಸ್ತಿಕ್ರಮಮಂ ॥ ೧೧೫ ॥
ಭರತೈರಾವತದೊಳ್ ನಿಯ ।
ತರೆನಿಸೆ ಸಂಜನಿಯಿಕುಂ ತ್ರಿಷಷ್ಟಿಶಲಾಕಾ ॥
ಪುರುಷರ್ ವಿದೇಹದೊಳ್ ಕುಂ ।
ದರೆಂದುಮುದಱಿಂದೆ ಚಕ್ರಿಯಾಗಲೆವೇಱ್ಕುಂ ॥ ೧೧೬ ॥
ನಿನ್ನನೆಱಗಿಪೊಡೆ ಚಕ್ರವ ।
ರಂ ನೆರೆಗುಂ ಪೆಱರ ವಿಕ್ರಮುಕ್ಕೆಡೆಗುಡದ ॥
ತ್ಯುನ್ನತ ಗಭೀರತಾಸಂ ।
ಪನ್ನಂ ನಿಜವಾಸಮಸ್ತಮಿತ ಸಂತ್ರಾಸಂ ॥ ೧೧೭ ॥
ಬಾಣಮಿದಧಿಪತಿ ನಿಗದಿತ ।
ಬಾಣಮನೊಳಕೊಂಡು ದಂಡಮಂ ಸಾಮುವನ ॥
ಕ್ಷೋಣಿಮನಱಿಪಲ್ ನೆರೆಗುಂ ।
ಕ್ಷೋಣೀಶರ್ಗಧಿಕ ಶೌರ್ಯ ಮಂತ್ರಿಯ ತೆಱದಿಂ ॥ ೧೧೮ ॥

ವ ॥ ಎಂದಿಂತದಱೊಳಿರ್ದಂಕಮಾಲೆಯ ಬಿಂಕಮಂ ಕೇಳ್ವುದೆಂದ ಸಚಿವನ ವಚನಮುಚಿತಮೆನಿಸಿ ಮನಕ್ಕೆವರೆ ಮಾಗಧಂ ಮಹಾಸಂಧಿವಿಗ್ರಹಿಯ ಮೊಗಮಂ ನೋಱ್ಪುದುಮಾತಂ ಶಿಳಾಸ್ತಂಭದೊಳ್ ವಿಜೃಂಭಿಸುತ್ತಂ ಕೆತ್ತಿಸಿರ್ದ ವಿಶಿಖಗತ ಲಿಖಿತ ಸುವರ್ಣಪತ್ರಮಂ ನೋಡಿ—

ಚಂ ॥ ಜಳಚರವೃತ್ತಿಯಂ ತಳೆದು ವರ್ತಿಸುತಿರ್ಪವರ್ಗೞಂಟೆ ಬೇೞ್ ದೋ ।
ರ್ವಳಮದೞಿಂದೆ ಕಾಲ್ವೊೞೆಯಿದಾದುದು ತಾನೆಳಸಿರ್ಪ ಸಿಂಧು ಮಾ ॥
ರ್ಮಲೆಯಲೆವೇಡ ಜೀವನಮನೊಲ್ವೊಡೆ ಮಾಣ್ಬುದು ವಜ್ರನಾಭಿಯಂ ।
ಬಳನಿಧಿ ಚಕ್ರವರ್ತಿಯನದರ್ಕಭಯಂ ಭುವನೈಕರಕ್ಷಕಂ ॥ ೧೧೯ ॥

ವ ॥ ಎಂದು ಬರೆದಿರ್ದ ರಾಜಾದೇಶಮಂ ಬಾಜಿಸೆ ಕೇಳ್ದು ಕಂಗನೆ ಕನಲ್ದಿಂತೆಂದಂ—

ಮ ॥ ನದಿಯಂ ನಾವಿಕನಂತೆ ಪೊಕ್ಕು ಗುೞಿಯಂ ಧಾನುಷ್ಕನೆಂಬಂತೆ ತ ।
ಪ್ಪದಿದಂ ಕಂಬಮನೆಚ್ಚುದಂತವಗೆ ವಾಹಾಗರ್ವಮಂ ತೋಱೆ ಬೇ ॥
ಡಿದಪಂ ಕಪ್ಪಮನೆನ್ನವಾಹಿನಿಯುಮಂತಾ ಮದ್ಭುಜಾದಂಡಮುಂ ।
ಕದನಕ್ರೌರ್ಯಮನೀಯದಂತವರವೋಲೆಂತುಂ
ಸಮಂತಿರ್ಕುಮೇ ॥ ೧೨೦ ॥

ವ ॥ ಎಂದು ಮುನಿಸಂ ಮೊಗಕ್ಕೆ ತಂದಾಸ್ಥಾನರಂಗದಿಂದೆರ್ದು ರಣರಂಗಕ್ಕು ದ್ಯೋಗಿಸುತಿರ್ದನಂ ಚಕ್ರವರ್ತಿಯ ಸಾಮರ್ಥ್ಯಮನಱಿವ ಹಿತಮಹತ್ತರರುದ್ವೃತ್ತನಂ ಮಾಗಧನಂ ಮಾರ್ಕೊಂಡು—

ಕಂ ॥ ಏಕಾಕಿಯ ಕಲಹಮುಮು ।
ಸ್ವೀಕರಣೀಯಂ ವಿವೇಕಿಗಳಿಗೆಂದೊಡಿದೇಂ ॥
ಲೋಕಾಧಿಪತಿಯ ಕದನಂ ।
ಸ್ವೀಕರಣೀಯಮೆ ಬಿಸುಟ್ಟುದಸದಾಗ್ರಹಮಂ ॥ ೧೨೧ ॥
ಪೂಜಿಸು ರಾಜಿತ ಶರಮಂ ।
ರಾಜಾದೇಶಮನೆ ಮೌಳಿಯೊಳ್ ತಳೆ ನಡೆನಿ ॥
ರ್ವ್ಯಾಜದೊಳೆ ಚಕ್ರಿ ಚರಣಾಂ ।
ಭೋಜಕ್ಕೊಲ್ದೆಱಗು ಪಡೆವೊಡಧಿಕಶ್ರೀಯಂ ॥ ೧೨೨ ॥

ವ ॥ ಎಂದನ್ವಿತರುಂ ಹಿತಾನ್ವೇಷಿಗಳುಮಪ್ಪ ಮಹಾಪ್ರಧಾನರ್ ನುಡಿದ ನುಡಿ ಗೊಡಂಬಟ್ಟು ಚಲಮಂ ಬಿಟ್ಟು—

ಉ ॥ ಗಾಲಿಯನೆತ್ತಿ ಪತ್ತಿಗೆಯ ವಾಹಖುರಂಗಳ ಘಾತದಲ್ಲಿ ಕ ।
ಲ್ಲೋಲಮದಾಗದಿರ್ದುದಿನರಶ್ಮಿಗೆ ಕೊಳ್ಗುದಿಗೊಳ್ವವೋಲಿಳಾ ॥
ಪಾಲನ ತೇಜದೇೞ್ಗೆಗಗಿವಂಬುಚರಂಗಳ ಮೋಹದಿಂದವಂ ।
ಪಾಲಿಸವೇೞ್ಕುಮೆಂದು ವರುಣಂ ಬರುತಿಪ್ಪವೊಲೊಪ್ಪಿ ಮಾಗಧಂ ॥ ೧೨೩ ॥

ವ ॥ ಬಂದು ವಿನಯವಿನಮಿತೋತ್ತಮಾಂಗನಾಗಿ—

ಕಂ ॥ ವರುಣನ ಭಂಡಾರದೊಳೆಸೆ ।
ವರುಣ ಮಣಿಪ್ರಕರದಂತೆ ರಂಜಿಪ ರತ್ನಾ ॥
ಭರಣಂಗಳನೋಲಗಿಸಿದ ।
ನೆರಡಿಲ್ಲದ ಭಕ್ತಿಯಿಂದೆ ಚಕ್ರಿಗೆ ದಿವಿಜಂ ॥ ೧೨೪ ॥

ವ ॥ ಓಲಗಿಸುವುದುಮಾತನ ವಿನಯುಮೆ ತನಗೆ ವಾರ್ತೆಯಪ್ಪುದಱಿನಾ ಪದಾರ್ಥಮುಂ ವಾರ್ತೆಗೆಯ್ಯುದೆಯುಮಾತನ ಬಿನ್ನಪಮುಂ ಮನ್ನಿಸಲ್ವೇೞ್ಕುಮೆಂದುನ್ನತ ಚಿತ್ರನೊಂದೆರಡು ರತ್ನಂಗಳಂ ತಳೆದುಕೊಂಡುೞಿದುಮಂ ತಾಂ ಕುಡುವ ಪಸಾಯ ದೊಡನ ಕೊಟ್ಟು ಸಂತೋಷಂ ಬಡಿಸೆ ಮಾಗಧನಾಗಳಿಂತೆಂದಂ—

ಕಂ ॥ ಅನುಪಮಪದನಖಮಣಿಯಿಂ ।
ಸನಾಯಕಂ ಮಕುಟಮಾಯ್ತು ಭವದೀಯ ದಯಾ ॥
ಜನಿತಪ್ರಸಾದದಿಂದಂ ।
ಸನಾಥಮಾದತ್ತು ಮತ್ಕುಲಂ ಭುವನಪತೀ ॥ ೧೨೫ ॥

ವ ॥ ಅಂತಾವಿಬುಧಪತಿಯುಂ ವಿಬುಧಪತಿ ಸಂತೋಷಂಬಡಿಸಿ ಬೀೞ್ಕೊಳಿಸಿ ಪರಿಜನಂ ಬೆದಱುಗುಂ ಬೇಗಂ ಪೋಗೆಂದು ಕಳಿಪಿ—

ಕಂ ॥ ಉದಯಾಚಳ ಕಟಕಕ್ಕಿನ ।
ನುದಧಿಯಿನೇೞ್ತಪ್ಪ ತೆಱದೆ ನಿಜಕಟಕಕ್ಕಾ ॥
ನದಿಯಿಂದಂ ಸೈನಿಕ ಚ ।
ಕ್ರದ ಹರ್ಷಂ ಬಳೆಯೆ ಚಕ್ರವಿಭುವೆೞ್ತಂದಂ ॥ ೧೨೬ ॥

ರವಿ ದೂರದೊಳಿರ್ದುಮಭೀ ।
ಷುವಿನಿಂದೆ ಕುವಳಯದ ಲಕ್ಷ್ಮಿಯುಂ ಪರಿಪವೊ ॥
ಲ್ದಿವಿಜಕುಲಧನಮುಮಂ ಚ ।
ಕ್ರವರ್ತಿ ಹಾನ್ಸೈಸಿದನಿಷುವಿನಿಂ ಘನತೇಜಂ ॥ ೧೨೭ ॥

ವ ॥ ಎಂದು ಮಾಗಧನೊಳ್ ಮಾಡಿದಮಾರ್ಯ ಶೌರ್ಯಮಂ ಮಾಗಧರ್ ಮನೋರಾಗದಿಂ ಪರಿಕೀರ್ತಿಸುತ್ತಂ ಬರೆ ತೀರದೇಶದೊಳ್ ತನ್ನ ಬರವಂ ಪಾರುತ್ತಮಿರ್ದ ಮಹಾಸಾಮಂತಮಕುಟಬದ್ಧ ಮಣಿಮಕುಟಸ್ಯಂದನರುಚಿರುಚಿರಚರಣಾರವಿಂದಂ ಸ್ಯಂದ ನದಿಂದಮಿೞಿದು ಬಳಸಿ ಬರ್ಪ ಪರಿಜನಂ ಚಿರಸಶೇಷ ವಿಬಿರಯೋಷಿದ್ದತ್ತ ಶೇಷಾಕ್ಷ ತಂಗಳನುತ್ತಂಸಂ ಮಾಡುತ್ತಂ ಮಂಗಳ ಪಾಠಕ ಗಾಯಕರವಂಗಳಂ ಕರ್ಣಾವತಂಸಂ ಮಾಡುತ್ತಂ ರಾಜಹಂಸಂ ರಾಜನಿಳಯಮನಳಂಕರಿಸಿ ಮಱುದೆವಸಂ ದಿವಸಮುಖ ದೊಳ್ ಪೂರ್ವಾಭಿಮುಖನಾಗಿ ನಡೆದು ನಿಜಕಟಕಮಂ ನವೀಕಟಕದೊಳ್ ಬಿಡಿಸಿ—

ಮ ॥ ಸ್ರ ॥ ಸ್ಥಿರತೇಜಂ ವೈಜಯಂತೀಮುಖದೆ ಪರತಸುಖ್ಯಾತನಂ ಭೂರಿಶೋಭಾ ।
ಕರರಕ್ತೋದಾನದಿಪ್ಪಾರದಿನವಯುವದಿಂ ಪೊಕ್ಕು ಮಿಕ್ಕಾಪ್ರಭಾಸಾ ॥
ಮರನಂ ಪೂರ್ವಕ್ರಮಂ ನೇರ್ವಡೆ ಪದನತರಂ ಮಾಡಿ ಸಾಶ್ಚರ್ಯ ಶೌರ್ಯಾ ।
ಭರಣಂ ವಿಖ್ಯಾತಿವೆತ್ತಂ ಸುಕವಿಜನಮನೋಹರ್ಷ ಸಸ್ಯಪ್ರವರ್ಷಂ ॥ ೧೨೮ ॥

— ಗದ್ಯಂ —

ಇದು

ವಿದಿತವಿಬುಧಲೋಕನಾಯಕಾಭಿಪೂಜ್ಯವಾಸುಪೂಜ್ಯಜಿನಮುನಿ
ಪ್ರಸಾದಾಸಾದಿತ ನಿರ್ಮಳಧರ್ಮ ವಿನುತವಿನೇಯಜನ
ವನಜವನವಿಳಸಿತ ಕವಿಕುಳತಿಳಕಪ್ರಣೀತಮಪ್ಪ
ಪಾರ್ಶ್ವನಾಥ ಪುರಾಣದೊಳ್
ಮಾಗಧಾಮರವರತನು
ಪ್ರಭಾಸಾಮರದರ್ಪ
ದಳನ ವರ್ಣನಂ

**ದಶಮಾಶ್ವಾಸಂ ಸಮಾಪ್ತಂ**

---

॥ ಶ್ರೀಃ ॥

# ಏಕಾದಶಾಶ್ವಾಸಂ

× × × × × × × × × × × × × ×

ವ ॥ × × ಮಾಟ್ಕೆಯಿಂದಮೆ ಜಳಾಶಯಮುಂಬುದಕಾಲದಲ್ಲಿ ಸಂವರಿಸಿದ ಜೀವನಂಗಳನೆ ತೀವ್ರಕರಂ ಕವರ್ದಂ ನಿದಾಘದೊಳ್—

ಮ ॥ ನೆಲನೆಲ್ಲಂ ತಪನಪ್ರತಾಪಶಿಖಿಯಿಂದಂ ಕಾಯ್ದು ಕಾವೇರಿಯುಂ ।
× × × × × × × ದಿಲ್ಲೆನುತಂ ಪೋಪಂತು ನಾನಾನದೀ ॥
ಜಲಮಾದಂ ಕುದಿದುರ್ಕೆ ಮಾರ್ಗ ಖುರವೆತ್ತಂ ಪೊತ್ತಿ ಕಾಡೊಳ್ ದವಾ ।
ನಳನಂ ಪುಟ್ಟಿಸೆ ಕೊರ್ವಿ ಪರ್ವಿದುದಗುರ್ವಂದುಗ್ರ ಘರ್ಮಾಗಮಂ ॥ ೬ ॥

ವ ॥ ಅಂತಾಸುರಮಾದ ಬೇಸಿಗೆಯೊಳ್—

ಚಂ ॥ ಮಳಯಜದಣ್ಪು ಕಪ್ಪುರದ ತಂಬುಲಮೊಪ್ಪುತಮಿರ್ಪ ಮೌಕ್ತಿಕಂ ।
ಗಳ ತೊಡಮುಚ್ಚಳಿಪ್ಪ ದುಗುಲಂ ಹಿಮಚಂದನಗಂಧವಾರಿ ಶೀ ॥
ತಳನಿಳಯಂ ಮೃಣಾಳವಳಯಂ ಕೊಳನಂಬುಜಪತ್ರವೀಜನಂ ।
ಕಳೆಯೆ ನಿದಾಘದಾಹದೊದವಂ ಪಡೆಯೇಂ ಪಡೆದತ್ತು ಸೌಖ್ಯಮಂ ॥ ೭ ॥

ಮ ॥ ಇಡಿದುರ್ವೀರುಹಷಂಡದಿಂದೆ ಲತಿಕಾ ಸಂದೋಹದಿಂ ಕೋಡುತಂ ।
ಕುಡದರ್ಕಾಂಶುಗಮುರ್ಕೆಯುಂ ಮಿಸುಪ ರಕ್ತೋದಾನದೀತೀರಮಂ ॥
ಪಿಡಿದಾ ಗ್ರೀಷ್ಮದೊಳಾದ ಭೇದದೊದವಂ ಕೈಕೊಳ್ಳದಾನಂದಮಂ ।
ಪಡೆಯುತ್ತಂ ಪಡೆ ಪೊರ್ದಿದತ್ತು ವಿಜಯಾರ್ಧಾದ್ರೀಂದ್ರಮಂ ರುಂದ್ರಮಂ ॥ ೮ ॥

ಹರಿಯೂಥಂ ಖಗರಾಜಿ ಖಡ್ಗನಿವಹಂ ನಾಗವ್ರಜಂ ಸ್ಯಂದನೋ ।
ತ್ಕರಮು ದ್ಗಂಧ ಮರುದ್ಗಣಂ ಕಟಕರತ್ನಶ್ರೇಣಿಗಳ್ ತನ್ನೊಳೊ ॥
ಪ್ಪಿರೆ ಷಟ್ಖಂಡಧರಿತ್ರಿ ಸೇವಿಸೆ ನಿಜ ಶ್ರೀಪಾದಮಂ ಪೆಂಪುವೆ ।
ತ್ತಿರದಿಂ ಚಕ್ರಧರಂಗೆ ಮಿಕ್ಕ ವಿಜಯಾರ್ಧಂ ಸ್ಪರ್ಧೆಯಂ ಮಾಡುಗುಂ ॥ ೯ ॥

ವ ॥ ಅಂತು ಸೊಗಯಿಸುವ ವಿಜಯಾರ್ಧನಗಮನೆಯ್ದೆವಂದು—

ಕಂ ॥ ನುತರಕ್ತೋದಾ ತೀರದ ।
ಮಿತವನಧಿನುತ್ಸವಾದುತ್ಸವ? [ಮಾದತ್ತೆನೆ] ॥
ಪತಿತಮೆನುತ್ತಂ ವಿಜಯಾ ।
ರ್ಧತಟದ ನಂದನಮನೆಯ್ದಿತಾ ನೃಪಕಟಕಂ ॥ ೧೦ ॥

ಚಂ ॥ ಮಳಯಜ ಮಾಧವೀವಕುಳಚಂಪಕಲೋಧ್ರಲವಂಗಮಾಗಧೀ ।
ತಿಳಕ ತಮಾಳತಾಳಸರಳಾಮಳಕಾರ್ಜುನಸರ್ಜಭೂರ್ಜ ಗು ॥
ಗ್ಗುಳಘನಸಾರ × × × × × ಲವಂಗಪಾ।
ಟಳ ಗಿರಿಮಲ್ಲಿಕಾಸುರಭಿಶೋಭಿಸುತಿರ್ದುವು ತದ್ವನಾಂತದೊಳ್ ॥ ೧೧ ॥

ಕಂ ॥ ಪ್ರಿಯಪವನಂ ಪಿಕನಿನದಂ ।
ಮಯೂರನೃತ್ಯಂ ಪ್ರಸೂನಗಂಧಂ ಫಳಸಂ ॥
ಚಯಸಮನಿತ್ತಂ ಪಂಚೇಂ ।
ದ್ರಿಯ ಸುಖಮಂ ಪಡೆಗೆ ಪಡೆದುದಾ ನಂದನದೊಳ್ ॥ ೧೨ ॥

ಕುಸುಮಶರಚಕ್ರಿ ಸವನಮ ।
ನೆಸಗಲ್ ಮಧುಚಕ್ರಿ ರಾಜ್ಯಸವನಮನೆಸಗಲ್ ॥
ಮಿಸುಗಿರೆ ಪಸುರ್ವಂದಲನೆ ।
ತ್ತಿಸಿದನೊ ವಿಜಯಾರ್ಧನೆನಿಸಿ ರಂಜಿಸಿತು ವನಂ ॥ ೧೩ ॥

ವ ॥ ಅಂತು ರಾಜಿಸುವ ವನರಾಜಿಯಂ ವನವೇದಿಕಾತೋರಣದ್ವಾರದಿಂ ಪೊಕ್ಕು—

ಕಂ ॥ ರಮಣೀಯ ರತ್ನಮಯ ಮ ।
ಧ್ಯಮಕೂಟಾಸನ್ನ ಸನ್ನಿವೇಶಿತ ಬಳಭೂ ॥
ರಮಣನಿರೆ ನಿಯಮದಾ ನಿಯ ।
ಮಮೆ ತಾಂ ತನಗಧಿಪ ನಿಯಮಮಾಗಿರೆ ಬೇಗಂ ॥ ೧೪ ॥

ವಿಜಯಾರ್ಧಕುಮಾರಂ ನಿಜ ।
ಭುಜಗರ್ವಂ ಪರ್ವತಂಬೊಲಿರ್ವಗೆ ಚಕ್ರಿ ॥
ಧ್ವಜಿನೀಗಜರದಕುಳಿಶ ।
ವ್ರಜದಂತಿಯಿನಾದುದೆನಿಸೆ ಕಂಡಂ ಭಯದಿಂ ॥ ೧೫ ॥

ಮ ॥ ಕ್ರಮಕಂಜಕ್ಕಭಿಷೇಕಮಂ ಮಕುಟಮಾಣಿಕ್ಯಾಂಶುವಿಂ ಮಾಡಿ ವಿ ।
ಕ್ರಮ ಚಕ್ರಪ್ರಭುವಿಂಗಿದೆನ್ನಯ ನಿಯೋಗಂ ಪೂಜ್ಯರಾಜ್ಯಾಭಿಷೇ ॥
ಕಮನಾಂ ಮಾಳ್ಪೆನೆನುತ್ತೆ ಬಿನ್ನವಿಸಿ ತೀರ್ಥೋದಚ್ಛಾಂಬುವಿಂ ತೂರ್ಯ ಘೋ ।
ಷಮದೆತ್ತಂ ಪೊಱಪೊಣ್ಮೆ ಪೊಣ್ಮಿ ವಿಜಯಾರ್ಧಂ ಪ್ರೇಮದಿಂ ಮಾಡಿದಂ ॥ ೧೬ ॥

ವ ॥ ಅಂತು ರಾಜ್ಯಾಭಿಷೇಕಮನನೇಕ ಮಂಗಳಾನಕನಿನದಮೆಸೆವಿನಮೆಸಗಿ ರಾಜ್ಯಚಿಹ್ನಮಿವನವಧಾರಿಸುವುದೆಂದು—

ಕಂ ॥ ಧವಳಾತಪವಾರಣಮಂ ।
ಪ್ರವಿಮಳ ಚಮರಜಮನಸಮಸಿಂಹಾಸನಮಂ ॥
ಭುವನಪ್ರಭುವಿಂಗಿತ್ತಂ ।
ಕುವಳಯ ವೈಭವಮನೊಳಗುಮಾಳ್ಪವನೊಲವಿಂ ॥ ೧೭ ॥

ವ ॥ ಅಂತು ತನ್ನಂ ಸಮಾರಾಧಿಸಿದ ವಿಜಯಾರ್ಧಕುಮಾರನನಗಣ್ಯಕಾರುಣ್ಯಾಮೃತದಿಂ ತಣಿಪಿ ಬೀೞ್ಕೊಳಿಸಿ ಕಳಿಪಿ ವನನಿಧಿಯಂ ತೋರಣದ್ವಾರದಿಂ ಪೊಱಮಟ್ಟು ತಿಮಿಸ್ರಗುಹಾದ್ವಾರಕ್ಕನತಿದೂರದೊಳ್ ನಿಜಸ್ಕಂಧಾವಾರಮಂ ಬಿಡಿಸೆಂದು ಬೆಸಸಿದಾಗಳ್—

ಉ ॥ ವಾರಿಜ ಸೌರಭಾಕಳಿತ ಚಂದ್ರಮಣಿದ್ರವ ಶೈತ್ಯಯುಕ್ತ ಕ ।
ರ್ಪೂರ ಲವಂಗ ಚಂದನಲತಾಪರಿವರ್ತನಮಂದಚಾರವಿ ॥
ಸ್ತಾರಸಮೀರದೊಳ್ ಬಿಡಿಸಿದಂ ಪಡೆವಳ್ಳನುದಾರರಾಜಕಂ ।
ಠೀರವನಾಜ್ಞೆಯಿಂ ಕಟಕಮಂ ವಿಜಯಾರ್ಧನಗೋಪಕಂಠದೊಳ್ ॥ ೧೮ ॥

ಕಂ ॥ ನೆಗಟ್ದ ಚತುರ್ದಶರತ್ನದೆ ।
ಸೊಗಯಿಪೆನಾನನ್ಯವಾಹಿನಿಗೆ ತನ್ನವೊಲಾ ॥
ನಗಿದು ತೆಱಪೀಯೆನೆನುತುಂ ।
ನಗುವುದು ವಿಜಯಾರ್ಧಕಟಕಕ್ಕೆ ವಿಭುಕಟಕಂ ॥ ೧೯ ॥

ವ ॥ ಅಂತು ವಿಜಯಾರ್ಧಕಟಕಕ್ಕಮೋರಂಡಲವಾಗೆ ಕಟಕಮಂ ಬಿಡಿಸಿ—

ಕಂ ॥ ವಿಜಯಾರ್ಧಮನುತ್ತರಿಪೊಡೆ ।
ವಿಜಯಂ ನೆರೆಯಕ್ಕುಮಲ್ಲದಿರ್ದೊಡೆ ಪೆಱತೇಂ ॥
ವಿಜಯಾರ್ಧಮಕ್ಕುಮೆನುತದ ।
ನಜೇಯನುತ್ತರಿಪುಪಾಯಮಂ ಬಗೆವಿನೆಗಂ ॥ ೨೦ ॥

ಕೃತಮಾಳಂ ಮೌಳಿಸ್ಥಿ ।
ಕೃತಮಾಳಂ ಚಕ್ರಿ ಪುಣ್ಯ ಮಹಿಮಾಹೂತಂ ॥
ವಿತತ ತಿಮಿಸ್ರಗುಹಾಸಂ ।
ತತರಕ್ಷಕನಿರದೆ ಬಂದು ಕಂಡಂ ನೃಪನಂ ॥ ೨೧ ॥

ಪ್ರವಿಮಳ ಗುಣದೆ ಚತುರ್ದಶ ।
ಭುವನಮೆ ಬೆಲೆಯೆನಿಪ್ಪುವಂ ಚತುರ್ದಶರ ॥
ತ್ನವಿಭೂಷಣಮನಲ್ತಿಯಿಂ ।
× × × × × × ಸುರನಿತ್ತಂ ॥ ೨೨ ॥

ವಿದಿತಂ ಕೃತಮಾಳಂ ನಿಜ ।
ಹೃದಯಮನೊಪ್ಪಿಸುವ ತೆಱದೆ ವಿಜಯಾರ್ಧಗಿರೀಂ ॥
ದ್ರದ ಗುಹೆಯ ಪಡಿಗಳಂ ತೆಱೆ ।
ವುದೀತೆಱದಿನೆಂದು ಬಿನ್ನವಿಪ್ಪುದುಮಾಗಳ್ ॥ ೨೩ ॥

ಮ ॥ ಸ್ರ ॥ ಕೃತಮಾಳಂ ಬಿನ್ನಪಂಗೆಯ್ದುದನತಿಮುದದಿಂ ಚಿತ್ತದೊಳ್ ತಾಳ್ದಿ ತನ್ನಿಂ ।
ಕೃತಮಾಳಂಬ ಸ್ವಕೀಯಾಪ್ರತಿಮ ವಿಪುಳ ಕಾರುಣ್ಯಮೆಂದಾಸುರಂಗೂ ॥
ರ್ಜಿತಮಂತ್ರಂ ದಾನಸಂತಾನಮ [ನೊದವಿ] ಸೆ ತನ್ನಂತೆ ಸನ್ಮಾನಿವಿಭ್ರಾ ।
ಜಿತಮಂ ಕಳ್ಪಾವನಿಜಂ ಕುಡದೆನಿಸಿ ಧರಾದೇವನಿಂ ರಾಜರಾಜಂ ॥ ೨೪ ॥

ವ ॥ ಅಂತಾತನಂ ಸಂತೋಷಂಬಡಿಸಿ ಬೀಱ್ಕೊಳಿಸಿ ಕಳಿಪಿ ದಕ್ಷಿಣ ದಿಶಾವಳಯ ದಂತಿ ದಕ್ಷಿಣ ಭುಜದಂಡಕ್ಕಳವಟ್ಟುದೆಂದತಿ ಪ್ರಮೋದಕ್ಕೆ ಪಕ್ಕಾಗಿರೆ—

ಮ ॥ ಧರಣೀಶಂ ವಿಜಯಾರ್ಧಮಂ ಪುಗದ ಮುನ್ನಂ ಕಾಣೆ ಕೈಕೊಳ್ವನಾ ।
ದರದಿಂ ಕಾಣ್ಬುದೆ ಮಂತ್ರಮೆಂಬ ಬಗೆಯಿಂದಂ ರಕ್ತೆ ರಕ್ತೋದೆಯೆಂ ॥
ಬೆರಡುಂ ಸಿಂಧುವ ಮಧ್ಯದೇಶದ ಮಹೀಶರ್ಕಾಶಭೂಷಾಮದ ।
ದ್ವಿರದಾಶ್ವಂಗಳನಿತ್ತು ಬಂದೆಱಗಿದರ್ಚಕ್ರೇಶಪಾದಾಬ್ಜದೊಳ್ ॥ ೨೫ ॥

ಕಂ ॥ ಅವಿಲಂಘ್ಯಂ ಚಕ್ರಾಧಿಪ ।
ಭವದಾಜ್ಞೆಯುದರ್ಕೆ ಬೆಸಸು ವಿಜಯಾರ್ಧಮನಂ ॥
ತವಯುವದೆ ದಾಂಟಿ ಕಂಪಿಸು ।
ವವನೀಪಾಲರನೆ ಲೀಲೆಯಿಂದೆಱಗಿಸೆವೇಂ ॥ ೨೬ ॥

ವ ॥ ಎಂದು ಬೆಸಸಂ ಬೇಡಿದವರಂ ಬೀಡಿಂಗೆ ಕಳಿಪಿ ಬಱಿಯಂ ಬಳಾಧ್ಯಕ್ಷನಂ ಬಱಿಯಟ್ಟಿ ಬರಿಸಿ ಕೃತಮಾಳಂ ಪೇೞ್ದುದುಮಂ ನೆರೆಯುಱಿಪೆ—

ಕಂ ॥ ಗಿರಿಗುಹೆಯು ಪಡಿಗಳಂ ದಂ ।
ಡರತ್ನದಿಂ ತೆಱೆದು ಬೆಂಕಿಯಾಱುವಿನಂ ಚೆ ॥
ಚ್ಚರಮಾಮೆಚ್ಚ ಮಹೀಪಾ ।
ಳರ ತೇಜಮನಾಱಿಸೆಂದು ನಿಯಮಮನಿತ್ತಂ ॥ ೨೭ ॥

ನಿಯಮಿಸೆ ವರೂಥಿನೀಪತಿ ।
ಹಯರತ್ನಮನೇಱಿ ದಂಡರತ್ನಮನಹಿತ ॥
ಕ್ಷಯಕರಮಂ ಧರಿಯಿಸೆ ಕತಿ ।
ಪಯ ಹಯಬಳಪರಿವೃತಂ ಜಯಶ್ರೀನಿಳಯಂ ॥ ೨೮ ॥

ತಳದುರ್ಗ ನದೀವೇದಿಯನಂ ।
ತೊಳಪೊಕ್ಕಗತಟದ ವೇದಿಕೆಯನೆಯ್ದಿ ಸಮು ॥
ಜ್ಜ್ವಳ ಸೋಪಾನದೆ ರಜತಾ ।
ಚಳ ಜಗತೀತಳಮನೇಱಿಯುಜಬಳಕಳಿತಂ ॥ ೨೯ ॥

ಪಡೆಯಂ ರಕ್ತಾನದಿಂಯೊಳ್ ।
ಪುಡುಗದೆ ಸೋಪಾನಮಾರ್ಗದಿಂ ಮೆಚ್ಚ ನೃಪರ್ ॥
ನಡನಡ ನಡುಗುವಿನಂ ಮು ।
ನ್ನಡೆಯಿಸೆ ಪೂರ್ವಾಭಿಮುಖದೆ ದೋರ್ವಳದೃಪ್ತಂ ॥ ೩೦ ॥

ವ ॥ ಅಂತು ಮೂಡಣೆಂ ಮೆಚ್ಚ ಖಂಡಕ್ಕೆ ದಂಡರತ್ನದಿಂ ದಂಡೇಶಂ ಬಿಡದೆಱಗುವ ಖೇಚರರರ್ದೆ ಪಡಿದೆಱೆದವೊಲಾಗೆ ತೆಱೆದುವಾಗಳೆ ಪಡಿಗಳ್—

ಕಂ ॥ ಶ್ರೀ ವಜ್ರನಾಭಿತೇಜಃ ।
ಪಾವಕಮಾವರಿಸುವಂತೆ ರಿಪುಹೃದಯಮನೇ ॥
ನಾವರಿಸಿತೊ ತದ್ಗಿರಿಯ ಗು ।
ಹಾನಿವಹಮನಗ್ನಿದಂಡರತ್ನಪ್ರಭವಂ ॥ ೩೧ ॥

ಕಂ ॥ ತೊಡೆಕೈಬೈಸಿಕೆಯಳವಡೆ ।
ಮಡದಿನವುಂಕಿದೊಡೆ ಪನ್ನೆರಡು ಯೋಜನಮಂ ॥
ಗಡ ಲಂಘಿಸಿ ಹಯರತ್ನಂ ।
ಪಡೆದುದು ಪವನಂಜಯಾಖ್ಯೆಗನ್ವರ್ಥತೆಯಂ ॥ ೩೨ ॥

ಮನಮನೆ ಮೀಱಿ ದಜವಾತಿ ।
. . . . ರೇಕದಿಂ ಪತಿಗೊಲವಂ ॥
ಜನಿಯಿಸಿತು ತುರಗಮರ್ಥಿಗೆ ।
ನೆನೆದರ್ಥದಿನಧಿಕಮಿತ್ತದಾನಿಯ ತೆಱದಿಂ ॥ ೩೩ ॥

ಗಿರಿಗುಹೆಯ ಮುಖದಿನೊಗೆತ ।
ಪ್ಪುರಿ ತಾಗದ ತೆಱದೆ ತುರಗರಥಿನೀಪತಿಯುಂ ॥
ಪರಿರಕ್ಷಿಪ ಯಕ್ಷಕುಳಂ ।
ಹರಿಜವದೊಡನೊಂದಿದಂತೆ ಬೇಗದಿನಾಗಳ್ ॥ ೩೪ ॥

ಕೊಂಡೊಯ್ದು ಖಂಡ ಶೋಭಾ ।
ಮಂಡಿತದೊಳ್ಮೆಚ್ಚ ಖಂಡದೊಳ್ ಬಿಟ್ಟಿರ್ದು ॥
ದ್ದಂಡ ನಿಜಬಲಮನೆಯ್ದಿಸಿ ।
ದಂಡೇಶಂ ಕೂಡಿಕೊಂಡು ಸಂಗರಶೌಂಡಂ ॥ ೩೫ ॥

ವ ॥ ಪ್ರದಕ್ಷಿಣಂಗೆಯ್ದು ಪೂರ್ವಶೋಭಾಕಳಿತಮಪ್ಪಪೂರ್ವಂ ಮೆಚ್ಚಖಂಡ ಮನುಂಡಿಗೆ ಸಾಧ್ಯಂ ಮಾಡಿಯತ್ಯುಚ್ಚವಿಭವಂ ಮೆಚ್ಚ ಮಹೀಶನವರವರ ಸಾರವಸ್ತು ವಾಹನಾದಿಗಳ್ವೆರಸು ಮುಂದಿಟ್ಟೊಡಗೊಂಡು ಮುನ್ನಿನಂತೆ ಸಮುನ್ನತ ತೋರಣದ್ವಾರ ದಿಂದೊಳಪೊಕ್ಕು ರಕ್ತಾನದೀನಂದನವನವೇದಿಕೆಯ ನಡುವಣಿಂ ಬಂದು ಮಣಿಮಯ ಸೋಪಾನಂಗಳಿಂ ಮನಂಗೊಳಿಸುವ ರಜತಾಚಳತಟವೇದಿಕೆಯುಂ ಕಳಿದು ಜಗತೀ ತಳಮಂ ನೆರೆ ನೋಟ್ಪಿನ್ನೆಗಂ—

ಕಂ ॥ ಅತುಳ ಮಹೀಭೃದ್ಗುಹಾಂತಃ ।
ಪ್ರತಾಪಮುಪಶಾಂತಮಾಯ್ತು ರಥಿನೀಪ ಸಮೂ ॥
ರ್ಜಿತ ದಂಡಹತಿಗೆ ಮಹೀಭೃ ।
ತ್ಪ್ರತಾಪಮೊತೆಱದೆ ಪೋಕುಮೆಂದಱಿಪುವವೊಲ್ ॥ ೩೬ ॥

ಉ ॥ ಅಂತುಪಶಾಂತಮಾದ ಗುಹೆಯಂ ಪರಿಶೋಧಿಸಿ ತನ್ನನೂನಸೈ ।
ನ್ಯಂ ತಡವಿಲ್ಲದಂತು ನಡೆವಂತಿರೆ ಮಾಡಿಸಿ ಕಾಪುವೇಟ್ಟು ಸಾ ॥
ಮಂತಮುದಗ್ರಮಂಡಳಿಕಮಂಡಳಿ ತನ್ನೊಡನೊಪ್ಪಿ ಬರ್ಪಿನಂ ।
ಕಾಂತಮನೆಯ್ದಿದಂತೆ ಬರಮಂ ರಥಿನೀಪತಿ ಚಕ್ರವರ್ತಿಯಾ ॥ ೩೭ ॥

ಕಂ ॥ ಓಲಗದೊಳ್ ಕಂಡು ಮಹೀ ।
ಪಾಲಕನಂ ವಿನುತಮಸ್ತಕಂ ಪತಿ ಕಾರು ॥
ಣ್ಯಾಲೋಕನಸಂಭವಪುಳ ।
ಕಾಲಂಬಂ ಮೆಚ್ಚ ರಾಜರಂ ಕಾಣಿಸಿದಂ ॥ ೩೮ ॥

ಶಾ ॥ ವೀರೋದಾತ್ತ ಚಮೂಪಮೇರುಮಥಿತಂ ಮೆಚ್ಚಾವನೀಪಾಳಕ ।
ಕ್ಷೀರಾಂಭೋನಿಧಿ ಕೌಸ್ತುಭೋಜ್ವಳಮಣಿ ಶ್ರೀಕನ್ಯಕಾನೀಕಮುಂ ॥
ಕಾರುಣ್ಯಂಬಡೆವಂತು ಚಕ್ರಿಚರಣಾಂಭೋಜಕ್ಕೆ ಮಾಣಿಕ್ಯ ಕೋ ।
ಟೀರದ್ಯೋತಿಯಿನರ್ಘ್ಯಮೆತ್ತಿ ಮೊದಲೊಳ್ ತಾನಿತ್ತುದಾನಂದದಿಂ ॥ ೪೯ ॥

ಕಂ ॥ ಸೇವಾನಭಿಜ್ಞರಂ ಮ್ಲೆ ।
ಚ್ಚಾವನಿಪರನುಚಿತ ಮಂತ್ರದಿಂ ಚಕ್ರಿ ಪದಾ ॥
ಬ್ಜಾವನತರೆನಿಸಿ ಮೆಱೆದಂ ।
ಸೇವಾಚಾತುರ್ಯಮಂ ಚಮೂಪತಿರತ್ನಂ ॥ ೫೦ ॥

ವ ॥ ಅಂತವರನಾಜ್ಞಾವಿಧೇಯರಂ ಮಾಡಿ ತದನಂತರಂ—

ಕಂ ॥ ಅವರವರ ದೇಶವಂತವಿ ।
ಭವವಿಕ್ರಮನಾಮ ಚಿಹ್ನಮಂ ಚಕ್ರಿಗೆ ಬಿ ॥
ನ್ನವಿಸಿ ಪಸಾಯಮನವರ್ಗು ।
ತ್ಸವಮಪ್ಪವೊಲೆ ಬೀಱಿಸ್ಕೊಳಿಸಿ ಭೂಭುಜರಂ ॥ ೫೧ ॥

ವ ॥ ತಂತಮ್ಮ ನೆಲೆಗೆ ಪೋಪಂತು ಚಕ್ರವರ್ತಿಯಿಂ ನಿಯಮಮೆನಿಸೆ ಸಂತೋಷಂಬಡಿಸಿ ಕಳಿಪೆ ಬೞಿಯಿಂ ದಕ್ಷಿಣ ತ್ರಿಖಂಡ ಮಂಡಳ ವಿಜಯಯಾತ್ರೆಯಂ ಕಟಕಕ್ಕಱಿಪಲೆಂದು ವಿಜಯಪ್ರಯಾಣ ಭೇರಿಯಂ ಕ್ಷೋಣೀಪತಿಯ ಸುಮತಿಯಿಂ ಪೊಯಿಸಿದಾಗಳ್—

ಮ ॥ ಸ್ರ ॥ ಪ್ರಳಯ ಪ್ರಕ್ಷೋಭಿತಾಂಭೋನಿಧಿ ಸಮುದಯ ಸಂಭೂತ ಗಂಭೀರನಾದಂ ।
ವಿಳಯಪ್ರಸ್ಥಾನವಿಸ್ಫಾರಿತ ವಿಪುಳತರಾಂಭೋಧ ಸಂಘಾತನಾದಂ ॥
ಬಳಿದತ್ತೆಂಬಂದದಿಂದಂ ಕುಳಗಿರಿ ತಳರ್ವನ್ತುದ್ಧತಾಶಾಗಜೌಘಂ ।
ಪೆಳಱುತ್ತಿರ್ಪಂತು ಪೊಣ್ಮಿತ್ತಧಿಪತಿ ವಿಜಯೋತ್ಸಾವದಿ ಭೇರೀನಿನಾದಂ ॥ ೫೨ ॥

ಕಂ ॥ ನಡೆವ ಷಡಂಗಬಲಕ್ಕಿ ।
ಟ್ಟೆಡೆಯಾಶಾಭಿತ್ತಿಯೆನುತವೊಡವಂದೊಡೆ ಧಿಂ ॥
ಕಿಡುತೆಣ್ದೆಸೆಗಱಿಭಯಮಂ ।
ಪಡೆದುದು ದಿಗ್ವಿಜಯ ಭೂರಿಭೇರೀರಾವಂ ॥ ೫೩ ॥

ಪೂಜಿಸಿ ಚಕ್ರಮಂ ಶುಭಮು ।
ಹೂರ್ತದೊಳುತ್ಕಟದಾನಪಾರಿಯಿಂ × × ॥
× × × × × × ।
ರಾಜಿಯ ಜೀಯರವಂ ನೆಗೞ್ವಿನಂ × × ॥ ೫೪ ॥

ವ ॥ ಅಂತಗಣ್ಯ ಪುಣ್ಯಮೂರ್ತಿಯತಿವರ್ತಿಗಳಂ ನಿಜಪದಪದ್ಮ ಸಮೀಪವರ್ತಿಗಳಂ ಮಾಡಲೆಂದು ಚಕ್ರವರ್ತಿ ರಾಜನಿಳಯದಿಂ ತಳರ್ವಾಗಳ್—

ಚಂ॥ ಕರಿಮಕರಂಗಳಿಂದೆ ಬಡವಾಮುಖಫೇನವಿತಾನದಿಂ ಭಯಂ ।
ಕರಭಟಮುಸ್ತ್ರಶಸ್ತ್ರರುಚಿವೀಚಿಗಳಿಂ ರಥಚೈತ್ರದಿಂ ಚಮೂ ॥
ವರದೃಢ ವಜ್ರವೇದಿಕೆಯಿನಾಶ್ರಿತ ಭೂಧರ ರತ್ನದಿಂದಳಂ ।
ಕರಿಸಿ ಮನಕ್ಕೆ ಸಂತಸಮನಿತ್ತುದು ಚಕ್ರಿಗೆ ಸೈನ್ಯಸಾಗರಂ ॥ ೪೭ ॥

ವ ॥ ಆ ಸಮಯದೊಳ್—

ಕಂ ॥ ದಿಕ್ಕರಿಯನೇಱಿದಿಂದ್ರನ ।
ಪಕ್ಕದೊಳಿಭಪತಿಯನೇಱಿದಗ್ನಿಯವೋಲ್ ತೇ ॥
ಜಕ್ಕೆ ನೆಲೆಯಾಗಿ ಚಕ್ರಿಯ ।
ಪಕ್ಕದೊಳೆಸೆದಂ ಚಮೂಪನಿಭಮಸ್ತಕದೊಳ್ ॥ ೪೮ ॥

ವ ॥ ಅಂತಪ್ರತಿಮಪ್ರತಿಪಕ್ಷಭೇದಿ ಪಕ್ಷ ಗಜಾಧಿರೂಢನಧಿರಾಜಂಗೆ ಕೆಯ್ಗಳಂ ಮುಗಿದಿಂತೆಂದಂ—

ಶಾ ॥ ಹೇಳೋನ್ಮೂಳಿತ ವೈರಿವರ್ಗವನದುರ್ಗಂ ಖಡ್ಗನಿರ್ಭಿನ್ನ ಕುಂ ।
ಡಾಳಂ ನಿರ್ದಳಿತಾದ್ರಿದುರ್ಗನಿವಹಂ ವಿಧ್ವಸ್ತವಾಜಿವ್ರಜಂ ॥
ವೇಳಾಲಂಘಿತ ತೋಯದುರ್ಗನಿಕರಂ ನಿರ್ಭೇದಿತಸ್ಯಂದನಂ ।
ಕಾಳೋಗ್ರಂ ವಿಳಸತ್ಪದಾತಿಯಿದು ದಲ್ ಕರ್ನಾಟ ಸೈನ್ಯಂ ನೃಪಾ ॥ ೪೯ ॥

ಚಂ॥ ಪ್ರಳಯ ಘನಪ್ರಭೀಷಣ ವಿಷಣ್ಣ ವಿನಿರ್ಮಿತ ಚಾಪದಂಡಮುಂ ।
ಡಳಿ ಶರವರ್ಷ ಮೋಘಸಮುಯಂ ವರವೀರವಧೂ ಸುವರ್ಣ ಕುಂ ॥
ಡಳಮಿದು ಮಂಡಳಾಗ್ರ ಪರಿಶೋಭಿಪಲಾಟಕ ಪಕ್ಷರಕ್ಷಣಾ ।
ಕಳಿತ ತುರಂಗಮಂ ನೃಪವರಾಟಬಳಂ ಪಿಹತಾನ್ಯದೋರ್ವಳಂ ॥ ೫೦ ॥

ಮ ॥ ತುರಗವ್ಯೂಹಗಜಂ ಗಜವ್ರಜಮೃಗೇಂದ್ರಸ್ಯಂದನೇಭದ್ವಿಷ ।
ಚ್ಚರಭಂ ವೀರಪದಾತಿಯೂಥ ಶರಭೌ × × × ಹೊಳ್ಡಂಡಮು ॥
ದ್ಗರ ಖಡ್ಗಂ ಧೃತಶೀರ್ಷಕಂ ವಿಧೃತ ನಾನಾ ಚರ್ಮವರ್ಮಂ ನೃಪೇ ।
ಶ್ವರ ನೋಡಿಂತಿದು ಸೈನ್ಯಮನ್ಯಭಯಕೃನ್ಮುದ್ರಾವಿಳಂ ದ್ರಾವಿಳಂ ॥ ೫೧ ॥

ಮ ॥ ಸ್ರ ॥ ನುತಕಸ್ತೂರೀ ವಿಳಾಸೋಚಿತ ತಿಳಕಲಲಾಟಂ ನಿಶಾತಾಸಿ ಧಾರಾ ।
ಹತವಿದ್ವಿಡ್ಮಾಂಸ ಸಂತರ್ಪಿತ ನಿಖಿಳನಿಶಾಟಂ ದೃಢಾಬದ್ಧ ಕೂರ್ಚಾ ॥
ಯತ ಜೂಟಂ ವೀರ ಘಂಟಾರುತಿ ವಿದಳಿತ ವಿದ್ವಿಷ್ಟಚೇತಃ ಕವಾಟಂ ।
ಕ್ಷಿತಿಪಾಳೋತ್ತಂಸ ಸಂಶೋಭಿಪ ಬಳವಿದು ಲಾಟಂ
ದ್ವಿಷತ್ಕಾಲಕೂಟಂ ॥ ೫೨ ॥

ಪ್ರತಿಪಕ್ಷಕ್ಷೋಣಿಪಾಲಪ್ರಕರ ಹೃದಯ ಶೂಲೋಪಮಸ್ಥೂಲಶಾತಾ ।
ಯುತ ಕುಂಡನ್ಯಸ್ತಹಸ್ತಂ ವಿಚಕಿಳ ವಿಳಸನ್ನೀಳ ಮೌಳಿಪ್ರಶಸ್ತಂ ॥
ಚತುರಸ್ರೀತುಂಗಫೇನಸ್ತನ ಪುಳಯುರುಹಾಲಿಪ್ತಕಾಯಂ ಸ್ವಕೀಯಂ ।
ಕೃತಭಾಸ್ವಚ್ಚಕ್ರಭೂಷಾ ರುಚಿಭರಿತ ದಿಶಾರಂಧ್ರಮಿದು ಸೈನ್ಯಮಾಂಧ್ರಂ ॥ ೫೩ ॥

ವ ॥ ಅಂತನೇಕ ದೇಶಾಧೀಶ ಪೃಥುರಥನಿಪ್ರತಾನಮಂ ಭೂಷಾವೇಷಸನ್ನಾಹ ವಾಹನಾದಿ ವಿಶೇಷದಿಂ ವಿಶೇಷಿಸಿಯಶೇಷವಸುಧಾವಲ್ಲಭಂಗೆ ಬೇೞ್ವೇೞ್ ತೋಱುತ್ತಂ—

ಮ ॥ ವನಜಾತಂ ಪೃಥುಸೈನ್ಯಪಾದಹತಿಯಿಂ ನುರ್ಗಕ್ಕುಮೆಂದಿಂತುಪಾ ।
ಯನಮಂ ಮುನ್ನಮೆ ಚಕ್ರಿಗಳ್ಕಿ ವಿಜಯಾರ್ಧೋರ್ವೀಧರಂ ಸಾರವ ॥
ಸ್ತು ನಿಕಾಯಂಗಳನಪ್ಪಿದಂತೆ ಘನಸಾರೋದ್ಧಾರ ಕಸ್ತೂರಿಕಾ ।
ವನಜಾಮೋದಮನಾದಮೋಲಗಿಸಿ ತಂದೆಯ್ತಂದು ಮಂದಾನಿಳಂ ॥ ೫೪ ॥

ವ ॥ ಅಂತಲಂಪನೀವ ಕಂಪುಮಂ ತಣ್ಪುಮಂ ತೆರಳ್ಚಿ ಪಣ್ಣನೆ ಬಂದ ತಣ್ಣೆಲರ ತೀಟದಿ ನಿದಾಘದಾಹಕ್ಕಗಿದು ವಿಗತ ಕಂಚುಕವಾಗಿರ್ದುದಂ ರೋಮಾಂಚ ಕಂಚುಕಿತ ಗಾತ್ರಮಂ ಮಾಡಿ ನಾಡೆಯುಂ ಪ್ರಮೋದಮಂ ಪಡೆದು ನಡೆದು ರಜತಾಚಳದ ಜಗತೀ ತಳಮನೇಱೆ—

ಉ ॥ ಸಾರಮಣಿಪ್ರಸಾನು ವಿಜಯಾರ್ಧ ಮಹೀಧರ ಗೋಮಿನೀಮುಖಾ ।
ಕಾರಮನತ್ಯುದಾರಮನಮೇಯ ಜಯಪ್ರಮದಾ ಸಮಾಗಮ ॥
ದ್ವಾರಮನುದ್ಧ ತೋರಣ ಮಣಿಪ್ರಕರದ್ಯುತಿಪೂರಮಂ ಗುಹಾ ।
ದ್ವಾರಮನೆಯ್ದಿದತ್ತು ಪಡೆ ಲೋಚನ ಚಾರುಸುಖಾವತಾರಮಂ ॥ ೫೫ ॥

ವ ॥ ಅಂತು ಕಾಂತಮಾದ ಗುಹಾದ್ವಾರಮನೆಯ್ದೆವಂದು—

ಕಂ ॥ ಪಡಿತೆಱೆದಿರೆಯುಂ ಗುಹೆಯಂ ।
ಪಡೆ ಕಟ್ಟಿಲೆಗಗಿದು ಪುಗದೆ ನಿಂದಿರೆ ಕಂಡಾ ॥
ಗಡೆ ರಥಿನೀಪತಿ ತಮಮಂ ।
ಕಿಡಿಸುವುಪಾಯಮನೆ ಕುಡೆ ಪುರೋಹಿತರತ್ನಂ ॥ ೫೬ ॥

ಮಣಿಯಿಂದೆ ಸೂರ್ಯನಂ ಕಾ ।
ಕಿಣಿಯಿಂದೆ ಚಂದ್ರಮನಂ ಗುಹೆಯ ಭಿತ್ತಿಯೊಳೀ ॥
ಕ್ಷಣ ರುಚಿರಮೆನೆ ಬರೆದನಾ ।
ಕ್ಷಣದೊಳೆ ಕಣ್ಬಡೆದ ತೆಱದೆ ಪಡೆ ನಡೆವಿನೆಗಂ ॥ ೫೭ ॥

ವ ॥ ಅಂತುಮಲ್ಲದೆಯುಂ—

ಕಂ ॥ ರವಿಶಶಿಗಳ್ ನಿಜತೇಜ ।
ಕ್ಕವಕಾಶಂಗುಡದ ಗುಹೆಯ ಕಟ್ಟಿಲೆಯಂ ತೂ ॥
ಳ್ದುವ ಭರದಿಂ ಮಣಿಕಾಕಿಣಿ ।
ಯ ವಶಕೆ ಸಂದಂತೆ ಬರೆಯೆ ತೂಳ್ದಿದರದಱೊಳ್ ॥ ೫೮ ॥

ಬರೆದ ಶಶಿರವಿಗಳಿಂ ಭಾ ।
ಸುರತೇಜಶ್ಚಕ್ರ ಚಕ್ರರತ್ನದ್ಯುತಿಯಿಂ ॥
ಪರೆಯೆ ತಮಂ ರಣನದಿಯಾ ।
ಯೆರಡುಂ ತಡಿವಿಡಿದು ಬೀಡು ನಡೆದುದು ಪದೆಪಿಂ ॥ ೫೯ ॥

ವ ॥ ಅಂತು ಚಮೂಪತಿಯ ನಿಯಮದಿಂ ಕೆಲವು ಪಯಣಂಗಳಂ ನಡೆದು ತದ್ಗುಹಾಮಧ್ಯದಿರ್ದೆಸೆಯ ಚೆಲ್ವನೊಳಕೊಂಡ ಕುಂಡಳಂಗಳಿಂ ಪುಟ್ಟಿ ಬಂದ ರಕ್ತಸಿಂಧುವಿನೊಳ್ ಸಂಗತಂಗಳುಮುತ್ತರಂಗಳುಮಪ್ಪುಪ್ಪುನಿಮಗ್ನಾಪಗೆಗಳ್ಪಗೆಗಳಂತೆ ಗಮನವಿಘ್ನಮಂ ಮಾಡಿಯಡ್ಡಂ ಬರೆ ಪಡೆ ನಡೆಯದೆ ನಿಲ್ವುದಂ ಕಂಡು ದಂಡಾಧಿಪನವಱ ತಡಿಗಳೊಳೆ ಬೀಡಂ ಬಿಡಿಸಿ—

ಕಂ ॥ ಪ್ರವಿಪುಳವಾಹಿನಿ ಪುಣ್ಯಾ ।
ಪ್ರವಾಹದಂತೊಂದು ನೆಗಪುವುದು ಮೇಗಣ್ಗಾ ॥
ಳ್ಗುವುದು ತಳಕೊಂದು ಪಾಪ ।
ಪ್ರವಾಹದಂತರ್ನಿಮಗ್ನೆ ಮಗ್ನೆವಿಚಿತ್ರಂ ॥ ೬೦ ॥

ವ ॥ ಎಂದು ಚಕ್ರವರಂಗಾ ನದಿಗಳ ವೈಷಮ್ಯಮನಗ್ರಾಮ್ಯಮಾಗೆ ಬಿನ್ನವಿಸೆ ಸರಿತ್ಸಮುತ್ತರಣೋಪಾಯದಲ್ಲಿ ತಕ್ಷಕರತ್ನವೇ ದಕ್ಷನೆಂದು ಬರಿಸೆ ವಸುಧೇಶಂ ಬೆಸಸೆ—

ಕಂ ॥ ಪದನಱಿದು ಪೇೞೆ ಪತಿಸೇ ।
ವ್ಯದಿವ್ಯಶಕ್ತಿಪ್ರಭಾವದಿಂದಂ ಪೆಂಪಿಂ ॥
ಪುದಿದಿರ್ದಮಾನುಷಾರ ।
ಣ್ಯದ ತರುಗಳನಿರದೆ ತರಿಸಿ ತಕ್ಷಕರತ್ನಂ ॥ ೬೧ ॥

ಗಗನಮನಳ್ಕಿರಿವಂತಿರೆ ।
ಮಿಗೆ ಬಳೆದ ಮಹೀರುಹಂಗಳಂ ನಡೆ ತತ್ಸಿಂ ॥
ಧುಗಳೊಳ್ಪಾತಾಳಮನೆ ।
ಯ್ದೊಡರಿಸೆತಾಮುದ್ದದಿಂದವೆರಡರ ಪವಣಂ ॥ ೬೨ ॥

ವ ॥ ಅಂತಿರುಂಬಿನಡವಿಯ ನಿಡಿಯ ಮರಂಗಳಿಂ ನಡಪಿಯಂ ಪಡೆಗೆ ಸಡೆಯ ಲಳವಡಿಕೆಯಪ್ಪಂತೊಡರಿಸೆ—

ಕಂ ॥ ಸೇತುವೊಲಳವಡೆ ನಡವಿ ಮ ।
ಹೀತಳಪತಿ ವಿತತಕರಿತುರಂಗಮರಥ ಪಾ ॥
ದಾತಿಬಳಂ ಬೆರಸು ಸಮೋ ।
ರ್ವೀತಳದೊಳ್ ನಡೆದು ಪೋಪ ತೆಱದಿಂ ಪೋದಂ ॥ ೬೩ ॥

ವ ॥ ಅಂತು ವಿಷಮಸರಿತ್ತುಗಳನಶ್ರಮದಿನುತ್ತರಿಸಿ ಕತಿಪಯ ಪ್ರಯಾಣಂಗಳಂ ನಡೆದು—

ಕಂ ॥ ಪೋಗಿ ಜಳದೊಳಗೆ ಮುೞುಗಿ ।
ದರ್ಾಗಳ್ ಪೊಱಮಡುವ ಮಾೞ್ಕೆಯಿಂದೆ ಗುಹಾಂತ ॥
ರ್ಭಾಗದಿ ಪೊಱಮಟ್ಟು ಮನೋ ।
ರಾಗಮನೆಯ್ದಿದುದು ಚಕ್ರವರ್ತಿಯ ಕಟಕಂ ॥ ೬೪ ॥

ಕಂ ॥ ಸಂತಮಸಗೃಹ ಗುಹಾಂತರ ।
ದಿಂ ತೊಲಗಿದ ಸೇನೆಯಪ್ರಸನ್ನೋಗ್ರತರ ॥
ಸ್ವಾಂತನೃಪಾಳಕನೋಲಗ ।
ದಿಂ ತೊಲಗಿದ ಸೇವಕಂಬೊಲಾಂತುದು ಸುಖಮಂ ॥ ೬೫ ॥

ವ ॥ ಅಂತು ಚಮೂಪಾಳ ಹೇಳೋತ್ಪಾಟಿತ ವಜ್ರಕವಾಟ ಮಹಾಗುಹಾ ದ್ವಾರದಿಂ ಪೊಱಮಟ್ಟು ಪುಟ್ಟಿದ ಮನಃಪ್ರಸರದಿಂ ಸರಂಬಡೆದು ನಡೆವಾಗಳ್—

ಕಂ ॥ ಒಸರ್ವ ಶಶಿಕಾಂತಮಣಿಯಿಂ ।
ವಿಸರಮನಾಂತಮಳಕಮಳ ಪರಿಮಳಮಂ ಪೊ ॥
ತ್ತಿಸಗುವ ಸಮೀರನಿಂದಾ ।
ರಿಸಿದುದು ನೃಪವಿಪುಳ ಕಟಕಮಂ ಗಿರಿಕಟಕಂ ॥ ೬೬ ॥

ವ ॥ ಅಂತು ತಣ್ಪುಮಂ ಕಂಪುಮಂ ತಟ್ಟೈಸಿ ಮೆಲ್ಲನೆ ಬಂದಲೆವೆಲರಲಸಗಮನೆ ತನಿಸೋಂಕಿಂ ಪುಳಕಾಂಕುರಮಂ ಪುಟ್ಟಿಸುವಂತು ಪುಟ್ಟಿಸೆ ಮುಂ ಪುಟ್ಟಿದ ಪರಿತಾಪಂ ಪೋಗೆ ಪೋಗಿ ನವಪಲ್ಲವ ಸುಕುಮಾರ ಕೋರಕ ಸುರಭಿ ಕುಸುಮ ಸರಸಫಲ ತರುಷಂಡ ಮಂಡಿತಮಪ್ಪ ರಮ್ಯಪ್ರಸಾರ ಭೂರುಹವನಶ್ರೀ ಮಧ್ಯಮ ಮೆಚ್ಚಖಂಡಮಂ ದಂಡೇಶಂ—

ಕಂ ॥ × × × × ।
× × × × × × ॥
ದುರ್ವಾರರಂ ಸಾಧಿಸಿದಂ ।
ಪೂರ್ವಕ್ರಮದಿಂದಖರ್ವದೋರ್ವಳ ಗರ್ವಂ ॥ ೬೭ ॥

ವ ॥ ಅಂತಾ ಪೂರ್ವ ಮೆಚ್ಚ ಖಂಡಾಧಿಪತಿ ದಂಡಾಧಿಪತಿಗಳಂ ಗಳಿತ ಗರ್ವರಂ ಮಾಡಿಯುಪೂರ್ವೋಪಾಯನಂಬೆರಸು ಸಾರ್ವಭೌಮನಂ ಕಾಣಿಸಿ—

ಕಂ ॥ ಸಕಳ ನೃಪವಿತತಿ ನಾನಾ ।
ಮಕುಟೋಜ್ವಳಮಣಿಮರೀಚಿ ಸಂಚಯದಿಂ ಮೇ ॥
ಚಕಿತಂ ಮಾಡಿದುದಭಯ ವಿ ।
ಚಕಿತಂ ಬಂದೆಱಗಿ ಚಕ್ರಿ ಚರಣಾಂಬುಜಮಂ ॥ ೬೮ ॥

ವ ॥ ಅಂತಾ ಮೆಚ್ಚರಾಜರಂ ರಾಜರಾಜನ ಪದಪಯೋಜಕೆಱಗಿಸಿ ಮತ್ತಂ ಮಧ್ಯಮ ಮೆಚ್ಚ ಖಂಡವರ್ತಿಗಳುಮತಿವರ್ತಿಗಳುಮಪ್ಪ ಚಿಲಾತಾವರ್ತರಂ ಚಮೂ ನಾಥಂ ನಿಜಪರಾಕ್ರಮದಿನಾಕ್ರಮಿಸಲೆಂದು ಚಕ್ರಾಧೀಶಾದೇಶ ವಿಜಯ ಪ್ರಯಾಣ ಭೇರಿಯುಂ ಪೊಯ್ಸಿ—

ಕಂ ॥ ಶ್ರುತಿಯಂ ಭೇರೀರವಮ ।
ಶ್ರುತಪೂರ್ವಂ ತಾಗೆ ಜಾನಪದ ಜನಮನಿತುಂ ॥
ಪ್ರತಿಹತಮಾದತ್ತಪ್ರತಿ ।
ಹತತೇಜಂ ಪತಿಯದೆಂತು ವಿಸ್ಮಿತಚಿತ್ತಂ ॥ ೬೯ ॥

ವ ॥ ಗುಜಿಗುಜಿಗೊಳುತ್ತಮೋರೋರ್ವರೊಳ್ನುಡಿಯುತ್ತಂ ಕಿವಿಯುಂ ತಲೆಯುಮಾಡುತ್ತಮಿರ್ಪುದುಮಾವಾರ್ತೆಯಂ ಚಿಲಾತಾವರ್ತಕರ್ಣಪರಂಪರೆಯಿಂ ಕೇಳ್ದು ಮದಾಂಧ ಸಿಂಧುರಕ್ಕೆ ಕಿಡಿಯಂ ತೋಱಿದಂತೆ ಕಡುಮುಳಿದು ಕಿಡಿಗಿಡಿವೋಗುತ್ತಮಿಂತೆಂದರ್—

ಕಂ ॥ ತಮದಿಂದೆ ನೋಡಿದರ ಕ ।
ಣ್ಗಮೆಸೆವುದು ಮಧ್ವರಿತ್ರಿಯುಂ ಪೊಕ್ಕಡೆ ತೇ ॥
ಜಮದಿರದೆ ಸುಡುಗುಮೆಂಬುದ ।
ನಮಾತ್ಯರಾ ಚಕ್ರಿಗಱಿದುಮುಱಿಪರೊ ನಿರುತಂ ॥ ೭೦ ॥

ಅವರಱಿಪದೊಡಂ ಮದ್ಬಾ ।
ಣವಿತತಿಯಿನ್ನಱಿಪಿದಪ್ಪುದೆನುತಂ ದರ್ಪ ॥
ಪ್ರವರರ್ಚಿಲಾತಾವರ್ತ ।
ರ್ಬವರಕ್ಕುದ್ಯುಕ್ತರಾದರಪನಯಯುಕ್ತರ್ ॥ ೭೧ ॥

ವ ॥ ಅದಂ ಕಂಡವರ ಮಂತ್ರಿಮಂಡಳಿಯೊಳೊರ್ವಂ ಮಾರ್ಕೊಂಡಿತೆಂದಂ—

ಕಂ ॥ ಬಲ್ಲಿದನೊಳೆಡರುವುದು ನಯ ।
ಮಲ್ಲದಿದಂ ಮೀಱಿ ಯುದ್ಧಮಂ ಮಾಱ್ಕೊಡೆ ತ ॥
ಳ್ವಿಲ್ಲದೆ ಬಲಿವುದು ದುರ್ಗಮ ।
ನಲ್ಲಿರ್ದಡಜೇಯಮನ್ಯರಿಂ ನೃಪಸೈನ್ಯಂ ॥ ೭೨ ॥

ವ ॥ ಎನೆ ಮತ್ತೊರ್ವನಿಂತೆಂದಂ—

ಮ ॥ ಒಡೆದಂ ವಜ್ರಕವಾಟಮಂ ಗುಹೆಯ ಸಿಂಧುದ್ವಂದ್ವಮಂ ದಾಂಟಲಾ ।
ವೆಡೆಯಿಂ ಬಾರವೆನಿಪ್ಪುಪಂ ನಿಮಿಷದಿಂದಂ ದಾಂಟಿದಂ ಬೆಟ್ಟದಿ ॥
ಟ್ಟೆಡೆಯೊಳ್ ಪುಟ್ಟಿದರಣ್ಯದೊಡ್ಡುರಿಯೆ ಸೇವಾಚಕ್ರ ಸಂಘಟ್ಟದಿಂ ।
ನಡೆತಂದಂ ನೃಪನೆಂದೊಡಿಂ ನಮಗೆ ದುರ್ಗಂ ಬಾಚಿಸಲ್ ತೀರ್ಗುಮೇ ॥೭೩॥

ವ ॥ ಅದೆಂತೆನೆ—

ಉ ॥ ಬೇಡಿತನೀಯದಾಕ್ರಮಿಸಿ ಚಕ್ರಧರಂಗಿದಿರಾಂಪರಾರ್ ಜಳ ।
ಕ್ರೀಡೆಯೊಳಳ್ಕಿಪಂ ಜಳನಿಷಣ್ಣ ನೃಪಾಳಕಜಾಳಮಂ ವನ ॥
ಕ್ರೀಡೆಯೊಳಂಜಿಪಂ ವನನಿಕುಂಜನಿವಾಸಮಹೀಶರಂ ಗಿರಿ ।
ಕ್ರೀಡೆಯೊಳ್ಸೋಲಿಪಂ ಗಿರಿವರ ಸ್ಥಿತರಾಜರನಾಜಿನಿಷ್ಠುರಂ ॥ ೭೪ ॥

ವ ॥ ಅದು ಕಾರಣದಿಂ—

ಚಂ ॥ ಗಿರಿಗಹನಾಂಬುದುರ್ಗಮಿರೆಯುಂ ಚತುರಂಗ ಬಲಂಗಳುಳ್ಳೊಡಂ ।
ನರರಧಿದೇವ ಖೇಚರ ಸಮಗ್ರಬಲಂ ಬರೆ ಕಾಯ್ಪಿನಿಂದೆ ನಿ ॥
ತ್ತರಿಸವು ದಿವ್ಯಮಂತ್ರ ವಿನಿಯೋಗದಿನೀಗಳೆ ನಾಗರಾಜರಂ ।
ಬರಿಪುದು ದೇವ ದೈವಬಲಮೊಂದಿರೆ ಚಕ್ರಿಯನಾವನಾಂಪವಂ ॥ ೭೫ ॥

ಕಂ ॥ ಎನೆ ಮನದೆಗೊಂಡು ನೆನೆದಂ ।
ದು ನಿಮಿಷದೆ ನಾಗರಾಜರೆಯ್ತಿರೆ ವಿನಯಾಪ ॥
ರನವನಿಜ ಮಕುಟಮಣಿಕಾಂ ।
ತಿನೀರದಿಂ ತೊಳೆದರುರಗಪತಿ ಪದಯುಗಮಂ ॥ ೭೬ ॥

ವ ॥ ಅಂತು ವಿನಯವಿನಮಿತರಾದ ಚಿಲಾತಾವರ್ತರಂ ಪರಾರ್ಥತತ್ಪರಪ್ಪರಂ ಕಾರುಣ್ಯದಿನಗಣ್ಯ ಪುಣ್ಯಭಾಗಿಗಳಾಗಿಮೆಂದು ಪರಸಿ ಬೞಿಕಮಿಂತೆಂದಂ

ಕಂ ॥ ಪೆಱತೇನೆಮಗೆಱಗಿದ ಶಿರ ।
ಮೆಱಗಿದೊಡಾವೆಱಗಿದವಗೆವನ್ಯರ್ಗದಱಿಂ ॥
ದೆಱಗದಿರೆಪಾವೆ ಪೆದಱಿಪೆ ।
ಮೆಱಗಿಸಲೆಂದುರದೆ ಮೇಲೆ ವಂದರನೀಗಳ್ ॥ ೭೭ ॥

ವ ॥ ಎಂದು ಮನಂಬೊಯ್ದನಂತರಂ—

ಕಂ ॥ ಆಕಾಶದಲ್ಲಿ ವಿದ್ಯಾ ।
ಪ್ರಾಕಾರಮನುರಗನಾಯಕರ್ ವಿರಚಿಸೆ ನಿ ॥
ರ್ವ್ಯಾಕುಳತೆಯಿಂದೆ ಸೈನ್ಯಾ ।
ನೀಕಂ ಬೆರಸದಱೊಳಿರೆ ಚಿಲಾತಾವರ್ತರ್ ॥ ೭೮ ॥

ವ ॥ ಅದೆಂತಿರ್ದುದೆಂದೊಡೆ—

ಕಂ ॥ ಪಡೆಗವಱಪೆಡೆದಣೆಯಿತೆನೆ ।
ಮುಡುಗಟ್ಟಿದ ವಿಷಮ ವಿಷಮೆ ಜಳಖಾತಿಕೆ ಕಾ ॥
ಯ್ವುಡುಗದೆ ನಿಂದ ಫಣಿಗಳಿಂ ।
ಪಡೆದೊಡೆ ಪಡೆದತ್ತು ದುರ್ಗಮತ್ಯುಗ್ರತೆಯಂ ॥ ೭೯ ॥

ವ ॥ ಅಂತು ಮರುನ್ಮಾರ್ಗದೊಳಪಾರ್ಗಮತಿದುರ್ಗಮಮಪ್ಪ ದುರ್ಗಮಂ ಕೆಯ್ಗೆಯ್ದು ಕಾದಲುದ್ಯೋಗಿಗಳಾಗಿರ್ದುದಂ ದಂಡಾಧಿಪಂ ಕಂಡು ಕಡುಮುಳಿದು—

ಕಂ ॥ ಸ್ವರ್ಗಕೆ ಪೋಪಂತಿರ್ದುದಂ ।
ನಿರ್ಗಮಮೆಂಬಂತೆ ದುರ್ಗಮಂ ವಿರಚಿಸಿದುಂ ॥
ಸ್ವರ್ಗಮನೆ ಕುಡುವೆನಾನಹಿ ।
ತರ್ಗೆನುತಂ ನಡೆದು ಮುತ್ತಿದಂ ರಥಿನೀಶಂ ॥ ೮೦ ॥

ವ ॥ ಅಂತು ಪುರಹರಂ ತ್ರಿಪುರಮಂ ಮುತ್ತುವಂತೆ ಸೇನಾಗಣಪತಿ ಮುತ್ತುವುದುಂ–

ಮ ॥ ಸಿಡಿಲಂ ಜೇವೊಡೆ ಕಾರ್ಮುಗಿಲ್ಗಳನುದಂಚತ್ಕಾರ್ಮುಕಂ ಮಿಂಚನು ।
ಗ್ಗಡಮಪ್ಪಸ್ತ್ರಮರೀಚಿ ಪೋಲೆ ನವಿಲಿನಾನೃತ್ಯತ್ಕಬಂಧ ವ್ರಜಂ ॥
ಕಡುಪಿಂದಂ ಪ್ರಳಯಾಭ್ರದಂತಿರೆ ಚಿಲಾತಾವರ್ತರರ್ಕಾಂಶುವೋಲ್ ।
ಕಿಡುವನ್ನಂ ನೃಪಸೈನ್ಯಮಾರ್ದು ಶರವರ್ಷವ್ರಾತಮಂ ಬೀಱಿದರ್ ॥ ೮೧ ॥

ವ ॥ ಅದಲ್ಲದೆಯುಂ—

ಕಂ ॥ ಸಿಡಿಲುಂ ಮಿಂಚುಂ ಮೊಱಿಗುಂ ।
ಕಡುಗಾಳಿಯುಮಿಂದ್ರಚಾಪಮುಂ ಭಯಮಂ ತಾ ॥
ನೆಡೆವರಿಯದೀಗುಮೆನೆ ಮಱಿ ।
ಯೆಡೆವರಿಯದೆ ಕಱಿದು ಭಯಮನೀವುದು ಪಿರಿದೇ ॥ ೮೨ ॥

ವ ॥ ಅಂತು ಸೇನೆ ನಾಡೆಯುಂ ಮೊಗಸೇಡುಗೊಳ್ವಂತೆ ಕೊಳ್ವ ಮಱಿಯುಮಂ ಪೊಡೆವ ಸಿಡಿಲುಮಂ ದಂಡಾಧಿಪಂ ಕಂಡು—

ಮ ॥ ಒಡೆವೆಂ ಭೂಧರದುರ್ಗಮಂ ಕುಡಿವೆನಂಭೋದುರ್ಗಮಂ ಬೇಗದಿಂ ।
ಸುಡುವೆಂ ಕಾನನದುರ್ಗಮಂ ಸಲೆ ಚಿಲಾತಾವರ್ತರಂ ಲಾತಮಂ ॥
ಪಿಡಿದಿರ್ಪಂತಿರೆ ಮಾೞ್ಪೆನಾಂ ಮುಳಿಯೆ ದುರ್ಗಂ ದುರ್ಗಮಾಗಿರ್ಕುಮು ।
ಪ್ಪೊಡೆ ಭೂಪರ್ಗಡ ಭೂಪರೆಂದೆನಿಪೊಡಿನ್ನೆಲ್ಲಿತ್ತೊ ಮತ್ಪೌರುಷಂ ॥ ೮೩ ॥

ವ ॥ ಎಂದು ಮುಳಿಸಂ ಮೊಗಕ್ಕೆ ತಂದು—

ಮ ॥ ಅಡಿಯೊಳ್ಪಾಸಿದ ಚರ್ಮರತ್ನಮುದಱಿಂ ಮೇಲಾತಪತ್ರಂ ಬೆಡಂ ।
ಗಿಡಿದೊಪ್ಪುತ್ತಿರೆ ಧಾತ್ರಿಯುಂ ಗಗನಮುಂ ಗಂಟಿಕ್ಕಿದಂತಲ್ಲಿ ಪೇ ॥
ರ್ವಡೆಯಿರ್ದತ್ತು ಸಿಡಿಲ್ಕೆ ಕೊಳ್ವ ಮಱಿಗಾ ಮಿಂಚಿಂಗೆ ತಾನಳ್ಕದಾ ।
ರ್ಪಡೆವರ್ ಬಲ್ಲಿದರಪ್ಪರಲ್ಲಿ ಭಯಮಂ ತಮ್ಮೊಂದು ಸಾಮರ್ಥ್ಯದಿಂ ॥ ೮೪ ॥

ಕಂ ॥ ವಿದ್ಯಾನಿರ್ಮಿತಮಂ ಪರ ।
ವಿದ್ಯಾಚ್ಛೇದನ ಸಮಗ್ರ ಸಾಮರ್ಥ್ಯಯುತಂ ॥
ಚೋದ್ಯಮರಿಗೊದವುವಿನಮುನ ।
ವದ್ಯಯುತಂ ದುರ್ಗಮುಗ್ರತೆಯುನಳರಿಸಿದಂ ॥ ೮೫ ॥

ಚಂ ॥ ಜಳಧರಮದ್ರಿಯಂ ಮುಸುರಿ ಘುರ್ಜಿಸುತಂ ಸುರಿವಂಬು ವರ್ಷದಿಂ ।
ಚಳಿಯಿಸಲಾಱದಗ್ಗಳಿಪ ಲಜ್ಜೆಗೆ ಬೆಳ್ಗೊಗಮಪ್ಪ ಮಾೞ್ಕೆಯಿಂ ॥
ದಳವಿಗಳುಂಬಮುಪ್ಪ ಶರವರ್ಷದ ಧೀರ ಚಮೂಪರತ್ನಮಂ ।
ಚಳಿಯಿಸಲಾಱದೇೞ್ ಮೊಗದೊಳ್ ಮಿಗೆ ಬೆಳ್ಪೊಳ
ಸೋರ್ದರುದ್ಧತರ್ ॥ ೮೬ ॥

ವ ॥ ಅಂತು ಚಿಲಾತಾವರ್ತರುಂ ನಾಗರಾಜರುಂ ನಿರ್ಬಂಧದಿಂ ಸರ್ವಶಕ್ತಿಯಿಂ ಮಾೞ್ಪ ವಿಗುರ್ವಣಂಗಳಂ ಗಣಿಯಿಸದೆ ಪ್ರತಿವಿಧಾನಮಂ ಮಂತ್ರವಿಧಾನನವಂ ಬೆದಱಿಸೆ ಸಾಮಾನ್ಯಾಸ್ತ್ರದಿಂ ಕಾದುತ್ತಂ ಮಂತ್ರಾಸ್ತ್ರದಿಂದಲ್ಲದೆ ಗೆಲಲ್ಬಾರದೆಂದು ಬವರಮನವರಿಂ ಮಾೞ್ಪುದಂ ಕಂಡು

ಕಂ ॥ ರವಿರಥವಂತಾಕಾಶದೊ ।
ಳವಯುವದಿಂ ಪರಿವರಥಮುಮಂ ಗಿಡಿಗನುಮಂ ॥
ಪ್ರವಿಪುಳ ಮಂತ್ರಯುತಂ ಸ್ಥಪ ।
ತಿವಿರಚಿಸಿದನೊದವೆ ಬಲ್ಪು ರಥಿಸೇಪತಿಯೊಳ್ ॥ ೮೭ ॥

ವ ॥ ಅಂತಪ್ರತಿಮಪ್ರತಾಪಕ್ಕಗಣ್ಯಪುಣ್ಯಂ ಸಹಾಯಮಪ್ಪಂತು ಚಮೂಪತಿಗೆ ತಕ್ಷಕರತ್ನಂ ನೆರವಾಗೆ—

ಮ ॥ ಉರಗಾಸ್ತ್ರಂ ಗರುಡಾಸ್ತ್ರದಿಂ ಪೃಥುಪಯೋದಾಸ್ತ್ರಂ ಸಮೀರಾಸ್ತ್ರದಿಂ ।
ಕರಿಶಸ್ತ್ರಂ ನಖರಾಯುಧಾಸ್ತ್ರದೆ ತಮೋಸ್ತ್ರಂ ತೀವ್ರದೀಪ್ತ್ಯಸ್ತ್ರದಿಂ ॥
ಗಿರಿಶಸ್ತ್ರಂ ಕುಳಿಶಾಸ್ತ್ರದಿಂ ಜಳಧಿಶಸ್ತ್ರಂ ಬಾಡಬೋಗ್ರಾಸ್ತ್ರದಿಂ ।
ಪಿರಿದುಂ ಬೆಂಗುಡೆ ನಾಗರಾಜರನೆ ಬೆಂಗೊಂಡಂ ಚಮೂವಲ್ಲಭಂ ॥ ೮೮ ॥

ಕಂ ॥ ಕುಲದೈವದ ಬಲಮೆನಸುಂ ।
ನೆಲಸಿರೆಯುಂ ಮೋಘ ಚಂದ್ರಬಲಮುಳ್ಳೊಡಮೇಂ ॥
ಸೆಲೆಗಾನದವೋಲಾ ನರೆ ।
ಕಲದೊಳಪ ಕರಿನಬಲರ್ ಚಿಲಾತಾವರ್ತರ್ ॥ ೮೯ ॥

ವ ॥ ಅಂತು "ಸಹೇಂದ್ರಾಯ ತಕ್ಷಕಾಯ"ಯೆಂಬಂತೆ ತಮಗೆ ಶರಣ್ಯರಪ್ಪುರಗ ರಾಜರುಮಂ ತಮ್ಮುಮನೊರ್ವೊದಲೆ ಕಾರ್ಮುಕ ನಿರ್ಮುಕ್ತ ನಿಶಿತ ಶಿಳೀಮುಖಂಗಳಿಂ ಪರಾಙ್ಮುಖರಂ ಮಾಡೆ ಹತಪ್ರತಿಭರಾಗಿ ನಾಗರಾಜರ್ ಪೋಗೆ ವಿಗತಪ್ರಾಣತ್ರಾಣರಾಗಿ ಭಯಕ್ಕೆ ಪಕ್ಕಾಗಿ—

ಕಂ ॥ ಕೂಡುವ ಸಾಹಸಮಂ ಮಿಗೆ ।
ಮಾಡಿ ಬೞಿಕ್ಕಂಬು ತಪ್ಪಿತಭಿವಾದೆಯೆನಿ ॥
ಪ್ಪೀಡೊಂಬವಸರ್ ಚಕ್ರಿಗೆ ।
ಬೇಡಿತನಿತ್ತೆರಗಿದರ್ ಚಿಲಾತಾವರ್ತರ್ ॥ ೯೦ ॥

ವ ॥ ಅಂತುದ್ವೃತ್ತರಪ್ಪ ಚಿಲಾತಾವರ್ತರಂ ತೊತ್ತುವೇಷಕ್ಕೆ ಪಕ್ಕುಮಾಡಿದ ಪೃತನಾವಲ್ಲಭಂಗೆ ಪೃಥ್ವೀವಲ್ಲಭನಂಗಚಿತ್ತಮನಿತ್ತು ರಕ್ತಾಖ್ಯಾನದೀತೀರಂಬಿಡಿದು ಬೀಡಂ ನಡೆಯಿಸೆಂದು ನಿಯಮಿಸಿದಂದದಿಂ ನಡೆಯಿಸಲೊಡನೆ—

ಕಂ ॥ ರಕ್ತಾಸರಿದಧಿದೇವತೆ ।
ದಿಕ್ತಟಸಂವ್ಯಾಪ್ತ ಶೋಣದೀಪ್ತ್ಯನ್ವಿತಮಂ ॥
ರಕ್ತತೆಯುಂ ಚಕ್ರಿಗೆ ಸು ।
ವ್ಯಕ್ತಂ ಮಾಳ್ಪಂತನರ್ಘ್ಯವಸ್ತುವನಿತ್ತಳ್ ॥ ೯೧ ॥

ವ ॥ ಆವನವನವನಿರಕ್ಷಕಂ ಸ್ವೀಕರಿಸಿ ದಕ್ಷಿಣ ದಿಶಾಭಾಗಕ್ಕೆ ಪೋಗೆವೋಗೆ ನಿಷಧ ಶೈಲದ ಲೀಲೆ ಕಣ್ಪೊಲನಾಗೆ—

ಮ ॥ ಬಡವಂ ಪೆತ್ತ ಧನಂಬೊಲಿರ್ದ ಮಣಿಯುಂ ಬಯ್ತಿಟ್ಟು ರತ್ನಾಕರಂ ।
ಗಡದಿಂತೊಪ್ಪುಗುಮೆಂದು ಮೂದಲಿಪವೋಲ್ ಪೂರ್ವಾಪರಾಂಭೋಧಿಯಂ ॥
ಬಿಡೆ ಮುಟ್ಟಿರ್ದಖಿಳಾಶೆಗಂ ಕೆದಱಿ ಮಾಣಿಕ್ಯಾಂಶುವಿಂ ಶ್ರೀಯಸೋ ।
ಱ್ಪಿಡೆವೆತ್ತಿರ್ದುದನೀತನೆಯ್ದೆ ನಿಷಧಕ್ಷೋಣೀಧ್ರಮಂ ನೋಡಿದಂ ॥ ೯೨ ॥

ವ ॥ ಅಂತು ಪಲತೆಱದ ಪೊಗೞ್ತೆಗೆ ವಿಷಯಮಾದ ನಿಷಧಗಿರಿಯಂ ವಿಷಯವಲ್ಲಭಂ ನಿರೀಕ್ಷಿಸುತ್ತಮಿರೆ ಚಮೂವಲ್ಲಭಂ ಚಕ್ರಿಗಿಂತೆಂದಂ—

ಮ ॥ ಇದು ನಿನ್ನಾಜ್ಞೆಗೆ ಸೀಮೆಯೆಂದೆನಿಸಿಯುಂ ನಿಸ್ಸೀಮ ಶೋಭಾಗುಣಾ ।
ಸ್ಪದಮತ್ಯಾಯತಿವೆತ್ತು ಮಿಂತಿದಣಕಂ ಕಾಲತ್ರಯಸ್ಥಾಯಿಶ ॥
ಶ್ವದಿನದ್ಯೋತಿಸಮೇತವಾಗಿಯುಮನಸ್ತದ್ಯೋತಿ ವಿದ್ಯಾಧರೀ ।
ವದನಾಂಭೋರುಹ ಸೌರಭಾಕರಸರೋಲಕ್ಷ್ಮೀಧರಂ ಕ್ಷ್ಮಾಧರಂ ॥ ೯೩ ॥

ವ ॥ ಅಂತಾ ಮಹಾಮಹೀಧರದ ಮಹಿಮೆಯುಂ ಪೊಗಟ್ವಂತೆ ದಿಗ್ವಿಜಯಕ್ಕೆ ಸೀಮೆಯೆಂಬುದಂ ಮುಖಾಂತರದಿಂ ನಿರವಿಸೆ ಚಮೂನಾಥನ ಚಾತುರ್ಯಕ್ಕೆ ವಕ್ರೋಕ್ತಿ ವಿಶಾರದ ಮಹೀರಮಣಂ ಮನದೊಳೆ ಮೆಚ್ಚಿ—

ಕಂ ॥ ವೇದಿಕೆಯಂ ಜಳನಿಧಿ ಮ ।
ರ್ಯಾದೆಗೆ ದಾಂಟದವೊಲಾ ನಿಷಧನಗಮಂ ಧಾ ॥
ತ್ರೀದಯಿತಂ ದಾಂಟಸೆ ಮೊದ ।
ಲಾದಂತು ಪೊಸಂತಿಲೆಂದು ದಾಂಟನೆ ದಿಟದಿಂ ॥ ೯೪ ॥

ನಿಷಧಾದ್ರಿನಿತಂಬದೊಳೆ ನಿ ।
ಮಿಷಮಾತ್ರಂ ದರ್ಭಶಯನದೊಳ್ ಮಂತ್ರಮುಖಂ ॥
ವಿಷಯವಿಭು ನಿಯಮದಿಂದಿರೆ ।
ನಿಷಧಾಮರನಿರದೆ ಬಂದು ಕಂಡಂ ನೃಪನಂ ॥ ೯೫ ॥

ವ ॥ ಅಂತು ಸೀತಾಸಿಂಧುವಿನ ನಿಷಧ ಮಹೀಧರದ ಮಧ್ಯವರ್ತಿಗಳಪ್ಪ ದೇವ ವಿದ್ಯಾಧರ ಧರಾಧಿನಾಥನಾಜ್ಞಾಯುಕ್ತರಂ ಮಾಡಿ ಮಗುಟ್ದುತ್ತರ ದಿಶಾಭಾಗಕ್ಕೆ ಮಹಾ ಭಾಗನನುರಾಗದಿಂ ಬರ್ಪಾಗಳ್—

ಮ ॥ ಪ್ರಗುಣಶ್ರೀಮಣಿರಾಜಿ ಯೋಜನ ಶತೋತ್ಸೇಧಂ ಸುವರ್ಣಾತ್ಮಕಂ ।
ನೆಗಟ್ದಿಂತಾ ವೃಷಭಾಚಳೋನ್ನತಿಯು ವಿಚ್ಛಿನ್ನಾದ್ಯ ಚಕ್ರೀಪ್ರಶ ॥
ಸ್ತಿಗಳಂ ತೆಕ್ಕನೆ ತೀವಿ ಕಾಲಮುಮನಾದ್ಯಚ್ಛಿನ್ನಮೆಂಬೀ ಜನೋ ।
ಕ್ತಿಗೆ ದೃಷ್ಟಾಂತಮದಾಗೆ ದೃಷ್ಟಿಗೊಲವಂ ತಂದತ್ತು ಧಾತ್ರೀಶನಂ ॥ ೯೬ ॥

ಚಂ ॥ ಅಳವಿನೊಳಾಜ್ಞೆಯೊಳ್ನಯದೊಳನ್ವಯದೊಳ್ವಿಭವಪ್ರಭಾವದೊಳ್ ।
ಬಲದೊಳತಿಪ್ರತಾಪದೊಳದಾರೆಣೆಯೆಂದೊಗೆದಾ ಮದಜ್ವರಂ ॥
ಗಳಿಯಿಸಿದತ್ತು ಯಂತ್ರಪಟದಂತೆಸೆಯುತ್ತಿರೆ ಪೂರ್ವ ಚಕ್ರಿಸಂ ।
ಕುಳವಿಜಯಾರ್ಥಮಂ ವೃಷಭಾದ್ರಿಯುಮನೀಕ್ಷಿಸೆ ಚಕ್ರವರ್ತಿಯಾ ॥ ೯೭ ॥

ಕಂ ॥ ಮೊದಲಗಲಂ ಯೋಜನಶತ ।
ಮುದಯಂ ಶತಯೋಜನಂ ತದರ್ಧಪ್ರಮಿತಂ ॥
ತುದಿಯಗಲಮೆನೆ ವಿರಾಜಿಸು ।
ವುದು ವೃಷಭಾಮರ ಶುಭಾಶ್ರಯಂ ವೃಷಭನಗಂ ॥ ೯೮ ॥

ವ ॥ ಅಂತು ಶೋಭಿಸುವ ವೃಷಭ ಭೂಧರಧಾಮ ವೃಷಭಾಮರನಿಂ ರಾಜ ವೃಷಭಂ ಪೂಜಿತನಾಗಿ ಬಟಿಕ್ಕಮದಱ ಸಮೀಪಕ್ಕೆ ಪೋಗಿ—

ಕಂ ॥ ವಿದಿತಾದಿನೃಪರ ಪೆಸರಿಂ ।
ಪುದಿದು ಸುವರ್ಣಾತ್ಮಕಂ ಸುವರ್ಣಾತ್ಮಕಮ ॥
ಪ್ಪುದಯುಕ್ತಮೆನೆ ವಿರಾಜಿಸು ।
ವುದನೀಕ್ಷಿಸಿ ಬರೆಯಿಸಲ್ಕೆ ತನ್ನಯ ಪೆಸರಂ ॥ ೯೯ ॥

ಮ ॥ ಚಲಮಂ ಚಾಗಮನಾಜ್ಞೆಯಂ ವಿನಯಮಂ ಪೇೞ್ಬಿಂದು ಷಟ್ಖಂಡ ಮಂ ।
ಡಳದೊಳ್ ಮಾರ್ಮಲೆವನ್ನರಿಲ್ಲ ಬಡವರ್ ತಾಂ ರಕ್ಷಿಪೆಲ್ಲಾಜನಂ ॥
ಗಳೊಳಿಲ್ಲಂ ನಯದಿಂದೆ ವರ್ತಿಸುವರಿಲ್ಲಾರ್ಯರ್ಸಪರ್ಯಾಯದಿಂ ।
ತಳೆದೈಶ್ವರ್ಯಮನಪ್ಪುಕೆಯ್ಯದವರಿಲ್ಲೆಂದುಂ ನಿಜಕ್ಷೋಣಿಯೊಳ್ ॥ ೧೦೦ ॥

ಮ ॥ ಸ್ರ ॥ ಜಿನಪೂಜಾಲೋಕನಂ ಲೋಚನಕೆ ಜಿನಗುಣೋತ್ತುಂಗ ಸಂಪತ್ತಿ ಸಂಕೀ ।
ರ್ತನವಾಚಾನರ್ತನಂ ನಾಲಗೆಗೆ ಜಿನಮುಖೋಕ್ತಾಗಮಾರ್ಥವ್ರಜಂ ಭಾ ॥
ವನೆಗೆಂದುಂ ಬಂದುವೆಂಬುನ್ನತಿಯೊಳೆ ನಿಜಸಮ್ಯಕ್ತ್ವಮಂ ಧಾತ್ರಿಗೆಲ್ಲಂ ।
ಜನತಾಸಂಸ್ತುತ್ಯವೃತ್ತಂ ಮೆಱೆವನುರುಕಳಾ ಚಾರು
ಚಾತುರ್ಯವರ್ಯಂ ॥ ೧೦೧ ॥

ಕಂ ॥ ಅಱಿಯದ ಕಳೆಯಿಲ್ಲೆಡವರ ।
ನೆಱಗಿಸದ ಮೃದೂಕ್ತಿಯಿಲ್ಲ ದಶದಿಶೆಗಳೊಳಂ ॥
ಮೆಱೆಯದ ಗುಣಮಿಲ್ಲುಚಿತಮ ।
ನಱಿಯದ ವಿತರಣಮದಿಲ್ಲ ತನಗನವರತಂ ॥ ೧೦೨ ॥

ಶಶಿವಿಶದಗುಣಂ ವಿಜಯ ।
ಪ್ರಶಸ್ತಿಯುಂ ವಿಮಳಕಾಕಿಣೀರತ್ನದೆ ವಾ ॥
ಕ್ಕುಶಳಂ ಬರೆಯಿಸಿದಂ ದಶ ।
ದಿಶೆಯೊಳ್ ನಿಜಕೀರ್ತಿ ಬರೆಯೆ ಗುಣಮಾಳಿಕೆಯಂ ॥ ೧೦೩ ॥

ಶಾ ॥ ಸ್ವಸ್ತಿಪ್ರಸ್ತುತ ಪುಣ್ಯಭಾಗ್ಯಕುಟಬದ್ಧಶ್ರೇಣಿ ಚೂಡಾಮಣಿ ।
ನ್ಯಸ್ತ ಶ್ರೀಪದವಜ್ರನಾಭಿ ವಿಪುಳಶ್ರೀ ವಜ್ರವೀರ್ಯಾತ್ಮಜಂ ॥
ಧ್ವಸ್ತಾರಾತಿ ಸಮಗ್ರ ದಿಗ್ವಿಜಯಜಾತಖ್ಯಾತಿಯಂ ಚಕ್ರಿ ಜೈ ।
ತ್ರಸ್ತಂಭಂ ತನಗೆಂಬಿನಂ ಬರೆದೊಡೇನೊಪ್ಪಿತ್ತೊ ತದ್ಭೂಧರಂ ॥ ೧೦೪ ॥

ವ ॥ ಅಂತಾ ವೃಷಭಾಚಳಮಂ ನಿಜಾಂಕಮಾಲೆಗಳಿನಳಂಕರಿಸಿ ಪಶ್ಚಿಮ ದಿಗ್ವಿಭಾಗಕ್ಕೆ ಚಕ್ರ ನಡೆಯೆ—

ಕಂ ॥ ಭಾಸುರ ಮಣಿನಿರ್ಮಿತ ಸಿಂ ।
ಹಾಸನಮಂ ಸಾರ್ವಭೌಮ ಲಕ್ಷ್ಮೀಪದವಿ ॥
ನ್ಯಾಸಮನೊಸೆದುರು ರಕ್ಷೋ ।
ದಾ ಸರಿದಧಿದೇವಿ ಭೂವರಂಗಿರದಿತ್ತಳ್ ॥ ೧೦೫ ॥

ವ ॥ ಅಂತನುತ್ತರಾಭಿಧಾನ ಸಿಂಹಾಸನಮನಾತ್ಮಾಯತ್ತಂ ಮಾಡಿ ತತ್ತರಂಗಿಣೀ ತೀರಂಬಿಡಿದುತ್ತರಾಭಿಮುಖನಾಗಿ ನಡೆತಂದಿಂಬಾದ ವಿಜಯಾರ್ಧನಗನಿತಂಬದೊಳ್ ಬೀಡಂ ಬಿಡಿಸಿದಾಗಳ್—

ಕಂ ॥ ಸಾನುಮಸೃಣೇಂದು ಮಣಿಯಿನಿ ।
ಸಾನುಮಲಸದೀವ ಸಲಿಲ ಶೀಕರಕಳಿತಂ ॥
ದಾನಗಜಂಗಳ ಸೋಂಕಿಂ ।
ದಾನಗಜಂ ಸುರಭಿಪಡೆಯನಾಱಿಸಿತನಿಲಂ ॥ ೧೦೬ ॥

ವ ॥ ಅಂತು ಗಮನಶ್ರಮಮುಮನಡಂಗಿಸಿ ಪಡೆಗಲಂಪಂ ಪಡೆವ ನಗೋಪಕಂಠ ದೊಳ್ ರಾಜಕಂಠೀರವನುಪ್ಪಯಣಮುಂ ಮಾಡಿರ್ಪುದುಮಾಪ್ರಸ್ತಾವದೊಳ್—

ಕಂ ॥ ಕರಮಳ್ಕಿ ನಾಟ್ಯಮಾಳಾ ।
ಮರನವನತನಾಗಿ ಚಕ್ರಿಪದನಖರಂಗಾಂ ॥
ತರದೊಳ್ ತತ್ಪ್ರತಿಬಿಂಬಂ ।
ವಿರಚಿಸಿದುದು ನಾಟ್ಯಮಾಳೆಯುಂ ತತ್ಕ್ಷಣದೊಳ್ ॥ ೧೦೭ ॥

ವ ॥ ಅಂತು ನಾಟ್ಯಮಾಳಾಮರನಿಂ ರಾಜರಾಜಂ ಪೂಜಿತನಾಗಿ ಬಱಿಯಂ ಬಳಮುಖ್ಯನಂ ಬರಿಸಿ ಗಿರಿಗುಹಾದ್ವಾರವಜ್ರಕವಾಟಮನುದ್ಘಾಟನಂ ಮಾಡೆಂದು ನಿಯಮಿಸೆ—

ಕಂ ॥ ಮುನ್ನಿನ ತೆಱದಿಂ ತೆಱೆದು ಮ ।
ಹೋನ್ನತ ವಿಜಯಾರ್ಧಗಿರಿಗುಹಾದ್ವಾರಮನು ॥
ತ್ಪನ್ನ ವಿಜಯನಪರದಿಶಾ ।
ಸನ್ನದೆ ಮ್ಲೇಚ್ಛಾದಿರಾಜರಂ ಸಾಧಿಸಿದಂ ॥ ೧೦೮ ॥

ವ ॥ ಅಂತವರ ದರ್ಪಮನಪಿರ್ಪಿ ಕುಲದ ಕನ್ಯಾರತ್ನ ಕರಿತುರಗಾದಿ ಸಾರವಸು ಗಳನೊತ್ತಿ ಕಪ್ಪಂಗೊಂಡು ಷಟ್ಖಂಡ ಮಂಡಳಾಧಿಪತಿಯ ಪದಪಯೋಜಮನಾ ಮ್ಲೇಚ್ಛ ರಾಜ ಚಮೂಪತಿ ಬಂದು ಕಾಣಿಸೆ ಚಕ್ರವರ್ತಿಯುವರಂ ಸಮುಚಿತ ಪ್ರತಿಪತ್ತಿಯನಿತ್ತು ಕೃತಾರ್ಥರಂ ಮಾಡಿ ಬೀಱ್ಕೊಳಿಸಿ ಕಳಿಪೆ ಕಾಲಮುಂ ಕಳಿಪದೆ ಪೂರ್ವಕ್ರಮದಿಂ ಪರ್ವತ ಗುಹಾದ್ವಾರಮಂ ಪೊಕ್ಕು ರಣದಾನದಿಯ ತಡಿವಿಡಿದು ಪೋಗಿ ತತ್ಕ್ಷೋಣೀಧರ ದಕ್ಷಿಣ ಶೋಭಾಗಿರಿಕ್ಷೋಣಿಯ ದತ್ತಕಟಕದೊಳ್ ಕಟಕಮಂ ಬಿಡಿಸಿ ಸಾರ್ವಭೌಮನಿರೆ—

ಕಂ ॥ ನಿಶ್ಚಿತಮಂತ್ರ ಚಮೂಪತಿ ।
ಪಶ್ಚಿಮದಿಙ್ಮ್ಲೇಚ್ಛನೃಪತಿಗಳನೆಜಗಿಸಿದಂ ॥
ನಿಶ್ಚಳಿತ ಧೈರ್ಯಮೇರುವಿ ।
ಪಶ್ಚಿನ್ನುತಕೀರ್ತಿ ಚಕ್ರಿಚರಣಾಂಬುಜದೊಳ್ ॥ ೧೦೯ ॥
ಅಂತೆಱಗಿಸುವುದುಮವನೀ ।
ಕಾಂತಂ ವಿಕ್ರಾಂತಭೂಮಿಕೃತ ದಿಗ್ವಿಜಯಂ ॥
ಭ್ರಾಂತೇಂ ಕೃತಕೃತ್ಯಂ ಮಿಗೆ ।
ಸಂತಸಮಂ ತಳೆದನಂತರಂಗದೊಳಾಗಳ್ ॥ ೧೧೦ ॥

ವ || ಅಂತು "ಸ್ವಸಾಧ್ಯಂ ಪ್ರಸಾಧ್ಯಾಶ್ರಿತೋಽಪಿ ದೋಷಾಭಾವ"ಯೆಂಬಂತೆ ಕತಿಪಯ ಸಂವತ್ಸರಂಗಳಿಂ ಸಿದ್ಧದಿಗ್ವಿಜಯನಾಗಿ ಮನೋರಾಗಕ್ಕೆ ನೆಲೆಯಾಗಿ ನಿಜಪ್ರಚಾರ ಪ್ರಸಾದದಿಂ ಪ್ರಮೋದಮನಾ ಮೆಚ್ಚರಾಜರೊಳೊದವಿಸೆ ತದನಂತರಂ ಜಗತೀಪ್ರಭು ಶುಭಮುಹೂರ್ತದೊಳ್—

ಮ || ಧ್ವಜಿನೀಮುಖ್ಯ ಕುಮಾರಮಾಂಡಳಿಕ ಮಂತ್ರೀ ಮೆಚ್ಚರಾಜಾಂಗನಾ ।
ವ್ರಜ ಸಾಮಂತ ಖಗಾಮರಾಟವಿಕ ಪಲ್ಲೀಪಾಳ ಧಾನುಷ್ಕ ಸಾ ॥
ಮಜ ಪಾದಾತಿ ರಥಾಶ್ವ ವಿಶ್ವಗಣಬದ್ಧಾಂತರ್ಘುರ ಛತ್ರಿಕಾ ।
ಧ್ವಜಚಂಚಚ್ಚಮರೀಜ ಶಂಖಪಟಹಪ್ರಸ್ಫಾರಭೇರೀರವಂ ॥ ೧೧೧ ॥

ಉ || ದಿಕ್ಕರಿಕುಂಭರಂಗದೊಳೆ ನರ್ತಿಸೆ ಕೀರ್ತಿ ಜಯಾನಕಸ್ವನಂ ।
ಮಿಕ್ಕಿರೆ ವಜ್ರನಾಭಿ ಕೃತದಿಗ್ವಿಜಯಂ ನವಯೌವ್ವನಾಂಗನಾ ॥
ದೃಕ್ಕುಮುದಂ ಮುಖೇಂದುದಲದೊಪ್ಪೆ ನಿಜಾನ್ವಯ ರಾಜಧಾನಿಯಂ ।
ಪೊಕ್ಕನನೇಕ ಸಾರಮಣಿ ತೋರಣ ರಾಜಿತ ರಾಜವೀಥಿಯಂ ॥ ೧೧೨ ॥

ವ || ಅಂತು ವಿಶಿಷ್ಟಾಷ್ಟಶೋಭೆಗಳಿಂ ಶೋಭಿಸುವ ನಶ್ವರಾಶ್ವಪುರಮಂ ಪೊಕ್ಕು ಪುರಾಂಗನಾಜನಂಗಳಪಾಂಗಸಂತತಿಯೊಡನೆ ಸೂಸುವ ಲಾಜಾವರ್ಷಮುಮಂ ಪೆರ್ವಂಡಿ ರಾಶೀರ್ವಾದದೊಳ್ ಬೆರಸಿ ಪರಸುವ ಕುಲವೃದ್ಧರ ನಲ್ವರಕೆಗಳುಮಂ ತಳೆವುತ್ತಂ ನಿಖಿಳ ಮಂಗಳನಿಳಯಮೆನಿಪ ರಾಜನಿಳಯಮಂ ರಾಜರಾಜಂ ಪೊಕ್ಕು ಸನ್ಮಾನದಾನಪುರಸ್ಸರಂ ಸಕಲ ಮಕುಟಬದ್ಧಾಧಿರಾಜಂ ರಾಜಲೋಕಮಂ ವಿಸರ್ಜಿಸೆ ನಿರ್ಜಿತಾರಾತಿಜಾತಂ ಜಾತ ಮನೋರಮಂ ಮನೋನುರಾಗಕ್ಕಾಕರಮಾಗಿರ್ಪಿನಂ ಮೌಹೂರ್ತಿಕ ಪರಿಕೀರ್ತಿತ ಪಟ್ಟಬಂಧೋತ್ಸವಮುಹೂರ್ತಮತ್ಯಾಸನ್ನಮಾಗೆ—

ಕಂ || ಶ್ರೀಸುದತೀಪತಿಗಾತ್ಮನ ।
ದೀಸಲಿಲದೆ ಸೀತೆರಕ್ತೆರಕ್ತೋದೆಯೆನಿ ॥
ಪ್ಪೀಸರದಧಿದೇವತೆಯರ್ ।
ಮಾಸರಮಪ್ಪಂತು ಮಜ್ಜನಮನೊಡರಿಸಿದರ್ ॥ ೧೧೩ ॥

ವ || ಅನಂತರಂ—

ಕಂ || ಕೃತಮಾಳ ನಾಟ್ಯಮಾಳಾ ।
ಸ್ಮಿತ ಮಾಗಧವರತನುಪ್ರಭಾಸಾಮರರುಂ ॥
ವಿತತ ವಿಜಯಾರ್ಧರಿರ್ದ ।
ಪ್ರತಿಮಾಮರರುಂ ಮನೋನುರಾಗದಿನಾಗಳ್ ॥ ೧೧೪ ॥

ಮ || ಕನಕಾಂಭೋಜರಜಃಪಿಶಂಗಿತಸರಸ್ತೋಯಂಗಳಿಂ ಖೇಚರೀ ।
ಜನಪೀನಸ್ತನಚಂದನೋಜ್ವಳ ನದೀನೀರಂಗಳಿಂ ಶ್ರೀಮುಖಾ ॥
ಬ್ಜನಿಸರ್ಗೋದಿತ ಗಂಧಸಿಂಧುಜಳದಿಂ ಸಂಪೂರ್ಣಮಂ ಸ್ವರ್ಣಕುಂ ।
ಭನಿಕಾಯಂಗಳನಾಂತುಕೊಂಡು ಸುರಿದರ್ಧಾತ್ರೀಶ
ಮೂರ್ಧಾಗ್ರದೊಳ್ ॥ ೧೧೫ ॥

ವ || ಅಲ್ಲಿಂ ಬಳಿಕ್ಕೆ—

ಕಂ ॥ ಮೂವತ್ತಿಚ್ಛಾರ್ಸಿರ್ವರ್ ।
ಭೂವಿಶ್ರುತ ಮಕುಟಬದ್ಧರತ್ಯುತ್ಸವದಿಂ ॥
ತೀವೆ ದಿಶಾವಳಯಮನು ।
ದ್ಭಾವಿತ ರಸಗೇಯತೂರ್ಯಶಂಖನಿನಾದಂ ॥ ೧೧೬ ॥

ಮ ॥ ಸುಮನೋರತ್ನಸಮೇತ ಸತ್ಕುಲಮಹೀಭೃತ್ಸಂಗೆ ತನ್ನಿಚ್ಛೆ ಪ ।
ದ್ಮೆಮಹಾಪದ್ಮೆಯೆನಿಪ್ಪ ನಿರ್ಮಳಸರಸ್ತ್ರೋಯಂಗಳಿಂ ರತ್ನಹೇ ॥
ಮಮಯೋದ್ಯತ್ಕಳಶಂಗಳಿಂ ತೊಳೆದು ತದ್ಭೂಮೀಧ್ರವಂ ಪೋಲ್ತು ವಿ ।
ಕ್ರಮಿ ಚಕ್ರಪ್ರಭುಗಣ್ಬಿಜಿಂದೆಸಗಿದರ್ ಸನ್ಮಾನಮಂ ಸ್ನಾನಮಂ ॥ ೧೧೭ ॥

ವಿವಿಧಾತೋದ್ಯರವಂ ದಿಶಾವಳಯಮಂ ತಳ್ಕೈಸೆ ಮಾಕಂದ ಪ ।
ಲ್ಲವ ಸರ್ವೌಷಧಸಾರ ಸಾರಸಪಯಸ್ಸಂಪೂರ್ಣ ಸೌವರ್ಣ ಕುಂ ॥
ಭವಿತಾನಂಗಳನೆತ್ತಿ ವಿಪ್ರಜಯಜೀವ ಸ್ವಸ್ತಿವರ್ಧಸ್ವನಂ ।
ದರವಂ ವರ್ತಿಸೆ ಚಕ್ರವರ್ತಿಗಭಿಷೇಕಂ ಮಾಡೆ ಸಂಪ್ರೀತಿಯಿಂ ॥ ೧೧೮ ॥

ಲಲಿತ ಶ್ರೀಲಲನಾವಿಲೋಚನಮರೀಚಿ ಕ್ಷೀರವಾರಾಶಿ ನಿ ।
ರ್ಮಳ ವಸ್ತ್ರಪ್ರಕರಾಂಚಿತಂ ಮಕುಟಮುಕ್ತಾಹಾರ ಕೇಯೂರಕಂ ॥
ಗಳ ಮುದ್ರಾಕಟಿಸೂತ್ರಕಂಕಣಮಣಿಗ್ರೈವೇಯಕಾದ್ಯುದ್ಧ ಮಂ ।
ಗಳ ಭೂಷಾವಳಿಯಿಂ ಮನಂಗೊಳಿಸಿದಂ ಶೃಂಗಾರಲೀಲಾಕರಂ ॥ ೧೧೯ ॥

ವ ॥ ಅಂತು ಸಕಳ ಸಾಮ್ರಾಜ್ಯಲಕ್ಷ್ಮೀವಶೀಕರಣಮಂಗಳಾಳಂಕರಣಂಗಳಿಂದ ಳಂಕರಿಸಿ ಅಧಃಕೃತಸಿಂಹಪರಾಕ್ರಮನೆಂಬುದಂ ಸೂಚಿಸುವಂತೆ ಸಿಂಹಾಸನಾರೂಢನಂ ಮಾಡಿ—

ಉ ॥ ಮುಟ್ಟೆ ದಿಗಂತಮಂ ಸಕಳ ತೂರ್ಯನಿನಾದ ಸುಗೇಯನಿಸ್ವನಂ ।
ಪುಟ್ಟೆ ಮಹೋತ್ಸವಂ ವರಗೃಹಂಗಳೊಳಂ ಗುಡಿರತ್ನತೋರಣಂ ॥
ಕಟ್ಟೆ ಸಮಗ್ರ ರಾಜ್ಯಪದಪೀಠಪರಿಷ್ಠಿತ ಲಲಾಟಪಟ್ಟದೊಳ್ ।
ಪಟ್ಟಮನೊಪ್ಪೆ ಕಟ್ಟಿದರಶೇಷಪುರಂಧ್ರ ಭವಂ ಸುಲಗ್ನದೊಳ್ ॥ ೧೨೦ ॥

ವ ॥ ಅಂತವನೀಪೂಜ್ಯಪ್ರಾಜ್ಯಸಾಮ್ರಾಜ್ಯಪಟ್ಟಮಂ ಕಟ್ಟಿ—

ಮ ॥ ಸ್ಥಿರಸಂಪತ್ಸುರತ್ನೈಳಪಟ್ಟದೊಳಭಿಸ್ವಾರ್ಥದಿಂದಂ ಕಲ್ಪಭೂ ।
ಮಿರುಹಂ ವಿಸ್ತೃತ ಸೂರ್ಯಮಂಡಲದೊಳುದ್ಯತ್ತೇಜಮಂಭೋಧಿಯೊಳ್ ॥
ವರಮರ್ಯಾದೆ ವಿರಾಜಿಸಿರ್ಪ ತೆರದಿಂ ತತ್ಪಾಭವಂಬೆತ್ತು ನಿ ।
ನ್ನುರದೊಳ್ ರಂಜಿಸುತಿರ್ಕೆ ರಾಜ್ಯವಿಭವಂ ಚಂದ್ರಾರ್ಕತಾರಂಬರಂ ॥ ೧೨೧ ॥

ವ ॥ ಎಂದು ಪರಮಾನಂದದಿಂ ಪರಸಿ ಶೇಷೆಯನಶೇಷಮಕುಟಬದ್ಧರ್ ತೀವೆ—

ಮ ॥ ಸ್ರ ॥ ತಳೆದಂ ಸಾಮ್ರಾಜ್ಯ ಸಂಪತ್ತಿಯನಖಿಳಕಳಾವಲ್ಲಭಂ ವಲ್ಲಭಂ ಭೂ ।
ವಳಯಕ್ಕುರ್ವೀಶ ಚೂಡಾಮಣಿ ಚರಣನಖಂ ಸತ್ಯವಾಣೀಸಖಂ ಕೋ ॥
ಮಳಕಾಂತಾನೀಕ ದತ್ತಶ್ರವಣನವನ [ತಾರಾತಿ] ವಿದ್ರಾವಣಂ ಭೂ ।
ತಳವಂದಿಸ್ತೋತ್ರಪಾತ್ರಂ ವಿಬುಧಜನಮನಃ ಪದ್ಮಿನೀಪದ್ಮಮಿತ್ರಂ ॥ ೧೨೨ ॥

— ಗದ್ಯಂ —

ಇದು

ವಿದಿತವಿಬುಧಲೋಕನಾಯಕಾಭಿಪೂಜ್ಯ ವಾಸುಪೂಜ್ಯ ಜಿನಮುನಿ
ಪ್ರಸಾದಾಸಾದಿತ ನಿರ್ಮಳಧರ್ಮವಿನುತ ವಿನಯಜನ
ವನಜವನವಿಳಸಿತ ಕವಿಕುಳತಿಲಕಪ್ರಣೀತಮಪ್ಪ
ಪಾರ್ಶ್ವನಾಥ ಪುರಾಣದೊಳ್
ವಜ್ರನಾಭಿನಾಮಾಭಿರಾಮ
ಚಕ್ರವರ್ತಿ ದಿಗ್ವಿಜಯ
ವರ್ಣನಂ

ಏಕಾದಶಾಶ್ವಾಸಂ ಸಮಾಪ್ತಂ

---

॥ ಶ್ರೀಃ ॥

# ದ್ವಾದಶಾಶ್ವಾಸಂ

ಕಂ ॥ ಶ್ರೀ ಸಾರ್ವಭೌಮಪದಲ ।
ಕ್ಷ್ಮೀಸಂಗತವಕ್ಷನಮಳಚರಿತಂ ವಿತತಾ ॥
ಜ್ಞಾಸಫಳೀಕೃತ ವಿಭವಂ ।
ಭಾಸುರಯಶನೆಸೆದನಿಳೆಗೆ ಕವಿಕುಳತಿಳಕಂ ॥ ೧ ॥

ವ ॥ ಮತ್ತಮಾ ಮಹೀವಲ್ಲಭಂ ಮೂವತ್ತೆರ್ಛಾಸಿರವಿಷಯಂಗಳಿನೆಪ್ಪತ್ತೆರಡು ಸಾಸಿರ ನಗರಂಗಳಿಂ ತೊಂಬತ್ತಾಱು ಕೋಟಿ ಗ್ರಾಮಂಗಳಿಂ ತೊಂಬತ್ತೞ್ಸಾಸಿರ ದ್ರೋಣಾಮುಖಂಗಳಿಂ ನಾಲ್ವತ್ತೆಣ್ಸಾಸಿರ ಪಟ್ಟಣಂಗಳಿಂ ಪದಿನಾಱು ಸಾಸಿರ ಖೇಡಂಗಳಿಂ ಅಯ್ವತ್ತಾಱು ಸಾಸಿರಂತರದ್ವೀಪಂಗಳಿಂ ಪದಿನಾಱುಸಾಸಿರ ಸಂವಾಹಂಗಳಿನಾಱುಸಾಸಿರ ಕುಕ್ಷಿನಿವಾಸಂಗಳಿನೆಣ್ಬತ್ತೆರಡುಸಾಸಿರ ದುರ್ಗಾಟವಿಗಳಿನನೇಕಕೋಟಿಪ್ರಮಾಣ ಸ್ಥಾನಾದಿಗಳಿಂ ಶತಸಹಸ್ರಕೋಟಿ ಹುಂಡಂಗಳಿಂ ಮೂಱುಕೋಟಿ ಗೋಮಂಡಳಂಗಳಿಂ ಮನಂಗೊಳಿಸುವ ವಿಷಭಾಮಿನೀಪ್ರೇಮ ಭೂಮಿಯಪ್ಪುದಱಿಂ ಸಾರ್ವಭೌಮನುಂ ಕಾಮರೂಪಿಯುಂ ಕಾಮಚಾರಿಯುಮಪ್ಪ ವಿಜಯಾರ್ಧಮೆಂಬ ಹಸ್ತಿರತ್ನದಿಂ ಪ್ರಶಸ್ತಮಪ್ಪೆಣ್ಬತ್ತನಾಲ್ಕುಲಕ್ಷ ಭದ್ರಗಜಂಗಳಿಂ ಪವನಂಜಯಮೆಂಬಶ್ವರತ್ನದಿಂ ವಿಶ್ವಾವನೀವಿಶ್ರುತಮಪ್ಪ ಪದಿನೆಂಟುಕೋಟಿ ಜಾತ್ಯಶ್ವಂಗಳಿಂ ಅಜಿತಂಜಯಮೆಂಬ ರಥಸನಾಥಮಾಗಿ ಮನೋರಥಮಂ ತೀರ್ಚುವೆಣ್ಬತ್ತುನಾಲ್ಕುಲಕ್ಷ ರಥಂಗಳಿಂ ಮೂವತ್ತೆರ್ಛಾಸಿರ ಮಕುಟಬದ್ಧರಿಂ ಪದಿನೆಣ್ಸಾಸಿರ ಮೆಚ್ಚರಾಜರಿಂದೆಣ್ಬತ್ತುನಾಲ್ಕುಕೋಟಿ ವೀರಭಟರ್ಕಳಿಂ ನಿಮಿರ್ಕೆವಡೆದು ನಾಲ್ವತ್ತೆಂಟುಕೋಟಿ ಪತಾಕೆಗಳುಂ ಪನ್ನೆರಡುಯೋಜನಂಬರಂ ಕೇಳಲೆ ಬರ್ಪ ಗಂಭೀರನಾದಮನಾಳ್ದಾನಂದಂಗಳೆಂಬ ಪನ್ನೆರಡುಂ ಪಟಹಂಗಳುಂ ಗಂಭೀರಾವರ್ತಮೆಂಬಿರ್ಪತ್ತನಾಲ್ಕು ಶಂಖಂಗಳುಂ ತನ್ನುನ್ನತಿಯುನತಿಶಯಿಸೆ ಮಹತ್ವಮನಪ್ಪುಕೆಯ್ವ ವಾಹಿನೀಪತಿಯಪ್ಪುದಱಿಂ ಬಳಜಳನಿಧಿಯುಂ ತ್ರಿಭುವನದೊಳುದ್ಭವಿಸಿದ ಮಣಿಛತ್ರ ಕಾಕಿಣೀಚರ್ಮರತ್ನಕ್ಕಮಾಯುಧಶಾಲೆಯೊಳ್ ಸಂಭವಿಸಿದ ಚಕ್ರಾಸಿದಂಡರತ್ನಕ್ಕಂ ವಿಜಯಾರ್ಧನಗದೊಳೊಗೆದ ಗಜಾಶ್ವ ಸ್ತ್ರೀರತ್ನಕ್ಕಮಶ್ವಪುರದೊಳ್ ಪುಟ್ಟಿದ ಪುರೋಹಿತ ಸ್ಥಪತಿಗೃಹಪತಿಚಮೂಪತಿರತ್ನಕ್ಕಮಾಕರವಾದುದಱಿಂ ಗಂಭೀರಗುಣರತ್ನಾಕರನುಮೆನಿಸಿ ಕ್ಷಿತಿಸಾಗರಮೆಂಬ ವಜ್ರಪ್ರಾಕಾರದೊಳಂ ಸರ್ವತೋಭದ್ರಮೆಂಬ ಗೋಪುರದೊಳಂ ರಾಜಿಸುವ ವೈಜಯಂತಿಯೆಂಬ ಮೂಲಪ್ರಾಸಾದಮಂ ಬಳಸಿದುತ್ತುಂಗ ಸಿಂಹಾಸನ ಪ್ರಶಸ್ತಿಕಮೆಂಬ ಸಭಾಸದನಮುಂ ವರ್ಧಮಾನಮೆಂಬೀಕ್ಷಣಸುಖವರ್ಧಮಾನನ ಪ್ರೇಕ್ಷಾನಿಧಾನಮುಂ ಮಹಾಘುರ್ಮಾಂತಮೆಂಬತಿಕಾಂತ ದಾರಾಗೃಹಮುಂ ಗೃಹಕೂಟಮೆಂಬ ಹರ್ಷಕರ ವರ್ಷಾಗಾರಮುಂ ಗಿರಿಕೂಟಮೆಂಬ ದಿಗವಳೋಕನ ಪ್ರಾಸಾದಮುಂ ಸಿಂಹವಿಧೃತ ಸಿಂಹವಾಹಿನೀನಾಮಶಯ್ಯಾಳಂಕೃತ ಪುಷ್ಕಳಾವರ್ತಿಯೆಂಬ ಶಯನಾಶ್ರಯಮುಂ ಸಿಂಹಾಟಕಮೆಂಬ ಕುಂತಕ್ಕಂ ಲೋಹವಾಹಿನಿಯೆಂಬ ಸುರಿಗೆಗಂ ವಜ್ರಕಾಂಡಮೆಂಬ ಬಿಲ್ಗಂ ಅಮೋಘುಮೆಂಬ ಶರಕ್ಕಂ ವಜ್ರತುಂಡಮೆಂಬ ಶಕ್ತಿಗಂ ಅಭೇದ್ಯ

ಮೆಂಬ ಕವಚಕ್ಕಂ ಸಾನಂದಕಮೆಂಬ ಖಡ್ಗರತ್ನಕ್ಕಂ ಭೂತಮುಖಮೆಂಬ ಖೇಟಕ್ಕಂ ಮನೋವೇಗಮೆಂಬ ಕಣೆಗಂ ಮೊದಲಾದ ಪಲತೆಱದಾಯುಧಕ್ಕಂ ನೆಲೆಯಾದಾಯುಧ ನಿಕೇತನಮುಂ ಜೀಮೂತಮೆಂಬ ಸಜ್ಜನನುತಮಜ್ಜನಮಂದಿರಮುಂ ದೇವರಮ್ಯಮೆಂಬ ಪಟಹರ್ಮ್ಯಮುಂ ಕುಬೇರಕಾಂತಮೆಂಬ ಕೋಶನಿವೇಶಮುಂ ವಸುಧಾಗಾರಮೆಂಬ ಕೋಷ್ಠಾಗಾರಮುಂ ದ್ವಾತ್ರಿಂಶನ್ನಾಟ್ಯಶಾಲೆಗಳಿಂ ಲೀಲೆವಡೆದ ನಂದ್ಯಾವರ್ತಮೆಂಬ ಶಿಬಿರ ಶರಣಮುಂ ಪಲತೆಱದ ಪರಿಗಳುಮಂ ಷಟ್ಕರ್ಮಸಾಧಕ ಸಾರವಸ್ತುಗಳುಮಂ ವಿವಿಧಾ ಶ್ರಯಾಸನ ಶಯ್ಯಾವಿಶೇಷಂಗಳುಮಂ ಶಾಲ್ಯಾದಿ ನಾನಾ ಧಾನ್ಯಂಗಳುಮಂ ದುಕೂಲಾದಿ ವಿಚಿತ್ರ ವಸ್ತ್ರಂಗಳುಮಂ ಹಾರಾದ್ಯಲಂಕಾರಂಗಳುಮಂ ಶಕ್ತ್ಯಾದಿ ಶಸ್ತ್ರಂಗಳುಮಂ ಮಾಣವಕ ಶಂಖ ಸರ್ವರತ್ನಂಗಳೆಂಬ ನವನಿಧಿಗಳುಂ ವಿಷಮೋಚಿಕೆಗಳೆಂಬ ಪಾವುಗೆ ಗಳುಂ ವೀರಾಂಗದಮೆಂಬ ಮಣಿಕಂಕಣಂಗಳುಂ ವಿದ್ಯುತ್ಪ್ರಭಮೆಂಬ ಮಣಿಕುಂಡ ಳಂಗಳುಂ ಅವತಂಸಿಕೆಯೆಂಬ ನವರತ್ನಹಾರಮುಂ ಚಿಂತಾಮಣಿಯೆಂಬುತ್ತಂಸಮುಂ ಯಕ್ಷಕರ ವಿಧೂಯಮಾನಾನುಪಮಾಭಿಧಾನ ದ್ವಾತ್ರಿಂಶಚ್ಚಮರರುಹಮುಮನುತ್ತರಾಭಿ ಧಾನೋತ್ತುಂಗ ಸಿಂಹಾಸನಮುಂ ಸೂರ್ಯಪ್ರಭಮೆಂಬ ಧವಳಾತಪತ್ರಮುಂ ಸ್ಥಾವರ ಜಂಗಮಕೃತ್ರಿಮವಿಷಪರಿಹರಣಪರಿಣತರಪ್ಪ ಮುನ್ನೂಱಱವತ್ತು ಮಾನಸಶರೀರ ವೈದ್ಯರಿಂ ಸೂಪಶಾಸ್ತ್ರಪ್ರವೀಣರಪ್ಪನಿಬರೆ ಬಾಣಸಿಗರಿಂ ಸುಪರೀಕ್ಷಿತಮುಂ ಸುಪ್ರಯತ್ನ ನಿಷ್ಪನ್ನಮುಮಪ್ಪ ಪರಮಕಲ್ಯಾಣಮೆಂಬನ್ನಮುಮಮೃತಗರ್ಭಮೆಂಬ ಭಕ್ಷ್ಯಂಗಳು ಮಮೃತಕಲ್ಪಮೆಂಬಾಸ್ವಾದ್ಯಜಯರುಂ ದ್ವಾತ್ರಿಂಶತ್ ಸಹಸ್ರಾವರೋಧರಮಣಿಯರು ಮಂತು ಷಣ್ಣವತಿಸಹಸ್ರಮೆನಿಸಿದಂತಃಪುರಕಾಂತೆಯರ್ಗೆಲ್ಲಮಗಣ್ಯಲಾವಣ್ಯಸೌಭಾಗ್ಯ ಭಾಗ್ಯಾದಿ ಲೀಲೆಗಳಿಂ ಮೇಲೆನಿಸುವ ಸಕಲಕಳಾವಿದ್ಯಾಧರೀವಿದ್ಯಾಧರಾಧಿಪ ಕುಮಾರಿ ಸುಭದ್ರೆಯೆಂಬ ಸ್ತ್ರೀರತ್ನಂ ತನಗೆ ಮನೋರಥ ಜನ್ಮಭೂಮಿಯಾಗೆ—

ಕಂ ॥ ಅನುಪಮ ಪುರನಿಧಿ ಶಯ್ಯಾ ।
ಸನ ನರ್ತನ ಭೋಜ್ಯರತ್ನಸೈನ್ಯ ಸಭಾವಾ ॥
ಹನ ನಾಮಭೇದದಿಂ ವ ।
ಜ್ರನಾಭಿ ವಿಭುಗೆಸದಪೀದಶಾಂಗಂ ಭೋಗಂ ॥ ೨ ॥

ಪತ್ತಿದೊಡುಳಿದ ನೃಪಾಳರ ।
ಸತ್ತಿಗೆಯುಪರಾತಪಾರ್ತಿಯನೆ ಕಳೆಗುಂ ಭೂ ॥
ಪೋತ್ತಮ ಸೂರ್ಯಪ್ರಭನೆೊ ।
ಲ್ದಿತ್ತೆ ಬಳಾತಪದ ಬಾಧೆಯುಮನಳಿಸುಗುಂ ॥ ೩ ॥

ವ ॥ ಚರ್ಮರತ್ನಮುಮುದೊರ್ಮೆಯುಂ ಬಳಕ್ಕೆಳಸುವ ಭೂತಳೋಪಸರ್ಗ ಮಂ ನಿಸರ್ಗಸಾಮರ್ಥ್ಯದಿಂ ನಿವಾರಿಸುತ್ತಮೆಸೆಯುತ್ತಿರೆ—

ಕಂ ॥ ಭೂಕಂಟಕ ನೃಪಜಯಕಾಂ ।
ತಾಕರ್ಷಣಯಂತ್ರಮಧಿಲಕ್ಷ್ಮೀಲಲನಾ ॥
ಲೋಕನ ಮಣಿದರ್ಪಣಮೆನಿ ।
ಪಾಕೃತಿಯಿಂದೊಪ್ಪುತಿರೆ ಸುದರ್ಶನ ಚಕ್ರಂ ॥ ೪ ॥

ಮ ॥ ಭುವನೇಶಂ ನಿಷಧಾವನೀಧರದಿನಾ ಸೀತೋದೆಪರ್ಯಂತಮೊ ।
ಪ್ಪುವ ಷಟ್ಖಂಡ ಮಹೀತಳಂ ವಿಪುಳತೇಜಕ್ಕಳ್ಕೆ ವಿದ್ಯಾಧರರ್ ॥
ದಿವಿಜರ್ ಮಾಗಧ ಮುಖ್ಯರೋಲಗಿಸೆ ಮೂಲೋಕಂಗಳೊಳ್
ಕೀರ್ತಿಯಾ ।
ಜ್ಞೆವೊಲೊಪ್ಪುತ್ತಿರೆ ವಜ್ರನಾಭಿ ನೆರೆದಂ ಶ್ರೀಸಾರ್ವಭೌಮತ್ವದಿಂ ॥ ೫ ॥

ಅನುಕೂಲಂ ವನಿತಾಜನಂ ವಿನಯಸಂಪನ್ನಂ ಸುತಶ್ರೇಣಿ ಭ ।
ಕ್ತಿನಿಯುಕ್ತಂ ಪರಿವಾರಮಪ್ರತಿಮಿತಾಜ್ಞಾಧೀನರಾಜನ್ಯಕಂ ॥
ಸುನಯೋದ್ಯೋಗ ನಿಯೋಗಿವರ್ಗಮನುರಾಗಶ್ರೀಗಡರ್ಪಾದ ಸ ।
ಜ್ಜನವಿದ್ವಜ್ಜನಪೂಜ್ಯವೈಭವನದೇಂ ಸೌಖ್ಯಕ್ಕೆ ಪಕ್ಕಾದನೋ ॥ ೬ ॥

ವ ॥ ಅಂತನೇಕ ಸಹಸ್ರ ವರ್ಷಂಗಳ್ ಸುಖಾಮೃತ ವರ್ಷಂಗಳಾಗಿ ಪೋಗುತ್ತಮಿರೆ ಮತ್ತೊಂದು ದೆವಸಂ ಸಿಂಹಕಟೀತಟಂ ಸಿಂಹಾಸನಾದ್ರಿ ಕೇಕರಾಳೋಕನ ಕಾಂತಿ ಸಂತತಿ ನಿತಂಬಬಿಂಬಮಂ ಬಳಸಿದಂತೆಸೆಯೆ ಸಾಂದ್ರ ಚಂದ್ರಿಕೆಯ ಚೆಲ್ವಿಂಗನುಕೂಲಮಾದ ದುಕೂಲಮನುಟ್ಟು ಮಳಯಜವಲ್ಲಭಂ ವಿಳಾಸಿನೀದರಹಾಸದಂತೆ ನಯನಮನೋಹಾರಿಯುಂ ಸೌರಭವಿಸ್ತಾರಿಯುಮಪ್ಪ ಮಳಯಜಮಂ ಕೋಮಳ ತನುವಿನೊಳಮರೆತಿಮಿರ್ದು ಹದಂ ಬೆತ್ತ ಕತ್ತುರಿಯನೇ ಸರಿಗೆದೆಗೆದಂತೆಸೆವ ಕೇಶಪಾಶದ ಪರಿಮಳದಿನವಂಪೊರೆದಪನೆಂಬಂತೆ ಪರಿಮಳದುರುಳಿಯೆಸಿಪಿರುವಂತಿಯ ಬಿರಿಮುಗುಳನಿಂಬಾಗೆ ತೋರದುರುಂಬಿನೊಳ್ತುರುಂಬಿ ಕುಂತಳಾಳಿವಾಳಾಮೇಳನದಿಂ ಕುಸುಮಶರ ಶರಂಗಳಂತೆ ಕಾಂತೆಯರ ಮನಮನಿಟ್ಟುಕೊಳಿಗೊಳ್ವ ಚಂಚತ್ಪಂಚರತ್ನದ ತಲೆಸುತ್ತಂ ಸುತ್ತಿ ಮತ್ತಮಳಿಮಿಳಿತ ವಿಚಕಿಳ ಮುಕುಳದಿಂ ರತಿ ರಚಿಯಿಸಿದ ಕುಸುಮಚಾಪ ಚಕ್ರಧರನ ಕರಚಕ್ರದಂತೆ ಲೀಲೆವೆತ್ತನಿಲ ಮುತ್ತಿನೋಲೆಯಂ ಪಾಲೆಯೊಳಮರ್ಚಿ ಚಕ್ರಧರಂ ಪೀತಾಂಬರನೆಂಬ ತನ್ನ ಪೆಸರಂ ನನ್ನಿಮಾಡುವಂತೆ ಚೆನ್ನನಪ್ಪ ಸೊನ್ನೆ ಸಾರವಂಗಿಗೆಯಂ ತೊಟ್ಟುನೇತ್ರವಿಚಿತ್ರಮೆನಿಪ ಚಿತ್ರಾವಳಿಯ ಪಾಂಗನಂಗನಾಪಾಂಗಾಂಗಜಗಜಮಂ ಕಟ್ಟುವಂತೆ ಕಟ್ಟಿ ವಿಜಯಶ್ರೀ ರಮಣೀ ಪೀಠದಂತಿರೆ ಕೇಯೂರಮಂ ಭೂರಿಭುಜದೊಳ್ ತಳೆದು ಭಾಸುರರತ್ನ ಭೂವಳಯಮಂ ವಿಶೇಷ ಶೋಭಾಕರ ಕರಯುಗಳದೊಳಾಂತು ನಮೇರು ಭೂರುಹ ಶಾಖಾವಳಿಗಳುದಾರದಿಂ ವೀರಮುದ್ರೆಯನಿಕ್ಕುವಂತೆ ಕೋಮಳಾಂಗುಳಿಗಳೊಳ್ ಮಣಿಮಯಾಂಗುಳೀಯಕಂಗಳಂ ಸಂಗಳಿಸಿ ರೋಹಣನಗನಿತಂಬಮೆಂಬಂತೆ ನಿಜನಿತಂಬಮೆಸೆಯೆ ಮಿಸುಪರತ್ನಘಟಿತ ಕಟಾರಮಂ ಕಟ್ಟಿ ಕೃಷ್ಣಹೃದಯಂ ತನಗಿರಲನುಚಿತಮೆಂದು ತನ್ನ ಹೃದಯಕ್ಕವತರಿಸಿದ ಸಿರಿಯ ಸಹಜ ಸೌಹಾರ್ದದಿನನುಬಂಧಿಸಿ ಬಂದತಿಪ್ರಶಸ್ತ ಕೌಸ್ತುಭಮೆನಿಪನುಪಮ ನೂತ್ನರತ್ನಪದಕಮಂ ವಿಸ್ತೀರ್ಣ ವಕ್ಷಸ್ಥಳಕ್ಕಳಂಕಾರಮಂ ಮಾಡಿ ಸಾರ್ವಭೌಮಶ್ರೀಧಾಮಲಲಾಟಲಲಿತೇಂದುಮಂಡಳಮಂ ಗೆಡೆಗೊಂಡು ಚಿತ್ತಜನಂತೆ ವೃತ್ತಸ್ತನೆಯರ ಚಿತ್ತಮನೆಟಿಕುಳಿಗೊಳ್ವ ಚೆಲ್ವುವೆತ್ತ ಕತ್ತುರಿಯ ತಿಳಕಮನಿಟ್ಟು ಗೃಹೀತ ತಾಂಬೂಲನಾಳೋಕಿತ ಮಂಗಳ ಮಣಿದರ್ಪಣಂ ಕೂರ್ಪಿಂದಾರಕೂರ್ಪುಮನ್ನೇರ್ಪುಗಿಡಿಪಲಗಂ ಪಿಡಿದಲರ್ಗಣೆಯನಲರಂಬಿನ ಬಂಬಲೆಂಬಂತೆ ಬಗೆಗೊಳಿಸಿ ವೀಳಯಂಗುಡುವ ಮೇಲುದಂ ಪಿಡಿವಣ್ಪಿಕ್ಕುವ ತಲೆಯಂ

ಪಿರ್ಕುವ ನೆಲನನುಗ್ಘಡಿಸುತಂ ಬರ್ಪ ಚಮರಜಮ ನಿಕ್ಕುತಿರ್ಪ ಮೇಳದಿಂ ನುಡಿವ ಕಳ ಕಳಮಂ ಜಡಿವ ವಿವಿಧ ವಧೂಕದಂಬಕಂ ಸರಸಚರಣಾಧರ ಪಲ್ಲವದಿಂ ಪಲ್ಲವಿಸಿ ಕೇಕರ ದರಹಾಸ ವಿಳಾಸದಿಂ ಕುಸುಮಿಸಿ ಮಿಸುಪ ತನುಲತೆಗಳಿನತನುಲತಾಕೇಳೀಲೀಲೋ ದ್ಯಾನಲತೆಗಳಂತೆ ಬಳಸಿಬರೆ ವಸಂತರಾಜನ ವಿಳಾಸಮಂ ತಳೆದು ಪದನಖಮಯೂ ಖಂಗಳಿನಿಳಾವಿಳಾಸಿನಿಗೆ ಪುಳಕಾಂಕುರಂಗಳಂ ಪುಟ್ಟಿಸುತ್ತಂ ನಡೆತಂದು ತನ್ನಂತೆ ಸಮು ನ್ನತ ವಿಜಯಸ್ತಂಭ ಶುಂಭತ್ಕೀರ್ತಿ ಸಾಲಭಂಜಿಕಾಮೂರ್ತಿ ವಿದಿತ ಸುಧಾವಳಿತ ದಿಗ್ಭಿತ್ತಿ ಭಾಗಮುಂ ಸಂಪಾದಿತ ಸಕಲಜನ ಮನೋರಾಗಮುಂ ನಿಜವಕ್ಷಸ್ಥಳದಂತೆ ಲಕ್ಷ್ಮೀನಿಳಯ ಮುಮುಮಳ ಗುಣಮಣಿ ಪ್ರಕಾಶಿತ ಸಭಾವಳಯಮುಂ ಸ್ವಕೀಯ ವಿಭವದಂತುದಿ ತಾದಿತ್ಯೋದಯಮುಮಾಸಾದಿತ ಸಹೃದಯಪ್ರಮೋದಮುಮೆನಿಸಿ ಸರಸಿಜ ಸಂಭವನೆ ಸೂತ್ರಧಾರನಾದಂತೆ ನೇತ್ರವೈಚಿತ್ರ್ಯಮಂ ಸೂತ್ರಿಸುವಾಸ್ಥಾನಮಂಟಪಮಧ್ಯಸ್ಥಿತಾನುತ್ತ ರಾಭಿಧಾನ ಸಿಂಹಾಸನಮನಳಂಕರಿಸಿದಾಗಳ್—

ಮ ॥ ಜಗದೀಶಂ ಬೆದಱಟ್ಟೆ ದೋರ್ವಳದಗುರ್ವಿಂದನ್ಯ ರಾಜನ್ಯಕಂ ।
ಬಗೆಗೆಟ್ಟುರ್ವರೆಯುಂ ಬಿಸುಟ್ಟು ವನಮಂ ಪೊಕ್ಕಂ ಭಯಂಗೊಳ್ವುದಂ ॥
ಮೃಗರಾಜಂ ಮಿಗೆ ಕಂಡು ತಾನುಮಪುನೀತಾತ್ಮಂ? ಶರಣ್ಬೊಕ್ಕವೋಲ್ ।
ಸೊಗಯಿಕ್ಕುಂ ಮಣಿಭಾಸುರಂ ನಿರುಪಮಂ ಕ್ಷೋಣೀಶ ಸಿಂಹಾಸನಂ ॥ ೭ ॥

ಚಂ ॥ ಅರಸಿಯರಂಗರೋಚಿಮಣಿಭೂಷಣ ಕಾಂತಿಗಳಿಂ ಪರಾಗದಿಂ ।
ಪೊರೆದ ಜಲಂಬೊಲೊಪ್ಪೆ ಕನಕಾಸನ ಭಾಸುರಶೋಭೆ ಹೇಮತಾ ॥
ಮರಸ ವಿಳಾಸಮಂ ತಳೆಯೆ ಹಾರಲತಾಂಶುವೃತಂ ಸಭಾಸರೋ ।
ವರವರ ರಾಜಹಂಸನೆನೆ ರಾಜಿಸಿದಂ ವಸುಧಾಧಿ ನಾಯಕಂ ॥ ೮ ॥

ಉ ॥ ಓಲಗದಲ್ಲಿ ಮಾಂಡಳಿಕಮೌಳಿವಿಘಟ್ಟಿತ ಪಾದಪೀಠಭೂ ।
ಪಾಳಕನಿರ್ಕೆಲಂ ಬಿಡಿದು ಕಣ್ಗೆಸೆದರ್ ನಗೆಕಾರ್ತಿಯರ್ ಸಮಂ ॥
ತೋಲೆಯಕಾರ್ತಿಯರ್ ನೆಗಟ್ಟೆ ಜಾಣ್ನುಡಿಕಾರ್ತಿಯರೊಳ್ಕೆ ಕಾರ್ತಿಯರ್।
ಲೀಲೆಯಿನಾಂತು ನಿಂದ ಬಿಯಕಾರ್ತಿಯರಗ್ಗದ ಗಾಡಿಕಾರ್ತಿಯರ್ ॥ ೯ ॥

ಕಂ ॥ ನೇವುರದ ಕನ್ನವುರದೆ ।
ಕ್ಕಾವಳಿಯ ತೊಳಪ್ಪ ಮುತ್ತಿನಾರದ ಕಟಿಸೂ ॥
ತ್ರಾವಳಿಯ ಘನಸ್ತನೆಯರ್ ।
ಭಾವಜಗಜಘಟೆಯನಿಳಿಸಿ ಕಣ್ಗೊಳಿಸಿರ್ದರ್ ॥ ೧೦ ॥

ಚಂ ॥ ಗುರುಕುಚಸಂಗದಿಂ ತರಳವೃತ್ತಿಗೆ ಮುತ್ತೊಳಗಾಗದೆಂದೊಡಿಂ ।
ತರಳ ಕಟಾಕ್ಷದಿಂದಡರೆ ನೋಡಲು ವೃತ್ತದೆ ಭೀತವೃತ್ತರೊಳ್ ॥
ತರಳತೆ ತೋರ್ಪುದಚ್ಚರಿಯೆ ಪೇಱೆನೆ ಕಾಮಶರಕ್ಕೆ ಕಾಂತರಂ ।
ತರುಣಿಯರೊಲ್ದು ನೋಡಿ ಗುಱಿಮಾಡುವರೋಲಗದೊಳ್
ನೃಪಾಲನಾ ॥ ೧೧ ॥

ಮ ॥ ನವಶೃಂಗಾರ ಸಮುದ್ರದೊಳ್ ತಳೆದ ಲಾವಣ್ಯಾಂಬುವಂ . . . ।
. . . . . ಪಯೋಧರಂ ಬಯಸಿ ನೋಡುತ್ತಿರ್ಪರಂಗೋರ್ವಿಯೊಳ್ ॥
ವಿವಿಧ ಸ್ವೇದಲವಂಗಳಂ ಪುಳಕಸಸ್ಯಾನೀಕಮಂ ತಾಳ್ದಿ ಮಾ ।
ಡೆ ವಿಳಾಸಂಬಡೆದತ್ತು ಚಕ್ರಧರನಾಸ್ಥಾನಂ ಘನಶ್ರೀನುತಂ ॥ ೧೨ ॥

ಸಕಳಾಂತಃಪುರಮಂತ್ರಿಮಂಡಳಿಕ ರಾಜಶ್ರೇಷ್ಠಿ ತಂತ್ರಾಧಿನಾ ।
ಯಕ ಸಾಮಂತಕವೀಂದ್ರವಾಗ್ಮಿಗಮಕೋದ್ಯದ್ವಾದಿವಾಗ್ಗೇಯಕಾ ॥
ರಕರಾತೋದ್ಯಕ ಪುಣ್ಯಪಾಠಕಲಸದ್ಗೇಯಂ ಪ್ರವೀಣಪ್ರವಾ ।
ದಕವೈತಾಳಿಕನರ್ತಕಪ್ರಕರದಿಂದೊಪ್ಪಿರ್ದುದೋಡ್ಡೋಲಗಂ ॥ ೧೩ ॥

ಕಂ ॥ ಜಗದೀಶಪಾದಪೀಠಂ ।
ಸೊಗಯಿಸಿದುದು ಮಕುಟಬದ್ಧಮೌಳಿಮಣಿದ್ಯೋ ॥
ತಿಗಳ ಬೆಳಗಿಂದೆ ರೋಹಣ ।
ನಗಪಾದವಿಳಾಸವಿಭವಮಂ ಮಿಗೆ ನಗುತಂ ॥ ೧೪ ॥

ಚಂ ॥ ಮಣಿಮಯ ಚಾರುಚಾಮರಮನುಜ್ವಳಹಸ್ತನಖಾಂಶು ನೀಳ್ದು ಬಾ ।
ಸಣಿಸೆ ಸುಕಾಂತಮುಪ್ಪಧರಪಲ್ಲವಮಂ ಸುಲಿಪಲ್ಲ ಕಾಂತಿ ಬಾ ॥
ಸಣಿಸೆ ನವೀನ ಯೌವನ ಸಭಾಜನಮಂ ಕಡೆಗಣ್ಣ ಕಾಂತಿ ಬಾ ।
ಸಣಿಸೆ ವಿಳಾಸದಿಂ ವಿಭುಗೆ ಚಾಮರಮಿಕ್ಕಿದರಂಬುಜಾಕ್ಷಿಯರ್ ॥ ೧೫ ॥

ಮ ॥ ಸಕಳಕ್ಷತ್ರಕುಳಾನುಲೇಪರಮಣೀವೇಣೀದಳತ್ಪುಷ್ಪ ಧಾ ।
ಮಕವಕ್ತ್ರಾಂಬುಜಗಂಧಮಂ ತಳೆದು ಕಸ್ತೂರೀಲಸಚ್ಛಂದನೋ ॥
ದಕಸಾರ್ದ್ರೀಕೃತ ರತ್ನಕುಟ್ಟಿಮಮನಾದಂ ಸೋಂಕಿ ಮಂದಾನಿಳಂ ।
ಸೊಕಮಂ ಮಾಡುತೆ ತೀಡೆ ನೀಡುಮೆಸೆದತ್ತಾಸ್ಥಾನ
ಭೂಮಂಡಳಂ ॥ ೧೬ ॥

ವ ॥ ಆ ಸಮಯದೊಳ್ ಸಮುಯಂಬಡೆದು ಮುಖರೀಗಾಣನಾಸ್ಥಾನ ಮಧ್ಯ ರಂಗಮಂ ಸಂಗೀತಕ ಪ್ರಸಂಗಮಂ ಪುಟ್ಟಿಸಲೆಂದಳಂಕರಿಸೆ—

ಕಂ ॥ ಝೋಂಕಾರಂ ಪೆಣ್ದುಂಬಿಯು ।
ಝುಂಕಾರಮೆನಿಪ್ಪ ಮೆಲ್ಪಿನಿಂ ಬಾಜಿಸಿದಂ ॥
ಬಿಂಕದೆ ಮದನ ಧನುರ್ಗುಣ ।
ಟಂಕಾರಮೆನಿಪ್ಪ ಶಂಕೆಗೆಡೆಗುಡುವಿನೆಗಂ ॥ ೧೭ ॥

ತಾಳಾನುಗತಮೆನಿಪ್ಪು ।
ಲ್ಲಾಳಂ ಮೊದಲಾಗಿ ಸೊಗಯಿಸುವ ಪದಿನಾಱುಂ ॥
ಪಾಳ ಕಳೆಯಿನಮರ್ದಂ ವಿಧು ।
ಲೀಲೆಯಿನವಂ ಬಗೆಗೀಯುತಂ ಬಾಜಿಸಿದಂ ॥ ೧೮ ॥

ಕಂ ॥ ಪಣವಂ ಸಭೆಗೆ ಸುಖಪ್ರಾ ।
ಪಣವಂ ನಿನದಮೆನೆ ತಾಳ್ದಿ ಪಾಣವಿಕರ್ ಪೂ ॥
ಗಣೆಯನ ಜಯಪಟಹಧ್ವನಿ ।
ಗೆಣೆಯೆನೆ ಬಾಜಿಸಿದರೆಸೆಯೆ ಲಯಗತಿ ಪಲವುಂ ॥ ೧೯ ॥

ಮಾರ್ದಂಗಿಕರಿನಿದೆನಿಸುವ ।
ಮಾರ್ದವದಿಂದೋದಿ ರತಿಯ ಕಳಾಭಿನಯದಾ ॥
ಮಾರ್ದನಿಯೆನೆ ಬಾಜಿಸಿದ ।
ತ್ರಿದುರ್ವವೊಲ್ ಸುಖಗತಾಳಿಗಮೃತದ ಪೊನಲಂ ॥ ೨೦ ॥

ಕವುತಂದೆಂಕಾರಂ ಮಲ ।
ಪವದೆ ತುಡುಂಕೊತ್ತು ಜೋಕೆಯಂತರಿ ಜತಿ ರಿ ॥
ಗ್ಗವಣಿಪಹರಣಿಯೆನಿಪ್ಪೀ ।
ಪ್ರಬಂಧಮಂ(?) ಶ್ರೋತ್ರಬಂಧುವೆನೆ ಬಾಜಿಸಿದರ್ ॥ ೨೧ ॥

ವ ॥ ಅನುವಾದ್ಯಂಗಳ ಗಡಣಂ ಹೃದ್ಯಮಾಗೆ—

ಕಂ ॥ ಪರಿಕಿಪೊಡೆ ಪೌರನುಂ ಸು ।
ಸ್ವರನುಂ ಸುಗುಣನುಮೆನಿಪ್ಪಿನಂ ಸಪ್ತವಿಧಂ ॥
ಸ್ಫುರಿತೋದಿತ ಗಮಕಮಿರು ।
ತ್ತಿರೆ ವಾಂಶಿಕನತಿ ಸುರಾಗಮೆನೆ ಬಾಜಿಸಿದಂ ॥ ೨೨ ॥

ವ ॥ ಅಂತು ವಾಂಶಿಕಂ ಶ್ರುತಿಗೆ ಸೊಗಯಿಪ ಶ್ರುತಿಯಂ ಪವಣಿಸಿ ಕುಡವುದು ಮಾಶ್ರುತಿಯೊಳಾಲಪ್ತಿಯಂ ಪಲವಂ ವ್ಯಾಪ್ತಿವೆರಸು ಮಾಡಿ—

ಕಂ ॥ ಗಾಣರ್ತಮಗೊಳ್ಪಿಂ ಸರಿ ।
ಗಾಣರೆನಿಪ್ಪವರೆ ಮೆಚ್ಚಿ ಬಿಚ್ಚಳಿಸುವಿನಂ ॥
ಗಾಣರ್ಸವಸುತಿಯಿಂ ರತಿ ।
ವೀಣೆಯನೆಚ್ಚಳಿಸಿದಂತೆ ಪಾಡಿದರಾಗಳ್ ॥ ೨೩ ॥

ಚಂ ॥ ಜವನಿಕೆಯಾಗಳೋಸರಿಸೆ ಬೇಸಿಗೆಯಂತೆ ಪಯೋಧರಂ ನಭೋ ।
ವಿವರಮನೆಯ್ದೆ ತೀವೆ ಮಣಿಭೂಷಣಕಾಂತಿ ಸುರೇಂದ್ರಚಾಪಲೇ ॥
ಖೆವೊಲಿರೆ ಕೇಕರಾಂಶು ಕುಡುಮಿಂಚನೆ ಪೋಲೆ ತಾಂ ರಸಭಾವ ಮೂ ।
ರ್ತಿವ ಸುಖಸಸ್ಯವೃಷ್ಟಿಯೆನೆ ದೃಷ್ಟಿಗೆ ನರ್ತಕಿ ನೀಡುಮೊಪ್ಪಿದಳ್ ॥ ೨೪ ॥

ಕಂ ॥ ವನಲತೆ ಪಲ್ಲವ ಪುಟದಿಂ ।
ಮನಸಿಜಯಂಗರ್ಘ್ಯಮೀವವೊಲ್ಧವಳ ವಿಲೋ ॥
ಚನರುಚಿನಿಭಪುಷ್ಪಾಂಜಳಿ ।
ಯನಿತ್ತು ನರ್ತಕಿ ವಿಚಿತ್ರಮೆನೆ ನರ್ತಿಸಿದಳ್ ॥ ೨೫ ॥

ಉ ॥ ಲೀಲೆಯಿನಂಗಜಂಗೆ ಕುಸುಮಾಸ್ತ್ರಮನಾರತಿ ನೀಡುತಿರ್ಪವೊಲ್ ।
ಮೇಳಿಸೆ ಲೋಲದೃಷ್ಟಿರುಚಿ ಹಸ್ತಚಯಂಗಳೊಳಾದ ಚಾಳಯಂ ॥
ಚಾಳಿಸೆ ಚಿತ್ರಮಂ ಪಯದಪದ್ಧತಿ ವಾದ್ಯಲಯಾನುಕೂಳಗೇ ।
ಯಾಳಿಯೊಳೊಂದೆ ನರ್ತಿಸುವ ನರ್ತಕಿಯಚ್ಚರಿಯಂ ನಿಮಿರ್ಚಿದಳ್ ॥ ೨೬ ॥

ಕಂ ॥ ಉಳಿತಮುಳವಟ್ಟು ಬಂದುದು ।
ಜಲಶಯನಂ ನಯನಹಾರಿಯಾದತ್ತೊಪ್ಪ ॥
ಕ್ಕೊಳಗಾಯ್ತೆನಿಪ್ಪಸರಳಂ ।
ವಿಳೋಕನಕ್ಕುಚಿತಮೆನಿಸಿ ರುಚಿಯಿಸೆ ರಚಿತಂ ॥ ೨೭ ॥

ಉ ॥ ಭಂಗಿಯನಾಳೆ ನಿಜ್ಜವಣರಾಜಿ ಮನೋಹರಮಾಗೆ ರೂಪು ಚೆ ।
ಲ್ವಿಂಗೆಡೆಯಾಗೆ ತಾಳದನುಕೂಲತೆಯಿಂ ವಳನೋರು ನರ್ತನಂ ॥
ಸಂಗತಮಾಗೆ ಗೀತದೊಳಮೊಂದಿದ ವಾದ್ಯದೊಳಂ ಲತಾಂಗಿ ಸ ।
ರ್ವಾಂಗದೆ ಪಾಡುವಂತೊಸೆದು ಬಾಜಿಸುವಂತೆವೊಲಾಯ್ತು ನರ್ತನಂ ॥ ೨೮ ॥

ಕಂ ॥ ಗೀತಮನೊಡನುಪ್ಪುಯಿಪವೊ ।
ಲಾತೋದ್ಯಲಯಂ ಪ್ರಶಸ್ತಲಾಸ್ಯಂ ಪರಿಷ ॥
ತ್ಪ್ರೀತಿಯನುತ್ಪಾದಿಸೆ ಸಂ ।
ಗೀತವೆಸರ್ ಗೀತವಾದ್ಯನೃತ್ಯದೊಳೆಸೆಗುಂ ॥ ೨೯ ॥

ಆಂಗಿಕದಿಂ ನಟ ವಾಚಿಕ ।
ದಿಂ ಗಾಯಕಿ ವಾದ್ಯಲಯಮನಭಿನಯಿಪುದಱಿಂ ॥
ಸಂಗತಮಾದುದು ವಾದ್ಯದೊ ।
ಳಂ ಗೀತದೊಳಂ ಪ್ರತೀತ ತೂರ್ಯಾಖ್ಯಾನಂ ॥ ೩೦ ॥

ಪಲವಂಗಹಾರಮೊಪ್ಪುವ ।
ಪಲವು ಪಯಂ ನೆಗೞೆ ನರ್ತಿಸುತ್ತಂ ಮತ್ತಂ ॥
ಚಳಿಯಿಸದೆ ಸಭೆಯು ಬಗೆಯೊಳ್ ।
ನೆಲಸಿದಳುತ್ಪಳದಳಾಕ್ಷಿ ನರ್ತಕಿ ಚಿತ್ರಂ ॥ ೩೧ ॥

ವ ॥ ಅಂತು ಸಂಗೀತಕ ಪ್ರಸಂಗಂ ಮನಂಗೊಳಿಸುತ್ತಮಿರ್ಪುದುಮಾಪ್ರಸ್ತಾವದೊಳ್—

ಮ ॥ ಕ್ಷಿತಿನಾಥೋನ್ನತ ನಿನ್ನ ಪುಣ್ಯವಶದಿಂ ದುಷ್ಕರ್ಮದಾವಾನಳಾ ।
ನೃತವರ್ಷಂ ನಿಜಸೂಕ್ತಿಜನ್ಮಿಗದಱಿಂ ಕ್ಷೇಮಂಕರಾಖ್ಯಾನಮು ॥
ನ್ನಿತಮಾಗೊಪ್ಪುವ ದಿವ್ಯಯೋಗಿ ಬಹಿರುದ್ಯಾನ ಪ್ರದೇಶಕ್ಕೆ ವಿ ।
ಶ್ರುತನಾದಾಂಬುಧಿ ಬಂದು ದೇವ ನೆಲಸಿರ್ದಂ ಭವ್ಯ ಸೌಖ್ಯಪ್ರದಂ ॥ ೩೨ ॥

ವ ॥ ಅಂತು ಬಿನ್ನವಿಸಿದ ಋಷಿನಿವೇದಕಾಭಿಲಷಿತಫಳಮನುತ್ಪುಳಕ ಲಲಿತಾಂಗ ಶೋಭಾವಿಜಿತಕಲ್ಪಾಂಘ್ರಿಪನಿತ್ತುತ್ತುಂಗ ಸಿಂಹಾಸನದಿನಿೞಿದು, ಮುನಿಪೋತ್ತಮನಿರ್ದತ್ತ ಳೇಬಡಿಯಂ ನಡೆದು ವಿನಯವಿನಮಿತೋತ್ತಮಾಂಗನಾಗಿ—

ಕಂ ॥ ವಿನುತ ಮುನಿಪಾಗಮಾಕ ।
ರ್ಣನಮೆ ವಿಶೋಧಿಗೆ ಜಿನಾಗಮಾಕರ್ಣನದಂ ॥
ತನುಕೂಲಮಾಗೆ ಶುಭ ಭಾ ।
ವನೆಯತ್ತಲೆ ಚಿತ್ತವೃತ್ತಿಯಂ ವಿಭುವಿತ್ತಂ ॥ ೩೩ ॥

ಸರದಾಶಯಕ್ಕೆ ವಿಶದತೆ ।
ಸರದಾಗಮದಿಂದಮಪ್ಪ ತೆಱದಿಂದೆ ಮುನೀ ॥
ಶ್ವರರಾಗಮದಿಂದವನೀ ।
ಶ್ವರಾಶಯಕ್ಕಾದುದತಿಶಯಂ ವಿಶದತ್ವಂ ॥ ೩೪ ॥

ಸಾತಿಶಯ ಬೋಧಸಸ್ಯವಿ ।
ಘಾತೀತಿ ಪರಿಗ್ರಹೇಚ್ಛೆಯಂ ಯತಿಪತಪಃ ॥
ಸ್ವಾತಿ ಬೆದಱಿಸ್ಟೆ ಬಳೆದುದು ।
ಭೂತಳಪತಿ ಚಿತ್ತದಲ್ಲಿ ತತ್ವವಿವೇಕಂ ॥ ೩೫ ॥

ಚಕ್ರಂಬಿಡಿದಾಯ್ತು ಮಹೀ ।
ಚಕ್ರಪರಿಭ್ರಮಣದಂತೆ ಬಹ್ವಾರಂಭೋ ॥
ಪಕ್ರಮದಿಂ ಮಱೆದಿರೆ ಭವ ।
ಚಕ್ರಪರಿಭ್ರಮಮುಮಕ್ಕುಮೆಂದಗಿದಧಿಪಂ ॥ ೩೬ ॥

ಏಕಿನಿತು ಪರಿಗ್ರಹಮಂ ।
ಸ್ವೀಕರಿಸಿದೆನಿವಱಿನಾರ್ತಮಲ್ಲದೆ ಸುಖಮಾ ॥
ಳೋಕಿಸುವೊಡಿಲ್ಲ ಬಱಿದವಿ ।
ವೇಕಿಗಳೇನೆಂದೊ ಬಯಸುವರ್ ನೃಪಪದಮಂ ॥ ೩೭ ॥

ತನು ತನುಪರಿಗ್ರಹದ ಮುನಿ ।
ಜನಕಂ ಸಾವದ್ಯಮೊದವುತಿರ್ಪುದು ಗುಣಮಿ ॥
ನ್ನೆನಗೆ ಬಹುವಿಧ ಪರಿಗ್ರಹ ।
ವನಧಿಗೆ ಸಾವದ್ಯಮುಪ್ಪುದಂ ಪವಣಿಪರಾರ್ ॥ ೩೮ ॥

ಎನಿತೆನಿತು ಪರಿಗ್ರಹಮಾ ।
ಯ್ತನಿತನಿತಘವೃದ್ಧಿ ಹಾನಿ ತನ್ನಯ ಗುಣಕೆಂ ॥
ದೆನೆ ದುರಿತದ ಪರಿಜನಮುಂ ।
ತನತೆಂಬನನಡಸಿ ಕಟ್ಟದಿರ್ಕುಮೆ ಕರ್ಮಂ ॥ ೩೯ ॥

ಚಂ ॥ ನೆರೆಯದ ಮುನ್ನಮರ್ಥಮದೆ ಸಾರದೆ ಸೌಖ್ಯಮೆ ಸಾರ್ಗುಮೆಂದದಂ ॥
ನೆರಪಿ ಸುಖಪ್ರಸೇವೆಯನೊಡರ್ಚುವೆನೆಂದೆನೆ ಮೇಲೆ ಮೇಲೆ ಬಿ ॥
ತ್ತರಿಪತಿ ತೃಷ್ಣೆ ದುಃಖಮನೆ ಕೊರ್ವಿಸುತಿರ್ಪುದಱಿಂದಮರ್ಥಸಂ ।
ವರಣೆಯನರ್ಥಮಂ ಪಡೆಗುಮಲ್ಲದೆ ಸೌಖ್ಯಮನೀಯಲಾರ್ಕುಮೇ ॥ ೪೦ ॥

ಕಂ ॥ ಬಯಸಿದರುಂ ದೋಷಿಗಳ್ ವಿ ।
ಷಯಮಂ ಗಡ ಬಯಸಿ ನೆರಪಿದೆನ್ನಿಂ ದೋಷಾ ॥
ಶ್ರಯನಾವನೆನುತೆ ಕೊಕ್ಕರಿ ।
ಕೆಯನಾಂತಂ ತತ್ತ್ವವೇದಿಗದು ಕೌತುಕಮೇ ॥ ೪೧ ॥

ಚಂ ॥ ಚಿರತರಮಿರ್ದದಂ ವಿಷಯಸಂತತಿ ಪೋಪುವಗಲ್ದವಶ್ಯಮಿೂ ।
ನರರವನೇಕೆ ತಾಮೆ ಬಿಡರೋ ಗಡಗಲ್ಕೆಯೊಳುಂಟಭೇದಮುಂ ॥
ದಿರದವು ತಾಮೆ ಪೋಗೆ ಬಗೆಗಪ್ಪುದು ದುಃಖಮನಂತಮಂತವಂ ।
ಪರಿಹರಿಪಂಗೆ ಸೌಖ್ಯಮುದಱಂ ತೊಱೆವೆಂ ವಿಷಯೋತ್ಕರಂಗಳಂ ॥ ೪೨ ॥

ವ ॥ ಎಂದು ವಿಭಾವ ಪರಿಣತಿಯುಂ ಪತ್ತುವಿಟ್ಟು—

ಕಂ ॥ ಇದೆ ಕಾಲಲಬ್ಧಿ ದೊರೆಕೊಂ ।
ಡುದು ವಿಷಯವಿರಕ್ತಿಯಲ್ಲದಂದೇಕೆಯೊ ಪೇ ॥
ೞೊದವಿದುಪದೇಶಲಬ್ಧಿಯು ।
ಮುದಯಿಸುಗುಂ ಮುನಿಪದಾಂಬುಜಾರಾಧನೆಯಿಂ ॥ ೪೩ ॥

ಕ್ಷೇಮಂಕರ ಯತಿಪತಿಗಳ ।
ನಾಮಗ್ರಹಣದೊಳೆ ವಿಷಯವೈರಾಗ್ಯಂ ನಿ ॥
ಸ್ಸೀಮಮೆನಿಸಿತ್ತು ದರ್ಶನ ।
ಮೇ ಮಾತೆಮಗಖಿಳ ಸುಖಮನೊದವಿಕುಮಲ್ತೇ ॥ ೪೪ ॥

ಮ ॥ ಸ್ರ ॥ ಎನಿತೊಂದಾಸ್ವಾದ್ಯಮಾ ವಸ್ತುವನೆ ನೆರಪಿ ನಿರ್ಬಂಧದಿಂ ಮೆಲ್ದು ಸಲ್ಲೇ ।
ಖನಮಂ ಮಾಳ್ಪಂ ಬೞಿಕ್ಕಂತವನೆ ತೊಱೆವವೋಲ್ ಚಕ್ರಿ ಷಟ್ಖಂಡಮಂ ಸಾ॥
ಲ್ವನಿತಂ ಸಾಮ್ರಾಜ್ಯಮಂ ಮುನ್ನನುಭವಿಸಿ ತೃಣಪ್ರಾಯಮಂ ಮಾಡಿ ಬಿಟ್ಟಂ ।
ಘನತತ್ತ್ವಜ್ಞಾನಿ ಸಂಸಾರಿಕ ಸುಖಮನಿದಂ ಸೌಖ್ಯಮೆಂದೊಲ್ವನಾವಂ ॥ ೪೫ ॥

ವ ॥ ಎಂದು ಪರಮವೈರಾಗ್ಯಪರಾಯಣನಾಗಿ—

ಚಂ ॥ ಕವಚಹರಂ ಮನೋಹರಗುಣಂ ನಿಮಗೀತನೆ ನಾಥನೆಂದು ಪಾ ।
ರ್ಥಿವರ್ಗೆ ನಿಯೋಗಿಗಳ್ಗೆ ಪತಿ ಪೇೞ್ದು ಸಮೂರ್ಜಿತ ರಾಜ್ಯದೊಳ್ ತನೂ ॥
ಭವನನುದಾತ್ತನಂ ನಿರಿಸಿ ಕೀರ್ತಿಯ ಡಿಂಡಿಮ ರಾವಮೆಂಬವೊಲ್ ।
ರವಮಖಿಳಾಸೆಗಾವರಿಸೆ ಪೊಯ್ಸಿದನುತ್ಸವಕಾರಿ ಭೇರಿಯಂ ॥ ೪೬ ॥

ವ ॥ ಅಂತು ಸಕಲಸಾಮ್ರಾಜ್ಯ ಪಟ್ಟಮನಗ್ರನಂದನಂಗೆ ಕಟ್ಟಿ ಪಟ್ಟಬಂಧೋತ್ಸವ ತೂರ್ಯರವಮುಮಾನಂದಭೇರೀರವಮುಂ ದಿಗ್ವಳಯಮಂ ಬಳಸೆ ಪೊಯ್ಸಿ ತಪೋರಾಜ್ಯಮಂ ಸ್ವೀಕರಿಸಲೆಂದುದ್ಯುಕ್ತನಾದ ಚಕ್ರವರ್ತಿಗೆ ಸಮಿೂಪವರ್ತಿಗಳಪ್ಪ ಪಾರ್ಥಿವರುಮಮಾತ್ಯರುಮಿಂತೆಂದರ್—

ಮಾಲಿನಿ ॥ ದುರಿತರಿಪುವನಿಕ್ಕಲ್ಕೀವನೀನಾತುರ್ಪೋಗು ।
ತ್ತಿರೆ ಪೆಱರಗಿದಿಂತೇಕಿರ್ಪುದೇಂ ಪಾೞಿಯೇ ಪೇೞ್ ॥
ಪರಿಜನಕದಱಿಂದಂ ಪೂಣ್ದು ನಿನ್ನಿಂದೆ ಮುನ್ನಂ ।
ನಿರಿವೆಮಘಮನಾತ್ಮಧ್ಯಾನತೀವ್ರಾಸಿಯಿಂದಂ ॥ ೪೭ ॥

ವ ॥ ಅಂತುಮಲ್ಲದೆ—

ಕಂ ॥ ಸ್ವಾಯತ್ತ ಸಾರ್ವಭೌಮ ।
ಶ್ರೀಯಂ ಜವ್ವನದೊಳುರದೆ ನೀಂ ತೊಱೆದಪೆಯ್ ॥
ಪ್ರಾಯರೆಮಾವಲ್ಪತರ ।
ಶ್ರೀಯಂ ತೊಱೆದಾತ್ಮಹಿತದೊಳೆಸಗುವುದರಿದೇ ॥ ೪೮ ॥

ಎಂದು ತಱಿಸಂದು ರಾಜ್ಯದೊ ।
ಳೊಂದಿದ ನೃಪನಂದನಂಗೆ ನಿಜನಂದನರಂ ॥
ತಂದೊಪ್ಪಯಿಸಿ ಪತಿಯಬಱಿ ।
ಸಂದ ನೃಪತಿಗಳುಮುಚಿತಮತಿ ಮಂತ್ರಿಗಳುಂ ॥ ೪೯ ॥

ವ ॥ ಅಂತು ಪರಿತ್ಯಕ್ತ ಪರಿಗ್ರಹಮಾದ ಪರಿಗ್ರಹಂಬೆರಸು ಪರಮಾನುರಾಗದಿಂ ಪೋಗಿ ನೀರಜನೆನಿಪ ಮುನಿರಾಜಚರಣನೀರಜಕ್ಕೆ ನೀರಾಜನಮಂ ರಾಜರಾಜಮೌಳಿ ಕೀಳಿತ ಶೋಣಮಾಣಿಕ್ಯ ಕಿರಣದೀಪಕಳಾಪದಿಂ ತೊಡರ್ಚಿ ವಿಶಿಷ್ಟಾಷ್ಟವಿಧಾರ್ಚನಾ ಪರಿಕರದಿಂದರ್ಚಿಸಿ ಭಕ್ತಿಭರದಿನೆಱಗುವಂತೆಱಗಿ ಪೊಡೆವಟ್ಟನಂತರಂ—

ಕಂ ॥ ಕ್ಷೇಮಂಕರ ಮುನಿಪತಿ ನಿಜ ।
ನಾಮಗ್ರಹಣದೊಳೆ ಬಹು ಪರಿಗ್ರಹಬಂಧ ॥
ವ್ಯಾಮೋಹಗ್ರಹಮದಱಿಂ ।
ತೀ ಮಹಿಮೆಯಿನಾಯ್ತು ನಿನ್ನ ಪೆಸರನ್ವರ್ಥಂ ॥ ೫೦ ॥

ವ ॥ ಅಂತವರವರ ಗುಣಸ್ತವನದ ನೆವದಿಂ ವಿಷಯ ವಿರಕ್ತಿಯುಂ ವ್ಯಕ್ತೀಕರಿಸಿದ ವಿಷಯವಲ್ಲಭನ ವಿವೇಕಕ್ಕವಧಿವಿಳೋಕನಂ ಸಂತೋಷಮನಾಂತು ಚಕ್ರವರ್ತಿಯುಂ ಸಂಯಮಚಕ್ರವರ್ತಿಯುಂ ಮಾಡೆ—

ಕಂ ॥ ಪೃಥುವೀಪಾಳಸಹಸ್ರಂ ।
ಪ್ರಥಿತ ಮಹೀನಾಥನಂತೆ ದೀಕ್ಷೆಯನಾಂತೇಂ ॥
ಕಥಿಯಿಪೊಡೆ ಯಥಾರಾಜಾ ।
ತಥಾಪ್ರಜಾಯೆಂಬ ನೀತಿಯಂ ಪ್ರಕಟಿಸಿತೋ ॥ ೫೧ ॥

ಚಂ ॥ ಒಡವೆಳೆದಿರ್ದ ಮೋಹದ ಮಹೀಪತಿಸಂತತಿ ಮೆಲ್ಪಿನೊಳ್ಪಿನೊಳ್ ।
ತೊಡರ್ದಬಳಾಜನಂ ಬಿಡದೆ ತನ್ನೊಡನುಗ್ರತಪಕ್ಕಮೊಡ್ಡನಿ ॥
ತ್ತೊಡಲನದೆಂದೊಡಿಂ ಪೊರೆವ ಪೆಂಪುಮನಾನೃಪನಿಂಪುಮಂ ಪವ ।
ಣ್ಬಡಿಸುವೆನೆಂಬನುಂಟೆ ಚತುರಬ್ಧಿಪರೀತಮಹೀತಳಾಗ್ರದೊಳ್ ॥ ೫೨ ॥

ವ ॥ ಅಂತು ತನ್ನೊಡನೆಲ್ಲರುಂ ಕರ್ಮವಲ್ಲರಿಲವಿತ್ರಪವಿತ್ರಚರಿತ,ಪಾತ್ರರಾಗಿ ವರ್ತಿಸುತ್ತಮಿರೆ ದುರಿತಗಿರಿವಜ್ರವಜ್ರನಾಭಿ—

ಕಂ ॥ ವ್ರತ ಸಮಿತೀಂದ್ರಿಯರೋಧ ।
ಸ್ಥಿತಿಭೋಜನಲುಂಚನೈಕ ಭಕ್ತಾಚೇಳ(?) ॥
ಕ್ಷಿತಿತಳ ಶಯನಾವಶ್ಯಕ ।
ತತಿವಿತತಸ್ನಾನ ವಿಧೃತದಂತಮಳತ್ವಂ ॥ ॥ ೫೩ ॥

ಕಂ ॥ ಪ್ರಾಯಶ್ಚಿತ್ತಂ ವಿನಯಂ ।
ವೈಯ್ಯಾಪೃತ್ಯಂ ಸದಾಗಮಾಧ್ಯಾತ್ಮ ಸ್ವಾ ॥
ಧ್ಯಾಯಂ ಕಾಯೋತ್ಸರ್ಗಂ ।
ಶ್ರೇಯೋನಿಳಯಾತ್ಮತತ್ತ್ವವಿನಯಂ ಧ್ಯಾನಂ ॥ ೫೪ ॥
ಅವಮೋದರ್ಯಮನಶನಂ ।
ವಿವಿಕ್ತಶಯನಾಸನಂ ರಸತ್ಯಾಗಂ ಮ ॥
ತ್ತವಿರಳಕಾಯಕ್ಲೇಶಂ ।
ಭುವನಸ್ತುತವೃತ್ತಿ ವೃತ್ತಿಪರಿಸಂಖ್ಯಾನಂ ॥ ೫೫ ॥
ತವದುತ್ತಮಕ್ಷಮಾಮಾ ।
ರ್ದವಾರ್ಜವಂ ಸತ್ಯಶೌಚಸಂಯಮ ತಪಮ ॥
ತ್ಯವಿಚಳಿತತ್ಯಾಗಿತೆಯು ।
ದ್ರವಿಣತ್ವ ಬ್ರಹ್ಮಚರ್ಯಮಾರ್ಯಪ್ರಣುತಂ ॥ ೫೬ ॥
ಮೂಲೋರ್ಕಕುತ್ತರೋತ್ತರ ।
ಭೂಲೋಕಸ್ತುತಗುಣಾಂಕುಶದಿನಿಂದ್ರಿಯಶುಂ ॥
ಡಾಲಮನುಗಿಯುತ್ತಂ ಧೃತಿ ।
ಶೀಲಂ ಜಿತಕರ್ಮಜಾಳನೆನಿಸಿ ಮುನೀಶಂ ॥ ೫೭ ॥

ವ ॥ ನೆಗೞುತ್ತಂ ಗುರುಪಾದಮೂಲದೊಳ್ ಭಿಕ್ಷಾಕಾಲಮುಮಂ ಗುಣಗಣಪೋಷಣಮುಮಂ ಮಾಡುತ್ತಂ ಗಣಪೋಷಣ ಕಾಲಮುಮಂ ಕಳಿಪಿ ಬೞಿಕೇಕವಿಹಾರಿಯಾಗಿ ನಿಜಾತ್ಮಚಿಂತನಕ್ಕೆ ನಿರ್ಜಂತುಕ ಪ್ರದೇಶಮನಱಸುತ್ತಂ—

ಮ ॥ ಹಲಸಾಲಂ ತಡಸಾಸುತೇಗುತದಿಕಿಂಚಿಲ್ಪಾತಚೆನ್ನಂಗಿ ಬೊ ।
ಬ್ಬುಲಿಯೆಬ್ಬೇಡರ ನೇರಿಲಿಪ್ಪೆ ಸಿರಿಸಂಹಾಡಂಗಿ ಭಾರಂಗಿ ನೇ ॥
ಳಲೆರಂ ಪಾದರಿತಾರಿತಂಡಸು ಬಿಳಿಲ್ಪಿಲ್ಮತ್ತಿ ಬೇವತ್ತಿ ಸೆ ।
ಳ್ಳಿಲವಂ ಸಂಪಗೆ ತುಂಬರಂ ಬರೆ ಕವುಂಗಿಮ್ಮಾವು ಕೆಕ್ಕಮ್ಮರಂ ॥ ೫೮ ॥

ವ ॥ ಎಂಬೀ ಮರದುಱುಗಲಿಱುಂಬಿನಿಂದತಿಗಹನಮೆನಿಪ ಗಹನಾಂತರದೊಳಗೆ—

ಚಂ ॥ ವಿಪುಳ ರಸಪ್ರಪೂರ್ಣ ಫಳರಾಜಿ ವಿರಾಜಿತ ಸಾರಭೂಜದಿಂ ।
ವಿಪುಳ ಸುಗಂಧಮುಗ್ಧಮಧುಪಪ್ರಕರಾಂಚಿತಪುಷ್ಪವಲ್ಲಿಯಿಂ ॥
ವಿಪುಳ ವಿಲೋಲ ಲೋಚನ ವನೇಚರ ಕೋಮಳ ಕಾಂತೆಯರ್ಕಳಿಂ ।
ವಿಪುಳ ಮರೀಚಿ ರತ್ನಚಯದಿಂ ವಿಪುಳಾಚಳಮೊಪ್ಪಿ ತೋಱುಗುಂ ॥ ೫೯ ॥

ವ ॥ ಆ ವಿಪುಳಾಚಳದ ವಿಪುಳಶಿಳಾತಳದೊಳಚಳಿತಪ್ರತಿಮಾಯೋಗದೊಳಾ ಯೋಗೀಶ್ವರಂ—

ಕಂ ॥ ಕರಿಗಂ ಕೇಸರಿಗಂ ಕೇ ।
ಸರಿಗಂ ಶರಭಕ್ಕಮಾಯ್ತು ಶರಭಕ್ಕಂ ಮ ॥
ಚ್ಚರಿಸುವ ಭೇರುಂಡಕ್ಕಂ ।
ಪರಸ್ಪರ ಪ್ರೀತಿ ಯತಿಯ ತಪದುನ್ನತಿಯಿಂ ॥ ೬೦ ॥

ವ ॥ ಅಂತುಮಲ್ಲದೆ—

ಕಂ ॥ ಸ್ವಾಯತ್ತ ಸಾರ್ವಭೌಮ ।
ಶ್ರೀಯಂ ಜವ್ವನದೊಳುರದೆ ನೀಂ ತೊಱೆದಪೆಯ್ಕೆ ॥
ಪ್ರಾಯರೆಮಾವಲ್ಪತರ ।
ಶ್ರೀಯಂ ತೊಱೆದಾತ್ಮಹಿತದೊಳೆಸಗುವುದರಿದೇ ॥ ೪೮ ॥

ಎಂದು ತಱಿಸಂದು ರಾಜ್ಯದೊ ।
ಳೊಂದಿದ ನೃಪನಂದನಂಗೆ ನಿಜನಂದನರಂ ॥
ತಂದೊಪ್ಪಯಿಸಿ ಪತಿಯುಬೞಿ ।
ಸಂದ ನೃಪತಿಗಳುಮುಚಿತಮತಿ ಮಂತ್ರಿಗಳುಂ ॥ ೪೯ ॥

ವ ॥ ಅಂತು ಪರಿತ್ಯಕ್ತ ಪರಿಗ್ರಹವಾದ ಪರಿಗ್ರಹಂಬೆರಸು ಪರಮಾನುರಾಗದಿಂ ಪೋಗಿ ನೀರಜನೆನಿಪ ಮುನಿರಾಜಚರಣನೀರಜಕ್ಕೆ ನೀರಾಜನಮಂ ರಾಜರಾಜಮೌಳಿ ಕೀಳಿತ ಶೋಣಮಾಣಿಕ್ಯ ಕಿರಣದೀಪಕಳಾಪದಿಂ ತೊಡರ್ಚಿ ವಿಶಿಷ್ಟಾಷ್ಟವಿಧಾರ್ಚನಾ ಪರಿಕರದಿಂದರ್ಚಿಸಿ ಭಕ್ತಿಭರದಿನೆಱಗುವಂತೆಱಗಿ ಪೊಡೆವಟ್ಟನಂತರಂ—

ಕಂ ॥ ಕ್ಷೇಮಂಕರ ಮುನಿಪತಿ ನಿಜ ।
ನಾಮಗ್ರಹಣದೊಳೆ ಬಹು ಪರಿಗ್ರಹಬಂಧ ॥
ವ್ಯಾಮೋಹಗ್ರಹಮುದಱಿಂ ।
ತೀ ಮಹಿಮೆಯಿನಾಯ್ತು ನಿನ್ನ ಪೆಸರನ್ವರ್ಥಂ ॥ ೫೦ ॥

ವ ॥ ಅಂತವರವರ ಗುಣಸ್ತವನದ ನೆವದಿಂ ವಿಷಯ ವಿರಕ್ತಿಯುಂ ವ್ಯಕ್ತೀಕರಿಸಿದ ವಿಷಯವಲ್ಲಭನ ವಿವೇಕಕ್ಕವಧಿವಿಳೋಕನಂ ಸಂತೋಷಮನಾಂತು ಚಕ್ರವರ್ತಿಯುಂ ಸಂಯಮಚಕ್ರವರ್ತಿಯುಂ ಮಾಡೆ—

ಕಂ ॥ ಪೃಥುಬೀಪಾಳಸಹಸ್ರಂ ।
ಪ್ರಥಿತ ಮಹೀನಾಥನಂತೆ ದೀಕ್ಷೆಯನಾಂತೇಂ ॥
ಕಥಿಯಿಪೊಡೆ ಯಥಾರಾಜಾ ।
ತಥಾಪ್ರಜಾಯೆಂಬ ನೀತಿಯುಂ ಪ್ರಕಟಿಸಿತೋ ॥ ೫೧ ॥

ಚಂ ॥ ಒಡವೆಳೆದಿರ್ದ ಮೋಹದ ಮಹೀಪತಿಸಂತತಿ ಮೆಲ್ಪಿನೊಳ್ಪಿನೊಳ್ ।
ತೊಡರ್ದಬಳಾಜನಂ ಬಿಡದೆ ತನ್ನೊಡನುಗ್ರತಪಕ್ಕಮೊಡ್ಡಿನಿ ॥
ತ್ತೊಡಲನದೆಂದೊಡಿಂ ಪೊರೆವ ಪೆಂಪುಮನಾನೃಪನಿಂಪುಮಂ ಪವ ।
ಣ್ಣಿಡಿಸುವೆನೆಂಬನುಂಟೆ ಚತುರಬ್ಧಿಪರೀತಮಹೀತಳಾಗ್ರದೊಳ್ ॥ ೫೨ ॥

ವ ॥ ಅಂತು ತನ್ನೊಡನೆಲ್ಲರುಂ ಕರ್ಮವಲ್ಲರಿಲವಿತ್ರಪವಿತ್ರಚರಿತ್ರಪಾತ್ರರಾಗಿ ವರ್ತಿಸುತ್ತಮಿರೆ ದುರಿತಗಿರಿವಜ್ರವಜ್ರನಾಭಿ—

ಕಂ ॥ ವ್ರತ ಸಮಿತೀಂದ್ರಿಯರೋಧ ।
ಸ್ಥಿತಿಭೋಜನಲುಂಚನೈಕ ಭಕ್ತಾಚೇಳ(?) ॥
ಕ್ಷಿತಿತಳ ಶಯನಾವಶ್ಯಕ ।
ತತಿವಿತತಸ್ನಾನ ವಿಧೃತದಂತಮಳತ್ವಂ ॥ ॥ ೫೩ ॥

ಕಂ ॥ ಪ್ರಾಯಶ್ಚಿತ್ತಂ ವಿನಯಂ ।
ವೈಯ್ಯಾವೃತ್ಯಂ ಸದಾಗಮಾಧ್ಯಾತ್ಮ ಸ್ವಾ ॥
ಧ್ಯಾಯಂ ಕಾಯೋತ್ಸರ್ಗಂ ।
ಶ್ರೇಯೋನಿಳಯಾತ್ಮತತ್ವವಿನಯಂ ಧ್ಯಾನಂ ॥ ೫೪ ॥
ಅವಮೋದರ್ಯಮನಶನಂ ।
ವಿವಿಕ್ತಶಯನಾಸನಂ ರಸತ್ಯಾಗಂ ಮ ॥
ತ್ತವಿರಳಕಾಯಕ್ಲೇಶಂ ।
ಭುವನಸ್ತುತವೃತ್ತಿ ವೃತ್ತಿಪರಿಸಂಖ್ಯಾನಂ ॥ ೫೫ ॥
ತವದುತ್ತಮಕ್ಷಮಾಮಾ ।
ರ್ದವಾರ್ಜವಂ ಸತ್ಯಶೌಚಸಂಯಮ ತಪಮ ॥
ತ್ಯವಿಚಳಿತತ್ಯಾಗಿತೆಯ ।
ದ್ರವಿಣತ್ವ ಬ್ರಹ್ಮಚರ್ಯಮಾರ್ಯಪ್ರಣುತಂ ॥ ೫೬ ॥
ಮೂಲೋರ್ಕಕುತ್ತರೋತ್ತರ ।
ಭೂಲೋಕಸ್ತುತಗುಣಾಂಕುಶದಿನಿಂದ್ರಿಯಶುಂ ॥
ಡಾಲಮನುಗಿಯುತ್ತಂ ಧೃತಿ ।
ಶೀಲಂ ಜಿತಕರ್ಮಜಾಳನೆನಿಸಿ ಮುನೀಶಂ ॥ ೫೭ ॥

ವ ॥ ನೆಗಱುತ್ತಂ ಗುರುಪಾದಮೂಲದೊಳ್ ಭಿಕ್ಷಾಕಾಲಮುಮಂ ಗುಣಗಣ ಪೋಷಣಮುಮಂ ಮಾಡುತ್ತಂ ಗಣಪೋಷಣ ಕುಲಮುಮಂ ಕಳಿಪಿ ಬೞಿಕೇಕವಿಹಾರಿಯಾಗಿ ನಿಜಾತ್ಮಚಿಂತನಕ್ಕೆ ನಿರ್ಜಂತುಕ ಪ್ರದೇಶಮನಱಸುತ್ತಂ—

ಮ ॥ ಹಲಸಾಲಂ ತಡಸಾಸುತೇಗುತದಿಕಿಂಚಿಲ್ವಾತಚಿನ್ನಂಗಿ ಬೊ ।
ಬ್ಬುಲಿಯೆಬ್ಬೀಡರ ನೇರಿಲಿಪ್ಪೆ ಸಿರಿಸಂಹಾಡಂಗಿ ಭಾರಂಗಿ ನೇ ॥
ಳಲೆರಂ ಪಾದರಿತಾರಿತಂಡಸು ಬಿಳಿಲ್ಬಿಲ್ಮತ್ತಿ ಬೇವತ್ತಿ ಸೆ ।
ಳ್ಳಿಲವಂ ಸಂಪಗೆ ತುಂಬರಂ ಬರೆ ಕವುಂಗಿಮ್ಮಾವು ಕೆಕ್ಕಮ್ಮರಂ ॥ ೫೮ ॥

ವ ॥ ಎಂಬೀ ಮರದುಱುಗಲಿಱುಂಬಿನಿಂದತಿಗಹನಮೆನಿಪ ಗಹನಾಂತರದೊಳಗೆ—

ಚಂ ॥ ವಿಪುಳ ರಸಪ್ರಪೂರ್ಣ ಫಳರಾಜಿ ವಿರಾಜಿತ ಸಾರಭೂಜದಿಂ ।
ವಿಪುಳ ಸುಗಂಧಮಗ್ನಮಧುಪಪ್ರಕರಾಂಚಿತಪುಷ್ಪವಲ್ಲಿಯಿಂ ॥
ವಿಪುಳ ವಿಲೋಲ ಲೋಚನ ವನೇಚರ ಕೋಮಳ ಕಾಂತೆಯರ್ಕಳಿಂ ।
ವಿಪುಳ ಮರೀಚಿ ರತ್ನಚಯದಿಂ ವಿಪುಳಾಚಳಮೊಪ್ಪಿ ತೋಱುಗುಂ ॥ ೫೯ ॥

ವ ॥ ಆ ವಿಪುಳಾಚಳದ ವಿಪುಳಶಿಳಾತಳದೊಳಚಳಿತಪ್ರತಿಮಾಯೋಗದೊಳಾ ಯೋಗೀಶ್ವರಂ—

ಕಂ ॥ ಕರಿಗಂ ಕೇಸರಿಗಂ ಕೇ ।
ಸರಿಗಂ ಶರಭಕ್ಕಮಾಯ್ತು ಶರಭಕ್ಕಂ ಮ ॥
ಚ್ಚರಿಸುವ ಭೇರುಂಡಕ್ಕಂ ।
ಪರಸ್ಪರ ಪ್ರೀತಿ ಯತಿಯ ತಪದುನ್ನತಿಯಿಂ ॥ ೬೦ ॥

ವ ॥ ಅಂತು ಶಾಂತರಸಮಂ ಪಸರಿಸುತ್ತಂ ಮುನಿಪೋತ್ತಮನಾತ್ಮಧ್ಯಾನಾಧೀನ ಮಾನಸನಾಗಿರ್ಪುದುಮಾಗಿರಿಗನತಿ ದೂರದೊಳ್—

ಕಂ ॥ ಪಕ್ಕಣಮಿರ್ಪುದು ಪುಣ್ಯದ ।
ಪಕ್ಕಣಮಿಲ್ಲಲ್ಲಿ ಪುಟ್ಟಿದರ ಬಗೆಯೊಳ್ ಪಾ ॥
ಪಕ್ಕೆ ನೆಲೆವೀಡಿದು ನರಕಂ ।
ಬೊಕ್ಕವರ್ಗಳೆ ಮಗುೞೆ ಪುಗಲೆ ಪುಟ್ಟುವರದಱೊಳ್ ॥ ೬೧ ॥

ಶಾರೀರ ಪರಸ್ಪರ ವಸು ।
ಧೇರಿತ ಸಹಜಾತ ಮಾನಸಾಗಂತುಕ ದು ॥
ರ್ವಾರ ಬಹುದುಃಖಮಮಂ ಪಾ ।
ಪಾರಂಭಕನುಂಡು ಷಷ್ಠನರಕೋರ್ವರೆಯೊಳ್ ॥ ೬೨ ॥

ವ ॥ ಅಂತು ಮುನ್ನಿನ ಜನ್ಮದೊಳಜಗರನಾಗಿ ಮುನಿಪುಂಗವನಂ ಮುನಿದು ನುಂಗಿದ ಪಾಪದ ಪರಿಪಾಕದಿಂ ಬರಸಿಡಿಲ್ವೊಡೆಯೆ ಶತಚೂರ್ಣಶರೀರನಾಗಿ ಪೋಗಿ ತಮಃಪ್ರಭೆಯೊಳಿರ್ಪತ್ತೆರಡು ಸಾಗರೋಪಮಂಬರಮೆಮೆಯಿಕ್ಕುವನಿತು ಪೊತ್ತು ತೆಱಪಂ ಪಡೆಯದೆ ಪಲತೆಱದ ದುಃಖಮನನವರತಮನುಭವಿಸಿ ಬಂದು—

ಕಂ ॥ ಆ ಪಕ್ಕಣಕ್ಕಮಗ್ಗದ ।
ಪಾಪಕ್ಕಂ ಪಳಿಗಮಧಿಪನಾದಂ ಯತಿಪ ॥
ಸ್ತ್ರೀಪಶು ಶಿಶುವಿಪದೋ ।
ದ್ದೀಪಿತ ಕೋಪಂ ಕುರೂಪನಸದಾಳಾಪಂ ॥ ೬೩ ॥

ಆರಕ್ತ ನಯನಯುಗಳಂ ।
ಕ್ರೂರತ್ವಕೃತಾಂತದಾರಕಂ ಸ್ಮಶ್ರುದೃಢೋ ॥
ದಾರತರ ಶೃಂಗನಂತಕ ।
ಸ್ಯೈರಿಭದಂತಿರ್ಪನಲ್ಲಿ ಕರಿಣ ಕುರಂಗಂ ॥ ೬೪ ॥

ಚಂ ॥ ಕರಡಿಯ ಕಾರ್ಷ್ಣ್ಯಮಂ ಮಹಿಷದಕ್ಷಿಯತೀಕ್ಷ್ಣತೆಯಂ ವರಾಹದು ।
ದ್ಧುರತರ ದೇಹ [ಮಂ × × × × ] ಪುಲಿಯುಗ್ರತೆಯಂ ಮದಾಂಧಸಿಂ ॥
ಧುರದ ಪೊಡರ್ಪನಗ್ಗಳಿಪ ಸಿಂಗದ ಸಾಸಮನೋವದಂತವಂ ।
ಭರದೆಳಕೊಂಡವೋಲತಿ ಭಯಂಕರನೆಯ್ದೆ ಕುರಂಗನಂದದಿಂ ॥ ೬೫ ॥

ವನಚರನಾಗಿ ಕಾನನಚರಂ ಪೆಸಱಿಂದೆ ಕುರಂಗನಾಗಿ ನೆ ।
ಟ್ಟನೆ ಗಜಸಿಂಹಮಂ ಗಿರಿವನಶ್ರಮದಿಂದಮೆ ಬೇಡನಾಗಿಯಾ ॥
ತನೆ ಮೃಗಯಾಭಿಲಾಷಿತತನು(?) ಸಂಗತನಾಗಿ ಸಮಂತು ನೀಚವ ।
ರ್ತನಯುತನಾದನಾರವನವೊಲ್ ವಿಪರೀತ ಚರಿತ್ರರುರ್ವಿಯೊಳ್ ॥ ೬೬ ॥

ಕಂ ॥ ಮುಳ್ಕರದ ಕೆಲದ ಮಾಲತಿ ।
ಯೊಳ್ಪೊರ್ಜುನ ಕೆಯ್ಯರತ್ನದೊಳ್ಪಮನೆನಿಸಿ ॥
ರ್ದಳ್ಪದನವಿಜಯಲಕ್ಷ್ಮಿಯ ।
ಬಾಳ್ಪೊದಲೆ ನೇಮಿಸೆ ಶಬರಿ ಶಬರನ ಕೆಲದೊಳ್ ॥ ೬೭ ॥

ವ ॥ ಮತ್ತಮಾ ಶಬರಶಿಬಿರದೊಳ್—

ಚಂ ॥ ಬೆಳತಿಗೆಗಣ್ಣ ಬೆಳ್ಪಿನೊಳೆ ಕೌಮುದಿಯಿಂ ಪುದಿದಿರ್ದ ಸಸ್ಮಿತೋ ।
ತ್ಪಳಿನಿಯನುಟ್ಟ ಪಲ್ಲವನಿಕಾಯದೆ ಪಲ್ಲವಭೃತ್ತ್ರಮಾಳಕೋ ॥
ಮಳಲತೆಯಂ ನಿರಾಕರಿಸಿ ಪೆರ್ಮೊಲೆ ಪೊಂಗೊಡನಂತಿರೊಪ್ಪೆ ಪ ।
ಜ್ಜಳಿಸುವ ನೀಳದಿಂ ಸಮೆದ ಪುತ್ಥಳಿಯಂತೆ ಪುಳಿಂದಿಯೊಪ್ಪಿದಳ್ ॥ ೬೮ ॥

ಕಂ ॥ ತುಂಗಕುಚಂ ಮಂಗಳಕಲ ।
ಶಂ ಗುರುಜಘನಂ ನಿತಂಬಮೆನಿಸುವುದುಚಿತಂ ॥
ಸಂಗಳಿಸಿದ ಪಲ್ಲವದಿಂ ।
ದಂ ಗೆಡೆಗೊಳೆ ಚೆಲ್ವು ಸೊಗಯಿಸುವ ವನಚರಿಯಂ ॥ ೬೯ ॥

ಅಂಗಜ ಗಜಕುಂಭದ ಚೆ ।
ಲ್ವಿಂಗೀವುಗುರ ಗುಂಜಿಯಿಂದವೆಗ್ಗಳಮೆನೆ ಪೀ ॥
ನಂಗಳ್ ಗುಂಜಾಭರಣದೆ ।
ತುಂಗಕುಚಂಗಳ್ ವಿರಾಜಿಕುಂ ಬೇಡಿತಿಯಾ ॥ ೭೦ ॥

ಮನಮನೆಱಗಿಸಿತಸೀಕ್ಷಿತ ।
ವನೇಚರಿ ಸರಸಾನ್ವಿತರುಚಿರ ಸಹಜಕವೀಂ ॥
ದ್ರನ ಕಾವ್ಯದಂತೆ ಮುಗ್ಧಾಂ ।
ಗನೆಯೊಲವಿನ ತೆಱದಿನೆಲರ ತನಿಗಂಪಿನವೋಲ್ ॥ ೭೧ ॥

ಕೋಗಿಲೆಗೆ ಮನೋರಾಗಮ ।
ನಾಗಿಪ ರೂಪುಂ ಪೊದಟ್ದಿ ವೊಲ್ಕಡವರಮಿಂ ॥
ಬಾಗೆಸೆವ ರೂಪು ಮನಮಂ ।
ಪೂಗಣೆಯೆನೆ ತಾಗೆ ಶಬರಿ ಪಾಡಿದಳೊರ್ವಳ್ ॥ ೭೨ ॥

ಚಂ ॥ ಕದಪು ವಿಚಿತ್ರಪತ್ರಚಯಮಿಲ್ಲದಲಕ್ತಕಜಾತರಾಗಮಿ ।
ಲ್ಲದೆ ಪದಪಲ್ಲವಂ ಮಿಸುಪ ತಿರ್ದಣಮಿಲ್ಲದೆ ಪುರ್ವು ಹಾರಮಿ ॥
ಲ್ಲದೆವೊಲೆ ವಸ್ತ್ರಮಿಲ್ಲದೆ ಕಟಿತ್ತಟಮಂಜನಮಿಲ್ಲದಕ್ಷಿಗಳ್ ।
ಮುದಮನನಾರತಂ ಪಡೆಯೆ ಬೇಡಿತಿ ಗಾಡಿಯನೊಲ್ದು ತಾಳ್ದಿದಳ್ ॥ ೭೩ ॥

ವ ॥ ಅಂತು ಮುತ್ತುಂ ಮೊಣಸುಂ ಪೆಡೆವಣಿಯುಂ ಫಣಿಯುಂ [ಇರ್ದ ತೆಱದಿ] ನಧಿಪನಾಗಿರ್ದ ಪಾಪರ್ಥಿಲಂಪಳನೊಂದು ದೆವಸಂ—

ಕಂ ॥ ಅಂಜಿಸೆ ಶಾರ್ಙ್ಗದ ಕಹಳೆಯ ।
ರುಂ ಜಯದನಿ ಜವನ ವಿಜಯಪಟಹದ ದನಿವೊ ॥
ಲ್ಪಿಂಜದಡವಿಯ ಮೃಗಂಗಳು ।
ಮಂ ಜಳಚರಕುಳಮುಮಂ ಪಯೋನಿವಹಮುಮಂ ॥ ೭೪ ॥

ಕಂ ॥ ಜಾಲಂ ಬಲೆ ಸಿಡಿಬಲೆ ಬಡಿ ।
ಕೋಲಲಗಂಬಿಟ್ಟಿತೊಡರ್ಬಿಲ್ಕಯ್ಯೊಪ್ಪಡೆ ಬೇ ॥
ಳಾಲಂ ಗಾಳದ ಕಟ್ಟಿಗೆ ।
ಕೌಳೇಯಕವಿತತಿ ಸೆಂಡು ಕೋಲಸಿ ಚಕ್ರಂ ॥ ೭೫ ॥

ವ ॥ ಬೆರಸು ಬೇಂಟೆಗೆ ಜವನಬಂಟರೆನಿಸುವ ವನಚರಪರಿವೃತನಾಗಿ ಪೊಱ ಮಟ್ಟು ಕಾಳಂ ದಾಳಿಟ್ಟು ಗಹನದುರ್ಗಮಂ ನಿರ್ಘೃಣವೃತ್ತಿಯಿಂ ಮುತ್ತುವಂತೆ ಮುತ್ತಿ—

ಕಂ ॥ ಟಂಕಾರರವಂ ಕಿವಿಯಂ ।
ಭೋಂಕೆನೆ ಮಿಗೆ ತೀವೆ ಪುಗಲ್ ದೆಸೆಗಾಣದೆ ತ ॥
ಳ್ಪಂಕುಗೊಳುತಿರ್ಪ ವನಮೃಗ ।
ಮಂ ಕವಿತಂದೆಚ್ಚುದಾಗವನ ಚರನಿಕರಂ ॥ ೭೬ ॥

ಮೃಗಮಂ ಪತಿಯಿಂದಂ ಗೋ ।
ರಿಗೆ ಪತ್ತಿಸಿ ಗೊರಿಪ ಶಬರಿ ಪಥಿಕರನೊಳ್ಪಾ ॥
ತುಗಳಿಂ ಸಿಲ್ಕಿಸಿ ಪತಿಯಿಂ ।
ದುಗಿಯಿಪ್ಪೆಣೆಗಾರ್ತಿಯಂದಮಂ ನೆನೆಯಿಸಿದಳ್ ॥ ೭೭ ॥

ಕಣೆಯಿಂದಂ ಕಾಮನ ಪೂ ।
ಗಣೆ ಕೂರಿದವಲ್ಲದಂದು ಗೋರಿಗೆ ಸಂದಿ ॥
ರ್ದಣಿಸದೆ ವನಚರನೇಸಂ ।
ಪ್ರಣಯದೆ ನೆರೆದತ್ತು ಹರಿಣಿಯೊಳ್ ಮಿಗೆ ಹರಿಣಂ ॥ ೭೮ ॥

ಕಾಯ್ದು ಹರಿಣಕ್ಕೆ ನಾಯ್ಗಳ ।
ನೊಯ್ದುರೆ ಬಿಡೆಯೆಯ್ದುಲಾಱದಿರೆ ತಾನವರಿಂ ॥
ದೆಯ್ದುವ ಗತಿ ಪಿರಿದೆಂಬವೊ ।
ಲೆಯ್ದಿದ ಶಬರನಿರದಿರಿದು ತೋಱಿದನಾಗಳ್ ॥ ೭೯ ॥

ಅಲಗುಂ ಬಾಧಿಸೆ ಬೆದಱದೆ ।
ಮಲೆದಿದಿರನೆ ಬಂದು ಮೇಲೆವಾಯ್ದೊಡೆ ತಿವಿದಾ ॥
ರ್ವಲಗಿಂದೆಕ್ಕಲನಂ ಕೊಲೆ ।
ಕಲಿತನವಾಯ್ತೆಕ್ಕಲಾವಣಂ ಲುಬ್ಧಕನೊಳ್ ॥ ೮೦ ॥

ಪ್ರತಿಮಾನಮನಾರ್ದಿಸೆ ಕಣೆ ।
ಮತಂಗಜದ ಪೇಚಕಾಂತರದೆ ಪೋಪುದಱಿಂ ॥
ಪ್ರತಿಮಾನಂ ಶರವಿದ್ಯೆಯೊ ।
ಳಿತರರ್ಗನಗಿಲ್ಲೆನಿಪ್ಪನಲ್ಲಿ ಕುರಂಗಂ ॥ ೮೧ ॥

ಕಂ ॥ ಸಿಂಗಮನದಱಟ್ಟುವ ಮುನಿ ।
ಸಿಂಗಮವನ ಸಾಹಸಕ್ಕಮುಱಿದ ಮೃಗಂಗಳ್ ॥
ಸಂಗಡದೆ ಸಾಯುವೆಂದೆನೆ ।
ಸಂಗಡದೇಂ ಮೊಱುವನ್ನಮಿನ್ನೇನೊಳವೇ ॥ ೮೨ ॥

ಪಕ್ಕಿಗೆ ಗಿಡಿಗಂ ಕ್ರೂರಮೃ ।
ಗಕ್ಕೆ ಮೃಗಾರಾತಿ ಹರಿಗೆ ಶರಭಂ ಶರಭೌ ॥
ಘುಕ್ಕಷ್ಟಪದಂ ರಿಪುವೆನೆ ।
ಕೊಕ್ಕರಿಸದೆ ಕೊಂದನಂದು ನಿಂದು ಪುಳಿಂದಂ ॥ ೮೩ ॥

ವ ॥ ಅಂತಾಕುರಂಗಂ ಕೃತಾಂತನಂತೆ ಜಳಸ್ಥಳನಭಸ್ಥಳಚರಂಗಳಪ್ಪ ಜೀವನಂಗಳನೋವದೆ ಕೊಂದುಂ ತಣಿಯದೆ ದೆಸೆಗಳನೌವ್ವಳಿಸಿ ನೋಡುತ್ತಂ ವಿಪುಳಾಚಳದೊಳ್ ಯೋಗನಿಯೋಗದೊಳಿರ್ದಾಯೋಗೀಶ್ವರನಂ ಕಂಡು ಪರಿತಂದು ಭವಬದ್ಧಕ್ರೋಧದಿಂ ಭವನಂತೆ ವನೇಚರಂ ವಿಷಮಲೋಚನನಾಗಿ ನುಂಗುವಂತೆ ನೋಡಿ—

ಕಂ ॥ ಪೆಱತೇನೊ ಬಗೆಗೆ ತನ್ನನೆ ।
ಗುಱಿಮಾಡಿದ ಮುನಿಯ ತನುವನೊದವಿದ ಮುನಿಸಿಂ ॥
ಗುಱಿಮಾಡಿ ನೆರೆಯುದಘುಮಂ ।
ನೆಱಪುವೆನಾನೆಂಬ ತೆಱದೆ ತೆಗೆನೆರೆದೆಚ್ಚಂ ॥ ೮೪ ॥

ನಿಶಿತಾಸ್ತ್ರಹತಿಯಿನಾ ಮುನಿ ।
ಯ ಶರೀರಂ ಕೂಡೆ ಜಾಳರಂಬೋಗಿರೆ ತ ॥
ನ್ನ ಶರೀರದೇಱುವಾಯೊಳೆ ।
ವಿಶೇಷದಿಂ ನುಸುಳೆ ಕಂಡು ಮುಳಿಯದ ಮುಳಿಸಿಂ ॥ ೮೫ ॥

ಕರಚಕ್ರವಿಟ್ಟು ಖಂಡಿಸು ।
ತಿರೆ ಶಬರಂ ತನುವನಾಮೆ ಬೇರ್ಕೆಯ್ವೆಡೆಯೊಳ್ ॥
ನೆರಮಾದನೆಂದೆ ಯತಿಪತಿ ।
ಪರಮಧ್ಯಾನದೊಳೆ ನಿಂದನೇಂ ಧೃತಿಯುತನೋ ॥ ೮೬ ॥

ವನಮೃಗನಿವಹಂ ತಮಗಾ ।
ವನೇಚರನಿನಪ್ಪ ಬಾಧೆಯುಂ ಬಗೆಯುದೆ ಕ ॥
ಣ್ಬನಿಯುಂ ತೀವುತ್ತಂ ನಿಜ ।
ತನುವಂ ಶರಚಕ್ರಹತಿಗೆ ಸಾರ್ಚಿದುವಾಗಳ್ ॥ ೮೭ ॥

ವನದೇವತೆಯೊಳಗಾಕ್ರಂ ।
ದನ ನಿನದಂ ಪುಟ್ಟಿತಲ್ಲದವನಂ ಬಾರಿ ॥
ಪ್ಪನಿತಾಕಟ್ಟಿತನಿನ್ನಾ ।
ವನೊ ಕಳಿವನೆನಿಪ್ಪ ಮಾತದೆಂತೊಪ್ಪುಗುಮೋ ॥ ೮೮ ॥

ಕಂ ॥ ತಲ್ಯಂಗಳಿರ್ದೊಡಂ ವೈ ।
ಕಲ್ಯಕ್ಕೆಡೆಗುಡದೆ ಧೃತಿಯನವಳಂಬಿಸಿ ನಿ ॥
ಶ್ಶಲ್ಯೋವ್ರತಿಯೆನಿಸಿದ ವಾ ।
ತ್ಸಲ್ಯಪರಂ ಪರಮತತ್ವಮಮಂ ಭಾವಿಸಿದಂ ॥ ೮೯ ॥

ವ ॥ ಅಂತು ನಿರ್ಮಳಾಂತರಂಗ ಧರ್ಮಧ್ಯಾನಪರಾಯಣನಾಗಿ—

ಕಂ ॥ ಗಿಡುವಿಂದಂ ತೊಲಗಿದಲ ।
ರ್ಪಡೆದು ಗುಣಮನುತ್ತಮಾಂಗದೊಳ್ ಸೊಗಯಿಪವೋ ॥
ಲೊಡಲಿಂ ತೊಲಗಿದ ಮುನಿಯಸು ।
ಪಡೆದು ಗುಣಮನುತ್ತಮಾಂಗದೊಳ್ ಸೊಗಯಿಸುಗುಂ ॥ ೯೦ ॥

ಮಂದರಧೃತಿ ಯತಿ ತನುವಂ ।
ಮಂದಾರನಮೇರುಪಾರಿಜಾತಕಮುಚಿತಂ ॥
ಬಂದು ಸುರಿದತ್ತು ದೆಸೆ ಕಂ ।
ಪಿಂದಂ ಪುದಿದಂತು ದಿವಿಜಕರತಳಗಳಿತಂ ॥ ೯೧ ॥

ವ ॥ ಅಂತು ಪರಿತ್ಯಕ್ತ ಶರೀರಭಾರನಾದ ಮುನಿನಾಯಕಂ ಸುಭದ್ರಾಭಿಧಾನ ಸುಖನಿಧಾನ ಮಧ್ಯಮಗ್ರೈವೇಯಕನಾಯಕರತ್ನನುಂ, ಸಪ್ತವಿಂಶತಿ ರತ್ನಾಕರಪ್ರಮಿತ ಜೀವಿತನುಂ, ತತ್ಸಮಾನ ಸಂವತ್ಸರ ಸಹಸ್ರಸಂಕಲ್ಪಿತಾಮೃತಾಶನನುಂ ಸಾರ್ಧತ್ರಯೋದಶ ಮಾಸನಿರ್ಯತ್ಸುರಭಿನಿಶ್ವಾಸನುಮಣಿಮಾದಿಗುಣಮಣಿಪಾರಾವಾರನುಂ ನಿಃಪ್ರವಿಚಾರನುಮಾಗಿ—

ಕಂ ॥ ನೂತ್ನ ಶಶಿಕಾಂತ ನಿರ್ಮಳ ।
ರತ್ನಚ್ಛವಿ ಸಹಜವಸನಭೂಷಣಮಾಳಂ ॥
ರತ್ನಿದ್ವಯಾರ್ಧತನುಸಾ ।
ಪತ್ನರಹಿತ ಮಹಿಮನೆಸೆದನಂದಹಮಿಂದ್ರಂ ॥ ೯೨ ॥

ಅಪ್ರಮಿತ ಪುಣ್ಯಸಂಜನಿ ।
ತಾಪ್ರತಿಮ ನಿಜಾಯುರಬ್ಧಿಭವ ಸುಖಸುಧೆಯಿಂ ॥
ಶ್ರೀಪ್ರಭು ತಣಿದನವರತಮ ।
ಯಪ್ರಿಯನಲ್ಲಿರ್ದೆ ಜಿನರ್ಗೆ ವಿನಮಿತನಪ್ಪಂ ॥ ೯೩ ॥

ವ ॥ ಅಂತು ಕಳ್ಪಾತೀತದೊಳನಲ್ಪಾನಂದಪೀಯೂಷಮಂ ಪೀರ್ದು ನಿಜಾಯುರವಸಾನದೊಳನೂನಜ್ಞಾನ ಜೈನ ಮೂರ್ತಿಯಂ ಧ್ಯಾನಿಸುತ್ತಮಲ್ಲಿಂದಮಹಮಿಂದ್ರಂ ಬಂದು ಜಂಬೂವೃಕ್ಷೋಪಲಕ್ಷಿತ ದ್ವೀಪದ ಭರತಕ್ಷೇತ್ರದೊಳ್—

ಕಂ ॥ ಕೋಶಾಭಿವೃದ್ಧಿಯಂ ವಸು ।
ಧೇಶಗೆ ಸಮಸ್ತಧಾನ್ಯ ರತ್ನಾಕರಮ ॥
ಪ್ಪೇಶೋಭೆಯಿಂದೆ ಪಡೆದು ಸು।
ಕೌಶಲಮನ್ವರ್ಥನಾಮದೆಸೆಗುಂ ದೇಶಂ ॥ ೯೪ ॥

ವ ॥ ಆ ವಿಷಯಲಕ್ಷ್ಮಿಗಳಂಕಾರಮೆನಿಸಿ—

ಕಂ ॥ ಸಾತಿಶಯರೂಪ ಯೌವನ ।
ಚಾತುರ್ಯನಿಕೇತನಾಂಗನಾಚಿತ್ರಂ ಸಾ ॥
ಕೇತಪುರಿ ಮಕರಕೇತನ ।
ಮಂ ತನ್ನಲಿ ನೋಡೆ ಲೀಲೆಯಿಂದೆತ್ತಿಸುಗುಂ ॥ ೯೫ ॥

ವ ॥ ಆಪುರಶ್ರೀಪತಿಯುಂ ಕಾಶ್ಯಪಾನ್ವಯಪ್ರಶಸ್ತ್ಯನುಮಿಕ್ಷ್ವಾಕು ವಂಶೋತ್ತಂಸನುಮಪ್ಪ—

ಉ ॥ ಶ್ರೀವಿಭುವಜ್ರಬಾಹು ವಸುಧಾ[ಪತಿ]ಗಂ ವಿಳಸತ್ಪ್ರಭಂಕರೀ ।
ದೇವಿಗಮಿಂದ್ರ, ಭೂರುಹಕಮಪ್ರತಿಮಪ್ರಿಯ ಕಲ್ಪವಲ್ಲಿಗಂ ॥
ಭೂವಳಯಾರ್ತಿಹಾರಕಮುದಾರ ಗುಣೋನ್ನತ ಪುಟ್ಟುವಂತೆ ವಿ ।
ಶ್ವಾವನಿಪೂಜ್ಯನೂರ್ಜಿತಯಶಪ್ರಸರಂ ಕವಿತಾಮನೋಹರಂ ॥ ೯೬ ॥

ಕಂ ॥ ಆನಂದಂ ಪರಿಜನಕ ।
ತ್ಯಾನಂದಂ ಪುರಜನಕ್ಕೆ ಜನಿಯಿಸುತಿರೆ ನೇ ॥
ತ್ರಾನಂದನಮೂರ್ತಿ ಗುಣಾಂ ।
ಭೋನಿಧಿಯಾನಂದನೆಂಬನಂದನನಾದಂ ॥ ೯೭ ॥

ವ ॥ ಅಂತು ತನ್ನಭಿಧಾನಕ್ಕನ್ವರ್ಥಮಪ್ಪಂತು ಪುಟ್ಟಿ—

ಮ ॥ ಸ್ರ ॥ ಸ್ಮಿತಹೇಮಾಂಭೋಜವಕ್ತ್ರಂ ಕುವಳಯನಯನದ್ವಂದ್ವಮಾಜಾನುಬಾಹು ।
ದ್ವಿತಯಂ ವಿಸ್ತೀರ್ಣವಕ್ಷಂ ಘನಜಘನಯುಗಂ ಚಾರುರಂಭೋರುಯುಗ್ಮಂ ॥
ನುತ ಜಂಘಾಕಾಂಡಮಂಚತ್ಕ್ರಮದುಪದಯುಗಳಂ ರಂಜಿಪನ್ನಂ ಕುಮಾರಂ ।
ಚತುರಸ್ತ್ರೀಹಾರಿಯಾದಂ ವಿಬುಧಜನಮನಃಪದ್ಮಿನೀಪದ್ಮಮಿತ್ರಂ ॥ ೯೮ ॥

॥ ಗದ್ಯಂ ॥

ಇದು

ವಿದಿತವಿಬುಧಲೋಕನಾಯಕಾಭಿಪೂಜ್ಯವಾಸುಪೂಜ್ಯಜಿನಮುನಿ
ಪ್ರಸಾದಾಸಾದಿತ ನಿರ್ಮಳಧರ್ಮವಿನುತ ವಿನೇಯಜನ
ವನಜವನವಿಳಸಿತ ಕವಿಕುಳತಿಳಕಪ್ರಣೀತಮಪ್ಪ
ಪಾರ್ಶ್ವನಾಥ ಪುರಾಣದೊಳಾನಂದ
ಕುಮಾರಾಭ್ಯುದಯವರ್ಣನಂ

## ದ್ವಾದಶಾಶ್ವಾಸಂ ಸಮಾಪ್ತಂ

---

॥ ಶ್ರೀಃ ॥

# ತ್ರಯೋದಶಾಶ್ವಾಸಂ

ಕಂ ॥ ಶ್ರೀಗಂ ಸಮಗ್ರ ವಿಜಯ ।
ಶ್ರೀಗಮಿಳಾಸ್ತುತ್ಯಸರಸಸಾಹಿತ್ಯವಚಃ ॥
ಶ್ರೀಗಂ ವಿಧುವಿಶದಯಶಃ ।
ಶ್ರೀಗಂ ನೆಲೆಯಾಗಿ ನೆಗೞ್ದ ಕವಿಕುಲತಿಲಕಂ ॥ ೧ ॥

ಗುರು ರಾಜ್ಯಭರಕೆ ನೆರೆದಿರೆ ।
ಚರಾಹಕಂದತನೆನಿಪ್ಪ ತನಯಂ ಪಿತೃವಾ ॥
ದರದಿಂ ಪಟುಪಟಹರವಂ ।
ಪರೆಯುತ್ತಿರೆ ಕೂರ್ತು ರಾಜ್ಯಭಾರಮನಿತ್ತಂ ॥ ೨ ॥

ವಿತತಕಳಾವಿಲಸಿತನ ।
ಪ್ರತಿಮ ಮಹಾಮಂಡಳೇಶ್ವರತ್ವಮನಾಂತು ॥
ನ್ನತಿಗೆಡೆಯಾದಂ ಕುವಳಯ ।
ಹಿತಕರನಾನಂದರಾಜನೂರ್ಜಿತ ತೇಜಂ ॥ ೩ ॥

ವ ॥ ಅಂತು ನಿಜಗುರು ನಿರೂಪಿತ ಮಹಾಮಂಡಾಳಾಧಿಪತ್ಯಮನೇಕಾಯತ್ತಂ ಮಾಡಿ—

ಕಂ ॥ ಸಾಂತಂ ವಸಂತಮೆನಿಸಿ ನಿ ।
ತಾಂತಂ ತನ್ನಾಳ್ವ ಧರಣಿ ಸೊಗಯಿಸೆ ವಸುಧಾ ॥
ಕಾಂತಂ ಪಾಲಿಸೆ ಮಿಸುಪ ವ ।
ಸಂತಂ ಬಂದಿತ್ತುದವನಿಗತ್ಯುತ್ಸವಮಂ ॥ ೪ ॥

ವ ॥ ಅಂತುಮಲ್ಲದೆ—

ಮ ॥ ಪರಿಪಕ್ವಂ ಫಳರಾಜಿ ಸೌರಭನಿದಾನೋಜ್ಜೃಂಭಿತಂ ಪುಷ್ಪ ಮಂ ।
ಜರಿ ನಾನಾಲತಿಕಾವಳೀ ವಿಪುಳ ಶಾಖಾಹಸ್ತದೊಳ್ ಶೋಭಿಸು ॥
ತ್ತಿರೆ ನಂದೀಶ್ವರ ಪೂಜೆಯಂ ಪದೆದು ಮಾೞ್ಕುಂ ರಾಜನಾನುಂ ಮನೋ ।
ಹರಮಂ ಮಾಡುವೆನೆಂದು ಬಂದ ತೆಱದಿಂ ಚೆಲ್ವಾಯ್ತು ಚೈತ್ರಾಗಮಂ ॥ ೫ ॥

ವ ॥ ಅಂತು ಜಗದಾಶ್ಚರ್ಯಮೆನಿಸಿ ತನ್ನೆಸಗುವ ನಂದೀಶ್ವರ ಸಪರ್ಯೆಗೆ ಸಹಾಯಮಾಗಿ ಬಂದ ಮಧುಮಾಸದೊಳ್—

ಕಂ ॥ ನಿರುಪಮ ಪುಣ್ಯಪಯೋಧಿಯ ।
ತೆರೆಯನೆ ಚಮರರುಹಮಿಂದುವೆನೆ ಬೆಳ್ಗೊಡೆಯೊ ॥
ಪ್ಪಿರೆ ಕಳ್ಪಭೂಜವೆನೆ ಸುರು ।
ಚಿರಮಣಿಮಯಪಾಳಿಕೇತನಂ ಕರಿಶಿರದೊಳ್ ॥ ೬ ॥

ಕಂ ॥ ಚಂದಂಬಡೆದಿರೆ ದೇವಂ ।
ಚಂದಂ ಮಣಿತೋರಣಂಗಳೆಡೆಯೆಡೆಯೊಳ್ ಪೂ ॥
ರ್ಣೇಂದುನಿಭ ಚಂದ್ರಮಣಿ ಮುಕು ।
ರಂದಂ ಕಳಧೌತ ವಾರನಾರೀನಿಕರಂ ॥ ೭ ॥

ನಡೆವ ಮುಗಿಲೆನಿಸೆ ಕರಿ ಚೆ ।
ಲ್ವಡರ್ದ ವಿಮಾನಮನೆ ಪೋಲೆ ಮಂಡವಿಗೆ ಬೆಡಂ ॥
ಗಿಡಿದಿರೆ ಖೇಚರಿಯುನಂ ।
ದೊಡರಿಪ ನರ್ತಕಿಯೆ ಖಚರಿಯೆನೆ ಕರಮೆಸೆದಳ್ ॥ ೮ ॥

ಘಂಟಾರವಮುಂ ಘನಜಯ ।
ಘಂಟಾರವಮುಂ ದಿಶಾಗಜಂಗಳ ವಿಳಸ ॥
ದ್ಘಂಟಾರವಮುಂ ಕೊರ್ವಿಸು ।
ತೆಂಟುಂ ದೆಸೆಗಳುಮನೆಯ್ದೆ ತೀವಿದುವಾಗಳ್ ॥ ೯ ॥

ವ ॥ ಅಂತು ಯಾನನಾಗಶಿರೋಭಾಗದೊಳ್ಪರಭಾಗಂಬಡೆದ ಚಮರಿಜ ಸಮಾಜಮುಂ ಪಲ್ಲವೋಲ್ಲಸಿತಾತಪತ್ರವ್ರಾತಮುಂ ಪಾಳಿಕೇತನಪಾಳಿಯುಂ ವಿತಾನ ವಿತಾನಮುಂ ಮಂಡವಿಗೆಯ ಮಂಡಳಿಯುಂ ವಾರನಾರೀವಾರಮುಂ ಬಿತ್ತರಂಬೆತ್ತಿರೆ ಭುವನೇಶ್ವರವಂದಿತ ನಂದೀಶ್ವರ ಮಹಾಮಹಿಮೆಯುನಮೋಘ ಹೃದಯಾನಂದದಿನಿಂದ್ರಂ ಮುಂದೆ ತನಗೆ ಮಾಳ್ಪ ಶ್ರೀವಿಹಾರವಿಸ್ತಾರಮೊತೆಱನಾದಪುದೆಂದರಿಸಯಿಸುವಂದದಿ ನಾನಂದನರೇಂದ್ರಂ ವಿಶಿಷ್ಟಾಷ್ಟಶೋಭೆಯಿಂ ಶೋಭಿಸುವ ನಿಜರಾಜಧಾನಿಯ ರಾಜವೀಥಿ ಯೊಳಗನೇಕ ರಾಜಚಿಹ್ನಂ ಮೆಱೆಯೆ ಮೆಱೆಯಿಸುತ್ತಂ ವಿನಯ ನಿಕಾಯಂ ಬೆರಸು ಬರುತ್ತಮಿರ್ಪುದುಮಾ ಪ್ರಸ್ತಾವದೊಳ್—

ಕಂ ॥ ವಿಪುಳಮತಿಗಳ್ ವಿವೇಕಾ ।
ಧಿಪ ಮತಿಗಳ್ ಪುಣ್ಯಸಿದ್ಧಿ ನೋಂಪಿವರ್ಗಂ ಸಿ ॥
ದ್ಧಿಪ ಜೈನ ಪೂಜೆಯಂ ನೋ ।
ಱ್ಪಿಪರಿಮಿತಾತ್ಮೀಯ ಭಕ್ತಿಭಾವಾಯತ್ತರ್ ॥ ೧೦ ॥

ಬರೆ ಪುಣ್ಯಸಮುದಯಮನಾ ।
ದರದಿಂದೆಱಗುವಾಸಮುದಯಂ ಬೆರಸು ನರೇ ॥
ಶ್ವರನವರನಧಿಕ ಭಕ್ತಿಯ ।
ಭರದಿಂ ಗುರುಭಕ್ತಿಪೂರ್ವಕಂ ಬಂದಿಸಿದಂ ॥ ೧೧ ॥

ವ ॥ ಅಂತಾ ಮುನೀಂದ್ರರಂ ಬಂದಿಸಿದ ನರೇಂದ್ರನಿಂತೆಂದಂ—

ಕಂ ॥ ಜಿನಬಿಂಬಮಚೇತನಮೆಂ ।
ತು ನಿಗ್ರಹಾನುಗ್ರಹಕ್ಕೆ ನಾಯಕಮಕ್ಕುಂ ॥
ಮುನಿಪಾರಾಧಿಸುವ ಜನ ।
ಕ್ಕೆನಗಿದು ವಿಸ್ಮಯಮೆ ತಿಳಿಪು ನೀಂ ಮುನಿತಿಳಕಾ ॥ ೧೨ ॥

ವ ॥ ಎಂದು ವಿನಯವಿನಮಿತೋತ್ತಮಾಂಗನಾಗಿ ಬಿನ್ನವಿಸಿದ ನರಪತಿಗಪ್ರತಿಹತಪ್ರತಿಭರಪ್ಪ ಯತಿ [ಪತಿಗಳಿಂತೆಂದರ್]

× × × × × × × × × × ×

ಕಂ ॥ × × × ಪತಂ ಪ್ರಥ ।
ಮತ್ರಿದಿವದೊಳೀಕ್ಷಣಪ್ರಿಯಂ ಮಣಿರೋಚಿ ॥
ಶ್ಶ್ರಿತ ಭಿತ್ತಿವ್ರಾತಂ ।
ದ್ವಾತ್ರಿಂಶಲ್ಲಕ್ಷಜಿನಗೃಹಂ ಸೊಗಯಿಸುಗುಂ ॥ ೧೩ ॥

ಎರಡನೆಯ ಕಲ್ಪದೊಳ್ ಮಣಿ ।
ಕಿರಣಪತಾಕಾಂ [ಕಿತ]ಚಳಧ್ವಜಾಂಚಿತ ಮಂ ॥
ದಿರಮೆಸೆಗುಂ ಮಣಿತೋರಣ ।
ಪರಿವಾರವಿಶಿಷ್ಟಮಷ್ಟವಿಂಶತಿ ಲಕ್ಷಂ ॥ ೧೪ ॥

ಪ್ರಕಟಿತ ಸನತ್ಕುಮಾರಾ ।
ಖ್ಯಕಲ್ಪದೊಳ್ ಕಲ್ಪಭೂಜ ಪುಷ್ಪಸುಗಂಧಂ ॥
ಸುಕೃತಪ್ರದ ಜಿನಸದನ ।
ಪ್ರಕರಂ ಪನ್ನೆರಡುಲಕ್ಕೆಯೆಸೆಯುತ್ತಿರ್ಕುಂ ॥ ೧೫ ॥

ತ್ರಿದಶಪತಿ ವಿನುತಮರ್ಹ ।
ತ್ಸದನಂ ಮಾಹೇಂದ್ರಕಲ್ಪದೊಳ್ಪುಣ್ಯಫಲ ॥
ಪ್ರದಮಷ್ಟಲಕ್ಷಮುಮರೀ ।
ಮೃದುಗೀತವಿನೂತಮುಚಿತ ನೃತ್ಯಂ ಸ್ತುತ್ಯಂ ॥ ೧೬ ॥

ಆತ್ತಸುಖಬ್ರಹ್ಮಂ ಬ್ರ ।
ಹ್ಮೋತ್ತರ ಕಲ್ಪಂಗಳಲ್ಲಿ ಶಶಿಮಣಿವಿಳಸ ॥
ದ್ಭಿತ್ತಿಯರುಣಮಣಿಕಳಶಮು ।
ನುತ್ತಮಜಿನವಸತಿ ನಾಲ್ಕು ಲಕ್ಕೆಯೆನಿಕ್ಕುಂ ॥ ೧೭ ॥

ಲಾಂತವ ಕಾಪಿತ್ಥಂಗಳೊ ।
ಳಿಂತೊಳವಯ್ವತ್ತು ಸಾಸಿರಂ ಜಿನಗೇಹಂ ॥
ಸಂತತಮತಿಕಾಂತಾಮರ ।
ಕಾಂತಾ ಸಂಗೀತಕೇಳಿಯಿಂ ಕಣ್ಗೊಳಿಕುಂ ॥ ೧೮ ॥

ಸುಮನೋಮನೋಹರಂ ಶು ।
ಕ್ರಮಹಾಶುಕ್ರಂಗಳಲ್ಲಿ ಪಲ್ಲವಿತಸುರ ॥
ದ್ರುಮವನವೃತಮೆಸೆಗುಂ ನತ ।
ಸುಮನಂ ನಾಲ್ವತ್ತು ಸಾಸಿರಂ ಜಿನಗೇಹಂ ॥ ೧೯ ॥

ಕಂ ॥ ವಿದಿತಶತಾರ ಸಹಸ್ರಾ ।
ರದೊಳಮರೀನಯನಕಾಂತಿ ಸಾರಸುಧಾಸಾ ॥
ರದೊಳೊಪ್ಪಿ ತೋರುಗುಂ ತ ।
ಪ್ಪದೆ ಜಿನಗೃಹವಿತತಿ ಷಟ್ಸಹಸ್ರಪ್ರಮಿತಂ ॥ ೨೦ ॥

ನಾನಾ ವಿಮಾನ ಮಾನಿತ ।
ಮಾನತಮಾಪ್ರಾಣತಾರಣಾಚ್ಯುತಮೆನಿಸಿ ॥
ರ್ಪೀ ನಾಲ್ಕುಂ ಕಲ್ಪಂಗಳೊ ।
ಳಾನತ ಸುರಸಮಿತಿ ಜಿನವಸತಿ ಸಪ್ತಶತಂ ॥ ೨೧ ॥

ಮೊದಲಲ್ಲಿ ನೂಱಪನ್ನೊಂ ।
ದದಱಿಂ ನೂಱೇೞು ಬೞಿಕ್ಕೆ ತೊಂಬತ್ತಾಱ ॥
ನ್ನದಱಿಂ ಬೞಿಕ್ಕೆ ಜಿನಪತಿ ।
ಸದನಂ ಗ್ರೈವೇಯಕತ್ರಯಂಗಳೊಳೆಸೆಗುಂ ॥ ೨೨ ॥

ಎನೆವಾನವಾನುದಿಶೆಯೊಳ್ ।
ವಸತಿಗಳೊಂಬತ್ತೆ ಕಳಶದರ್ಪಣಘಂಟಾ ॥
ಪ್ರಸರಾದ್ಯುಪಕರಣಂ ರಂ ।
ಜಿಸುಗುಂ ನೂಱೇೞು ಬೇಱೆವೇಱೆನ್ನವಱೊಳ್ ॥ ೨೩ ॥

ನಿರುಪಮ ಸುಖ ಪಂಚಾನು ।
ತ್ತರೆಗಳೊಳಹಮಿಂದ್ರಬೃಂದವಂದ್ಯಂಗಳ್ ಮಂ ॥
ದರದಂತಿರೆಯ್ದೆ ಜಿನಮಂ ।
ದಿರಮೆಸೆಗುಂ ನಂದನಾಳಿ ಸುಂದರ ವಿಭವಂ ॥ ೨೪ ॥

ನಿರುಪಮ ನಂದೀಶ್ವರದೊಳ್ ।
ಪುರುರತಿಕರದಧಿಮುಖಾಂಜನಾದ್ರಿಯೊಳಯ್ವ ॥
ತ್ತೆರಡು ಜಿನಮಂದಿರಂ ಸುರ ।
ಪರಿವೃಢ ಪರಿಪೂಜಿತಂ ಸುಪರಿವಾರಯುತಂ ॥ ೨೫ ॥

ಮಂದರಮಯ್ದಱ ನಾಲ್ಕುಂ ।
ನಂದನದೊಳ್ ನಾಲ್ಕು ನಾಲ್ಕು ಜಿನಮಂದಿರವೋ ॥
ರೊಂದರೊಳೆಸೆಗುಮವನಿತುಮ ।
ನೊಂದಿಸಿದೊಡಶೀತಿ ಜಿನಗೃಹಂಗಳೆನಿಕ್ಕುಂ ॥ ೨೬ ॥

ಕುಳಶೈಳಂಗಳೊಳಂತಹ ।
ರ್ನಿಳಯಂ ಮೂವತ್ತುನೂಱುವಕ್ಷಾರನಗಂ ॥
ಗಳೊಳಿಪು ಪರ್ವತದೊಳ್ನಾ ।
ಲ್ಕೆಳಸಿರ್ಕುಂ ನಾಲ್ಕು ಮಾನುಷೋತ್ತರಗಿರಿಯೊಳ್ ॥ ೨೭ ॥

ಕಂ ॥ ವಿಜಯಾರ್ಧಂ ನೂಱೆಪ್ಪ ।
ತ್ತು ಜಿನಾಲಯಮವಱೊಳನಿತೆಯಕ್ಕುಂ ಜಂಬೂ ॥
ಕುಜದಲ್ಲಿಯುಯ್ದು ಶಾಲ್ಮಲಿ ।
ಕುಜದೊಳ್ ಸೊಗಯಿಸುಗುಮೆಯ್ದೆ ಜಿನಭವನಂಗಳ್ ॥ ೨೮ ॥

ಕುಂಡಳದೊಳ್ವಾಣೀಮಣಿ ।
ಮಂಡಳ ಜಿನಗೃಹಚತುಷ್ಟಯಂ ಸಕಳಮಹೀ ॥
ಮಂಡನ ರುಚಕಾದ್ರಿಯೊಳಾ ।
ಖಂಡಳವಿನುತಂ ಜಿನಾಲಯಂ ನಾಲ್ಕೆಸೆಗುಂ ॥ ೨೯ ॥

ಇನಿತು ಜಿನಗೃಹಸಮಾಖ್ಯೆ ಪ ।
ತನ ಮಾತ್ರದೆ ಸಿದ್ಧಮಂತ್ರದಂತಭಿಮತಮಂ ॥
ನಿನಗೆ ಜನಿಯಿಸಿಗುಮವನಿಪ ।
ನೆನೆವುದು ಪೊಗೞ್ವುದು ಕೃತಾರ್ಥನಪ್ಪೆಯಮೋಘಂ ॥ ೩೦ ॥

ಬೆಸಗೊಂಡ ನಿನಗಮಭಿವ ।
ರ್ಣಿಸಿದೆಮಗಂ ಸಕಳ ಕರ್ಮನಿರ್ಜರಪುಣ್ಯಾ ॥
ಪ್ರಸರಂ ಸಂಭವಿಸಿದುದಂ ।
ತೆ ಸುಜನಸಂಸರ್ಗಮಾರ್ಗೆ ಮಾಡದೊ ಸುಖಮಂ ॥ ೩೧ ॥

ಎಂದು ಬೆಸಸಿದ ಮುನೀಶ್ವರ ।
ರಂ ದೃಢತರಭಕ್ತಿಯಿಂದೆ ಬಂದಿಸಿ ಧರ್ಮಾ ॥
ನಂದಮನೆ ತಳೆದು ತನ್ನಯ ।
ಮಂದಿರಕೆಲ್ತಿಂದಗಣ್ಯ ಪುಣ್ಯೋದ್ಯುಕ್ತಂ ॥ ೩೨ ॥

ಪುರುಷಾರ್ಥನಿಧಿ ಶಲಾಕಾ ।
ಪುರುಷತೆಯಂ ಮಾೞ್ಪ ಪುಣ್ಯರಾಶಿಗಳೆಂಬಂ ॥
ತಿರೆ ಸೊದೆವೞಿದ ಶಲಾಕೆಯ ।
ಪರಮ ಜಿನಾಲಯಮನರ್ತಿಯಿಂದೆತ್ತಿಸಿದಂ ॥ ೩೩ ॥

ಮ ॥ ವಿಳಸತ್ಪುಣ್ಯ ನಮೇರುವಿಂದೆಸೆವ ಪೆಂಪಿಂ ಮೇರುವಂ ಕೀರ್ತಿ ನಿ ।
ರ್ಮಳ ಗಂಗೋದ್ಭವ ಸಂಗದಿಂದೆ ಹಿಮವತ್ತುಂಗಾದ್ರಿಯಂ ಪೋಲ್ತು ಕ ॥
ಣ್ಗೊಳಿಸುತ್ತಿರ್ದವು ನೂತ್ನರತ್ನಮಯ ಭಿತ್ತಿವ್ರಾತ ಚೈತ್ಯಾಲಯಂ ।
ಗಳುದಂಚದ್ರುಚಿ ಕಾಂಚನೋರು ಕಳಶಪ್ರೋತ್ತುಂಗ ಶೃಂಗಂಗಳಿಂ ॥ ೩೪ ॥

ಮ ॥ ಸ್ರ ॥ ಪ್ರಗುಣ ಸ್ವರ್ಗಾಪವರ್ಗಕ್ಕಮಳಿನ ಮಣಿ ಚೈತ್ಯಾಲಯಶ್ರೇಣಿ ನಿಶ್ರೇ ।
ಣಿಗಳೆಂಬಂತಾದಮುತ್ತುಂಗತೆಯಿನೆಸೆದು ಮಿಥ್ಯಾತಪಸ್ತೋಮಮಂ ತೂ ॥
ಳ್ದಿ ಗಡಾ ಸನ್ಮಾರ್ಗಮಂ ತೋಱುವ ಮಣಿಕಳಶಾಕಾರಾಂಶುವಿಂದೊಪ್ಪೆ ಭವ್ಯಾ ।
ಳಿಗಲಂಪಂ ಪುಟ್ಟಿಸುತ್ತಿರ್ದುವು ಧರಣಿಪನೊಲ್ದೆತ್ತಿಸಲ್ಕತ್ಯುದಾತ್ತಂ ॥ ೩೫ ॥

ಚಂ ॥ ಜಡಮತಿ ಭೇದಿಸಲ್ ನೆರೆಯದಂತಿರೆ ಕೀರ್ತಿ ಬೆಡಂಗನೆಯ್ದೆ ನೂ ।
ರ್ಮಡಿಸೆ ವಿಚಿತ್ರಭಿತ್ತಿಯೊಳವಟ್ಟಿರೆ ಜಾತಿ ನಿಸರ್ಗ ಶೋಭೆಯಂ ॥
ಗೆಡೆಗೊಳೆ ಪಾರ್ಶ್ವಪಂಡಿತ ವಿನಿರ್ಮಿತ ಕಾವ್ಯದವೊಲ್ ಜಿನಾಲಯಂ ।
ಪಡೆದು ವಿನೇಯಸಂಪದಮನೇಂ ಪೆಸರ್ವೆತ್ತುದೊ ವಿಶ್ವಧಾತ್ರಿಯೊಳ್ ॥೪೬॥

ವ ॥ ಅಂತಕೃತ್ರಿಮ ಭಕ್ತಿಯಿನಕೃತ್ರಿಮ ಚೈತ್ಯಾಲಯದಂತೆ ನಿಜಕೀರ್ತಿ ತ್ರೈಲೋಕ್ಯವರ್ತಿಯಾಗೆ ಚೈತ್ಯಭಕ್ತಿಯಿಂದುತ್ತುಂಗ ಚೈತ್ಯಾಲಯಂಗಳನೆತ್ತಿಸಿ—

ಮ ॥ ಸ್ರ ॥ ಜಿನಪೂಜಾನಂದದಿಂದಂ ಜಿನಚರಿತಕಥಾಕರ್ಣನಾನಂದದಿಂದಂ ।
ಜಿನರಾಜಸ್ನಾನಗಂಧೋದಕ ಸವನಸಮುಜ್ಜೃಂಭಿತಾನಂದದಿಂದಂ ॥
ಜಿನಪಾದಾಂಭೋಜಶೇಷಾಕ್ಷತ ಕುಸುಮಶಿರೋಭೂಷಣಾನಂದದಿಂದಂ ।
ವಿನುತಾನಂದಾವನೀಪಾಲಕನೆನೆ ನೆಗಳ್ದಿಂ ಸ್ತ್ರತ್ವ ಸಮ್ಯಕ್ತ್ವಯುಕ್ತಂ ॥ ೪೭ ॥

ಕಂ ॥ ಧರ್ಮ ಸುರದ್ರುಮದ ಫಳಂ ।
ಶರ್ಮಪ್ರದ ರಾಜ್ಯವಿಭವಮೆಂದಱಿದು ನೃಪಂ ॥
ಧರ್ಮಾನುಕೂಲಮೆನಿಸಿಯೆ ।
ನಿರ್ಮಳಮತಿಯರ್ಥಕಾಮದೊಳ್ ವರ್ತಿಸಿದಂ ॥ ೪೮ ॥

ವ ॥ ಅಂತದಱಿಂ ಧರ್ಮಾರ್ಥಕಾಮಫಳಾಯ ರಾಜ್ಯಾಯನಮಯೆಂಬ ವಾಕ್ಯಾರ್ಥಮನನ್ವರ್ಥಂ ಮಾಡುತಮನೇಕ ಭೋಗೋಪಭೋಗಮನನುಭವಿಸುತ್ತಮಿರ್ದೊಂದು ದೆವಸಂ ಮಣಿಮಯ ಶೃಂಗಾರಾಗಾರದೊಳ್ ಶೃಂಗಾರಯೋನಿಯುಂ ಭಂಗಿಸುವಂತೇಕಭಂಗಿಯಿಂ ಶೃಂಗಾರಮಂ ಮಾಡಿ ಮಣಿದರ್ಪಣಮಂ ನೋಡಿ—

ಕಂ ॥ ಕೆನ್ನೆಯ ನರೆಯುಂ ನರಪತಿ ।
ಕನ್ನಡಿಯೊಳ್ ಕಾಣೆ ಪುಟ್ಟಿದುದು ವೈರಾಗ್ಯಂ ॥
ನಿನ್ನಿರ್ಮಳತೆಯನೆಮ್ಮವೊ ।
ಲಿನ್ನಿಸದಂ ತಾಳ್ದೆನುತ್ತಮಱಿಪಿದ ತೆಱದಿಂ ॥ ೪೯ ॥

ದರ್ಪಣಮನಭೀಕ್ಷಿಸೆಯುಂ ।
ತ್ಸರ್ಪಣಮಭಿರೂಪ ರೂಪಲಾವಣ್ಯಕ್ಕಂ ॥
ತೋರ್ಪುದು ಮುಂ ಮುಪ್ಪಿನೊಳವ ।
ಸರ್ಪಣಮಾಯ್ತಿನ್ನದೇಕೆ ಭೋಗೋದ್ಯೋಗಂ ॥ ೫೦ ॥

ತನ್ನಯ ಮೊಗಮುಂ ನೋಡಲ್ ।
ತನ್ನಯೆ ಕಣ್ ನಾಚಿದಪ್ಪುದೆಂದೊಡೆ ಪೆಱತೇ ॥
ನಿನ್ನಬಲೆಯರುಂ ಪೇಸುಗು ।
ಮೆನ್ನದೆ ಗತವಯಸನಬಲೆಯರ್ಗೆಳಸುವುದೇ ॥ ೫೧ ॥

ಮ ॥ ತನುವಿಂದಂ ಧನದಾರ್ತಮಾರ್ತದಿನನೇಕಾರಂಭಮಾರಂಭದಿಂ ।
ಘನಜೀವಂಗಳ ಬಾಧೆಬಾಧೆಗಳಿನೇನೋ ಬಂಧಮಾ ಕರ್ಮಬಂ ॥
ಧನದಿಂ ದುರ್ಗತಿ ದುರ್ಗತಿ ಭ್ರಮಣದಿಂದಂ ದುಃಖಮೆಂದಾರ್ಯರೀ ।
ತನುಮೋಹಕ್ಕೆಡೆಯಾಗದಾಂಪುದು ತಪಃಶ್ರೀಯಂ ಕೃತಶ್ರೇಯಮಂ ॥ ೫೨ ॥

ಕಂ ॥ ಬಾಲೆಯುರ ಮನದೊಳೊದವಿದ ।
ನೀಲೀರಾಗತೆಯುಮುೞಿಗುಮುೞಿದೊಡೆ ಕೇಶಂ ॥
ನೀಳತೆಯಸೆಂದವಂದಿರ ।
ಲೋಲತೆಯುಂ ಬಿಡದರಪ್ರಬುದ್ಧರ್ ವೃದ್ಧರ್ ॥ ೮೩ ॥

ಇರದೆ ಗತವಯಸರಸುಕೂ ।
ಲರಸಾ ಭಾರ್ಯ್ಯೆನಿಪ್ಪಿದಂ ಬಗೆಯದೆ ಚಿಃ ॥
ತರುಣಿಯರೊಲ್ಲದೊಡಂ ಕಾ ।
ತರಿಸಿಯೆ ಬೆಂಬತ್ತುವವರೆ ಗರ್ದಭಚರಿತರ್ ॥ ೮೪ ॥

ಫಳಿತಂ ಬರೆ ಪೞಿ ತನ್ನಂ ।
ಬಳಸುಗುಮೆಳಸಿದೊಡೆ ವಿಷಯತತಿಗದಱಿಂದಂ ॥
ಫಳಿ ತನ್ಮುಕ್ತಿಗೆನಿಪ ಮತಿ ।
ಫಳಿತಂ ತಳೆದಂದು ತಪಮನುೞಿದಂತಫಳಂ ॥ ೮೫ ॥

ವ ॥ ಎಂದು ವಿಷಯವಲ್ಲಭಂ ವಿಷಯವಿರಕ್ತನಾಗಿ—

ಕಂ ॥ ಪ್ರಾಜ್ಯಗುಣ ವಜ್ರಬಾಹುಗೆ ।
ರಾಜ್ಯಮನಿತ್ತಾತ್ಮಜಂಗೆ ಜಗತೀತ್ರಯಸಂ ॥
ಪೂಜ್ಯಮೆನಿಸಿರ್ದ ಸುತಪೋ ।
ರಾಜ್ಯಮನೂರ್ಜಿತ ಸಮಗ್ರ ವೈರಾಗ್ಯಧನಂ ॥ ೮೬ ॥

ಸಮಧಿಕದಯಾರಸಾಮೃತ ।
ಸಮುದ್ರ ಸಿತರುಚಿ ಸಮುದ್ರಗುಪ್ತಯತೀಂದ್ರ ॥
ಕ್ರಮುಕಮುಲಸನ್ನಿಧಾನದೊ ।
ಳಮಳ ಗುಣಾನಂದ ಹೃದಯನಾನಂದನೃಪಂ ॥ ೮೭ ॥

ದುರ್ವಾರವೀರಮಾರನ ।
ದೋರ್ವಳಮಂ ನಿಜ ಸಹಾಯದಿಂ ಭೇದಿಸಿಯು ॥
ಯ್ದುರ್ವರ್ತಪಮಂ ತನ್ನೊಡ ।
ನುರ್ವೀಶರ್ ತಳೆಯೆ ತಳೆದನನುಪಮ ತಪಮಂ ॥ ೮೮ ॥

ವ॥ ಅಂತು ನಿರಂತರ ದೃಢತರ ವೈರಾಗ್ಯ ವಿಶಾಲ ಮೂಲದಿಂದಗಾಧ ಬೋಧಾಳ ವಾಳಜಳದಿಂ ಬಂದುಪಸಮ ಸಮ್ಯಕ್ತ್ವಸ್ಕಂದದಿಂ ಪಂಚಮಹಾವ್ರತ ಶಾಖಾಪ್ರಪಂಚದಿಂ ವಿಚಿತ್ರ ಚರಿತ್ರ ಪತ್ರದಿಂದನೂನಧ್ಯಾನ ಪ್ರಸೂನದಿಂದೈಹಿಕಾಮುಷ್ಮಿಕ ಪೂಜ್ಯತಾತುಳಫಳ ದಿಂದೆಸೆವ ದಿಗಂಬರ ದೀಕ್ಷಾನಲ್ಪಕಲ್ಪವೃಕ್ಷಮಂ ಧೈರ್ಯಮಂದರಾಚಳಂ ತಳೆದು—

ಮ ॥ ಸ್ರ ॥ ಒಲವಿಂದಂ ಮಾಡುಪತ್ಯೂರ್ಜಿತ ಜಿನಗುಣ ಸಂಪತ್ತಿ ನಾನಾ ನಿಳಿಂಪಾ ।
ತುಳ ಭಕ್ತ್ಯುತ್ಕರ್ಷ ಸಂಪೂಜಿತ ಜಿನಗುಣ ಸಂಪತ್ತಿಯಂ ಮಾಡೆ ಚೇತೋ ॥
ಬಳಯುಕ್ತಂ ಸಿಂಹನಿಃಕ್ರೀಡಿತ ಹೃಷಿತಮದೇಭಮಂ ತೂಳ್ದಿ ಮುಕ್ತಾ ।
ವಳಿಯಾಶಾಂತಂಗಳಂ ತೀವಿದುವೆನಿಸೆ ಮುನೀಂದ್ರೋತ್ತಮಂ ಮೈಮೆವೆತ್ತಂ ॥ ೮೯ ॥

ವ ॥ ಎಂದಿವು ಮೊದಲಾದನಶನದೊಳ್ ಸಿತಚಾಂದ್ರಾಯಣಂ ಮೊದಲಾದ ವಮೋದರ್ಯದೊಳಂ ಗೃಹಸ್ಥ ಭೂಷಾವೇಷ ವ್ಯವಸ್ಥಾಪನಂ ಮೊದಲಾದ ವಿವಿಕ್ತ ಶಯ್ಯಾಸನದೊಳಂ ಮಾಷಾಮವರ್ಧನಂ ಮೊದಲಾದ ರಸಪರಿತ್ಯಾಗದೊಳಂ ನೆಗಟ್ದ ಕಾಯಕ್ಲೇಶಮೆಂಬಾಱನೆಯ ತಪೋನುಷ್ಠಾನಮನೆತ್ತಿಕೊಂಡು—

ಕಂ ॥ ಉಳ್ಳಲರೆ ಮನಂ ಕೈರವ ।
ದೊಳ್ಳಲರ್ವಂತೆ ತನ್ನ ಜನದಂತೆ ಹಿಮಂ ॥
ಬೆಳ್ಳಂಗೆಡದಿರೆ ಮನದೊಳ ।
ಗಳ್ಳಾಡದೆ ಯೋಗಿ ಬೆಳ್ಳವಾಸಮನಿರ್ದಂ ॥ ೫೦ ॥

ತಪನಂ ಪರಿತೋಷಮನಿ ।
ತ್ತಪನಂಶುಗಳಿಂದಮೆಂದು ಮಿಕ್ಕಿರ್ಕಳ್ಳಾ ॥
ದವರಾಜಿಯ ನೆಳಲೊಳ್ ನಿಂ ।
ದಪರಾಮಿರ್ದುಕಲರಿದೆನಿಪ ಬಿಸಿಲು ಗಡದರೊಳ್ ॥ ೫೧ ॥

ಎತ್ತಮುರಿಗೆದಱುಪಿನನಂ ।
ಸತ್ತಿಗೆಗೆತ್ತೊಗೆವ ಬಿಸಿಲನಾ ಸತ್ತಿಗೆಯೊಳ್ ॥
ಕೆತ್ತಿಸಿದ ಮಾಣಿಕದ ರುಚಿ ।
ಗೆತ್ತದಿರದೆ ದಿವ್ಯಯೋಗಿ ಕಲ್ನೆಲೆನಿಂದಂ ॥ ೫೨ ॥

ಪೊಡೆವ ಸಿಡಿಲ್ ಬಿಡೆ ಬೀಸುವ ।
ಕಡುಗಾಳಿ ಪೊದಟ್ದು ನೀಳ್ದು ಮಿಂಚುವ ಕುಡುಮಿಂ ॥
ಚೆಡೆವರೆಯದೆ ಪೊಸಕಾರೊಳ್ ।
ಕೊಡದಿಂ ಸುರಿವಂತೆ ಸುರಿವ ಮೞೆ ನೆಗೞೆ ಕರಂ ॥ ೫೩ ॥

ನಿರುಪಮ ನಿಜ ನಿರ್ಮಳಿನ ।
ಸ್ವರೂಪ ಸಂಭೂತ ಭಾವನೋಚಿತ ಕಾಷ್ಠಾ ॥
ಭರದೆ ಬಹಿರ್ವಿಷಯದೊಳಿಂ ।
ಮರವಾನಸನೆನಿಸಿ ಯೋಗಿ ಮರಮೊದಲಿರ್ದಂ ॥ ೫೪ ॥

ವ ॥ ಅಂತುಗ್ರೋಗ್ರತಪದೊಳವ್ಯಗ್ರನೇಕಾಗ್ರದಿಂ ನೆಗೞುತ್ತಮಿರೆ—

ಕಂ ॥ ಪುತ್ತಡರ್ದ ಮೆಯ್ಯ ಮಲವೇ ।
ನಿತ್ತುದೊ ಘನತಾಂತರನದಿಸೆಱಗಲ್ಮೆಯ್ಯಂ ॥
ಮೆತ್ತಿದ ಮೂಷೆಯ ವೃತ್ತಿಕೆ ।
ಮತ್ತೆನಿಸದಿದಪ್ಪುದೆಂಬಿನಂ ಯತಿಪತಿಯಾ ॥ ೫೫ ॥

ಚಂ ॥ ತನು ಬಡವಾದುದೆಂಬಿನಿತೆ ಸದ್ಗುಣಘಾತಿಕಷಾಯ ಜಾತಿ ನೆ ।
ಟ್ಟನೆ ಬಡವಾದುದಾಶೆಯನೆನುತ್ತರ ನಿಸ್ಪೃಹವೃತ್ತಿ ಗೆಲ್ದುದೆಂ ॥
ಬಿನಿತೆ ವಿರುದ್ಧ ಕೀರ್ತಿಲತೆಯುಂ ಪುಗೆ ಗೆಲ್ದುದೆನಿಪ್ಪ ತತ್ವ ಭಾ ।
ವನೆಯೊಳೆ ನಿಂದು ದರ್ಪಕನ ದೋರ್ಯುಗದರ್ಪಮನಾರ್ದದಿರ್ದದಂ ॥ ೫೬ ॥

ವ ॥ ಮತ್ತಮಮೇಯ ಪ್ರಾಯಶ್ಚಿತ್ತ ವಿನಯ ವೈಯಾಪೃತ್ಯಸ್ವಾಧ್ಯಾಯದೊಳಂ ವ್ಯವಸಾಯಂ ಮಾಡುತ್ತಮೇಕಾದಶಾಂಗಧಾರಿಯುಮೇಕವಿಹಾರಿಯುಮಾಗಿಯನೇಕ ದೇಶದೊಳ್ ದಶಧರ್ಮಧಾರಿ ಧರ್ಮವರ್ತನೆಯಂ ಮಾಡುತ್ತಂ ಸ್ವರ್ಗಾಪವರ್ಗ ಫಲಪ್ರದಾಯಿಯಾದ್ಯುತ್ಸರ್ಗಸಮುಗ್ರ್ಯಧ್ಯಾನಮೆಂಬ ಪನ್ನೆರಡನೆಯ ತಪಮನುಪಶಮ ಚಿತ್ತಂ ನ್ಯಾಯತ್ತಂ ಮಾಡಲು ವೇಡಿ ವಿಶೋಧಿವಿಶುದ್ಧಾಶಯಂ ದರ್ಶನವಿಶುದ್ಧ್ಯಾದಿ ರೂಢಷೋಡಶ ಭಾವನೆಯಂ ಭಾವಿಸುತ್ತಂ—

ಕಂ ॥ ಜಾಱಿಂ ಮುನಿಮನಮಂ ಪದಿ ।
ನಾಱಿಡೆಗೆ ಪಸುತ್ತಮಿರ್ದ್ದಂ ಚಿತ್ರಂ ಮೆ ॥
ಯ್ದೋಱಿತ್ತು ಯೌವನದೊಳ್ ಸರಿ ।
ದೋಱಿದ ತೀರ್ಥಕರವಿದಿತ ಪುಣ್ಯಮಗಣ್ಯಂ ॥ ೫೭ ॥

ವ ॥ ಅಂತು ಜಗತೀತ್ರಯ ಕ್ಷೋಭಸಮರ್ಥ ತೀರ್ಥಕರ ಪುಣ್ಯಮಂ ವಿನಯ ಜನ ಶರಣ್ಯಮಂ ನೆರಪಿ—

ಕಂ ॥ ಕ್ಷೀರವನಮೆಂಬ ವನದೊಳ್ ।
ಕ್ಷೀರಾಬ್ಧಿತರಂಗಂ ವಿಶದ ವಿವಿಧ ಗುಣಗಂ ॥
ಭೀರಂ ಪ್ರತಿಮಾಯೋಗದೊ ।
ಳಾರಾಧಿತತತ್ವನಿರ್ದನೂರ್ಜಿತ ಸತ್ವಂ ॥ ೫೮ ॥

ಇಪ್ಪತ್ತೆರಡು ಪರೀಷಹ ।
ಮಾಪುರ್ವೆ ಯತಿಪತಿಯನಳ್ಕಿಸಲ್ ನಿಜತನುವಂ ॥
ಬೇರ್ಪಡಿಸಿ ಪರಮಯೋಗದೊ ।
ಳಿರ್ಪನನಘವನವಿತಾನ ದಾವಾನಳನಂ ॥ ೫೯ ॥

ವ ॥ ಅಂತವಿಶ್ರಾಂತ ತ್ರಿಗುಪ್ತಿಗುಪ್ತನುಂ ಶಾಂತರಸ ಸಂತೃಪ್ತನುಮಾಗಿ ಪ್ರತಿಮಾ ಯೋಗದೊಳಾರಾಧಿತಕ್ಷಮಂ ಪ್ರತಿಮಾ ಸಮಾಧಿನಿಷ್ಠನಿರ್ಪುದುಮುತ್ತಲ್—

ಕಂ ॥ ಎನಿತೊಳವಪಾಯ ಹೇತುಗ ।
ಳನಿತುಂ ನಿರಯದೊಳೆ ರೋಗಮೆನಿತೊಳವುದಯ ॥
ಕ್ಕನಿತುಂ ಬರ್ಪುವು ನಾರಕ ।
ಗ್ರನೆ ನೆರಪಿದ ಪಾಪಪಾಕಮಂ ಪವಣಿಪರಾರ್ ॥ ೬೦ ॥

ಕಿವಿಗೆ ಕಠೋರಧ್ವನಿ ಕ ।
ಣ್ಗೆ ವಿಭೀಕರ ಮೂರ್ತಿ ಜಿಹ್ವೆಗತಿವಿರಸರಸಂ ॥
ಅವಗಂಧಂ ಮೂಗಿಂಗೆ ।
ಯ್ದುವುದೊಮ್ಮೆಯುಮಧಿಕ ಕರ್ಮದಿಂ ನಾರಕರಂ ॥ ೬೧ ॥

ದಿವದೊಳ್ ಸುಖಜನಕಂ ವ ।
ಸ್ತುವೆಲ್ಲಮೀಮರ್ತ್ಯ ಲೋಕದೊಳ್ ಸುಖದುಃಖೋ ॥
ದ್ಭವಕಾರಿ ನರಕದೊಳ್ ದುಃ ।
ಖವರ್ಧನಂ ನಿರಯಭವರ್ಗೆಲ್ಲಿತೊ ಸೌಖ್ಯಂ ॥ ೬೨ ॥

ಕಂ ॥ ವಾರಿಧಿಯನೀಂಟಿ ತೀರದ ।
ನೀರಳ್ಕೆ ಜಗಕ್ಕೆ ನೆರಪಿದತನಮನುಣಕೆ ಕೇಳ್॥
ತೀರದ ಪಸಿವುಳ್ಳೊಡಮೇಂ ।
ನಾರಕರ್ಗಿಲ್ಲಂಬುಕಣಮುಮುತನದ ಲವಮುಂ ॥ ೬೩ ॥

ನಾರಕರನನ್ಯಜನ್ಮದ ।
ವೈರಮನೆಚ್ಚಱಿಸಿ ಪಟ್ಟಿಗಾಳಿಗಮಂ ಕ ॥
ಣ್ಣಾರೆ ನಿರೀಕ್ಷಿಪ ತೆಱದಿಂ ।
ದಾರುತ್ತಿರೆಯಿಸುತಬೋತ್ತಿಪರ್ ದನುಜರ್ಕಳ್ ॥ ೬೪ ॥

ನಿರಯಜರ ದುಷ್ಟದುರಿತದ ।
ಶರೀರಮಂ ತಳೆದು ಪಲವು ಭೇದದ ದುಃಖೋ ॥
ತ್ಕರಮನೊದವಿಸುವ ತೆಱದಿಂ ।
ಪರಸ್ಪರಂ ನಾರಕರ್ಕಳೊದವಿಸುತಿರ್ಪರ್ ॥ ೬೫ ॥

ವಿಷಸಮ ವಿಷಯಮನೊದವಿಸೆ ।
ವಿಷಧಿಗಳತಿದೋಷದಿಂ ಪರಸ್ಪರಮದಱಿಂ ॥
ವಿಷಧಿಯನೀಂಟುವವೊಲ್ ಸ್ಥಿತಿ ।
ವಿಷಧಿಗಳಂ ನಾರಕರ್ಕಳೀಂಟುವರಲ್ತೇ ॥ ೬೬ ॥

ವ ॥ ಅಂತತಿ ದುರ್ವಾರ ಘೋರ ದುಃಖಸಸ್ಯಪಾತ್ರಮಾದ ನರಕಕ್ಷೇತ್ರಂಗಳೊಳ್—

ಕಂ ॥ ಶುಭಯೋಗಭಾಗಿ ಯೋಗಿ ।
ಪ್ರಭುವಧೆಯಿಂದಾದ ಪಾಪದಿಂ ದುಃಖದವ ॥
ಪ್ರಭಾಟವಿಯೆನಿಪ್ಪ ತಮಃ ।
ಪ್ರಭೆಯೊಳ್ ಜನಿಯಿಸಿ ಕುರಂಗನತಿಮಳಿನಾಂಗಂ ॥ ೬೭ ॥

ಘಾತಿಸಿದವು ರೋಗಜಮುಖಿ ।
ಘಾತಂ ಮಾನಸಸಮುದ್ಭವಂ ಕ್ಷುತ್ತೃಟ್ಸಂ ॥
ಜಾತಂ ತೀವ್ರಕ್ಷೇತ್ರೋ ।
ದ್ಭೂತಮುಸಾತಂ ಪ್ರಭೂತಪಾ ಪಾತಕನಂ ॥ ೬೮ ॥

ವ ॥ ಅಂತು ನಿರಂತರಂ ಪಂಚಪ್ರಕಾರ ಘೋರಕ್ಲೇಶಮಂ ಸಪ್ತವಿಂಶತಿ ಪಾರಾವಾರಪರ್ಯಂತಂ ನಿಷ್ಠುರ ಹೃದಯಂ ಷಷ್ಠನರಕದೊಳನುಭವಿಸಿ ಬಂದು—

ಕಂ ॥ ಆ ಕ್ಷೀರವನದೊಳತಿ ರೌ ।
ದ್ರಾಕ್ಷಂ ಗಜಪತಿ ಗಜಾಸುರನ್ನದ ವಿದಳ ॥
ತ್ರ್ಯಕ್ಷಂ ಜನಿಯಿಸಿದುದು ಹ ।
ರ್ಯ್ಯಕ್ಷಂ ಘನವನದ್ರುಮಾಳಿಸಂಹತಿದಕ್ಷಂ ॥ ೬೯ ॥

ಚಂ ॥ ವಿತತ ನಿತಂಬದಿಂ ವಿವಿಧ ಪಾದದಿನುಚ್ಚಶಿರಃ ಪ್ರಕೂಟದಿಂ ।
ದತಿಸಿತದಂತ ಮೌಕ್ತಿಕದಿನಾನನ ವಿದ್ರುಮದಿಂ ಸ್ಫುರನ್ನಖ ॥
ಪ್ರತತಿ ಸುವಜ್ರದಿಂ ನಯನ ನೀಳದ ಕೇಸರಶೋಣರತ್ನದಿಂ ।
ದ್ಯುತಿ ಶಶಿಕಾಂತ ನಿರ್ಝರದಿನಿರ್ದುದು ಕೇಸರಿ ರೋಹಣಾದ್ರಿವೋಲ್ ॥ ೭೦ ॥

ಕಂ ॥ ಆರಯ್ವೊಡೆ ಚಿತ್ರಂ ಕಂ ।
ರೀರವದಾ ನೆಗೞ್ತೆ ದಾನಜಲಾಳಿಲಸ ॥
ದ್ವಾರಣಕುಂಭವಿದಾರಣ ।
ಕಾರಣ ಲಂಘನದೆ ತನಗೆ ಪಾರಣೆಯಕ್ಕುಂ ॥ ೭೧ ॥

ಮುತ್ತೊಗೆವ ತಾರೆಗಳ್ ಬಿಸು ।
ನೆತ್ತರ್ಕ್ಕೆಸುಸಂಜೆಯೆನಿಸೆ ಶಶಿವೊಲ್ ದಶನಂ ॥
ಬಿತ್ತರಿಸಿರೆ ಹರಿಯುದಯನ ।
ಗೋತ್ತುಂಗ ಕರೀಂದ್ರಶಿರಮನುಗಿಬಗಿಮಾಳ್ಕುಂ ॥ ೭೨ ॥

ವ ॥ ಅಂತನೇಕಾನೇಕ ಪ್ರಮತ್ತ ಮತ್ತಿಷ್ಟಲುಬ್ಧಂ ಲುಬ್ಧಕನಂತೆ ನಖಮುಖ ನಿಶಿತಾಸ್ತ್ರಪಾತದಿಂ ಮಾತಂಗ ಸಂಘಾತಮಂ ಘಾತಿಸುತ್ತಮಿರ್ದೊಂದು ದೆವಸಂ ನಿಜ ವೈರರವವಿಭೀತಚೇತಸಂಗಳಪ್ಪ ಗಜಯೂಥಂಗಳಾಡುಂಬೊಲದೊಳಿರದೋಡಿ ಪೋಗೆ ತೀವ್ರಕ್ಷುಧಾಪೀಡಿತನಾಗಿ ನೀಡುಂ ಕಾಡಾನೆಗಳನಱಸಿ ಕಾಣದೆ ತೊೞಲುತ್ತ ಮಾಕ್ಷೀರ ಕಾಂತಾರಮಧ್ಯಮಹೀಧರದತಿಕಾಂತ ಶಶಿಕಾಂತ ಶಿಳಾತಳದೊಳನೂನಧ್ಯಾನಾಧೀನಮಾನಸನಾಗಿರ್ದ ಮುನಿನಾಗನಂ ಕಂಡು—

ಕಂ ॥ ಮುನಿಸಿಂ ಹರಿ ಮೇಲ್ವಾಯ್ವೊಡೆ ।
ಮುನಿಸಿಂಹನದರ್ಕೆ ಚಳಿಯಿಸದೆ ತತ್ವಾರಾ ॥
ಧನದೊಳ್ ಸಮಗ್ರ ಸುಖ ಸಾ ।
ಧನದೊಳ್ ನಿಂದಂ ವಿವೇಕಿಗದು ತಕ್ಕುದ ದಲ್ ॥ ೭೩ ॥

ಭೇದಿಸೆ ತನುವಂ ಸಿಂಹಂ ।
ವೇದನೆ ಮುನಿಗಾದುದಿಲ್ಲ ತನ್ನಿಂ ತನುವಂ ॥
ಭೇದಿಸಿ ತನ್ನೊಳ್ ನಿಂದನ ।
ನಾದ ಪರೀಷಹ ಸಹಸ್ರಮುಂ ಬೆದಱಿಕುಮೇ ॥ ೭೪ ॥

ಸಂಚಿಸಿದಘಮುಂ ಬರಿಸಿ ಪ ।
ಳಂಚಲೆವೆಡೆಗಾದುದಿದು ಸಹಾಯನೆನುತ್ತಂ ॥
ಪಂಚಪದಮನೋದುತ್ತಂ ।
ಪಂಚಾಸ್ಯಕೃತೋಪಸರ್ಗಮಂ ಸೈರಿಸಿದಂ ॥ ೭೫ ॥

ಪಂಚೇಂದ್ರಿಯ ಪಂಚಾಸ್ಯಂ ।
ಮುಂ ಚಳಿಯಿಸಲಾಱದಳರಿತೊಡನಿರ್ದುಮದಿ ॥
ನ್ನೇಂ ಚಳಿಯಿಸಲಾರ್ಕುಮೆ ಪೇೞ್ ।
ಪಂಚಾಸ್ಯಂ ಕ್ಷಣಮೆ ಪೊರ್ದಿದುದು ಯತಿಪತಿಯಾ ॥ ೭೬ ॥

ವ ॥ ಆ ಸಮಯದೊಳ್—

ಕಂ ॥ ಪಂಚಾನನೋಪಸರ್ಗಜ ।
ಯಂ ಚಿತ್ರಕೃತಿ ವಿಚಿತ್ರಮುಂ ಕುಡೆ ದಿವಿಜರ್ ॥
ಪಂಚಾಮರ ಮಹಿಜಕುಸುಮ ।
ಸಂಚಯದ ವೃಷ್ಟಿಯೊಳೆ ಮುನಿಯ ತನುವಂ ಪುದಿದರ್ ॥ ೭೭ ॥

ವ ॥ ಅಂತನನ್ಯ ಸಾಮಾನ್ಯ ಸನ್ಯಸನವಿಧಿಯಿಂ ಮುಡಿಪೆಯನಲ್ಪಸೌಖ್ಯಾನತ ಕಲ್ಪದೊಳ್ ಪುಟ್ಟಿ—

ಕಂ ॥ ಉಲಿಯೆ ಪಟಹಾಳಿ ಜವನಿಕೆ ।
ತೊಲಗುವವೊಲ್ ತೆಱೆಯೆ ನೆರೆ ವಿಮಾನದ ಪಡಿ ತ ॥
ಳ್ತಲರ ಮಱೆ ಕಱೆಯೆ ಪುಷ್ಪಾಂ ।
ಜಳಿಯಂತಮರಿಯರ ನೃತ್ಯಮೆಸೆದಿರೆ ನಿಸದಂ ॥ ೭೮ ॥

ಸುರಪತಿಯೊಪ್ಪುವ ಸಿಪ್ಪಿನ ।
ಪೊರೆಯಿಂ ಪೊಱಮಡುವ ವಿಮಳ ಮೌಕ್ತಿಕಮೆನೆ ಬಿ ॥
ತ್ತರಿಸಿದುಪಪಾದ ತಳ್ಪದ ।
ಪೊರೆಯಿಂದಿದೆನಿಪ್ಪ ಮಾನತನು ಪೊಱಮಟ್ಟಂ ॥ ೭೯ ॥

ಚಂ ॥ ನನೆಗಣೆಯಂತೆ ಕಂಪೊಗೆವ ರೂಪೊಡವುಟ್ಟಿದುದೇಱೆ ಕೆತ್ತ ಯೌ ।
ವನವೊಡವುಟ್ಟಿದತ್ತು ಮಣಿಭೂಷಣ ವಸ್ತ್ರಲತಾಂತ ಶೇಖರಂ ॥
ತನಗೊಡವುಟ್ಟಿದತ್ತು ಶುಭಲಕ್ಷಣ ನಿರ್ಮಳವೃತ್ತಿ ತತ್ಪ್ರಭಾ ।
ವನೆಯೊಡವುಟ್ಟಿದತ್ತು ದಿನತಾನೊಡವುಟ್ಟಿದುದಾ ನರೇಂದ್ರನಾ ॥ ೮೦ ॥

ವ ॥ × × × × × × × × × × × × × × ×

× × ಸಂಕಲ್ಪಿತಾಪ್ಯಾತಾಹಾರನುಂ ತ್ರಿರತ್ನಿಪ್ರಮಾಣ ಧಾತುಮಳ ರಹಿತ ಶರೀರನುಂ ದಶಮಾಸನಿರ್ಯತ್ಸುರಭಿ ನಿಶ್ವಾಸನುಂ ಚತುಶ್ಶತರವಿಮಾನಾತನುಂ ತ್ರಯತ್ರಿಂಶತ್ಪರಿಮಿತ ತ್ರಯತ್ರಿಂಶತ್ರಿದಶಪರಿವೇಷ್ಟಿತಸುಮಯುತಸಮಾನಮಾನಿಕ ಸಮ ನ್ವಿತನುಂ ಚತುರಯುತ ಪ್ರಮಿತಾತ್ಮರಕ್ಷಕ ರಕ್ಷಿತನುಂ ಲೋಕಪಾಳ ಚತುಷ್ಟಯ ವಿಶಿಷ್ಟನುಂ ಕರಿತುರಗರಥಪದಾತಿ ಗಾಂಧರ್ವನರ್ತಕೀಪ್ರಮುಖ ಸಮಸ್ತಾನೀಕ ಸೇವಾ ಚತುಷ್ಟಯನುಂ ಅಂತರ್ಮಧ್ಯ ಬಾಹ್ಯ ಪರಿಷತ್ಪರೀತನುಂ, ಚತುಸ್ತ್ರಿಂಶತ್ಪರಿಮಾಣ ಮಹಾ ದೇವೀ ಮನೋಹರ ಮನೋಜಾತನುಂ ಕರಿತುರಗರಥಪದಾತಿ ಗಾಂಧರ್ವಸಂಪತ್ತಿ ಸಂಖ್ಯಾನಪ್ರಾಣವಲ್ಲಭಾವಲ್ಲಭನುಂ ಭಯಲೋಭ ದುರ್ಲಭನುಮೆನಿಸಿ—

ಕಂ ॥ ಮನಮೆ ತನುವಾಗೆ ಸುರಕಾ ।
ಮಿನೀಜನಂಗಳೊಳಸಂಗಸುಖಸಂಪದಮಂ ॥
ನೆನೆಯಲೊಡಂ ಪಡೆವುದಱಿಂ ।
ಮನದೊಳ್ ಪ್ರವಿಚಾರನೆನಿಸಿದಂ ಸುರರಾಜಂ ॥ ೮೧ ॥

ಕಂ ॥ ದೇವನನೆ ಪಲವು ಮೆಯ್ಯಿಂ ।
ದೇವಿಯರೋಲಗಿಸಲೆಂದು ವಿಕ್ರಿಯೆಯಿಂದಂ ॥
ದೇವಿಯರಾ ಪಡೆಯೆ ತರಂ ।
ಗಾವಳಿ ಶೃಂಗಾರನದಿಯಿನೊಗೆವಂತೊಗೆದರ್ ॥ ೮೩ ॥

ಮ ॥ ಪುದಿದಂಗದ್ಯುತಿವಾರಿಯಿಂ ದಶನಮುಕ್ತಾನೀಕದಿಂ ಸುತ್ತಿಮು ।
ತ್ತಿದತಿಸ್ಥೂಲಪಯೋಧರ ಪ್ರಕರದಿಂ ವಕ್ತ್ರೇಂದು ಸಂಭೂತಿಗಾ ॥
ಸ್ಪದಮಾಗಿರ್ಪುದಱಿಂದೆ ತೋಳ್ದೆರೆಗಳಿಂ ದೃಗ್ಮೀನದಿಂ ಮೀರಿದ ।
ಪ್ಪಿದ ಶೃಂಗಾರಸಮುದ್ರದಂತೆ ಸೊಗಯಿಕ್ಕುಂ ವಿಕ್ರಿಯಾದೇವಿಯರ್ ॥ ೮೪ ॥

ಉ ॥ ಜಾಱಿದ ಜವ್ವನಂ ತವದ ಮೆಯ್ಸಿರಿ ತೀರದ ಸೌರಭಂ ಬೆಡಂ ।
ಗಾಱಿದ ಗಾಡಿ ಕುಂದದ ವಿಳಾಸಮಡಂಗದ ವಿಭ್ರಮಂ ಕಿಲುಂ ॥
ಬೇಱಿದ ವಕ್ತ್ರದರ್ಪಣಮನಂಗನಸೂನನಿಧಾನ ಶೋಭೆಯುಂ ।
ಬೀಱಿ ಸುರೇಶ್ವರಂಗೆ ಪದೆಪಂ ಪಡೆಗುಂ ದಿವಿಜಾಂಗನಾಜನಂ ॥ ೮೫ ॥

ಭೂಮಿಗಭೀಷ್ಟಮಂ ಕುಡುವ ಕಲ್ಪಕುಜಂ ನಿಧಿ ಕಾಮಧೇನು ಚಿಂ ।
ತಾಮಣಿಯೆಂಬಿವೋಲಗಿಪುದಾ ದಿವಿಜೇಶನನಾಸುರೇಶನುಂ ॥
ಪ್ರೇಮದಿನರ್ಹನಂಘ್ರಿಗಳನೋಲಗಿಪಂ ಸಕಲಾರ್ಥಸಿದ್ಧಿಗಿಂ ।
ತೀಮಹಿಮಾಂಬುರಾಶಿ ಜಿನಸೇವೆಯೆ ಕಾರಣಮೆಂದೆ ಪೇಳ್ವವೊಲ್ ॥ ೮೬ ॥

ಮ ॥ ಸ್ತನಭಾರಾನತ ದೇವವಾರವನಿತಾ ಶ್ರೀಯೌವನಾನಂದಿ ನಂ ।
ದನದೊಳ್ ಸತ್ಫಳ ಸಂಕುಳಾನತ ಸುರೋರ್ವೀಜಾತ ದೇವಾದ್ರಿನಂ ।
ದನದೊಳ್ ಪಾದಪಯೋರುಹಾನತ ಸಭಾನೀಕಂಗಳೊಳ್ ಭಾಗ್ಯಭಾ ।
ಜನನಪ್ಪಾನತನಾಥನೊಲ್ದು ನಲಿದಂ ಜೈನಕ್ರಮಾಬ್ಜಾನತಂ ॥ ೮೭ ॥

ವ ॥ ಅಂತು ನಿರಂತರ ಸುಖಾಕ್ರಾಂತನಂತರಂಗನಾಗಿಯುಂ ಭೋಗೈಕರತನಾಗಿ ಜಿನರಾಜಪೂಜಾವಲೋಕನಾನಂದಾಶ್ರುಮಿಶ್ರಿತ ನಿರೀಕ್ಷಣನುಂ ಜಿನಚರಣಸ್ಮರಣ ಪರಿಣತಾಂತಃಕರಣನುಮಾಗಿರ್ದನನ್ನೆಗಮಿತ್ತಲ್—

ಕಂ ॥ ಶ್ರೀಪರಿಚುಂಬಿತ ಜಂಬೂ ।
ದ್ವೀಪದ ಭರತಾವನೀ ವಿಳಾಸಮುಮಾವೇ ॥
ಣೀ ಪದದಂತಿರೆ ಸುಮನ ।
ಶ್ರೀಪರಿಮಳರಾಶಿ ಕಾಶಿಯೆಸೆಗುಂ ದೇಶಂ ॥ ೮೭ ॥

ಚಂ ॥ ಬೆಳೆಯದ ಧಾನ್ಯಮುಳ್ಳಲರೊಳೂಂದದ ಪೂಗಿಡು ಕಂಪನಾಂತು ಬಂ ।
ದೆಳಸದ ತಣ್ಣೆಲರ್ ಫಲಭರಂಗಳನಾನದ ಸಾರ ಭೂರುಹಂ ॥
ಜಳರುಹಮಿಲ್ಲದಿರ್ಪ ಕೆಱೆ ನೋಡೆ ಮನೋಹರಮಲ್ಲದೂರ್ಗಣಾ ।
ವಳಿಗಳಿನೊಪ್ಪದಿರ್ಪ ಜನಸಂತತಿಯೆಲ್ಲಿಯುಮಿಲ್ಲ ದೇಶದೊಳ್ ॥ ೮೮ ॥

ಕಂ ॥ ಕೊಳರ್ವಕ್ಕಿಯ ಕಳರವದಿಂ ।
ಮಿಳಿರ್ವೆಳಲತೆಯಿಂ ತಳಿರ್ತಶೋಕೆಯಿನೆತ್ತಂ ॥
ಕುಳಿರ್ವೆಳಾವನದಿಂ ಬಗೆ ।
ಗೊಳಿಪಲ್ಲಿಗೆ ಕಾಶಿದೇಶಮಾಯ್ತುವಕಾಶಂ ॥ ೮೯ ॥

ಹರಿಯಾಕಳ್ಗಳವಿಕ್ಕುಂ ।
ಹರಿಯಾಕಳ್ಗಳವೊಲೆಲ್ಲಿಯುಂ ಮಿಗೆ ಮೊಲೆಯಿಂ ॥
ಸುರಿತರ್ಪ ಪಾಲ ಪೊನಲೊಳ ।
ಗಿರೆ ಗೋಪರ್ ಗೋಪನಂತಿರೋಲಾಡುತ್ತಂ ॥ ೯೦ ॥

ಪರಿಶೋಭೆವೆತ್ತ ನಾಗೋ ।
ತ್ಕರದಿಂದನವರತಮಲ್ಲಿ ಮಿಸುಗುವ ಸಸಿಯಿಂ ॥
ದೊರೆವೆತ್ತ ಗಂಗೆಯಿಂದೀ ।
ಶ್ವರನ ಜಟಾಜೂಟವಂತೆ ಜನಪದಮೆಸೆಗುಂ ॥ ೯೧ ॥

ಚಂ ॥ ಇದು ವಿಷಯಾಂಗನೋಚಿತ ದುಕೂಲದ ಮೇಲುದಿದಾ ಲತಾಂಗಿಯಿ ।
ಕ್ಕಿದ ಪೊಸಮುತ್ತ ಹಾರಮಿದು ಭಾಸ್ಕರ ಭೀರುತೆಯಿಂದೆ ಬಂದು ತಾ ॥
ಳ್ದಿದ ಪೆಱೆಯೊಂದು ರೂಪಮಿದು ತೋಱುವ ಪುಣ್ಯನದೀಪ್ರವಾಹಮೆಂ ।
ಬಿದನೊದವಿಪ್ಪ ಬಾಂದೊಱೆಗವೇಂ ದೊರೆಯುಂಟೆ ನದೀನದಂಗಳೊಳ್ ॥ ೯೨ ॥

ಕಂ ॥ ಸುರನದಿಯಿಂದಂ ಸುಮನರ್ ।
ಪರಿಶೋಭಿತ ಸತ್ಫಳಪ್ರಭಾಸುರ ತರುವಿಂ ॥
ಸುರಲೋಕದಂತೆ ತದ್ವರೆ ।
ಕರಮೆಸೆಗುಂ ಸುಖಸುಧಾನಿವಾಸವಿಳಾಸಂ ॥ ೯೩ ॥

ಶ್ರೀಕಾಶಿ ಸುಕವಿನಿಧಿ ಕಮ ।
ಳಾಕರದೊಳ್ ಕಮಲದಂತೆ ಕಣ್ಗೊಳಿಕುಂ ಲ ॥
ಕ್ಷ್ಮೀಕಳಿತ ವಾರಣಾಸಿ ವಿ ।
ವೇಕಲಸದ್ರಾಜಹಂಸಮೂರ್ಜಿತ ಕೋಶಂ ॥ ೯೪ ॥

ಚಂ ॥ ಕನಕ ವಿಶಾಲಶಾಲಕರದಿಂದೆ ಸಹಸ್ರಕರಾಭಿಧಾನಮಂ ।
ದಿನಕರನೊಳ್ ಸಮರ್ಥಿಸುತಮಿಂದ್ರಕುಬೇರಪುರಪ್ರಶೋಭೆಯಂ ॥
ತನಗನುರಾಗದಿಂ ತೆಗೆದುದೆಂಬಿನಮೋಱ್ಗೆಯಿನೊಳ್ಪನಾಂತ ಸೂ ।
ತನಪುರಲಕ್ಷ್ಮಿ ಪಕ್ಷ್ಮಚಳನತ್ವಮನೀಕ್ಷಿಪಗಾಗಲೀಗುಮೇ ॥ ೯೫ ॥

ಕಂ ॥ ಅಮೃತಕರಂ ಕರದಿಂದಮ್ಮ ।
ತಮನೆಱೆದವನೋವುತಿರ್ಪನತನುವ ಚಾಪ ॥
ಕ್ಕಮರ್ದನೆ ಧವಳೇಕ್ಷುಗಳೊ ।
ಪ್ಪಮನಾಳ್ದು ಪೊದಳ್ದು ಪೊಂಗಿದವು ಪೊಱವೊಳಲೊಳ್ ॥ ೯೬ ॥

ಕಂ ॥ ನಾರಂಗಂ ವನವನಿತೆಯ ।
ಹಾರಂ ಪೊಸಮುತ್ತು ಪೊರೆದವಾಕೆಯ ಕುಚ ಕಾ ॥
ಶ್ಮೀರದಿನೆನೆ ಸೊಗಯಿಸುತಂ ।
ನೇರಿದವೆನಿಸಿರ್ಪುವಲ್ಲಿ ಕಂಪಿಂ ಕೆಂಪಿಂ ॥ ೯೭ ॥

ಜಳಕೇಳಿಗೆಳಸೆ ವನವಧು ।
ಪೊಳೆವರಿಸಿನಮೆಸೆವ ಘುಸೃಣದುರುಳಿಯೆನೆ ಮನಂ ॥
ಗೊಳೆ ತಳೆದವೊಲೊಪ್ಪಿರ್ಪುವು ।
ಫಳಭರನತ ಮಾತುಳಂಗ ಜಂಬೀರಂಗಳ್ ॥ ೯೮ ॥

ಚಂ ॥ ಫಳರಸದಿಂದೆ ಮುಂಬಳೆದೆವೆಂಬಿದಱಿಂ ನವಪುಷ್ಪವಾಟಸಂ ।
ಕುಳ ಕುಸುಮಾಸವಂ ಪೊರೆಯೆ ತತ್ಫಳಮಂ ಮಧುಪಾಳಿ ಮುತ್ತೆ ಬ ॥
ಲ್ಗಿಳಿಗಳುಮಂತವಂ ಕುಸುಮವಾಟಮೆಗೆತ್ತಿ ಬಿಕೆಯ್ದು ಪಾಯ್ದುವಾ ।
ಕಳಮವಸಾಳಿಗಳ್ಗೆಸೆವ ಪಾಮರಿಯರ್ ಸಲೆ ಸೋಯಲೆತ್ತಲುಂ ॥ ೯೯ ॥

ಉ ॥ ಸೋಂಕೆ ತದಂಗರಾಗಮುಮದರ್ಂತೆ ಪರಾಗಮನೊಂದೆ ಘರ್ಮ ತೋ ।
ಯಂ ಕವಿದಂತೆ ವಾರಿಗಳನಿಂಬಿನೆ ಚುಂಬಿಸೆ ಸುಯ್ಯ ಕಂಪು ಚೆ ॥
ಲ್ವಂ ಕುಡೆ ಪತ್ತಿದಂತೆ ನವಸೌರಭಮಂ ತಳೆದಾ ಪುರಕ್ಕೆ ತ ।
ಣ್ಪಂ ಕಡುಗಂಪನೀವುತನಿಲಂ ವನಲಕ್ಷ್ಮಿಯೊಳಾಡಿ ತೀಡುಗುಂ ॥ ೧೦೦ ॥

ಕಂ ॥ ಅಭಿಮತಮನಿತ್ತು ಧರೆಗೆ ದಿ ।
ಗಿಭಕುಳಮಂ ಕುಂದಕುಮುದ ಶಶಿವಿಶದಯಶೋ ॥
ವಿಭವಮಭಿವ್ಯಾಪಿಸೆ ತ ।
ದ್ವಿಭಕುಳತೆಯನಲ್ಲಿ ನನ್ನಿಮಾಳ್ಪಿರ್ಪರದರ್ ॥ ೧೦೧ ॥

ಎತ್ತಿದ ಪಟಿಯಿಗೆ ಲೋಭ ।
ಕ್ಕೆತ್ತಿದ ಪಟಿಯಿಗೆಯದೀಯದೆಂದೆನುತಿಳೆಗೊ ॥
ಲ್ದಿತ್ತುರುಕೀರ್ತಿಧ್ವಜದೊಡ ।
ನೆತ್ತಿಸುವರ್ಪರದರಲ್ಲಿ ಮಿಗೆ ಪಟಿಯಿಗೆಯಂ ॥ ೧೦೨ ॥

ಇಟ್ಟಳಮೆನಿಸುವ ಕಂಪಿನ ।
ಘುಟ್ಟಿಯನನುಕರಿಸೆ ಕುಸುಮಶರ ಚಕ್ರಿಗೆ ಕೈ ॥
ಘುಟ್ಟಿಯನೀವಂತಿರೆ ತಾಂ ।
ಘುಟ್ಟಿಮುಗುಳ್ಚುವರುದಾರ ವಾರಾಂಗನೆಯರ್ ॥ ೧೦೩ ॥

ಉ ॥ ತೋಳ ಮೊದಲ್ಗೆ ಪೆರ್ಮೊಲೆಗದೊರ್ಮೆಯುಮುಣ್ಮುವ ಸೌರಭಕ್ಕೆ ಭೃಂ ।
ಗಾಳಿ ವಿದಾಘುನೇತ್ರದೊಡನೊತ್ತೆರಗುತ್ತಿರೆ ಸಾರ್ವ ಮೇಲುದಂ ॥
ಬಾಲೆಯರ್ಗಲ್ಲಿ ಸಂವರಿಸಲಿಲ್ಲದೆ ಘುಟ್ಟಿಮುಗುಳ್ಚಲಿಲ್ಲ ಪೊ ।
ಟ್ಟೀಲಲಿತಾಂಗಿಯರ್ಗೆನುತಮಿರ್ಪುದು ಪೌರಜನಂ ನಿರಂತರಂ ॥ ೧೦೪ ॥

ಕಂ ॥ ಪುರದ ರಮಣಿಯರ ಮಣಿನೂ ।
ಪುರದ ರವಕ್ಕೆಳಸೆ ಹಂಸೆ ಪರಿಮುಱಿಯೂಡು ॥
ತ್ತಿರೆ ಮಧುಕರನಿಕರಂ ಮುಖ ।
ಪರಿಮಳಕೆ ವಿನೋದದಿಂದೆ ಸುೞಿವರ್ಪೊಲೊಬಿಲೊಳ್ ॥ ೧೦೫ ॥

ನಡೆವೆಡೆಯೊಳ್ ಹಂಸೆಗಳು ।
ಗ್ಘಡಿಸುತ್ತಂ ನೆಲನನೊಡನೆ ನಡೆವುವು ನಯದಿಂ ॥
ನುಡಿವೆಡೆಯೊಳ್ತುಂಬಿಗಳಾ ।
ಮಡದಿಯರೆಂದಂತೆ ನುಡಿವುವೆನೆ ಪೊಗೞಿದರಾರ್ ॥ ೧೦೬ ॥

ಚಂ ॥ ಬರೆದ ವಿಳಾಸಿನೀ ಗೃಹದ ಭಿತ್ತಿಯ ಶಕ್ರಕುಬೇರ ವಾರಿಧೀ ।
ಶ್ವರರವಶಿಷ್ಟಪಿದ್ಧಮೆಸೆಗುಂ ಪುರಲಕ್ಷ್ಮಿಯನೊಪ್ಪಮುಂ ಸ್ಫುರ ॥
ನ್ನಿರುಪಮ ರತ್ನರಾಶಿಗಳನೀಕ್ಷಿಸಿ ವಾಸವನುಂ ಧನೇಶನುಂ ।
ವರುಣನುಮಲ್ಲಿ ಮೆಚ್ಚಿ ಮಿಗೆ ವಿಸ್ಮಿತ ಚೇತಸರಾಗಿ ನಿಂದವೋಲ್ ॥ ೧೦೭ ॥

ರಜತಗಿರೀಂದ್ರಮಂ ಬಳಸಿನಿಂದುಪಶೈಳಚಿತಂಬೊಲಾ ಮಹೀ ।
ಭುಜನ ನಿವಾಸಮಂ ಮಣಿ ಮರೀಚಿ ವಿಚಿತ್ರಿತ ಭಿತ್ತಿ ಭಾಗಮಂ ॥
ರಜತಮಯಾತಿ ವಿಸ್ತೃತ ಮಹೋನ್ನತ ಸಪ್ತತಳ ಪ್ರಶಸ್ತಮಂ ।
ಗಜಗತಿಸಿದ್ಧ ಶುದ್ಧ ಸುದತೀ ಗೃಹಸಂತತಿ ಸುತ್ತಿ ಶೋಭಿಕುಂ ॥ ೧೦೮ ॥

ಮೃಗಮದ ಸಾಂದ್ರಗಂಧಯುತ ಮಜ್ಜನಶಾಲೆಯಿನಿಂದು ಕುಂದಲೀ ।
ಲೆಗಳನದಿರ್ಪಲಾರ್ಪಮಳ ಭೋಜನ ಶಾಲೆಯಿನಂಗಜಾತಕೇ ॥
ಳಿಗೆ ನೆಲೆಯಾದ ಸಜ್ಜೆಯನ ಶಾಲೆಯಿನಿಷ್ಟ ವಿನೋದ ಶಾಲೆಯಿಂ ।
ಮೃಗಪತಿ ಪೀಠರತ್ನ ರುಚಿಯಿಂ ಪುದಿದೋಲಗದೊಂದು ಶಾಲೆಯಿಂ ॥ ೧೦೯ ॥

ಮ ॥ ವಿಗಳದ್ದಾನ ಸುಪೀನ ದೀರ್ಘಕರಸಾಗಾಂಗ ಪ್ರಭಾಸೀಳ ಶಾ ।
ಲೆಗಳಿಂ ರಾಜಿತ ರಾಜವಾಹನ ಗುಣಶ್ರೀ ರಾಜಿಭ್ರಾಜಿತಾ ॥
ಜಿಗಳಿಂ ಯಂತ್ರಕರಪ್ರಮುಕ್ತಕರಮುಕ್ತಾಮುಕ್ತ ಸಚ್ಛಸ್ತ್ರಶಾ ।
ಲೆಗಳಿಂ ಶೋಭೆಯನಾಂತುದಿಂತು ಪಿರಿದುಂ ಭೂಪಾಳನಿರ್ಪಾಳಯಂ ॥ ೧೧೦ ॥

ಕಂ ॥ ಸೂಸಿದ ಮಳಯಜ ಕುಂಕುಮ ।
ಕೌಸುಮಪರಿಮಳಕೆ ಬಳಸಿದಳಿವಿತತಿಗಳಿಂ ॥
ದೇಸೆವಡೆದಿರ್ದ ರಾಜ ನಿ ।
ವಾಸಾಂಗಣಮಿಂದ್ರನೀಳಖಚಿತಮೆನಿಕ್ಕುಂ ॥ ೧೧೧ ॥

ಆಪುರದಧಿಪತಿ ಸಕಳಕ ।
ಳಾ ಪರಿಣತನಶ್ವಸೇನನನುಪಮ ಶೌರ್ಯಾ ॥
ಟೋಪ ವಿಲೋಪಿತ ವೈರಿಮ ।
ಹೀಪ ಚತುರಸೇನನುಚಿತ ಸೂಕ್ತಿನಿಧಾನಂ ॥ ೧೧೨ ॥

ಕಂ ॥ ಪ್ರತಿಪಕ್ಷಮನನಿತುಮನ ।
ಪ್ರತಿಮನಯೋದ್ಯಮ ಪರಾಕ್ರಮಂ ಮರ್ದಿಸಿ ತತ್ ॥
ಕ್ಷಿತಿನಾಥಂ ಸರ್ವಂ ಸ ।
ಪ್ರತಿಪಕ್ಷಂ ವಸ್ತುವೆಂಬಿದಂ ಮಾಣಿಸಿದಂ ॥ ೧೧೩ ॥

ಮ ॥ ಕಳಿಯಂ ಕಲ್ಪವರುರ್ವರಾಪತಿ ನಿಮಿತ್ತಂ ಕಲ್ಪವಂ ಭೂಪನುಂ ।
ಗಳ ಮೂರ್ಖಂ ವಿಮುಖಂ ಸುಖಕ್ಕೆನಿಪೊಡಾರ್ಗಂ ಬಾಳ್ತೆಯಾವಿದ್ಯೆನಿ ॥
ಷ್ಫಳಮೆಂದಾ ನೃಪನಾವಗಂ ಕಳೆಗಳೊಳ್ ನಿಷ್ಣಾತನಾತಂಗನಾ ।
ಕುಳಮಾ ವಿದ್ಯೆಯೆನುತ್ತೆ ಪೊರ್ದೆ ಪೊರೆವಂ ತಾನೆಂದೊಡೇಂ ಪ್ರೌಢನೋ ॥ ೧೧೪ ॥

ಕಂ ॥ ಜಳಜಕ್ಕೆ ಮುದ್ದು ಶಶಿಮಂ ।
ಡಳಕ್ಕೆ ಪರಿಮಳಮೆಳಸಿನಿಂದೊಡೆ ತದ್ದೂ ॥
ತಳಪತಿಯ ಸೌಮ್ಯಮುಖಮಂ ।
ಡಳಕ್ಕೆ ದೊರೆಯುಕ್ಕುಮಲ್ಲದಂದವು ದೊರೆಯೇ ॥ ೧೧೫ ॥

ಸುದತಿ ಕಳಾಲಾವಣ್ಯಾ ।
ಸ್ಪದರೂಪಾದ್ಯುಚಿತ ವಿಭವಮಂ ಮುದದಿಂದಂ ॥
ಮೊದಲೊಳ್ ಬ್ರಹ್ಮಂ ತನಗಿ ।
ತ್ತುದಜಿಂದಂ ಬ್ರಹ್ಮದತ್ತೆವೆಸರಿಂದೆಸೆವಳ್ ॥ ೧೧೬ ॥

ಆ ದಂಪತಿಗಳ ಘನಪು ।
ಣ್ಯೋದಯದಿಂದಾನತೇಂದ್ರನುದಯಿಸಲಿರೆ ಶು ॥
ದ್ಧೋದರದೊಳವಧಿಯಿಂದಜೀ ।
ದಾದರದಿಂ ಬೆಸಸಿದನದನಾ ದಿವಿಜೇಂದ್ರಂ ॥ ೧೧೭ ॥

ಮ ॥ ನಿಜ ಪುಣ್ಯೋದಯದಿಂದಮಿಲ್ಲಿಗೊಗೆತಪ್ಪಂ ಸ್ವರ್ಗದಿಂ ದೇವನಿಂ ।
ತ್ರಿಜಗತ್ಪೂಜ್ಯನೆನುತ್ತಮರ್ತ್ಯವಿದಳಂ ಕೊರ್ವಿರ್ದ ಭವ್ಯೋತ್ಸವ ॥
ಧ್ವಜದಂಡಂಗಳ ಪಾಂಗು ತೋಱೆ ಕರೆದಂ ರಾಜಾಂಗಣಂ ರಂಜಿಪಂ ।
ತಮರೇಂದ್ರಂ ಬೆಸವೇಳೆ ಯಕ್ಷಪತಿ ರತ್ನಾಸಾರಮಂ ಸಾರಮಂ ॥ ೧೧೮ ॥

ವ॥ ಅಂತಾನರೇಂದ್ರನಾನತಕಲ್ಪದಿಂದಾ ದಂಪತಿಗಳಗರ್ಭಕ್ಕವತರಿಸುವ ಮುನ್ನಂ ಆಱುದಿಂಗಳ್ವರಮಶ್ವಸೇನಮಹಾರಾಜನ ರಾಜಾಂಗಣದೊಳ್ ಪ್ರತಿದಿನಂ ಮೂಱು ಕೋಟಿಯುಮರೆಯಂ ವಸುಧಾರೆಯುಂ ಸುರಿಯುತ್ತಂ ತನ್ನ ಧನದತ್ವಮಂ ನನ್ನಿಮಾಡುತ್ತ ಮಿರೆ—

ಕಂ ॥ ಆಹ್ವಾನಗುಣಗಣೇಂದ್ರಂ ।
ಶ್ರೀ ಹ್ರೀಧೃತಿಕೀರ್ತಿ ಬುದ್ಧಿ ಲಕ್ಷ್ಮಿಗಳಂ ದುಃ ॥
ಖ ಹ್ರಸ್ವಕಾರಿ ಸುಖದಾಂ ।
ಗಂ ಹೃದಕರಿ ಬೆಸಸಿದಂ ನಿಜಪ್ರಮದೆಯರಂ ॥ ೧೧೯ ॥

ವ ॥ ಅಂತು ಪದ್ಮಾದಿ ಪದ್ಮಾಕರಂಗಳೊಳ್ ಮನಂಗೊಳಿಸಿರ್ಪ ದೇವಿಯರುಮಂ ರುಚಕಾಚಳಂಗಳ ನಾನಾ ಸೂತ್ನರತ್ನರಚಿತ ರುಚಿರಪ್ರಾಸಾದಂಗಳೊಳಿರ್ಪನೇಕ ನಾಮಾಂಕಿತ ದಿಗಂಗನೆಯರುಮಂ ಬ್ರಹ್ಮದತ್ತಾಮಹಾದೇವಿಯ ಗರ್ಭಸಂಶೋಧನಮಂ ದಿವ್ಯೌಷಧಾನ್ನಪಾನಾದಿ ದ್ರವ್ಯಂಗಳಿಂ ಮಾಡಲುಂ ವಿವಿಧವಿನೋದಂಗಳಂ ತೋಱಲುಂ ಅಲಸುಗೆಯನಾಗಲೀಯದಂತು ಮನಮಱಿದೋಲಗಿಸಲುಂ ಸೌಧರ್ಮ್ಮಂ ಧರ್ಮ್ಮಾನುರಾಗದಿಂ ನಿಯಮಿಸಿ ಕಳಿಪೆ—

ಕಂ ॥ ಅಮದುರ್ಣ್ಣೂನ್ನಂ ಮುಡಿವುದು ।
ನವೋರು ಮಂದಾರ ಪಾರಿಜಾತಂ ಪವಪಿಂ ॥
ದಮದುರ್ಡುವುದೆ ದೇವಾಂಗಂ ।
ರಮಣಿಗೆ ದೇವಿಯರೆ ನಡೆವ ಪರಿಚಾರಕಿಯರ್ ॥ ೧೨೦ ॥

ಅಳವಡೆ ಸೋಗೆಯು ಕೈಯೊಳ್ ।
ವಿಳಾಸ ಲಾಸ್ಯಮನೆ ಕಲ್ತ ಹಂಸೆಗಳೆಸೆ ಕ ॥
ಣ್ಗೊಳಿಸಿರ್ದುವು ಶಿಖಿನಿಭ ಕುಂ ।
ತಳಭರೆಗಮರ್ದಮರಿಯಿಕ್ಕೆ ಚಮರೀರುಹಮಂ ॥ ೧೨೧ ॥

ವೃತ್ತಕುಚೆಗಮರಿ ಮುತ್ತಿನ ।
ಸತ್ತಿಗೆಯಂ ತಳೆಯೆ ರಾಹು ಚಂದ್ರನ ಕಳೆಯಂ ॥
ಬಿತ್ತರಿಸುತ್ತೊಡಸಿರ್ದಪ ।
ನುತ್ತಮ ಜಿನಮಹಿಮೆಯಿಂದಮೆನೆ ಮುಡಿ ಮೆಱೆಗುಂ ॥ ೧೨೨ ॥

ತಾಮರೆಯ ದಳಮನಿೞಿಸುವ ।
ಕೋಮಳೆಯಲರ್ಗಣ್ಣೊಳೆಚ್ಚಿದಳ್ಕಾಡಿಗೆಯಂ ॥
ಕಾಮಾಂಧಕಾರಮಂ ಕುಡು ।
ವಾ ಮದನನ ಬಾಣಮೆನಿಸೆ ಸುರವಧುವೊರ್ವಳ್ ॥ ೧೨೩ ॥

ಕುರುಳಂ ತಿರ್ದಿದೊಡಲ್ಲಿಯು ।
ಪರಿಮಳಕಳಿ ಮುತ್ತೆ ಮುತ್ತೆ ಕುರುಳೆಂದಳಿಯಂ ॥
ಸುರವಧು ಕೆಳಕ್ಕೆ ತೊಲಗಿಸೆ ।
ಮೊರೆದಳಿ ಬಿಡೆ ಬೆದಱಿ ನಗಿಸಿದಳ್ ಕೆಳದಿಯರಂ ॥ ೧೨೪ ॥

ತೋರ್ಪೊಡೆ ಸಿಜಮುಖಕೀ ಮಣಿ ।
ದರ್ಪಣಮೆಣೆಯೆಂದು ಪೇೞ್ವ ತೆಱದಿಂದೊರ್ವಳ್ ॥
ದರ್ಪಣಮಂ ಪಿಡಿದೆಸೆದಳ್ ।
ದರ್ಪಕವಧುವೆನಿಪ ವಧುಗೆ ಸುರವಧು ಮುದದಿಂ ॥ ೧೨೫ ॥

ಅಳವಡುವಂತಿರೆ ಕಪ್ಪುರ ।
ವಳಿಕಿನ ತಗಡಿಂದೆ ಮಾಡಿದಂತಿರೆ ಕಂಪಂ ॥
ತಳೆದ ಬಿಳಿಯೆಲೆಯನಂಬುಜ ।
ದಳದಿಂ ಪುದಿವಂತೆ ಪಿಡಿದು ಸುರಸತಿಯಿತ್ತಳ್ ॥ ೧೨೬ ॥

ಕಂ ॥ ಉರದೊಳ್ಕುಚಮಂಡಳದವೊ ।
ಲಿರೆ ಹರಿಗೆಯನಮರಿ ಪಿಡಿದು ತೀಕ್ಷ್ಣತೆಯಂ ಕೇ ॥
ಕರದಂತೆ ತಳೆದ ಬಾಳಂ ।
ಧರಿಯಿಸಿ ದೇವಿಯರೆ ಸತಿಗೆ ಮೆಯ್ಗಾಪಾದರ್ ॥ ೧೨೭ ॥

ಎಡೆಗಿರಿದಿರ್ಪುದುಮುದ್ದಂ ।
ಗಡಿಯೆಂಬೀಸುಡಿಯುಮಲ್ಲಿ ಮೊಲೆಯೊಳ ಪೆಱತಾ ॥
ವೆಡೆಯೊಳಮಿಲ್ಲೆನೆ ನಿಯಮಿಸೆ ।
ಪಡಿಯರಿಕೆಯನಾಂತರಮರಿಯರ್ ತತ್ಸಭೆಯೊಳ್ ॥ ೧೨೮ ॥

ಅಮೃತಾತ್ಮಿಕೆಯರ್ಶ್ರಾಮನಿ ।
ಪಮರಿಯರೇಕಾಸ್ಯ ರೂಪಸಂಭವ ಸುಲಯಾ ॥
ಶ್ರಮ ವಾದ್ಯಗೀತನೃತ್ಯಮು ।
ಮಮರ್ದಂ ಕುಡೆ ಸತಿಯ ಮನವನೊಸೆಯಿಸುತಿರ್ದರ್ ॥ ೧೨೯ ॥

ಮನವೊಸೆದು ಗರ್ಭ ಸಂಶೋ ।
ಧನಮಂ ದಿವ್ಯಾನ್ನಪಾನ ಭೂಷಣಶಯನಾ ॥
ಸನ ವಸನ ವಿಲೇಪನ ಮಾ ।
ಲ್ಯನಿಚಯದಿಂ ಸತಿಗೆ ಮಾಡಿದರ್ ಸುರಸತಿಯರ್ ॥ ೧೩೦ ॥

ಮ ॥ ಪ್ರಿಯದಿಂ ದಿವ್ಯಸುಸೇವ್ಯವಸ್ತುತತಿಯಿಂದಂ ಗರ್ಭಸಂಶೋಧನ ।
ಕ್ರಿಯೆಯಿಂ ದೇವಿಯರಿಂಗೆ ಚಂದ್ರಕಳೆಯಂ ನುಣ್ಪಿಟ್ಟರೆಂಬಂತೆ ಕಾಂ ॥
ತಿಯನೋರಂತೆಸೆವಂತು ತಾಳ್ದಿ ವಿಶದ ಶ್ರೀಬ್ರಹ್ಮದತ್ತಾಲತಾಂ ।
ಗಿಯದೇಂ ಲೀಲೆಯಿನಶ್ವಸೇನನೃಪನಂ ತಾಂ ಸೋಲಿಸಲ್ಸಾಲ್ತಳೋ ॥ ೧೩೧ ॥

ವ ॥ ಅಂತು ದೇವಕಾಂತೆಯರಾಕಾಂತೆಗೆ ಪಲವು ದೆವಸಂ ಪಲ ತೆಱದ ಪರಿಚರ್ಯೆಯನಾಶ್ಚರ್ಯಮಾಗೆ ಮಾಡುತ್ತಮಿರ್ಪುದುಮೊಂದುದೆವಸಮಬ್ಜಿನಿಯಂತೆ ರಜಸ್ವತಿಯುಂ ಕಾಮೋದ್ಧಾಮಪ್ರಮೋದ ಸಂಪಾದಿತ ಲಕ್ಷ್ಮೀಮತಿಯುಂ ಮಹಾಸತ್ವೋತ್ಪತ್ತಿ ನಿಮಿತ್ತಧಾರಿಣಿಯುಮಖಿಳಬಂಧುಜನಸುಖಕಾರಿಣಿಯುಮಾಗಿರ್ದು—

ಕಂ ॥ ತೀರ್ಥಜನಂಗಳಿನೆಸಗೆ ಚ ।
ತುರ್ಥಸ್ನಾನಮನಗಣ್ಯಲಾವಣ್ಯಮದ ॥
ಪ್ರಾರ್ಥಿತಮೆಸೆದಿರೆ ಜಂಗಮ ।
ತೀರ್ಥಂ ತಾನೆನಿಸಿ ಜಿನಜನನಿ ಸೊಗಯಿಸಿದಳ್ ॥ ೧೩೨ ॥

ವ ॥ ತದನಂತರಂ—

ಕಂ ॥ ಲಾವಣ್ಯಾಂಬುಧಿಯತರಂ ।
ಗಾವಳಿಯೆನೆ ದುಗುಲಮಮಳಮುಕ್ತಾಮಣಿಯೆನೆ ॥
ತವನಿಧಿಯಧಿದೇವತೆಯೆನೆ ।
ಭುವನಪ್ರಿಯೆ ದೇವಿ ಕರಮೆ ಕಣ್ಗೆಸೆದಿರ್ದಳ್ ॥ ೧೩೩ ॥

ಕಂ ॥ ಚೇತಃಪ್ರಸಾದ ಸಂಪಾ ।
ದಾತಿಶಯ ವಿಚಿತ್ರ ಶೋಭೆಯಿಂ ಪ್ರಾಸಾದ ॥
ಖ್ಯಾತಿವಡೆದ ರತಿಕಾಂತಕ್ಕ ।
ತಾತುಳತಯ್ಯಾನಿವಾಸದೊಳ್ ಸವಿಳಾಸಂ ॥ ೧೩೪ ॥

ಮ ॥ ಇರೆ ಹಂಸಾತುಳತೂಳತಳ್ಪತಳದೊಳ್ ಶ್ರೀರಾಜಹಂಸಂ ಕಳಾ ।
ಧರನುದ್ಯದ್ರುಚಿರಾಂಬರಂ ಕುಮುದಕಾಂತಾಪಾಂಗೆ ದೇವಾಂಬುಜಾ ॥
ಸ್ಯೆ ರತೀಶಪ್ರಿಯೆ ಚಂದ್ರಿಕಾಧವಳಹಾರಾಧಾರೆ ಕೋಕಸ್ತನೋ ।
ದ್ಧುರಭಾರಾನತೆ ಸೂಳ್ಗೆವಂದಳಧಿಕಾನಂದಂ ಪ್ರಿಯಂಗಪ್ಪಿನಂ ॥ ೧೩೫ ॥

ವ ॥ ಅಂತಾ ಕಾಮಿನೀಕಾಮದೇವನದೊಂದು ಸೂೞುಂ ತನ್ನ ಸೂೞುವೊಂದೆಯೆಂಬಂದದಿಂ ಬಗೆಯನುಗಿಬಗಿವಾಡುತ್ತಂ ಸೂಳ್ಗೆವಂದ ನಲ್ಲಳಂ ಸುಖಮಂ ತಳ್ಕಯಿಸುವಂತೆ ತೆಗೆದು ತಳ್ಕಯಿಸಿ ಸಕಂಟಕತನುಗಳಾಗಿಯುಮತನುರಾಗರಾಜ್ಯಸಂಪತ್ತಿಗೆ ನಿಷ್ಕಂಟಕವೃತ್ತಿಯನೀವುತ್ತಂ ಸಂಭೋಗಸಾಗರದೇಳೆಯಾವೇಳೆಯುಲೀಲೆಗನುಕೂಲಮಾಗೆ ಸುಖಸುಪ್ತರಾಗಿರೆ—

ಕಂ ॥ ಉನ್ನತನತಿಶಯ ಭದ್ರಗು ।
ಣಂ ನಿನಗುದಯಿಸುವ ತನಯನೆಂದಱಿಪುವುದಂ ॥
ಪುನ್ನಾಗಮುಮೈರಾವತ ।
ಸನ್ನಿಭಮುಂ ಸ್ವಪ್ನದಲ್ಲಿ ಗಜಗತಿ ಕಂಡಳ್ ॥ ೧೩೬ ॥

ಪಣೆಯೊಳ್ ಪತ್ತಿದ ಪಂಕಂ ।
ಪೊಣರ್ಕೆಗಿಲ್ಲಿತರ ವೃಷಭಮೆನಿಸುವ ವೃಷಭಾ ॥
ಗ್ರಣಿಯುಂ ಸಮಗ್ರಕಾಂತಾ ।
ಗ್ರಣಿ ಕಂಡಳ್ ರಾಗಮಾಗೆ ಬೆಳಗಪ್ಪಾಗಳ್ ॥ ೧೩೭ ॥

ಕರಿಶಿರದ ಮುತ್ತು ಪತ್ತಿರೆ ।
ಚರಣನಖಂಗಳೊಳೆ ವಜ್ರದಿಂ ವೆಜ್ಜಮನೊ ॥
ಪ್ಪಿರೆ ಮಾಡುವವರಸಿಜಿಸುವ ।
ಹರಿಯುಂ ಹರಿಸದೊಳಾ ಹರಿಕಟಿ ತಾಂ ಕಂಡಳ್ ॥ ೧೩೮ ॥

ಕನಕಾಬ್ಜಂ ಕನಕಾಚಳ ।
ಮೆನೆ ಮಿಸಿಸುವ ಕರಿಗಳಿಂದ್ರರೆನೆ ತನ್ನಯಿ ಮ ॥
ಜ್ಜನಮೆ ಜಿನಜನನ ಸವನಮಿ ।
ದೆನೆ ಸೊಗಯಿಪ ಸಿರಿಯ ನಯನಮಂ ಶ್ರೀ ಕಂಡಳ್ ॥ ೧೩೯ ॥

ಗುಣಯುತನಖಿಳಶಿರೋಭೂ ।
ಷಣನುದಯಿಪ ತನುಜನೆಂದು ಸೂಚಿಸುವುದನೀ ॥
ಕ್ಷಣ ಮಧುಪಸುಖದ ಪರಿಮಳ ।
ಗುಣದಾಮೋದ್ದಾಮ ಧಾಮಮಂ ವಧು ಕಂಡಳ್ ॥ ೧೪೦ ॥

ಕಂ ॥ ನಿಜ ಮುಖಚಂದ್ರದ್ಯುತಿಯಿಂ ।
ದೆ ಜಲಕ್ಕೆನೆ ತೊಳಗಿ ಬೆಳಗುವಂಗಜಯಾಭ್ರ ॥
ದ್ವಿಜಯುಮನೊದವಿಸುತುದಯಿಪ ।
ರಜನೀಕರನಂ ಚಕೋರಲೋಚನೆ ಕಂಡಳ್ ॥ ೧೪೧ ॥

ಪರಮಜಿನಹಂಸನಾದಿನ ।
ಕರೋದಯಾದ್ರೀಂದ್ರಲಕ್ಷ್ಮಿಯೆನಿಸಿದ ತನ್ನಂ ॥
ಪರಿಪೂಜಿಸಲ್ಕೆ ದಶಶತ ।
ಕರಮಂ ತಳೆದಂತಿರೆಸೆವ ರವಿಯುಂ ಕಂಡಳ್ ॥ ೧೪೨ ॥

ಜಿನರಾಜಹಂಸನೊಪ್ಪಿ ।
ರ್ಪ ನಿಜೋದರಮಾನಸಕ್ಕೆ ಸಮನೆನಿಸುವುದಂ ॥
ವನಜಾಕರಮಂ ಕಂಡಳ್ ।
ವನಜಾನನೆ ರಾಜಹಂಸಸಂಶೋಭಿತಮಂ ॥ ೧೪೩ ॥

ಅನಿಮಿಷಪತಿ ಪೂಜ್ಯನೆನಿ ।
ಪ್ಪ ನಂದನಂ ಕಣ್ಗೆ ಸುಖಮನೀ ತೆಱದಿಂದಂ ॥
ಜನಿಯಿಸುಗುಮೆನಿಸಿ ಸೊಗಯಿಸು ।
ವನಿಮಿಷಯುಗಮಂ ಝಷೋಪಮೋಕ್ಷಣೆ ಕಂಡಳ್ ॥ ೧೪೪ ॥

ಸಂಭವಿಸಿದೊಡೀಯುಂದದ ।
ಕುಂಭಾಮೃತದಿಂದೆ ನಿಜಸುತಂಗಭಿಷವಮಂ ॥
ಜಂಭಾರಿ ಮಾಳ್ಕುಮೆನಿಸುವ ।
ಕುಂಭಂಗಳನಮಳಕುಂಭನಿಭಕುಚೆ ಕಂಡಳ್ ॥ ೧೪೫ ॥

ಶುಂಭದ್ಗುಣಮಣಿನಿಳಯುಂ ।
ಗಂಭೀರಂ ವಿಪುಳ ವಿಮಳ ಹೃದಯನೆನಿಪ್ಪಂ ॥
ಸಂಭವಿಪನೆಂದು ಸೂಚಿಸು ।
ವಂಭೋಧಿಯನೆಸೆವ ಕಂಬುಕಂಧರೆ ಕಂಡಳ್ ॥ ೧೪೬ ॥

ಭಾಸುರಮಣಿ ಕೃತಶಕ್ರಶ ।
ರಾಸನಮಂ ಮೇರು ಶೈಲಶೋಭಾವಹ ಸಿಂ ॥
ಹಾಸನಮಂ ಜಿನವಿಭವನಿ ।
ಭಾಸನಮಂ ಜಿತ ಸರೋರುಹಾನನೆ ಕಂಡಳ್ ॥ ೧೪೭ ॥

ಭೋಗೀಶ ಫಣಾಮಣಿ ಗೃಹ ।
ಮಾಗಿರ್ಪ ತನೂಜನಪ್ಪನೆಂದಱಿಪುವುದಂ ॥
ಭೋಗೀಂದ್ರರುಂದ್ರ ಗೃಹಮಂ ।
ಭೋಗಿನಿಭ ಪ್ರಚುರಕಬರಿ ಕಂಡಳ್ ಮುದದಿಂ ॥ ೧೪೮ ॥

ಕಂ ॥ ಜ್ಞಾನಪ್ರದೀಪ ಜನ್ಮ।
ಸ್ಥಾನಂ ದುರಿತೇಂಧನಪ್ರಣಾಶಕರಂ ತೇ ॥
ಜೋನಿಧಿ ಜಿನನೆಂದಱಿಪುವ ।
ತಾನಿತನಿರ್ಧೂಮ ದಹನಮಂ ವಧು ಕಂಡಳ್ ॥ ೧೪೯ ॥

ಮಾನಸಮೇತಂ ಸತ್ಪಥ ।
ಯಾನಯುತಂ ಸಾಶ್ರಿತೋನ್ನತಿಪ್ರದನಪ್ಪಂ ॥
ಮಾನಿನಿ ನಿನಗೆಂದಱಿಪುಪ ।
ಮಾನಿತಮಂ ಸುರವಿಮಾನಮಂ ಸತಿ ಕಂಡಳ್ ॥ ೧೫೦ ॥

ವೃತ್ತಾತಿಶಯಗುಣಂ ಭುವ ।
ನೋತ್ತಂಸಂ ಸುಪ್ರಸನ್ನಮುಖನುದಯಿಸುಗುಂ ॥
ಮತ್ತೆನಿಸದೆಂದು ಸೂಚಿಸು ।
ವುತ್ತಮ ಮಣಿಗಣಮನಮಳಗುಣಮಣಿ ಕಂಡಳ್ ॥ ೧೫೧ ॥

ವ ॥ ನುತ್ತಮಮಳ ಧವಳವೃಷಭಂ ನಿಜಮುಖ ಕಮಳಮಂ ಪುಗುವುದುಮಂ ಕಾಣ್ಬುದುಮಾಕಾಂತೆಗೆ ತನ್ನಗಣ್ಯ ಪುಣ್ಯದೇವತೆಯೆ ತೊಟ್ಟ ಷೋಡಶಾಭರಣದಂತೆ ಮನಂಗೊಳಿಸಿ ದೃಶ್ಯಮಾದ ಷೋಡಶಸ್ವಪ್ನಂಗಳನಿತುಂ ಸತ್ಯಸ್ವಪ್ನಂಗಳೆಂದು ಕನ್ನಡಿಸಲ್ ಕನಸಿನೊಳ್ ತೋರ್ದ ದಿನಕರಂ ನೆನಸಿನೊಳ್ಪೋರ್ಪಂತುದಯ ಶಿಖರಿಶೇಖರನಾಗಿಯಾ ಜಿನಜನನಿಗಿಂದ್ರಾಣಿ ಪಿಡಿದ ರನ್ನದ ಕನ್ನಡಿಯಂತೆ ತೊಳಗಿ ಬೆಳಗುತ್ತಿರ್ಪುದುಮಾ ಪ್ರಸ್ತಾವದೊಳ್ ಪ್ರಶಸ್ತಗುಣವಿಸ್ತಾರಕನೆನಿಸಿರ್ದ ಪುಣ್ಯಪಾಠಕಂ ಬಂದು—

ಶಾ ॥ ದಾನೇಭಂ ವೃಷಭಂ ಗಜಾರಿ ಸಿರಿಧಾಮಂ ಚಂದ್ರಮಂ ಭಾಸ್ಕರಂ ।
ಮೀನಂ ಪೂರ್ಣಘಟಂ ಕೊಳಂ ಜಳಧಿ ನಾನಾರತ್ನ ಸಿಂಹಾಸನಂ ॥
ಶ್ರೀನಾಕೇಂದ್ರವಿಮಾನಮುದ್ಧಫಣಿಯಾವಾಸಂ ಮಣಿವ್ರಾತಮ ।
ನ್ನ್ಯೂನಜ್ವಾಳಿಯೆನಿಪ್ಪಿನಂ ಕನಸಿನೊಳ್ ಕಂಡರ್ಗೆ ಸನ್ಮಂಗಳಂ ॥ ೧೫೨ ॥

ವ ॥ ಎಂದು ತನ್ನ ಕಂಡ ಕನಸುಗಳಂ ಪರಿವಿಡಿಯಿಂದೋದೆ ತತ್ಫಳಮಂ ಮಂಗಳಪಾಠಕಂ ಸಾಧಾರಣೋಕ್ತಿಯಿಂ ವ್ಯಕ್ತಂ ಮಾಳ್ಪುದುಮದಂ ಕೇಳುತ್ತ ಮೆಚ್ಚುತುರ್ಮಂ ಪುಳಕದೊಡನೆರ್ಚತರ್ಪ ವಿಶೇಷೋಕ್ತಿಯಿಂ ಕೇಳಲೆಂದು ಸಮುತ್ಸುಕಚಿತ್ತೆ ನಿರ್ವರ್ತಿತ ನಿತ್ಯಮಂಗಳಕ್ರಿಯೆಯುಂ ಶೃಂಗಾರಕ್ರಿಯೆಯುಮಾಗಿ ಮನೋರಾಗದಿಂ ಮನೋವಲ್ಲಭನಲ್ಲಿಗೆ ವಂದು ಮನಕ್ಕೆ ವಂದಿರ್ದ ಕನಸುಗಳನನುಕ್ರಮದಿಂ ಸೂಕ್ತಿ ಕರ್ಣಾವತಂಸಂಗವತಂಸಂ ಮಾಳ್ಪುದುಮನಲ್ಪಹರ್ಷಮಂ ಸ್ವಪ್ನಾಧ್ಯಾಯಪ್ರಗಲ್ಭಂ ತಳೆದು ತದನಂತರಂ—

ಕಂ ॥ ಷೋಡಶ ಭಾವನೆಯಿಂದಂ ।
ಕೂಡಿಯೆ ತೀರ್ಥಕರ ಪುಣ್ಯಮಂ ನೆರಪಿದಳಾ ॥
ಚೂಡಾಮಣಿ ನಿನಗನಘಂ ।
ಕ್ರೋಡೀಕೃತಸೌಖ್ಯನುದಯಿಕುಂ ತೀರ್ಥಕರಂ ॥ ೧೫೩ ॥

ಕಂ ॥ ಎಂದು ಶುಭಸ್ವಪ್ನಫಲಮು ।
ನಿಂದೀವರಪದನೆಗಱಿಪೆ ಪುಳಕಾಂಕುರಮಾ ॥
ನಂಪಾಶ್ರುತೋಯದಿಂ ಬಳೆ ।
ದಂದದೆ ಬಳೆಯಿತ್ತು ಸತಿಯ ತನುವಲ್ಲರಿಯೊಳ್ ॥ ೧೫೪ ॥

ಸುತಮಾತ್ರಂ ಜನಿಯಿಕುಮೆನೆ ।
ಸತಿಯರ್ಗನುರಾಗಮುದಯಿಕುಂ ತ್ರೈಭುವನಾ ॥
ರ್ಚಿತನುದಯಿಕುಮೆನೆ ಹರ್ಷಮ ।
ನತರ್ಕ್ಯಮಂ ತಳೆವುದೆಂಬುದೇನಚ್ಚರಿಯೋ ॥ ೧೫೫ ॥

ವ ॥ ಅಂತು ಸಂತೋಷಪೀಯೂಷರಸತರಂಗಿತಾಂತರಂಗೆಯಾಗಿ ಮಗನ ಬರವಿಂಗೆ ಮನದೊಳ್ ಗುಡಿಗಟ್ಟಿ ನಿಜನಿವಾಸಕ್ಕೆ ಪಂದು ಸುಖದಿಂದಿರ್ಪಿನಮತ್ತಲಾನತೇಂದ್ರನಾನತಕಲ್ಪದೊಳನಲ್ಪಸುಖಾಮೃತಮನನುಭವಿಸಿ ಬಂದು ವೈಶಾಖದ ಕೃಷ್ಣಪಕ್ಷತದಿಗೆಯುಂ ವಿಶಾಖಾನಕ್ಷತ್ರಮುಂ ಪ್ರವರ್ತಿಸೆ—

ಕಂ ॥ ನಿರುಪಮಬೋಧಂ ಮತಿಯೊಳ್ ।
ಪರಿಮಳಮಂಬುರುಹ ಗರ್ಭದೊಳ್ ನೆಲಸುವವೋ ॥
ಲರಸಿಯ ಗರ್ಭದೊಳರ್ಹ ।
ತ್ಪರಮೇಶಂ ನೆಲಸೆ ಮಹಿಮೆಯುಂ ಬಳೆಯಿಸಿದಂ ॥ ೧೫೬ ॥

ವ ॥ ಅದನಿಂದ್ರನವಧಿಬೋಧದಿಂದಮಱಿದು ಬಂದು—

ಕಂ ॥ ಶ್ರೀಜಿನರಾಜಂ ನೆಲಸೆ ಸ ।
ರೋಜಾಸ್ಯೆಯ ಗರ್ಭದಲ್ಲಿ ಚೈತ್ಯಾಲಯಮಂ ॥
ಪೂಜಿಸುವಂತೆ ಶಚೀಪತಿ ।
ಪೂಜಿಸಿದನಗಣ್ಯ ಪುಣ್ಯೆಯಂ ಮಣಿಗಣದಿಂ ॥ ೧೫೭ ॥

ವ ॥ ಅಂತಮರೇಂದ್ರನಾನಂದದಿಂ ಬಲವಂದು ಬೞಿಯಂ ಬ್ರಹ್ಮದತ್ತಾಮಹಾದೇವಿಯುಮನಶ್ವಸೇನಮಹಾರಾಜನುಮಂ ವಿಚಿತ್ರ ವಸ್ತ್ರಾಭರಣಸಮಾಜದಿಂ ಪೂಜಿಸಿ ಪೊಡೆವಟ್ಟು ಪೋದನನ್ನೆಗಮಿತ್ತಲ್—

ಮ ॥ ಸ್ರ ॥ ಪ್ರಣುತಪ್ರದ್ಯೋತನದ್ಯೋತಿತ ಪೃಥುಗಗನಶ್ರೀಗಿಳಾಸ್ತುತ್ಯ ಚಿಂತಾ ।
ಮಣಿ ಭಾಸ್ವತ್ಕೋಟಿಗರ್ವಿನುತಸುರಕುಜ ಸಂಶೋಭಿತೇಂದ್ರಾಚಳಶ್ರೀ ॥
ಗೆಣೆಯೆಂಬಂತೊಪ್ಪೆ ತನ್ನಂ ತಳೆದು ಜನನಿ ತೇಜೋಮಯಂ ಲೋಕಸಂರ ।
ಕ್ಷಣ ಪುಣ್ಯಂ ಮೈವೆತ್ತಂ ವಿಬುಧ ಜನಮನಃಪದ್ಮಿನೀ ಪದ್ಮಮಿತ್ರಂ ॥ ೧೫೮ ॥

— ಗದ್ಯಂ —

ಇದು

ವಿದಿತವಿಬುಧಲೋಕನಾಯಕಾಭಿಪೂಜ್ಯ ವಾಸುಪೂಜ್ಯ ಜಿನಮುನಿ
ಪ್ರಸಾದಾಸಾದಿತ ನಿರ್ಮಳಧರ್ಮವಿನುತ ವಿನಯಜನ
ವನಜವನವಿಳಸಿತ ಕವಿಕುಳತಿಲಕಪ್ರಣೀತಮಪ್ಪ
ಪಾರ್ಶ್ವನಾಥ ಪುರಾಣದೊಳ್ ಜಿನಾರ್ಭಕ
ಗರ್ಭಾವತರಣ ಕಲ್ಯಾಣವರ್ಣನಂ

**ತ್ರಯೋದಶಾಶ್ವಾಸಂ ಸಮಾಪ್ತಂ**

---

॥ ಶ್ರೀಃ ॥

# ಚತುರ್ದಶಾಶ್ವಾಸಂ

ಕಂ ॥ ಶ್ರೀ ನವರತ್ನಾಸಾರಮು ।
ನೂನಂ ನವಮಾಸಮಪ್ಪಿನಂ ಕರೆಯೆ ವಿನೇ ॥
ಯಾನಂದಂ ತಾಯುದರದೊ ।
ಳಾನತಸುರನಿರ್ದನೆಸೆದು ಕವಿಕುಲತಿಲಕಂ ॥ ೧ ॥

ಬೇರೂರಿತು ನಿಜರುಚಿಯೆನೆ ।
ಬೇರೂರುವ ವಕ್ತ್ರ ಶಕ್ರಧನುವೆನೆ ರತ್ನಾ ॥
ಸಾರಮನೆ ಕೂರ್ತು ಕರೆಯೆ ಕು ।
ಬೇರಂ ದಿವಸಕ್ಕೆ ಮೂಱುಕೋಟಿಯುಮರೆಯುಂ ॥ ೨ ॥

ಮುನ್ನಮೆಯಱುದಿಂಗಳ್ವರೆ ।
ಗಂ ನಾಕಸ್ತ್ರೀಯರಿಸುವೆಸನನೆಸಪರ್ದೇ ॥
ವಂ ನೆಲಸೆ ಗರ್ಭದೊಳ್ತಾ ।
ಯ್ಗಿನ್ನವರೆಸಗುವ ಸಪರ್ಯೆಯಂ ಪವಣೆಪರಾರ್ ॥ ೩ ॥

ವ ॥ ಅಂತನಿಮಿಷರಪ್ಪೊಡಂ ಜಿನಾಂಬಿಕೆಗಲಸುಗೆಯನಾಗಲೀಯದನೇಕ ವಿನೋದಂಗಳಿಂ ಪ್ರಮೋದಮನುತ್ಪಾದಿಸುತ್ತಂ ಗರ್ಭಪೋಷಕಾರಿಯುಂ ಮನಸ್ತೋಷಕಾರಿಯುಮಪ್ಪ ಕಲ್ಪಕುಜಸಂಜನಿತ ಸಮಸ್ತ ವಸ್ತುವನೋಲಗಿಸುತ್ತಂ ಬೆಸಕೆಯ್ಯುತ್ತಮಿರೆ—

ಕಂ ॥ ಆ ವನಿತೆಗೆ ಮುಣ್ಣಂ ಮೆ ।
ಲ್ಪೀವಾಂಛೆಯೆ ಪುಟ್ಟಿತಿಲ್ಲ ಗರ್ಭದೊಳಿರ್ಪಾ ॥
ದೇವಂಗವನೀರಾಜ್ಯದ ।
ಸೇವನೆಯೊಳ್ ವಾಂಛೆಯಿಲ್ಲದುದನಱಿಪುವವೋಲ್ ॥ ೪ ॥

ಲಯನಿಳಯಂ ತ್ರೈಲೋಕ್ಯದ ।
ಬಯಕೆಯನವಯವದೆ ತೀರ್ಚಲಾರ್ಪಂ ತಾಯಾ ॥
ಬಯಕೆಯನಿರಲೀವನೆಯೆನೆ ।
ಬಯಕೆಗಳಾ ಗರ್ಭವತಿಗೆ ಪುಟ್ಟವೆ ಪಿರಿದುಂ ॥ ೫ ॥

ಮಳಿನತೆಯಂ ತಳೆದೊಡೆ ನಿ ।
ರ್ಮಳ ಚರಿತಂ ತಮ್ಮನೊಲ್ದು ಸೇವಿಸನೆಂದು ॥
ತ್ಪಳನೇತ್ರೆಯ ಕುಚಕಲಶಂ ।
ಗಳಱಿದ ತೆಱದಿಂದೆ ತಳೆಯದೆಸೆದವು ಕರ್ಪಂ ॥ ೬ ॥

ಕಂ ॥ ಆ ರಮಣಿಯನಾಭಿಯ ಗಂ ।
ಭೀರತ್ವಂ ಕೆಟ್ಟುದಿಲ್ಲದಂತೆ ದಲತಿ ಗಂ ॥
ಭೀರ ಗುಣರಿರ್ನೆಡೆಗೆ ಗಂ ।
ಭೀರತೆ ಪಿರಿದಪ್ಪುದಲ್ಲದೇಂ ಕೆಟ್ಟಪುದೇ ॥ ೭ ॥

ಆ ತ್ರಿಭುವನನಾಥಂ ಬೋ ।
ಧ ತ್ರಿತಯ ಸಮಗ್ರನೆಂದು ಸೂಚಿಪ ತೆಱದಿಂ ॥
ನೇತ್ರ ರಮಣೀಯಮೆಸಿಸಿ ವ ।
ಳಿತ್ರಯಮೆಸೆದಿರ್ದಪಱೆಯುದಾ ಕೋಮಳೆಯಾ ॥ ೮ ॥

ನಿರ್ದೋಷಂ ತಾಯುದರದೊ ।
ಳಿರ್ದುಮುಪದ್ರವಮನೇಸುಮಂ ಮಾಡನೆ ತಾ ॥
ನಿರ್ದವನಿಗುಪದ್ರವಮಂ ।
ಪೊರ್ದಿಸದ ಪರೋಪಕಾರಿಗದು ಪಿರಿದಾಯ್ತೇ ॥ ೯ ॥

ಬೆಳ್ಗೊಗಮಂ ಮಿಗೆ ಚಂದ್ರಮ ।
ನೊಳ್ಗಾಡುವ ಚೆಲ್ವನಾಂತು ಕಾಂತನ ಮನಮಂ ॥
ಬೆಳ್ಗಾಡಿ ಮನಸಿಜನ ಕೂ ।
ರ್ಗಾಳ್ಗೊದಲೆನಿಸಿರ್ದುದಿಂದುವದನೆಯ ವದನಂ ॥ ೧೦ ॥

ವಿಧುವದನೆಯ ನಿಜಕಾಮಿನಿ ।
ಯಧರಾಮೃತ ಸೇವೆಯಿಂದ ತಣಿದು ಗುಣಾಂಭೋ ॥
ನಿಧಿಯತ್ವನೇನನುರ್ವರಿ ।
ಗಧಿನಾಯಕನೊಪ್ಪಿದಂ ಚಕೋರದ ತೆಱದಿಂ ॥ ೧೧ ॥

ವ ॥ ಅಂತು ಮನೋಸಯನವಲ್ಲಭನ ಹರ್ಷಗರ್ಭವರ್ಮ ವಚನಸಂದರ್ಭದೊಡನೆ ಗರ್ಭಂ ಬಳೆದು—

ಕಂ ॥ ನಿರುತಂ ಗ್ರಹಮುಚಿತ ಗೃಹದೊ ।
ಳಿರೆ ಪುಷ್ಯದ ಕೃಷ್ಣಪಕ್ಷದೇಕಾದಶಿಯೊಳ್ ॥
ಬೆರಸಿರೆ ಶುಭವಾರಂ ಶುಭ ॥
ಕರಣಂ ಶುಭಯೋಗಮೆಸೆವ ಶುಭನಕ್ಷತ್ರಂ ॥ ೧೨ ॥

ಆ ಸುದತಿಗೆ ಸುಖದಿಂ ನವ ।
ಮಾಸಂ ನೆರೆದೆಸೆಯೆ ಪುಣ್ಯ ಸಂಚಯನು ಜನ್ಮಾ ॥
ವಾಸಂ ಪದಪಂಕಜನತ ।
ವಾಸವಮಣಿಮಕುಟದೀಶನಂಸ ಮಣಿಕೋಶಂ ॥ ೧೩ ॥

ಚಂ ॥ ಸುರಿಯೆ ಸುರತ್ನವೃಷ್ಟಿ ಸುರರಾಜವಧೂಜನಮತ್ತಲಿತ್ತಲುಂ ।
ಪರಿಯೆ ನೆಗಱ್ತೆವೆತ್ತ ಪುರದುರ್ವರಿ ಪೂಮಱೆಯೊಂದು ಕಂಪಿನಿಂ ॥
ಪೊರೆಯೆ ಮದಾಳಿಗಳ್ ಮೊರೆಯೆ ಮಂಗಳತೂರ್ಯರವಂ ದಿಶಾಳಿಯೊಳ್ ।
ಪರೆಯೆ ಬುಧವ್ರಜಂ ನೆರೆಯೆ ಸಂತಸದಿಂ ಪರಮೇಷ್ಠಿ ಪುಟ್ಟಿದಂ ॥ ೧೪ ॥

ಕಂ ॥ ಕುಸುಮಾಸಾರದೊಳೊಂದಿದ ।
ವಸುಧಾರೆ ತದೀಯಗಂಧದಿಂದಂ ಪುದಿದೇಂ ॥
ಪೊಸಯಿಸಿತೊ ಪೊಂಗೆ ಕಂಪುಂ ।
ಪಸರಿಸಿತೆಂಬಿವೆನೆ ಜಿನನ ಜನ್ಮೋತ್ಸವದೊಳ್ ॥ ೧೫ ॥

ವ ॥ ಆ ಶುಭಮುಹೂರ್ತದೊಳ್—

ಕಂ ॥ ನಿಮಿರ್ದಮರ್ದು ದಕ್ಷಿಣಾವ ।
ರ್ತಮನಾಂತೆಸೆದತ್ತು ವಹ್ನಿತೇಜೋಮಯ ವಿ ॥
ಕ್ರಮದಿಂ ಪ್ರದಕ್ಷಿಣಂಗೊ ।
ಳ್ಗುಮರ್ಹನಂ ಭುವನಪತಿಗಳೆಂದಱಿಪುವವೋಲ್ ॥ ೧೬ ॥

ಧಾರಿಣಿ ಗಗನಂ ನೀರಂ ।
ನೀರಜಮೆನಿಸಿತ್ತು ಸಾರಸೌರಭಕಳಿತಂ ॥
ಮಾರುತನೆಸಗಿತ್ತು ಜಿನಂ ।
ನೀರಜನುರ್ವರೆಗೆ ಸುಖದನೆಂದಱಿಪುವವೋಲ್ ॥ ೧೭ ॥

ಮ ॥ ಕರುಮಾಡಂಗಳುಮೊಳ್ಪುವೆತ್ತಪರಿಯುಂ ಪ್ರಾಸಾದಮುಂ ಚಿತ್ರಿತಾಂ ।
ಬರನೇತ್ರೋಚಿತ ಚಿನ್ನದೊಳ್ಗುಡಿಗಳಿಂ ರತ್ನಸ್ಫುರತ್ತೋರಣೋ ॥
ತ್ಕರದಿಂ ಕುಂಕುಮ ಚಂದನದ್ರವ ಘನಾದ್ರೀಭೂತಗೇಹಾಂಗಣಂ ।
ತರದಿಂ ತಳ್ತಿರೆ ರತ್ನದೊಂದು ಕಡೆಯಿಂದೊಪ್ಪಿತ್ತು ತತ್ಪತ್ತನಂ ॥ ೧೮ ॥

ಕಂ ॥ ಬಿಡುಮುತ್ತಿನ ಕಡೆಯಿಂದಂ ।
ಬಿಡೆ ಬೆಳಗುವ ರತ್ನದೀಪರುಚಿಯಿಂದಂ ಪಾ ॥
ಲ್ಗಡಲ ತಡಿಯಂದದಿಂ ಚೆ ।
ಲ್ವಿಡಿದ ಸುಧಾವಹ ಗೃಹಾಂಗಣಂ ಕಣ್ಗೊಳಿಕುಂ ॥ ೧೯ ॥

ಮ ॥ ಸುಮನೋರತ್ನ ಸುವರ್ಣವೃಷ್ಟಿಯೊದವಿಂ ರಾಜಾಂಗಣಂ ಸಾರಗಂ ।
ಧಮಯಂ ರತ್ನಮಯಂ ಸುವರ್ಣಮಯಮಾಯ್ತಿಂದ್ರಾಂಗನಾನೀಕದು ॥
ತ್ಕ್ರಮವಿನ್ಯಾಸದೊಳೊಂದಿ ಪಲ್ಲವಮಯಂ ಭಾಸ್ವನ್ನಖದ್ಯೋತಿ ಸಂ ।
ಗಮದಿಂ ಪುಷ್ಪಮಯಂ ಮುಖೇಂದುರುಚಿಯಿಂ ಪೂರ್ಣೇಂದು
ರೋಚಿನ್ಮಯಂ ॥ ೨೦ ॥

ವ ॥ ಅಂತು ಪುರಭವನಮುಂ ರಾಜಭವನಮುಮುತ್ಸವೋದ್ಭವ ನವೀನ ಶೋಭಾ ಸುಭಗಮಾಗಿರ್ಪುದುಮತ್ತಲಾ ಪ್ರಸ್ತಾವದೊಳ್—

ಕಂ ॥ ಎಱಗದೊಡಂ ಮಕುಟದ ತನಿ ।
ಯೆಱಕಂ ತನಿಯರಲಮಟೆ ಸುರೋರ್ವೀರುಹದೊಳ್ ॥
ನೆಱತನಿಯಾಸನಕಂ [ಪಂ] ।
ಪೊಱಮಟ್ಟಱಿಪಿದವು ಸುರರ್ಗೆ ಜಿನನುದ್ಭವಮಂ ॥ ೨೧ ॥

ಕಂ ॥ ಹರಿಘುಂಟಾಭೇರೀಶಂ ।
ಖರವಂ ಜ್ಯೋತಿಷ್ಕ ಕಲ್ಪಭವಭವನ ವ್ಯಂ ॥
ತರಭವನದಲ್ಲಿ ಭೋಂಕೆನೆ ।
ಪರಿವಿಡಿಯಿಂ ನೆಗೆದವಮರಲೋಕಾಶ್ಚರ್ಯಂ ॥ ೨೨ ॥

ವ ॥ ಅಂತು ತಂತಮ್ಮ ಲೋಕದೊಳಾಕಸ್ಮಿಕಂ ನೆಗಟ್ಟನೇಕಶುಭಚಿಹ್ನಂಗಳಿಂ ಶುಭಚಿಹ್ನಸಾದಯುಮಂ ತ್ರಿದಶಪತಿಗಳಱಿದುಮವಧಿಯಂ ಪ್ರಯೋಗಿಸಿ ನಿಶ್ಚಯಿಸಿ ನಿಜಾಸನಂಗಳಿನಿೞಿದಾ ತ್ರಿಲೋಕಪತಿಗೆ ಮೂಱು ಸೂೞ್ ಮನದೆಱಕದಿನೆಱಗಿ ಪೊಡೆವಟ್ಟು–

ಉ ॥ ಭಾವನರುತ್ಸವಾಕಳಿತ ಭಾವಯುತರ್ ಸುಖಭೂಮಿ ಭೌಮರು ।
ಜ್ಜೀವಿತ ಹರ್ಷರಪ್ರಮಿತ ಕಲ್ಪಜರುತ್ಪಳನಾಥ ಮುಖ್ಯ ದೇ ॥
ವಾವಳಿಯಿಂತು ದೇವ ಜನನಾಭಿಷವಕ್ಕೆ ಚತುರ್ನಿಕಾಯಭೂ ।
ಶಾವಧಿಯಾಗಿ ಕಾಯರುಚಿ ತುಂಬಿರೆ ಬಂದುದದೊಂದು ಲೀಲೆಯಿಂ ॥ ೨೩ ॥

ಕಂ ॥ ಆರ್ಮಹಿಮೆವೆತ್ತೊಡಂ ಸೌ ।
ಧರ್ಮನೆ ಜಿನರಾಜಪೂಜೆಯೊಳ್ ಮೊದಲಿಗನಂ ॥
ತರ್ಮಿಖತೆ ಭಕ್ತಿ ಭವ್ಯತೆ ।
ನೂರ್ಮಡಿಯುೞಿದಿಂದ್ರರಿಂದೆ ತನಗೆನಿಪೊಳ್ಪಿಂ ॥ ೨೪ ॥

ವ ॥ ಅಂತು ತನ್ನನೆ ಮುಖ್ಯನಂ ಮಾಡಿ ಬರಲು ವೇಡಿರ್ದ ಸುರೆರೆಲ್ಲರುಮಂ ಕೂಡಿಕೊಂಡು—

ಮ ॥ ಜಿನಜನ್ಮಾಭಿಷವೋತ್ಸವಕ್ಕೆ ನೆಗೆದಾನಂದಾಶ್ರುವಿಂ ಮಾಡಿ ಮ ।
ಜ್ಜನಮಂ ಸತ್ಪುಳಕಂಗಳಿಂ ಪಸದನಂಗೊಂಡಿಂದ್ರನಿಂದ್ರಾಣಿ ದೇ ॥
ವನಿಕಾಯಂ ಬೆರಸಂಬರಂ ಮಣಿಮರೀಚಿವ್ರಾತದಿಂ ಬಣ್ಣವಿ ।
ಟ್ಟ ನವೀನಾಂಬರದಂದದಿಂ ಪಸೆಯೆ ಬಂದಂ ಪೊನ್ಮ ದೇವಾನಕಂ ॥ ೨೫ ॥

ವ ॥ ಅಂತು ದೇವಾವಳಿ ನಭೋವಳಯು ದಿಶಾವಳಯುಮಂ ವಳಯಾದಿ ಭೂಷಣ ಮಣಿಮರೀಚಿಗಳಿನಳಂಕರಿಸುತ್ತಂ ಬಂದು—

ಮ ॥ ಬಹಿರುದ್ಯಾನದ ಬಳ್ಳಿಮಾವಲರ್ದಮಲ್ಲೀಮಾಲತೀವಲ್ಲಿ ಚಿ ।
ತ್ತಹರಂ ಶೋಭಿಸೆ ಗಂಗೆ ಸಂಗತಸುವೀನಾಪಾಂಗೆ ಕಣ್ಗೊಪ್ಪೆ ನೂ ॥
ತ್ನ ಹಟದ್ರತ್ನ ಗೃಹಾಳಿಯೊಪ್ಪಿರೆ ಸುರೇಶರ್ ಬಣ್ಣಿಸುತ್ತಿರ್ದರಾ ।
ಗ್ರಹದಿಂ ವಿಶ್ರುತ ವಾರಣಾಸಿಯುನುದಂಚದ್ರತ್ನ ವಾರಾಶಿಯಂ ॥ ೨೬ ॥

ವ ॥ ಅಂತತಿ ಮನೋಹರಮಪ್ಪ ಬಹಿಃಪುರಾಂತಃಪುರಶ್ರೀಯಂ [ಸಹಸ್ರಾಕ್ಷಂ] ಸಹಸ್ರಾಕ್ಷತ್ವಂ ಸಫಳಮಾದತ್ತೆನುತ್ತಮರ್ತಿವಟ್ಟು ನಿರೀಕ್ಷಿಸುತ್ತಮಶ್ವಸೇನಮಹಾರಾಜಂ ರಾಜಾಂಗಣದೊಳಿರ್ಪುದುಂ ಪುಳೋಮಸುತೆ ತಿರೋಹಿತ ದೇಹಿಯಾಗಿ—

ಮ ॥ ಮಿಗೆ ರಾಗಕ್ಕೆಡೆಯಾಗಿ ತನ್ನ ಬಗೆಯಂ ಶ್ರೀ ಬ್ರಹ್ಮದತ್ತಾಪ್ರಸೂ।
ತಿಗೃಹಂ ಶೋಣಮಣಿಪ್ರಭಾಪರಿವೃತಂ ಪೋಲ್ತೊಪ್ಪೆ ಪೊಕ್ಕಿಂದ್ರಕಾಂ ॥
ತೆ ಗಡಂ ಮುಂ ಪೊಡೆವಟ್ಟು ಮೂವೆ ಬಲವಂದಾಯಿರ್ವರುಂ ಬಾಳನಂ !
ಜಗದಾಶ್ಚರ್ಯವಿಳಾಸಮೂರ್ತಿಯುತನಂ ಕಣ್ಣಾರ್ವಿನಂ ನೋಡಿದರ್
॥ ೨೭ ॥

ವ ॥ ಅಂತು ನಿಜಕುವಳಯದಳಧವಳವಿಳೋಕನಕಾಂತಿಕ್ಷೀರಧಾರಾಸಹಸ್ರದಿಂ ದಭಿಷವಣಮಂ ತ್ರಿಭುವನಚೂಡಾಮಣಿಗೆ ಮಾಡಿ ತಣಿಯದೆ ಜಿನನುಮಂ ಜಿನಜನನಿಯುಮಂ ಪೊಗೞ್ದು ಬೞಿಯಂ ಭುವನಾಂಬಿಕೆಗೆ ಮಾಯಾನಿದ್ರೆಯನಿತ್ತು—

ಕಂ ॥ ಶ್ರೀಯುತ ಜಿನಮತಕಿತರಂ।
ಮಾಯಾ ಮತಮೆಂದು ಸುರರ್ಗೆ ಸೂಚಿಪ ತೆಱದಿಂ ॥
ಮಾಯಾಶಿಶುವಂ ಶಚಿ ತರ।
ಳಾಯತಲೋಚನೆಯ ಮುಂದೆ ತಂದಿಟ್ಟೊಂದಂ ॥ ೨೮ ॥

ಬಾಳಾರ್ಕನನೈಂದ್ರೀದಿ।
ಗ್ಬಾಲೆವೊಲಿಂದ್ರಾಣಿ ಮುಗಿದ ಕರಸರಸಿಜಮು ॥
ನ್ನೀಳಿಸೆ ತಳೆದಳ್ ತನ್ನಸ।
ಲೀಲ ವದನ ಹೃದಯವನಜದಂತನುರಕ್ತಂ ॥ ೨೯ ॥

ಕಲ್ಪಲತೆ ಪುಣ್ಯಫಲಮನ।
ನಲ್ಪಮನತಿವಿಪುಳ ಪುಳಕಕಳಿಕಾತತಿಗಳ್ ॥
ತಳ್ಪೊಯ್ಯೆ ತಳ್ಪ ತೆರದೊಂ।
ದೊಳ್ಪಂ ಪಡೆಯುತ್ತಮಮರಿಯರ್ಕಳ ಬಗೆಯೊಳ್ ॥ ೩೦ ॥

ಕಳಮಂಗಳ ಗೀತಂಗಳ।
ನಳವಡೆ ಪಾಡುತ್ತಮಾಡುತಂ ಮುದದಿಂ ಮಂ ॥
ಗಳವಸ್ತುವನಾಂತು ದಿಶಾ।
ಲಲನೆಯರೊಡವರೆ ವಿಳಾಸದಿಂ ನಡೆತಂದಳ್ ॥ ೩೧ ॥

ನಡೆತಂದು ಜಿನಾರ್ಭಕನಂ।
ಕುಡೆ ನೀಡಿದ ತೋಳ್ಗೆ ಚಂದನದ್ರವದಿಂ ಕಂ ॥
ಪಡರ್ದ ನಿಜಾಂಕಾಸನದೊಳ್।
ಬಿಡೌಜನಿರಿಸಿಟ್ಟು ಭಕ್ತಿಯಿಂ ಪೊಡೆವಟ್ಟಂ ॥ ೩೨ ॥

ನೀಲೀರಾಗತೆಯುಂ ಹರಿ।
ನೀಲಚ್ಛವಿ ಪಡೆಯೆ ಹರಿಗಮೈರಾವತಶುಂ ॥
ಡಾಳಕ್ಕಂ ಬಳಸಿದ ವಿಬು।
ಧಾಳಿಗಮಿಂದ್ರಾಣಿಗಂ ಜಿನಾರ್ಭಕನೆಸೆದಂ ॥ ೩೩ ॥

ಕಂ ॥ ಜಿನನಾಥನ ತನುರುಚಿಯಂ ।
ಜನಲೇಖಾಶ್ರೀಯನಾಂತು ನೋೞ್ಪಿಮರೀ ಲೋ ॥
ಚನಕನನುಭೂತಸುಖಮಂ ।
ಜನಿಯಿಸಿದುದು ಭಂಜಿತಾಂಜನಂ ಜನವಿನುತಂ ॥ ೩೪ ॥

ವ ॥ ಅಂತು ಪೂರ್ವಾದ್ರಿಯಂತಿರ್ದ ದಿವಿಜದಂತಿಯ ಪೂರ್ವಾಸನದೊಳಿರ್ದು ನಾಕಿನಾಯಕಂ ಜಿನನಾಯಕನಂ ನಿಜಾಂಕಮನೇಱಿಸಿಕೊಂಡು—

ಕಂ ॥ ಸುರಗಿರಿಗೆ ಸುರವ್ರಜಮಂ ।
ಸುರಪತಿ ಪೋಗೆಂದು ಸನ್ನೆಗೆಯ್ದೆತ್ತಿದದೋಃ ॥
ಪರಿಘಂ ಕೆಯ್ವಂದೊಪ್ಪುವ ।
ಸುರತರುಶಾಖಾವಿಳಾಸಮಂ ಪಾಲಿಸುಗುಂ ॥ ೩೫ ॥

ಸ್ರ ॥ ಬಾಲಾರ್ಕಾಂಗಘ್ಯಮಂ ನಿರ್ಮಳನಿಜಮುಕುಟಾನರ್ಘ್ಯಮಾಣಿಕ್ಯರೋಚಿ ।
ರ್ಮಾಳಾಕಾಶ್ಮೀರರಾಗೋಚ್ಚಳಿತ ಬಹಳ ಬಾಷ್ಪಾಂಬುವಿಂದಿತ್ತು ಮುನ್ನಂ ॥
ತ್ರೈಲೋಕ್ಯಸ್ವಾಮಿಯಂ ಪ್ರೇಮದೆ ಜಯನಿನದಂ ನಂದವರ್ಧಸ್ವನಾದಂ ।
ಮೂಲೋಕಕ್ಕೆಯ್ದೆ ಧಿಂಕಿಟ್ಟೊದವಿರೆ ವಿಬುಧರ್ ಬಣ್ಣಿ ಸುತ್ತಿರ್ದರಾಗಳ್ ॥೩೬॥

ವ ॥ ಆಗಳೈರಾವಣವಾರಣಕ್ಕೆ ನಿಜವಾರಣಮಂ ಪಕ್ಕು ಮಾಡಿ—

ಕಂ ॥ ತಾರಾಚಲ ಶಿಖರದೊಳಂ ।
ತಾರಾಪತಿಯುದಯಿಸಿರ್ದನೆನೆ ಬೆಳ್ಗೊಡೆಯುಂ ॥
ರಾರಾಜಿಸೆ ಸುರಕರಿ ಚೂ ।
ಡಾರತ್ನ ಜಿನಂಗೆ ಪಿಡಿದನೀಶಾನೇಂದ್ರಂ ॥ ೩೭ ॥

ವಿಮಳಿನ ದುಗ್ಧಚ್ಛಟಿಯಿಂ ।
ಕ್ರಮದಿಂದಂ ಸವನಸಮಯದೊಳ್ಪುದಿದಪುದೆಂ ॥
ದಮರ್ದಿರೆ ಪೇೞ್ವಂತೆ ಸನ ।
ತ್ಕುಮಾರಮಾಹೇಂದ್ರರಿಕ್ಕಿದರ್ ಚಮರಜಮಂ ॥ ೩೮ ॥

ಇತರೇಂದ್ರರುಮಿತರನಿಜೋ ।
ಚಿತ ಪರಿಚಾರಕತೆಯೊಳ್ಪ್ರವರ್ತಿಸುತಿರೆ ಸಂ ॥
ಗತಗೀತ ವಾದ್ಯ ನೃತ್ಯ ।
ತ್ರಿತಯಂ ಬಗೆಗೊಳಿಸೆ ಭರತಮತಪರಿಣತರಂ ॥ ೩೯ ॥

ಮ ॥ ಸ್ರ ॥ ದಿವಿಜೇಭಕ್ಕಾಯ್ತು ಮೂವತ್ತೆರಡು ಮೊಗಮವೊಂದೊಂದರೊಳ್ದಂತವೆಂಟುಂ ।
ಟವಱೊಳ್ನೀರೇಜಷಂಡಂ ಸೊಗಯಿಸುಗುಮವೊಂದೊಂದದೊಂದೊಂದ
ರೊಳ್ಸಂ ॥
ಭವಿಕುಂ ಮೂವತ್ತೆರಬ್ಜೊವವಱೆಸಳವು ಮೂವತ್ತೆರಬ್ಜಿತಿಪರ್ಮ ।
ತ್ತವಱೊಳ್ ದ್ವಾತ್ರಿಂಶದಿಂದ್ರಾಂಗನೆಯರೆಸಳೊಳೋರೊಂದರೊಳ್ ಲೀಲೆ
ಯಿಂದಂ ॥ ೪೦ ॥

ಕಂ ॥ ನಿಟ್ಟೆಯಿಪೊಡೆ ಮೆಲ್ಲಡಿಗಿವು ।
ಬಿಟ್ಟಿದವಂಬುರುಹಮೆನುತಮಿಱಿಕೆಯ್ದುವನಿಂ ॥
ಮುಟ್ಟೆವಣಮೆಂಬ ತೆಱದಿಂ ।
ಮೆಟ್ಟಿವೆ ಸುರಸತಿಯುರಾಡಿದರ್ ಸರಸಿಜದೊಳ್ ॥ ೪೧ ॥

ಭವಜಳಧಿಗೆ ಕಟ್ಟಿದ ಸೇ ।
ತುವೆನಿಸೆ ಮಣಿಕುಟ್ಟಿಮಂ ಸುರಾಚಳಮಮಂ ಮು ॥
ಟ್ಟುವಿನಂ ನೀಳ್ದಿರೆ ಪರಮೋ ।
ತ್ಸವದಿಂ ನಡೆದುದು ನಭೋಂಗಣದೊಳಮರಗಣಂ ॥ ೪೨ ॥

ಉ ॥ ಅಚ್ಚರಿ ಪುಟ್ಟೆಯುಚ್ಚರಸಿಯರ್ಕಳಿ ನರ್ತಿಸೆ ದೇವಕಾಂತೆಯರ್ ।
ನಚ್ಚಿನ ವೀಣೆಯುಂ ಮಿಡಿದು ತಮ್ಮ ಕೊರಲ್ಗಿದರಿಂಚರಂ ಕರಂ ॥
ತುಚ್ಛಮೆನಿಪ್ಪುದಂ ಪ್ರಕಟಿಪಂತಿರೆ ಪಾಡೆ ನಿಳಿಂಪವಾದಕರ್ ।
ಮೆಚ್ಚಿಸುವಂತು ಬಾಜಿಸೆ ಸುರಾಗಮುಸಾಗಿಸಿತಾಸುರಾಗಮಂ ॥ ೪೩ ॥

ವ ॥ ಅಂತು ಸುರಾಗಮನೆಂಬ್ಬೆತ್ತಂ ಸುರಾಗಮುನೆಯ್ದುವುದುಂ—

ಮ ॥ ಸ್ರ ॥ ಜಿನಚೈತ್ಯಾವಾಸದುದ್ಯತ್ಕಳಶಮೆ ಕಳಶಂ ದರ್ಪಣಂ ದರ್ಪಣಂ ಕಾಂ ।
ಚನಚಂಚತ್ತೋರಣಂ ತೋರಣಮೆನೆ ಜಿನಸಂ ಸ್ಮೇರಮಂದಾರ ಭಾಸ್ವ ॥
ದ್ಘನವೇಣೀಭಾರೆ ಭೃಂಗೀಕುಳಕಳನಿನದಂ ಗೇಯಮೆಂದೆಂಬಿನಂ ಮೇ ।
ರುನಗಶ್ರೀಲೋಕಚೂಡಾಮಣಿಯುನಿದಿರ್ಗೊಳಲ್ಕಿರ್ಪವೋಲೊಪ್ಪಿತಾಗಳ್ ॥ ೪೪ ॥

ಕಂ ॥ ತರು ಸುರತರು ಪಾಷಾಣಂ ।
ಸುರುಚಿರ ನವರತ್ನಮಿರ್ಪ ಮೃಗನಿಕರಂ ಭಾ ॥
ಸುರಸುರರೆಂಬೊಡೆ ಮಂದರ ।
ಗಿರೀಂದ್ರದೊಳ್ದೊರೆಯೆನಿಪ್ಪ ಕುಲಗಿರಿಯೊಳವೇ ॥ ೪೫ ॥

ಮಂದರಮಂ ಬಲವಪ್ಪುದ ।
ನಿಂದಱಿದೆಂ ಚಂದ್ರಸೂರ್ಯ ತಾರಾಳಿ ಜಗ ॥
ದ್ವಂದಿತ ಜಿನಮಜ್ಜನಪೀ ।
ಠಂ ದಿಟಮೆನಿಪೊಂದು ಮಹಿಮೆಗೆಡೆಯಾದುದಱಿಂ ॥ ೪೬ ॥

ಮಂದರಮನ್ಯಕುಲಾದ್ರಿಗ ।
ಳಿಂದುನ್ನತಮಾದುದಾಗಿ ಮಜ್ಜನಪೀಠಂ ॥
ಸಂದಗುಣಾಂಭೋನಿಧಿಗೆ ಜಿ ।
ನೇಂದು ಬೆಸಕೆಯ್ವವಂಗೆ ತುಂಗತ್ವಮರಿದೇ ॥ ೪೭ ॥

ಒರ್ಮೆಯುಮವನತರಭಿಮತ ।
ಶರ್ಮಪ್ರದ ಪುಣ್ಯಹರ್ಮ್ಯಮೆನಿಸಿರೆ ಬರ್ಮಂ ॥
ನಿರ್ಮಿಸಿದ ನಾಲ್ಕು ನೆಲೆಯ ಚ ।
ತುರ್ಮುಖ ಜಿನಭವನಮೆನಿಸಿ ಸುರಗಿರಿಯೆಸೆಗುಂ ॥ ೪೮ ॥

ಕಂ ॥ ಸಮುಚಿತನಂದನ ಜಿನಭವ ।
ನಮನವನೀಕ್ಷಿಸಿ ಸಮಸ್ತ ಸುರಲೋಕದೊಳಂ ॥
ಕಮನೀಯತರದಿಂ ವಿಮಾ ।
ನಮೆನಿಸಿರ್ಕುಮೆಂದೊಡದನಿನ್ನೇವೊಗಳ್ವೆಂ ॥ ೪೯ ॥

ಉ ॥ ಶ್ರೀನುತಭದ್ರಶಾಲವನನಂದನ ಸೌಮನಸೋರು ಪಾಂಡುಕೋ ।
ದ್ಯಾನವನಪ್ರಸೂನಫಳಸಂತತಿ ಸಾನುಮಣಿ ಪ್ರತಾನಮಂ ॥
ತಾನಗರಾಜನಂ ದಿವಿಜರಾಜನೆ ಪೂಜಿಸಿದಂತೆ ಚಂದ್ರತಾ ।
ರಾನಿವಹಂ ನಿವಾಳಿಸುವ ದೀಪಮದಾಗೆಸೆದತ್ತದೆತ್ತಲುಂ ॥ ೫೦ ॥

ಮ ॥ ಜಿನಪೂಜಾಷ್ಟವಿಧಾರ್ಚನಾ ವಿವಿಧ ದಿವ್ಯಾಮೋದದೊಳ್ ಸೌಖ್ಯಭಾ ।
ಜನದೇವೀಜನಗೀತದೊಳ್ ವನಲತಾಂತಾಮೋದಮಂ ಮತ್ತಭೃಂ ॥
ಗನಿನಾದಂಗಳನೊಯ್ದು ಕೂಡಿ ಸುರರೊಳ್ ಸಂಪ್ರೀತಿಯಂ ನೀಡಿ ಮೆ ।
ಲ್ಲನೆ ತೀಡಿತ್ತಘುಮೇಘುಚಾಲನ ಸುಶೀಲಂ ಶಕ್ರ ಶೈಲಾನಿಳಂ ॥ ೫೧ ॥

ವ ॥ ಅಂತು ಬಂದ ಮಂದಾನಿಳನ ಸೋಂಕುಂ ಪುಳಕಾಂಕುರಮಂ ಕೊನರಿಸೆ—

ಕಂ ॥ ನಂದನದಿಂ ನಾಲ್ಕರ ನಾ ।
ಲ್ಕುಂ ದೆಸೆಗೆ ನಾಲ್ಕು ನಾಲ್ಕು ಜಿನಮಂದಿರದಿಂ ॥
ವಂದನೆಗೆ ಯೋಗ್ಯಮೆನುತಂ ।
ಮಂದರಮಂ ಪುಗಮೆ ಬಲಹರಂ ಬಲವಂದಂ ॥ ೫೨ ॥

ಮುಡಿ ಮುಗಿಲೆನೆ ಕಡೆಗಣ್ಗಳ್ ।
ಕುಡುಮಿಂಚೆನೆ ಭೂಷಣಾಂಶು ಸುರಧನುವೆನೆ ಚೆ ।
ಲ್ವಿಡಿದ ಘನಾಗಮಲಕ್ಷ್ಮಿಯೊ ।
ಲಡರ್ದರ್ಸುರ್ದರನಗನಿತಂಬಮಂ ಸುರಸತಿಯರ್ ॥ ೫೩ ॥

ಮುಡಿಯಿಂ ತಮಾಳಲತೆ ಕೇ ।
ಸಡಿಯಿಂದಮಶೋಕಲತೆ ಸುಕೋಮಳತನುವಿಂ ॥
ನಡೆಗೊಂಡ ಕಲ್ಪಲತೆಯೆನೆ ।
ನಡೆದರ್ವನವೀಥಿಯಲ್ಲಿ ಸುರಕಾಮಿನಿಯರ್ ॥ ೫೪ ॥

ಲತೆಯೊಳ್ ತನುಲತೆ ಶಾಖೆಯೊ ।
ಳತಿಶಯ ಭುಜಶಾಖೆ ಫಲದೊಳಧರಂ ಪುಷ್ಪ ॥
ಪ್ರತತಿಯೊಳಮರಿಯರಧರ ।
ಸ್ಮಿತಮೊಂದಿರೆ ಪಿಕಶುಕಾಳಿಯರಿಯವೆ ಬನದೊಳ್ ॥ ೫೫ ॥

ಅಮರದ್ರುಮ ಸಂತಾನಕ ।
ನಮೇರು ಮಂದಾರ ಪಾರಿಜಾತದ ಮುಗುಳಿಂ ॥
ದಮೆ ಸಮೆದಕ್ಕಟ ಕಟಿಸೂ ।
ತ್ರ ಮಕುಟಕೇಯೂರಹಾರದಮರಿಯರೆಸೆದರ್ ॥ ೫೬ ॥

ಕಂ ॥ ಅಮರ್ದಿರ್ದರೆ ಪೊಸಮಲ್ಲಿಗೆ ಮುಗು ।
ಳ ಮಕುಟ ಕೇಯೂರ ಮುದ್ರಿಕಾಕಂಕಣಹಾ ॥
ರಮನೊಸೆದು ಸಮೆದು ತಳೆದೇಂ ।
ಸುಮನಃಪ್ರಿಯರಾದರಿಂತು ಸುರಕಾಮಿನಿಯರ್ ॥ ೫೭ ॥

ಮುಗುಳಂ ಕುಸುಮರಜಮುದ ಮ ।
ದಗಜದ ಮಸ್ತಕದೊಳಮರವಲ್ಲರಿಯಿಂದ ॥
ಲ್ಲಿಗೆವನವಧುವಕ್ಷತಮುಂ ।
ಮಿಗೆ ಓಷ್ಟಾತಕಮನಮರೆ ತಳಿದವೊಲೆಸೆಗುಂ ॥ ೫೮ ॥

ಭರದಿಂ ಜ್ಯೋತಿಷ್ಕರ್ಬಲ ।
ವರೆ ಸೊಗಯಿಪುದೊಂದೆ ಮೆಯ್ಯೊಳೆಲ್ಲಾ ಮೆಯ್ಯುಂ ॥
ಸುರಗಿರಿ ಸೊಗಯಿಸಿದುದು ಬಲ ।
ವರೆ ಭಾವನ ಭೌಮಕಲ್ಪಜಾಮರಕೊಲವಿಂ ॥ ೫೯ ॥

ವ ॥ ಅಂತು ಚತುರ್ಣಿಕಾಯಾಮರರ್ ಮೇರುಗಿರಿಯುಂ ಬಲವರೆ—

ಸ್ರ ॥ ಶೋಭಾಧಾಮಾಮರೇಂದ್ರಸ್ತುತ ಜಿನನಿರೆ ಕುಂಜಾಗ್ರದೊಳ್ ಭದ್ರಲಕ್ಷ್ಮೀಂ ।
ಶ್ರೀಭದ್ರಾಶಾಲಮುಂ ನಂದನಮನಮರದೃಗ್ನಂದನಂ ರುಂದ್ರ ಕೈಲಾ ॥
ಸಾಭ ಶ್ರೀಮಂದಿರಂ ಸೌಮನಸಮನೆನಸುಂ ಪಾಂಡುಕೋದ್ಯಾನಮುಂ ದೇ ।
ವೇಭಂ ಶ್ರೀಪಾಂಡುರಂ ಮುನ್ನಡರ್ದಮರ ಕುಭೃತ್ಕಂಧರಕ್ಕೆಯ್ದಿದಾಗಳ್ ॥ ೬೦ ॥

ವ ॥ ಅಂತು ಬಂದು ಪಾಂಡುಕವನದ ಪೂರ್ವೋತ್ತರ ದಿಶಾಭಾಗದೊಳಪರ ಭಾಗಂ ಬಡೆದು—

ಕಂ ॥ ಶತಯೋಜನ ವಿಷ್ಕಂಭಂ ।
ವಿತಾನಪರಿಶೋಭಿ ಪಂಚಷಡ್ಯೋಜನ ಪಿ ॥
ಸ್ತೃತಮಷ್ಟಯೋಜನೋಚ್ಛ್ರಯ ।
ಮತುಳವಿಶಿಷ್ಟಾಷ್ಟಮಂಗಳೋನ್ನತ ನಿಳಯಂ ॥ ೬೧ ॥

ಕಳಧೌತದ ಕಣಿ ಬೆಳ್ದಿಂ ।
ಗಳ ಬೆಳಗೆಯ್ಯೆನಿಸಿ ಬೆಳ್ಪನೊಳಕೊಂಡು ಮನಂ ॥
ಗೊಳಿಸಿರ್ದುದರ್ಧಚಂದ್ರನ ।
ವಿಳಾಸಮಂ ತಳೆದು ಪಾಂಡುಕಂ ಶಶಿವಿಶದಂ ॥ ೬೨ ॥

ರುಚಿರಮಣಿರುಚಿಗಳಿಂದ ।
ರ್ಧ ಚಂದ್ರಮಂಡಳಕಮಾಯ್ತು ಚಿರಪರಿವೇಷಂ ॥
ಪ್ರಚುರತರಮೆಂಬಿನಂ ಕ ।
ಣ್ಗೆ ಚಿತ್ರಮಂ ಪಡೆದು ಪಾಂಡುಕಂ ಸೊಗಯಿಸುಗುಂ ॥ ೬೩ ॥

ಕಂ ॥ ತೊಳಗುತ್ತಿರ್ದುದು ಗಂಗಾ ।
ಜಳಹ್ರದದ ನಡುವೆ ವಿಕಚಕನಕಾಂಭೋಜಂ ॥
ತೊಳಗುವ ತೆಱದಿಂ ಪಾಂಡುಕ ।
ಶಿಳಾತಳದ ಮಧ್ಯದಲ್ಲಿ ಮೃಗಪತಿ ಪೀಠಂ ॥ ೬೪ ॥

ಅದಱಿಂದಂ ನೇರ್ಗಿರಿಯೆನಿ ।
ಸಿದವೆರಡುಂ ದೆಸೆಯೊಳಭವಸವನೋತ್ಸವಮುಂ ॥
ತ್ರಿದಶಾಧಿಪರಿರ್ದೆಸಗುವ ।
ಸದಮಳಮಣಿವಿಷ್ಟರಂಗಳೆರಡೆಸೆದಿರ್ಕುಂ ॥ ೬೫ ॥

ದಿಟ್ಟಿಗೆ ದೇವಾಂಗದ ಮೇ ।
ಲ್ಕಟ್ಟುಂ ಕಂಭೆಯುದ ಕಂಬಗಟ್ಟುಂ ಚೆಲ್ವಂ ॥
ನೆಟ್ಟನೆ ಕುಡೆ ಮಂಡಪಮುಳ ।
ವಟ್ಟುದು ಲಕ್ಷ್ಮಿಯ ನಿವಾಸಗೇಹದ ತೆಱದಿಂ ॥ ೬೬ ॥

ವ ॥ ಅಂತು ಮನಂಗೊಂಡೆಸೆವ ಪಾಂಡುಕಶಿಲಾತಳದ ಮೇಲೆ ಲೀಲಾವಾಸಮಾಗೆ ವಾಸವಂ ಮಂಡಪಮುಂ ವಿರಚಿಸಿ ತನ್ಮಧ್ಯ ಪ್ರತಿಷ್ಠ ವಿಶಿಷ್ಟಸಿಂಹವಿಷ್ಟರದೊಳ್ ಜಿನಾರ್ಭಕನಂ ಪೂರ್ವಾಭಿಮುಖಮಾಗಿರೆ—

ಕಂ ॥ ಶ್ರೀವರ್ಣಂ ಪದನಖತಾ ।
ರಾವಳಿ ರುಚಿಯಿಂದೆ ತೀವೆ ಹರಿ ಮಂತ್ರಮುಖಂ ॥
ದೇವಾಧಿಪನಂ ಸ್ಥಾಪಿಸಿ ।
ಸೇವಾರತನನುಪಮಾರ್ಚನೆಯಿನರ್ಚಿಸಿದಂ ॥ ೬೭ ॥

ಧರಣೀರಮಣಿಯ ಮಕುಟದ ।
ಪರಿಶಾಖೆಯನಾಳ್ದ ಕನಕಗಿರಿಶಿಖರದೊಳೊ ॥
ಯ್ದಿರಿಸಲೊಡಂ ಕೇವಣಿಸಿದ ।
ಹರಿನೀಳಾನರ್ಘ್ಯರತ್ನಮೆನಿಸಿದನನಘಂ ॥ ೬೮ ॥

ಮ ॥ ಸುರತೂರ್ಯಂ ಮೊಳಗಾರೆ ಮಂದರದರೀದೇಶಪ್ರದೇಶಸ್ಥಿತಂ ।
ಪರಮೇಶಂ ಹರಿನೀಳರತ್ನರುಚಿಮತ್ಕಾಯಂ ಘನಶ್ರೀಯನೊ ॥
ಪ್ಪಿರೆ ತಾಳ್ದಿರ್ದು ಸಹಸ್ರಲೋಚನಮಯೂರೋತ್ಸಾಹಸಂಪಾದಕಂ ।
ಸುರಕಾಂತಾಸುಖ ಸಸ್ಯಮಂ ನೆಗಪಿದಂ ಸಾರಪ್ರಭಾಸಾರದಿಂ ॥ ೬೯ ॥

ವ ॥ ಆಗಳ್ ಧರ್ಮನಾಯಕರಪ್ಪ ಸೌಧರ್ಮನುಮೀಶಾನೇಂದ್ರನುಂ ಪರಿವಾರ ವಾಹನಾಯುಧ ವಧೂವಿಳಸಿತಾಶಾಪತಿಗಳನವರವರ ದಿಗ್ವಿಭಾಗದೊಳುಚಿತ ಪ್ರತಿಪತ್ತಿ ಪುರಸ್ಸರಮಿರಿಸಿಯುೞಿದ ನಿಖಿಳ ನಿಳಿಂಪನಾಯಕವಿತಾನಮನುಚಿತಸ್ಥಾನಂಗಳೊಳಿರಿಸೆ ಜಿನಸಿಂಹಸಿಂಹಾಸನದಿರ್ಕೆಲದಲ್ಲಿ ದಕ್ಷಿಣೋತ್ತರದಿಗ್ಭಾಗದೊಳಪರಭಾಗಂಬಡೆದಿರ್ದ ಭದ್ರಾಸನಂಗಳೊಳ್ಪಾಕಶಾಸನರೀರ್ವರುಮಿರ್ದೆಸೆಯೊಳಿರ್ದು ಜಿನಸವನೋದ್ಯುಕ್ತ ಚಿತ್ತರಾಗೆ—

ಕಂ ॥ ಕಳಕಂಠ ನಿನದದೊಡನಳಿ ।
ಗಳ ನಿನದಂ ನೆಗೆವ ತೆಱದೆ ಸುರಕರಹತ ಮಂ ॥
ಗಳ ತೂರ್ಯರವದೊಡನೆ ಮಂ ।
ಗಳ ಗೀತರವಂಗಳೊಗೆದವಮರೀ ಮುಖದಿಂ ॥ ೭೦ ॥

ಸುರಿವ ಸುಧಾವರ್ಷದ ಜಳ ।
ಧರಮೊಗೆವಂತೊಗೆದು ಗಗನತಳಮಂ ಕಾಳಾ ॥
ಗರು ಧೂಪಧೂಮಮೇನಾ ।
ವರಿಸಿತೊ ನವಗಂಧಮಗ್ನ ಮಧುಕರ ನಿಕರಂ ॥ ೭೧ ॥

ಅಮಳಕಳಮಾಕ್ಷತಂಗಳ ।
ನಮೇರುವಿನ ಚಾರುಚಂದನಾಂಬುವ ಪೊಳೆಪಿಂ ॥
ದಮೆ ನಿಜಮತಿವೊಲ್ ಸನ್ಮಾ ।
ರ್ಗಮನೆಯ್ದಿದುದಿಂದ್ರನೆತ್ತಿದರ್ಘ್ಯೋದ್ಧರಣಂ ॥ ೭೨ ॥

ವ ॥ ಅಲ್ಲಿಂ ಬೞಿಯಂ ಚೂತಪಲ್ಲವೋಲ್ಲಸಿತ ಚಂದನಚರ್ಚಾರ್ಚಿತ ವಿಕಚ ವಿಚಕಿಲಮಾಲತೀಮಾಲಾಲಂಕೃತ ಮಂಗಳ ಮಣಿದರ್ಪಣ ಪರಿಶೋಭಿತ ಸುರಸರಿದರ್ಣಪೂರ್ಣಮೆನಿಸಿರ್ದ—

ಕಂ ॥ ಪ್ರಣವೋಚಿತ ಕಲಶೋದ್ಧಾ ।
ರಣ ಮಂತ್ರದಿನಿಂದ್ರರಿರ್ವರುಂ ಕಲಶೋದ್ಧಾ ॥
ರಣಮಂ ಸ್ವಚಿತ್ತವಸತಿಗೆ ।
ಮಣಿಕಲಶಮನಿಡುವ ತೆಱದೆ ಮಾಡಿದರೊಲವಿಂ ॥ ೭೩ ॥

ಮ ॥ ಪುರುಹೂತರ್ಪರಿಚಾರಕಕ್ರಿಯೆಗಮಟ್ಟಿತ್ತರ್ಪ್ಪಿನಂ ದೇವೀಪುರ ।
ಸ್ಸರಮಿಂದ್ರಾಂಗನೆ ಮಾಲೆ ಕನ್ನಡಿ ಸೊಡರ್ ಭೃಂಗಾರಮಾದ್ರಾಕ್ಷತೋ ।
ತ್ಕರಮೆಂಬೂರ್ಜಿತ ಮಂಗಳೋಪಕರಣ ದ್ರವ್ಯಂಗಳಂ ನೀಡೆ ಭಾ ।
ಸ್ವರ ಭಾಗ್ಯಂಗೆ ಜಿನಾರ್ಭಕಂಗೆಸೆದುದಾ ಜನ್ಮಾಭಿಷೇಕೋತ್ಸವಂ ॥ ೭೪ ॥

ವ ॥ ಅಂತು ಸೌಧರ್ಮೇಶಾನರಿರ್ವರುಂ ಭರ್ಮ ನಿರ್ಮಿತ ನಿರ್ಮಳ ಕಳಶಂಗಳನೆತ್ತಿಕೊಂಡು—

ಉ ॥ ಎನಸುಂ ಕಬ್ಬಿನ ಬಿಲ್ಮನೋಭವನ ಬಾಹಾಖರ್ವಗರ್ವಂ ಮನೋ ।
ಜನ ಸಾಮ್ರಾಜ್ಯಫಳಂ ಘನಾಮ್ರಫಳಮೆಂದೇಂ ಸಾರಸರ್ವಸ್ವಮಂ ॥
ಮುನಿಸಿಂದಿಟ್ಟುಳಿಗೊಂಡು ತಂದ ತೆಱನಂ ಕೈಕೊಂಡು ಪುಂಡ್ರೇಕ್ಷುನೂ ।
ತನ ಚೂತಾದಿರಸಂಗಳಿಂ ಸವನಮಂ ದೇವಂಗವರ್ ಮಾಡಿದರ್ ॥ ೭೫ ॥

ಕಂ ॥ ಗವ್ಯಂ ಕವಿಕುಳತಿಳಕನ ।
ಕಾವ್ಯದವೊಲ್ ನವ್ಯಮನುಪಮಂ ಬುಧಜನಸಂ ॥
ಸೇವ್ಯಮೆನಿಸಿರ್ದ ಘೃತದಿಂ ।
ಭವ್ಯೇಂದ್ರರ್ ವಿಭುಗೆ ಮಾಡಿದರ್ ಮಜ್ಜನಮಂ ॥ ೭೬ ॥

ವ ॥ ಅನಂತರಂ—

ಕಂ ॥ ಅಮೃತಶ್ರೀಪ್ರಿಯನಪ್ಪಂ ।
ಗಮೃತಾಂಬುಧಿಸಾರವಾರಿಯಿಂದಭಿಷವಮಂ ॥
ಸಮೆವುದು ಕರಮುಚಿತಮೆನು ।
ತ್ತಮೃತಾಂಬುಧಿಗಾಲಿಗಟ್ಟಿನಿಂದು ನಿಳಿಂಪರ್ ॥ ೭೭ ॥

ತಳಮಷ್ಟಯೋಜನಂ ಮುಖ ।
ದಳವು ಸಮಂತೇಕಯೋಜನಕ್ರಮಮೆನಿಪು ॥
ಜ್ವಳ ಶಾತಕುಂಭ ಕುಂಭಂ ।
ಗಳನುತ್ಸವದಿಂದೆ ತಳೆದು ತನತನಗಮರರ್ ॥ ೭೮ ॥

ಬಿಳಿಯ ಮುಗಿಲೆನಿಸೆ ಶಶಿಮಣಿ ।
ಕಲಶಂ ಸುರಗಿರಿಯಿನಮೃತಜಳಧಿವರಂ ನಿ ॥
ರ್ಮಳರಾಲಿಗಟ್ಟಿನಿಂದರ್ ।
ತೊಳಪ ಶರತ್ಕಾಲಲೀಲೆಯಂ ತಾಳ್ದಿದವೋಲ್ ॥ ೭೯ ॥

ಚಂ ॥ ಮಣಿಮಕುಟಂಗಳುಂ ಮಣಿವಿನಿರ್ಮಿತ ನೂತ್ನಘಟಂಗಳುಂ ನಭೋಂ ।
ಗಣಮನೆ ತೀವಿತಂದಭಿಷವೋತ್ಸವದೊಳ್ ಜಿನದೇಹದೀಪ್ತಿಯೊ ॥
ಕ್ಷಣಸುಖಕಾರಿ ಬಾಳ ರವಿಕೋಟಿಯುನೇಱಿಪುವಂದಮುಂ ಮರು ।
ದ್ಗಣಕೆ ನಿವೇದಿಪಂತು ದಿವಿಜಪ್ರವರಂ ಪಡೆದಂತವೆತ್ತಲುಂ ॥ ೮೦ ॥

ವ ॥ ಅಂತು ಸೌಧರ್ಮಸುರಾಧಿಪನೀಶಾನಶಕ್ರನೆರಡುಂ ಪಕ್ಕದೊಳಮರಿಕೆವೆತ್ತ ಮರರಾಲಿಗಟ್ಟಿನಿಂದು—

ಚಂ ॥ ಪರಿದು ಪಯಃಪಯೋಧಿಗಮರಾವಳಿ ರತ್ನಘಟಂಗಳಿಂದಮಾ ।
ತುರದೊಳೆ ತೀವಿ ತಂದು ಕುಡೆ ತಾಳ್ದಿ ಪೊದಟ್ಟಿ ಭುಜಪ್ರಜಂಗಳಿಂ ॥
ಸುರಗಿರಿಕಾಂತಕಲ್ಪತರುವಿಂಗೆಱೆವಂತು ಸುಧಾಂಬುವಂ ಸುರೇ ।
ಶ್ವರನನುರಾಗದಿಂ ಸುರಿಯೆ ರಂಜಿಸಿದತ್ತು ಜಿನೇಂಪ್ರಮಜ್ಜನಂ ॥ ೮೧ ॥

ಕಂ ॥ ನೀಳನಗಮೆನಿಸಿ ಕಾಂಚನ ।
ಶೈಲಂ ಮೊದಲಲ್ಲಿ ಜಿನತನುಪ್ರಭೆಯಿಂದಂ ॥
ಕೈಲಾಸಮೆನಿಸಿತೊದವಿದ ।
ಪಾಲಿಂ ಜಿನಜನನಸವನಮೇನಚ್ಚರಿಯೋ ॥ ೮೨ ॥

ತಮತಮಗಾಗಳ್ ತಂದೀ ।
ವಮೃತದಿನಮರೇಂದ್ರರೆಸಗೆ ಸವನಮದೆಸೆದ ॥
ತ್ತಮರಾಪಗೆ ಪೊಜಪೊಣ್ಮುವ ।
ಹಿಮವದ್ಗಿರಿಯೆನಿಸಿ ಹೇಮಗಿರಿ ತತ್ಕ್ಷಣದೊಳ್ ॥ ೮೩ ॥

ಚೆಂಬೊನ್ನ ಘಟಂಗಳಿನಮೃ ।
ತಾಂಬುಧಿಯಂಬುಗಳನಾಂತು ಪವನಜವದಿನಾ ॥
ದಂ ಬಿಡೆ ತಂದು ಮರುತ್ತುಗ ।
ಳಿಂಬಭಿಧಾನಮನೆ ನನ್ನಿಮಾಡಿದರಮರರ್ ॥ ೮೪ ॥

ಕಂ ॥ ಘನ ಪಾಂಡುಕಮದೆ ಪಾಂಡುರ ।
ಮೆನಿಸಿದುದಿಲ್ಲುಟಿದ ಸೌಮನಸನಂದನ ಭೂ ॥
ವಿನುತಶ್ರೀಭದ್ರಾಶಾ ।
ಸುನಂದನಮುಮೆನಿಸಿತಭವಸವನಾಮೃತದಿಂ ॥ ೮೫ ॥

ಕರಮೆಸೆದುದು ಜಿನಸೇವಾ ।
ಪರಿಣತ ಪುರುಹೂತ ಪುಣ್ಯವಾರಾಶಿಯೆ ಬಿ ॥
ತ್ತರಿಪಂತೆ ನೆಗೆವ ಸವನಾಂ ।
ಬುರಾಶಿಯೊಳ್ ಯಾನಪಾತ್ರದಂತೆ ವಿಮಾನಂ ॥ ೮೬ ॥

ಚಂ ॥ ಅನಿಮಿಷ ಕೋಟಿಯಿೂವಮೃತಪೂರ್ಣ ಸುವರ್ಣಘಟಪ್ರಕೋಟಿಯಂ ।
ಘನಭುಜಕೋಟಿಯಿಂ ತಳೆದು ಮಜ್ಜನಮಂ ಶಿಶುಗೀಯೆ ಶಕ್ರನಾ ॥
ವನೊ ಶಿಶುಗಿಂತು ಮಾಡಿದವನೆಂಬರ ವಾಗ್ಭ್ಯಮನೊಟ್ಟಿಸಿತ್ತು ಬಾ ।
ಳನ ನರುಸುಯ್ಯ ಗಾಳಿಯೊಳೆ ಪಾರುವ ದೇವವಿಮಾನಸಂಕುಳಂ ॥ ೮೭ ॥

ಕಂ ॥ ಅಮೃತಾಂಬುಪೂರ್ಣ ಮಣಿಕಳ ।
ಶಮನನಿಮಿಷರೆನಿತನೀವರನಿತನೆ ಭುಜದಂ ॥
ಡಮನೆ ಪಡೆದಾಂತೊಡಂ ಸ್ನಾ ।
ನಮನೆಸಗಿದರೇಕಚಿತ್ತದಿಂ ವಿಭುಗಿಂದ್ರರ್ ॥ ೮೮ ॥

ಚಂ । ತನು ಸವನಾಮೃತಾಂಭದೊಳೆ ತೇಂಕಿರೆ ನಿರ್ಜರನಾಮಮಂತದಂ ।
ಮನದೊಳು ಭಾವಿಸುತ್ತಮಿರೆ ಸುವ್ರಜದೊಳ್ಸುಮನೋಭಿಧಾನಮಂ ॥
ತನುಗತಮಾದುದೆಂದೆನಿಸಿ ರಾಜನಮಜ್ಜನವೀಕ್ಷಣೇಯಮಾ ।
ಜಿನತನು ಮಾಡಿದತ್ತನಿಮಿಷತ್ವದೊಳರ್ತಿಯಿನೀಕ್ಷಿಪೇಂದ್ರರೊಳ್ ॥ ೮೯ ॥

ಉ ॥ ಕ್ಷೀರಪಯೋಧಿರತ್ನಘಟಕೋಟಿಗಳಂ ಸುರಕೋಟಿ ತೀವಿ ನಿ ।
ರ್ಣೀರಮದಾಗೆ ತಂದೊಡಮನಿಂದ್ಯ ಜಿನಾಭಿಷವೈಕಯೋಗ್ಯವಿ ॥
ಸ್ತಾರಮನಾಂತೆನೆಂಬತುಳರಾಗರಸಾಮೃತದಿಂದೆ ಮತ್ತೆ ತಾಂ ।
ಪೂರಿಪುದಲ್ಲದಂದು ಜಲಮೆಲ್ಲಿಯದೆಂದೆನಿಸಿತ್ತು ಮಜ್ಜನಂ ॥ ೯೦ ॥

ಕಂ ॥ ಅಮೃತದಿನರ್ಹನ್ನಾಗನ ।
ನಮರೇಂದ್ರಂ ಮುದದೆ ಮಜ್ಜನಂಬುಗಿಸಿ ದಿಶಾ ॥
ಸಮುದಯನಾಗಂಗಳನೆ ।
ಯ್ದೆ ಮಜ್ಜನಂಬುಗಿಸಿದಂ ಯಶಸ್ಸುಧೆಯಿಂದಂ ॥ ೯೧ ॥

ವ ॥ ಅಂತು ನಿರಂತರ ಪ್ರವರ್ಧಮಾನಾನೂನ ಸುಧಾಪ್ರಚುರಪ್ರವಾಹಂಗಳಿಂ ಜಿನಗೇಹಂಗಳಂ ಸುಧಾಧವಳಿತಂಗಳಂ ಮಾಡೆಯುಂ, ಮೇರುವಂ ಪುಷ್ಪಿತನಮೇರುವೆನಿಸೆಯುಂ, ಪುಣ್ಯಸಸ್ಯಕ್ಷೇತ್ರಮಪ್ಪಂತಾವರಿಸೆಯುಂ, ಮೇಗಣ್ಗೆ ನೆಗೆದ ಸುಧಾಬಿಂದುಸಂದೋಹಂ ಬೇರೊಂದು ಲೋಕನೀಯ ಜ್ಯೋತಿರ್ಲೋಕಮನಾಕರ್ಷಿಸೆಯುಂ, ದೆಸೆದೆಸೆಗೆ ಸಿಡಿಲ್ದ ಸುಧಾಶೀಕರಂಗಳ್ ದಿಶಾಕರಿಗಳ ಕೊರಳ್ಗೆ ನಕ್ಷತ್ರಮಾಲೆಯನೋಲಗಿಸೆಯುಂ,

ಕ್ಷೀರವಾರಿಧಿವಾರಿಯಿಂದನಂತವೀರ್ಯರ್ಗಂಗೆ ಲೋಕಾಶ್ಚರ್ಯಮಪ್ಪಂತು ವಿಕ್ರಿಯಾವಿಚಕ್ಷಣರಪ್ಪ ಸಹಸ್ರೇಕ್ಷಣರ್ ಮಜ್ಜನಮಂ ನಿಮಿರ್ಚಿ ಜಗನ್ಮಂಗಳಮುಖ್ಯಂಗೆ ಘನೀಭೂತಚಂದ್ರಾತಪದಂತೆಯುಂ ಪಿಂಡೀಭೂತ ಶಶಿಮಣಿಪ್ರಸೂತ ಸಲಿಲಂಗಳಂತೆಯುಂ ಪಾಂಡುರತೆಯನೊಳಕೊಂಡು—

ಚಂ ॥ ಬೆಳಲ ಪೊದಲ್ದಿ ಪಣ್ಣ ತನಿಗಂಪುಮನಿಂಪುಮನಾಳ್ದು ಬೆಳ್ಪುಗಿ ।
ಲ್ಗಳನಿಟಿಕೆಯ್ದು ಸಾಂದ್ರ ಘನಚಂದ್ರಿಕೆಯಂ ನೆರೆ ಚುನ್ನವಾಡಿ ಪ ॥
ಜ್ಜಳಿಸುವ ಪುಣ್ಯಪುಂಜದವೊಲೊಪ್ಪುವ ಮಾಹಿಷಮಪ್ಪ ಸಾರಮಂ ।
ಗಳವಿಧಿಗಾದ್ಯಮಾದ ದಧಿಯಿಂ ಜಿನಮಜ್ಜನಮಂ ನಿಮಿರ್ಚಿದರ್ ॥ ೯೨ ॥

ವ ॥ ಅಂತುಮಲ್ಲದೆ—

ಮ ॥ ಮಿಗೆ ಪಂಚೇಷುಗೆ ಬಾಣಮಾಗಿ ತನುವಂ ಮುಂ ಪೊರ್ದಲಂಜಿರ್ದ ಮ ।
ಲ್ಲಿಗೆ ಸೇವಂತಿಗೆ ಜಾದಿ ಕುಂದಮಿವು ದಧ್ಯಾಕಾರದಿಂ ಕಂಪು ಕೆಯ್ ॥
ಮಿಗುವನ್ನಂ ಪುದಿವಂತೆ ತೋರ್ಪ ದಧಿಯಿಂದಂ ಸ್ನಾನಮಂ ಜ್ಞಾನವಾ ।
ರ್ಧಿಗೆ ನಿರ್ಧೂತತಮಸ್ತಮಂಗೆ ಜಿನಪಂಗುತ್ಸಾಹದಿಂ ಮಾಡಿದರ್ ॥ ೯೩ ॥

ವ ॥ ಅಂತು ಶಶಿಕಾಂತದಧಿಯಿಂ ಗುಣಮಣಿಭಾಸ್ವದುದಧಿಗೆ ವಿಬುಧವಿಭುಗಳಭಿಷವಣಮನೊಡರ್ಚಿ ಸಮನಂತರಂ ಕಳಧೌತಕಳಶಂಗಳನೆತ್ತಿಕೊಂಡು—

ಮ ॥ ಕುಮುದಾಂಭೋಜ ಲವಂಗಜಾತಿಫಲವಲ್ಲೀಪತ್ರಕರ್ಕೋಳ ಕುಂ ।
ಕುಮ ಕಾಳಾಗರು ಕುಂದರುಷ್ಕಮಳಯಪ್ರೋದ್ಭೂತ ಕರ್ಪೂರ ಶ ॥
ಕ್ರಮಹೋದ್ಯಾನ ಸುಗಂಧವಸ್ತು ವಿಳಸತ್ತೀರ್ಥಾಂಬುವಿಂದಿಂದ್ರರು ।
ತ್ತಮ ತೀರ್ಥಪ್ರಭುಗರ್ತಿಯಿಂದೆಸಗಿದರ್ ಗಂಧೋದಕ ಸ್ನಾನಮಂ ॥ ೯೪ ॥

ಪರಿಲಿಪ್ತಂ ಹರಿಚಂದನಂ ಹರಿಯ ಚಿತ್ತಾಹ್ಲಾದಮಂ ಮಾಡಿ ತಾ ।
ಳ್ದಿರೆ ತನ್ನಾಮಮನೆಯ್ದೆ ಕಾರ್ಷ್ಣ್ಯ ಲಘುತಾ ಸಂಪತ್ತಿಯಂ ಪೋಲ್ತು ತಾ ।
ಳ್ದಿರೆ ಕಾಳಾಗರುವರ್ಹದಂಗರುಚಿಗಾತೀರ್ಥೇಶ್ವರಂಗೊಲ್ದು ಬಂ ।
ಧುರಗಂಧಂಗಮರೇಂದ್ರರಂದೆಸಗಿದರ್ ಗಂಧಾಂಬುವಿಂ ಸ್ನಾನಮಂ ॥ ೯೫ ॥

ಕಂ ॥ ಪರಮಾನುರಾಗರಸದವೊ ।
ಲಿರೆ ಕುಂಕುಮಕಳಿತಗಂಧಜಳಮದರೊಳ್ ಸಿ ॥
ರ್ಭರ ಭಕ್ತಿಯೊಳೋಲಾಡು ।
ತ್ತಿರೆ ಸಮನಿಸಿತಮರಸಮಿತಿಗವಭೃತಸವನಂ ॥ ೯೬ ॥

ಸುರಶೈಲಶಿಲಾಸ್ಫಾಳನ ।
ಭರದಿಂ ದೆಸೆದೆಸೆಗೆ ಪಾಯ್ವ ಘುಸೃಣಾರುಣ ಬಂ ॥
ಧುರಗಂಧೋದಕದಿಂ ದಿ ।
ಕ್ಪರಿಪಾಳಕತತಿಗಮಾದುದವಭೃತ ಸವನಂ ॥ ೯೭ ॥

ವ ॥ ಅಂತು ಸುರಭಿಗಂಧ ಬಂಧುರಗಂಧಜಳಂಗಳಿಂದಭಿಷವಣಮಂ ನುತಿಪ್ರವಣರ್ ಮಾಡಿ—

ಕಂ ॥ ಕುಲಿಶಪತಿ ಸುರಭಿತರಜಳ ।
ಮಳಯಜ ಕಳಮಾಕ್ಷತ ಪ್ರಸೂನ ಸುಧಾನ್ನೋ ॥
ಜ್ವಳಧೂಪದೀಪ ಫಳಸಂ ।
ಕುಳದಿಂ ಜಿನಪದಪಯೋಜಮಂ ಪೂಜಿಸಿದಂ ॥ ೯೮ ॥

ವ ॥ ಅಂತು ವಿಶಿಷ್ಟಾಷ್ಟವಿಧಾರ್ಚನೆಗಳಿನರ್ಚಿಸಿ—

ಕಂ ॥ ಅಮೃತದೊಳಟ್ಟಿ ವೊಲರೆಬರ್ ।
ಸಮನಿಸೆ ಸುಖಮುನ್ಯವಸ್ತುವಿಂ ಜಿನಪತಿ ನಿ ॥
ನ್ನಮಳ ಸವನಾಮೃತದೊಳ ।
ಟ್ಟಿಮರರ ನಿರತಿಶಯ ಸುಖಮುದನೇವೊಗಟ್ವೆಂ ॥ ೯೯ ॥
ಭಾವಿಸೆ ನಿನಗಭಿಷವಮಂ ।
ದೇವೇಂದ್ರಂ ಮಾಡಿ ಕೂಡೆ ಮೂಲೋಕಮುಮಂ ॥
ಪಾವನಮೆನಿಸಿದನದಱಿಂ ।
ಪಾವನತೆ ವಿಚಿತ್ರಮಲ್ತೆ ಜಿನಪತಿ ನಿನ್ನಾ ॥ ೧೦೦ ॥

ವ ॥ ಎಂದಿಂತು ನಿಳಿಂಪನಾಯಕಂ ನಿಳಿಂಪಸಂಪಾದಿತ ಸವನಾರ್ಚನಸ್ತವನ ಪರಿಸಮಾಪ್ತಿ ಸಮಯಾನಂತರಂ—

ಕಂ ॥ ದೇವಾಂಗಾಮೃತಕಣಮಂ ।
ದೇವಾಂಗದಿನೊತ್ತಿ ಶಚಿ ವಿಭೂಷಿಸಿದಳ್ ತಾ ॥
ರಾವಳಿಯುಂ ನೂಂಕಿ ರವಿ ।
ಶ್ರೀವಿಶದಾಂಬರಮನಂಶುವಿಂ ಭೂಷಿಪವೊಲ್ ॥ ೧೦೧ ॥
ತೊಳಗುವ ಭಾಳದೊಳಿಂದ್ರನ ।
ಕುಲವಧುವೀತ್ರಿಭುವನಾಧಿಪತಿಗೆ ಜಗ ॥
ತ್ತಿಳಕಾಂಘ್ರಿನಖಾಂಶುಗೆ ಮುದ ।
ದೊಳೆ ಪಟ್ಟಂಗಟ್ಟುವಂತೆ ತಿಳಕಮನಿಟ್ಟಳ್ ॥ ೧೦೨ ॥
ಹಾರಂ ಚೂಡಾಮಣಿ ಕೇ ।
ಯೂರಂ ಕಂಠಿಕೆ ಸುರತ್ನ ಮುದ್ರಿಕೆ ಲಲಿತಾ ॥
ಕಾರಕ್ಕೆ ಮುದ್ರೆಯೆನೆ ಶ್ರಿಂ ।
ಗಾರಸಮುದ್ರಂಗೆ ತುಡಿಸಿದಳ್ ಶಚಿ ಮುದದಿಂ ॥ ೧೦೩ ॥
ವರಸಹಜವಿದ್ಧಕರ್ಣಂ ।
ನಿರವಿಸೆ ನಿಜಮುಪ್ಪ ಬೋಧಮಂ ತುಡಿಸಿದರಾ ॥
ದರದೊಳೆ ಮಣಿಕುಂಡಳಮಂ ।
ಸರಸ್ವತೀಕರ್ಣಕುಂಡಳಂಗೊಲವಿಂದಂ ॥ ೧೦೪ ॥
ಜಿನಘನಜಘನಕ್ಕಿಂದ್ರಾಂ ।
ಗನೆ ನಯನಮಯೂರ ಪಾರ್ಶ್ವವರ್ಷೋತ್ಕರ್ಷ ॥
ಕ್ಕೆನಸುಂ ಸೊಗಯಿಪ ಸೌದಾ ।
ಮಿನಿಯೆನೆ ಕಟಿಸೂತ್ರಮಂ ತೊಡರ್ಚಿದಳಾಗಳ್ ॥ ೧೦೫ ॥

ಕಂ ॥ ಹರಿವಧು ನೂಪುರಮಂ ಜಿನ ।
ಚರಣದೊಳಳವಡಿಸಿ ತಳೆಯೆ ತಿರದೊಳ್ ಮಣಿಶೇ ॥
ಖರಮೆನಿಸಿತಂತೆ ಪೂಜ್ಯಪ ।
ದರನಾರಾಧಿಪ ಜನಕ್ಕೆ ಪೂಜ್ಯತೆಯುರಿದೇ ॥ ೧೦೬ ॥

ಮ ॥ ಪುರುಹೂತಪ್ರಿಯೆ ಪುಣ್ಯಮೂರ್ತಿಗೊಲವಿಂದಂ ಷೋಡಶಸ್ವರ್ಗದೊ ।
ಳ್ದೊರೆಯಿಲ್ಲೀಕ್ಷಿಪೊಡೆಂಬುವಂತುಡಿಸೆ ಚೆಲ್ವಂ ನೀಡುತಂ ಷೋಡಶಾ ॥
ಭರಣಂ ಷೋಡಶಭಾವನಾನಿರತನಾದಂ ತೀರ್ಥನಾಥಂ ಗುಣಾ ।
ಭರಣಂ ಮುನ್ನಮೆನುತ್ತೆ ಪೇಳ್ವ ತೆಱದಿಂ ಚೆಲ್ವಾದವತ್ಯುಜ್ವಳಂ ॥ ೧೦೭ ॥

ವ ॥ ಅಂತು ನಿರ್ಭರಭಕ್ತಿಯಿಂ ಸರ್ವಜ್ಞನಂ ಸರ್ವಾಭರಣಭೂಷಿತನಂ ಮಾಡಿ ಇಂದ್ರಾಣಿಯೈರಾವಣಾರೂಢನಪ್ಪ ನಿಜಪ್ರಿಯೋತ್ಸಂಗಸಂಗತನಂ ಮಾಡಿದಾಗಳ್—

ಕಂ ॥ ಸುರಭಿಶುಚಿಸುಭಗತೇಜರ್ ।
ಪರಮಾಣುಗಳೆಲ್ಲಮಲ್ಲಿ ನೆಲಸಿದುವೆನೆಯ ॥
ಚ್ಚರಿವಟ್ಟು ಸಹಸ್ರಾಕ್ಷಂ ।
ನಿರೀಕ್ಷಿಪುದು ಯುಕ್ತಮೆನೆ ಜಿನನನೀಕ್ಷಿಸಿದಂ ॥ ೧೦೮ ॥

ವ ॥ ಅಂತಪ್ರತಿಮ ರೂಪಸೌಂದರ್ಯಮಂ ಸಂಕ್ರಂದನಂ ನೋಡಿ ಪರಮಾನಂದ ಪುಳಕಮಂ ತಳೆಯುತ್ತಂ—

ಕಂ ॥ ಸರ್ವರ್ತುಕ ವನಶೋಭಿತ ।
ಗೀರ್ವಾಣಾಚಲದೊಳಿಂದ್ರನಮರಸಮೇತಂ ॥
ನಿರ್ವರ್ತಿತ ಜಿನಸವನಂ ।
ನೇರ್ವಡಿಪೊಡೆ ವಾರಣಾಸಿಗಭಿಮುಖನಾದಂ ॥ ೧೦೯ ॥

ವ ॥ ಅಂತನೇಕ ನಾಕಲೋಕಾನೀಕ ಘನಧ್ವನಿಗಳ್ ನೆಗಱೆ ನೆಗಳ್ತೆವೆತ್ತ ವಾರ ಣಾಸಿಗಭಿಮುಖನಾದಾಗಳ್—

ಕಂ ॥ ಸುರಪತಿಕೃತಾಭಿಷವದು ।
ಗ್ಧರವಂ ಸುರಪಟಹರವಮುಮರರಮಣೀಗೇ ॥
ಯರವಂ ಸುರಜನರವಮುಱೆ ।
ದಿರೆ ಸುರಗಿರಿ ಜಾನಿಪಂತಿರಿರ್ದುದು ಜಿನನಂ ॥ ೧೧೦ ॥

ವ ॥ ಅಂತು ಚತುರ್ಣಿಕಾಯ ದೇವನಿಕಾಯಂ ಕಾಯಕಾಂತಿಸಂತತಿಯಿಂದಾ ಕಾಶಪ್ರದೇಶಮಂ ನವರತ್ನ ಮರೀಚಿ ಮೇಚಕಿತ ವಾರಾಶಿಯನನುಕರಿಸುವಂತಳಂಕರಿ ಸುತ್ತಂ ವಾರಣಾಸಿಗವತರಿಸಿ—

ಮ ॥ ಅಸಿತಾಭ್ರಂಗಜರಾಜಿ ಶಾರದಪಯೋದಂ ಚಂದ್ರಕಾಂತೇಂದ್ರಯಾ ।
ನ ಸಮೂಹಂ ಪವನಾಳಿ ಚಾಮರ ಸಮೀರೌಘಂ ಹಿಮಂ ಚಂದನಂ ॥
ಕುಸುಮಶ್ರೀಲತೆ ಬಾಳಿಕಾವಳಿ ಬಿಸಿಲ್ ಭೂಷಾಂಶುವಾಗೊಪ್ಪೆ ಬ ।
ರ್ಪ ಸುರವ್ರಾತಮನೀಕ್ಷಿಸಿತ್ತು ರಿತುಗೆತ್ತಾ ಪೌರನಾರೀಜನಂ ॥ ೧೧೧ ॥

ವ ॥ ಅಂತವತರಿಸಿ ಸುರಸಮಿತಿಪರಿವಾರಂ ಬೆರಸು ಪುರುಹೂತಂ ಪುರಮಂ ಪುಗುವಾಗಳ್

ಚಂ ॥ ಕೆದಱಿದ ರಾಜವೀಥಿಗಳ ಪೂವಲಿ ರತ್ನದ ತೋರಣಾಳಿ ಚಿ ।
ನ್ನದ ಗುಡಿ ಮಂದಿರಾಂಗಣದ ರತ್ನರಜಂಗಳ ರಂಗವಲ್ಲಿ ಸೂ ॥
ಸಿದ ಪಟವಾಸಚೂರ್ಣಮನುರಾಗರಸಾವಿಳ ಕಾಮಿನೀಜನಂ ।
ಪುದಿದಿರೆ ವಾರಣಾಸಿ ತಳೆದತ್ತು ಸುರೇಶಪುರೀವಿಳಾಸಮಂ ॥ ೧೧೨ ॥

ವ ॥ ಅಂತು ವಿರಾಜಿಸುವ ಪುರವಿಳಾಸಮನವಲೋಕಿಸುತ್ತಂ ಬಂದು ವಂದನ ಮಾಲಾಲಂಕೃತ ರಾಜಮಂದಿರಮಂ ಪೊಕ್ಕು—

ಮ ॥ ಜನತಾನೇತ್ರ ವಿಚಿತ್ರ ಹರ್ಷಜನಕ ಶ್ರೀಗೇಹದಿಂದೆಯ್ದೆ ಕಾಂ ।
ಚನ ಚಂಚನ್ಮಣಿಸಂಚಯಾಂಚಿತ ಮಹೇಂದ್ರಸ್ತೋತ್ರಪಾತ್ರಂ ಮರು ॥
ಜ್ಜನ ಸಂಪಾದಿತಮಪ್ಪ ಮಂಟಪದ ಭಾಸ್ವನ್ಮಧ್ಯಪೀಠಾಗ್ರದೊಳ್ ।
ಜಿನನಂ ಸ್ಥಾಪಿಸಿ ಸಂತಸಕ್ಕೆ ನೆಲೆಯಾದಂ ನಾಕಲೋಕಾಧಿಪಂ ॥ ೧೧೩ ॥

ವ ॥ ಆಗಳಾತ್ಮಜಾತ ಮುಖಾಂಬುಜಾತಜಾತ ಲೀಲಾಮಂದಮಕರಂದಸೇವಾ ಲೋಲಲೋಚನಚಂಚಚ್ಚಮರೀಕನಪ್ಪಶ್ವಸೇನವಿಶ್ವಂಭರಾವಲ್ಲಭನುಂ ಶಚೀಮುಖ ದಿವಸ ಮುಖಾವಲೋಕನಮಾತ್ರೋನ್ನಿದ್ರಿತನೇತ್ರ ಶತಪತ್ರ ಜಗತ್ರಯನಾಥಾಂಬಿಕೆಯುಂ ನಯ ನೀಯ ಬಾಳಾರ್ಕನ ಮುಖಕಮಳಮಂ ನೀಡುಮಟ್ಟಿರ್ತು ನೋಡಿ—

ಕಂ ॥ ಆನಂದಾಶ್ರುಗಳಿಂ ಪಿತೃ ।
ಪೀನಸ್ತನಮಾತೃಕುಚಘಟಾಮೃತಜಳಧಾ ॥
ರಾನಿವಹದಿನಭಿಷೇಕಮ ।
ನೇನಿತ್ತರ್ ಮಗುೞ್ಜಿನಶಿಶುಗೆ ಮುದದೊದವಿಂ ॥ ೧೧೪ ॥

ವ ॥ ಆ ಸಮಯದೊಳ್—

ಮ ॥ ಗುರುವಿಂತೀ ತ್ರಿಜಗಕ್ಕೆನಿಪ್ಪ ಸುಚರಿತ್ರಂ ಪುತ್ರನೆಂದಂದು ಧ ।
ನ್ಯರುಮಿಂ ಮಾನ್ಯರುಮಲ್ತೆ ನೀಮೆಯೆನುತಂ ಶ್ರೀ ಬ್ರಹ್ಮದತ್ತಾಮನೋ ॥
ಹರಿಯುಂ ವಿಶ್ರುತ ವಿಶ್ವಸೇನವಿಭುವಂ ದಿವ್ಯಾನುಲೇಪಾಮಳಾಂ ।
ಬರಭೂಷಾದಿಗಳಿಂದಮರ್ಚಿಸಿದನಿಂದ್ರಂ ಲೋಕಸಂಪೂಜ್ಯರಂ ॥ ೧೧೫ ॥

ವ ॥ ಅಂತು ಪೂಜಿಸಿ ಜಿನರಾಜಜನನಾಭಿಷವಣವೃತ್ತಾಂತಮಂ ಶ್ರಮಣ ರಮ ಣೀಯಮಾಗೆ ಪಾಕಶಾಸನಂ ಪೇೞೆ ಕೇಳ್ದು—

ಉ ॥ ಪುಟ್ಟಿದ ಮುನ್ನ ಮುನ್ನೆಗಟ್ಟಿವಲ್ತೆ ಸುವರ್ಣಸುರತ್ನ ವೃಷ್ಟಿ ಪೊಂ ।
ಬೆಟ್ಟಮೆ ಮೆಟ್ಟಿ ಮೂವಮಣೆ ಶಕ್ರರೆ ಮಜ್ಜನಮಂ ನಿಮಿರ್ಚುವರ್ ॥
ನೆಟ್ಟನೆ ವಾರಿ ಪಾಲ್ಗಡಲನೀರೆನೆ ಮಜ್ಜನಮಾಯ್ತು ಸೂನುಗಿಂ ।
ಪುಟ್ಟಿದೊಡೆಂಬ ಸಂತಸಮನೇಂ ಪೊಗೞ್ವುದೊ ಮಾತೃತಾತರಾ ॥ ೧೧೬ ॥

ವ ॥ ಅನಂತರಂ ಜಗದ್ಗುರುವಿನ ಜನನೀಜನಕರ್ ಪುರೋಹಿತಪ್ರಧಾನರುಮವ ರಿವರೆನ್ನದೆ ಪರಿಜನಮುಂ ಪುರಜನಮುಂ ಜಾತವಿಮಳಪುಳಕಜರ್ಜಾತಕರ್ಯ್ಮೋತ್ಸವ ಪರಂ ಪರಾವಶರಾದಾಗಳ್—

ಮ ॥ ಪುರಕಾಂತಾತತಿ ನೂಪುರಂಗಳ ಕಟೀಸೂತ್ರಂಗಳಾರಾವಮಾ ।
ಗಿರೆ ತೂರ್ಯಧ್ವನಿ ಪ್ರಾತಿಹಾರ್ಯಮಣಿಕಾಂತಶ್ರೇಣಿ ಕಾಶ್ಮೀರಸಾ ॥
ರ ರಸಂ ತನ್ನಯ ಚಿತ್ರರಾಗಮನೆ ಕೆಯ್ಯೊಳ್ಪೋರ್ಪವೋಲೆತ್ತಲುಂ ।
ಭರದಿಂದೋಕುಳಿಯಾಡುತಂ ಸುಱಿಯೆ ಜನ್ಮೋತ್ಸಾಹಮೇನೊಪ್ಪಿತೋ ॥ ೧೧೭ ॥

ಉ ॥ ಮಂಗಳಕಾಯಕಾಮುಖಸರೋರುಹಗೀತಮಧುಪ್ರಸೇವನಾ ।
ಸಂಗತ ರಾಜಭೃಂಗಕುಳದಿಂದಬಳಾಕಳಹಂಸಯಾನದಿಂ ॥
ಮಂಗಳತೂರ್ಯನಾದ ವಿಹಗಧ್ವನಿಯಿಂ ಮಣಿಭೂಷಣಾಂಶು ತೋ ।
ಯಂಗಳಿನೊಪ್ಪುತಿರ್ದುದು ಸರೋವರದಂತೆ ಗೃಹಂ ಮಹೀಶನಾ ॥ ೧೧೮ ॥

ವ ॥ ಅಂತು ಪಾರ್ಶ್ವತೀರ್ಥೇಶ್ವರನ ಜನ್ಮೋತ್ಸವದೊಳ್ ವಿಶ್ವಜನಮುಂ ವಿಶ್ವ ಜಗತ್ಪೂಜ್ಯಂ ಸಾಮ್ರಾಜ್ಯಂ ತನಗನಗೆ ಕೈಸಾರ್ದುದೆಂಬ ಸಂತೋಷಮಂ ತಾಳ್ದಿರೆ ತನ್ನತಿ ಶಯ ಭಕ್ತಿಯಿಂ ವ್ಯಕ್ತಂ ಮಾಳ್ಪಂತಮರೇಂದ್ರನಾನಂದನಾಟಕಮನಾಡಲ್ವೇಡಿ ಶುದ್ಧಂ ಚಿತ್ರಮೆಂಬಪೂರ್ವರಂಗಪ್ರಸಂಗದೊಳಂಗೀಕೃತಮಂಗಳಾಳಂಕಾರನುಂದೂರೀಕೃತಾ ಮಂಗಳಪದೋಚ್ಚಾರಣನುಂ ವಿಸ್ತಾರಿತ ಪ್ರಸ್ತಾವನಾವಿಶೇಷನುಮೆನಿಸಿ ಸಭಾಂತರಂಗ ತರಂಗಿಣೀಕೌತುಕರಸೋತ್ತರಂಗ ತರಂಗ ಸಂಗತಮಾಗೆ ರಂಗಂಬೊಕ್ಕು—

ಕಂ ॥ ಶುಭಗುಣಜಿನಪದದೊಳ್ ತ ।
ನ್ನಭಿಮುಖತೆಯನಱಿಪುವವನಂದದಿಂದಂ ತಾಂ ॥
ನಭದೊಳ್ ಸಮಪದದೊಳ್ ನಿಂ ।
ದು ಭಾವಶುದ್ಧಿಯೊಳೆ ಮಾಡೆ ಪುಷ್ಪಾಂಜಲಿಯಂ ॥ ೧೧೯ ॥

ಅಲರ್ದ ಕರಪುಟಮೆ ಸಿಪ್ಪುಗ ।
ಳಲರ್ದವೊಲಿರೆ ಭಕ್ತಿರಸಸುಧಾರ್ಣವಮುಕ್ತಾ ॥
ಫಳದಂತೆ ಪೊಳೆಯೆ ಪುಷ್ಪಾಂ ।
ಜಳಿಯಂ ಜಿನಪದದೊಳಾಗಳೆಸಗೆ ಸುರೇಂದ್ರಂ ॥ ೧೨೦ ॥

ಕರಮೆಸೆದುದು ಜಿನಪದ ಪಂ ।
ಕರುಹ ಶ್ರೀಲಕ್ಷ್ಮಿಯೊಂದು ದರಹಾಸಮೊ ಮೇಣ್ ॥
ಪರಮಜಿನಾಂಘ್ರಿಸುರಾಂಘ್ರಿಪ ।
ಪರಿಶೋಭಿತ ಕುಸುಮತತಿಯೊ ಮೇಣೆಂಬಿನೆಗಂ ॥ ೧೨೧ ॥

ಜವನಿಕೆ ತೊಲಗಿರೆ ದುಗುಲದ ।
ಜವನಿಕೆಯಂ ಮಗುೞೆ ಪಿಡಿದರೆಂಬಂದದಿನೇ ॥
ನವಿರಳತರಳವಿಳೋಕನ ।
ಕುವಳಯ ರುಚಿ ಪಸರಿಸಿತ್ತೊ ದಿವಿಜೋತ್ತಮನಾ ॥ ೧೨೨ ॥

ನೆಯ್ದಿಲ ಪೂವಂ ರಂಗದೊ ।
ಳೆಯ್ದುವಿನಂ ಪರಪುವಂತೆ ಚಂದನರಸದೊಳ್ ॥
ತೊಯ್ದು ಪನೆನೆ ಸಭೆಯಂ ತ ।
ಳ್ಪೊಯ್ದುವು ಪರಕಲಿಸಿ ಹರಿಯ ನಯನಸದ್ಯುತಿಗಳ್ ॥ ೧೨೩ ॥

ವ ॥ ಅಂತುಮಲ್ಲದೆ,

ಕಂ ॥ ಪೂವಲಿಯಂ ನಯನದ ಬೆ ।
ಳ್ಪಾವಗಮಿರ್ಮಡಿಸೆ ಕರ್ಪು ಬಟಿ ಸಲುವ ಸುಭ್ರಂ ॥
ಗಾವಳಿಯವೊಲೆಸೆದಿರೆ ರಸ ।
ಭಾವಾಲಸದೃಷ್ಟಿಪಾತಮೇಂ ಪಸರಿಸಿತೋ ॥ ೧೨೪ ॥

ವ ॥ ಆ ಸಮಯದೊಳ್ಸಮಯಂಬಡೆದು—

ಕಂ ॥ ದೊರೆವೆತ್ತ ಕಿನ್ನರೀಗೇ ।
ಯರಸಾಮೃತವರ್ಷದೊಡನೆ ನೆಗೆವಮೃತಪಯೋ ॥
ಧರರವದವೊಲುಪವಾದಕ ।
ಪರಿವಾದಕವಾದ್ಯನಿನದಮೊಗೆದವು ಪಲವುಂ ॥ ೧೨೫ ॥

ವ ॥ ಆ ಸುಖಾಲಯಸುಲಯಕ್ಕೆ ಪಯಂ ಸುರಭಿಪಯನಾದಂತಮೃತ ಪಯಮನೆ ಮನಂ ತಣಿವಿನಂ ಕಱಿಯೆ ನೆರೆದು—

ಕಂ ॥ ಪ್ರಕಟಿಸಿದಂ ಶತಮುಖನಾಂ ।
ಗಿಕ ವಾಚಿಕ ಭೂಷಣೋತ್ಥಿತಾಹಾರ್ಯಕಸಾ ॥
ತ್ವಿಕ ನಾಮಮನಾಂತ ಚತು ।
ಪ್ರ್ಕಾರದಭಿನಯಮನಭಿನವಂ ನೆಗಳ್ದಿನೆಗಂ ॥ ೧೨೬ ॥

ರಸಭಾವಾಭಿನಯಾದಿ ।
ಪ್ರಸಿದ್ಧ ನಾಟ್ಯಾಂಗದಲ್ಲಿ ತನ್ನಂದದವೊಳೀ ॥
ಕ್ಷಿಸೆ ಸುರಪತಿ ನೆರೆದು ಮೆಱೆದು ।
ಪೊಸಯಿಸಿದಂ ನಾಟಕಾದಿ ದಶರೂಪಕಮಂ ॥ ೧೨೭ ॥

ಮ ॥ ದಿವಿಜೇಂದ್ರಾವಳಿಯೊಕ್ಷಣ[ಕ್ಕೆ]ಪೊಸತಂ ಥಾಳಂ ಬೆಡಂಗಾಗೆ ಬೀ ।
ರುವ ಬಾಹೂರುಶಿರಃಕಟೀಹೃದಯ ಪಾದಾಂಭೋಜಮೆಂಬೀಷಡಂ ॥
ಗ ವಿಶಿಷ್ಟಾಭಿನಯಂ ನಯಂ ಬಡೆಯೆ ಶಕ್ರಂ ನಾಟ್ಯವೇದಾವತಾ ।
ರವಿಳಾಸಂ ತಳೆದತ್ತು ಮೂರ್ತಿಯನೆನಿಪ್ಪಾರೂಢಿಯಿಂದಾಡಿದಂ ॥ ೧೨೮ ॥

ವ ॥ ಅಂತು ಬಿಡೌಜಂ ನಾಟ್ಯವಿದ್ಯೆಗೋಜನೆಂಬುದಂ ವಿಶ್ವಸೇನಾದಿ ರಾಜಸಭೆಗಂ ಸುರಸಮಾಜಕ್ಕಂ ಸಾಮಾಜಿಕ ಜನಕ್ಕಂ ಪೊಗೞ್ ನೆಗೞ್ಚಿ ತನ್ನ ಬಗೆಯೊಳೊಗೆವಾನಂದಮಂ ನಿಜತನುವಿನೊಳಳವಡಿಸಿ ತಳೆಯಲ್ ನೆರೆಯದೆ ದೃಶ್ಯ ಶ್ರವ್ಯ ದೃಢ ಸೂತ್ರಾದಿ ಪ್ರಯೋಗಂಗಳೊಳಂ ಬಹುಪ್ರಕಾರ ನಾಟ್ಯಂಗಳೊಳಮಾಂಗಿಕಾದಿ ಚತುರ್ವಿಧಾಭಿನಯಂಗಳೊಳಂ ದುರಿತಪರಿಹಾರಾರ್ಥಮಾರಭಟಿವೃತ್ತಿ ಪ್ರವರ್ತಿಸುವ ತಾಂಡವಮನಾಖಂಡಳನಾಡಲುದ್ಯೋಗಿಸಿ—

ಕಂ ॥ ವಿದಿತಂ ವೈಶಾಖಸ್ಥಾ ।
ನದೊಳಿರೆಯುಂ ಶಕ್ರನೆಸೆವ ರಸಭಾವಂ ತೋ ॥
ಱಿದುದು ರುಚಿವೃಷ್ಟಿ ದೃಷ್ಟಿಯೊ ।
ಳೊದವಿದ ರಸಭಾವಮೊಪ್ಪಿ ತೋರ್ಪುದು ಪಿರಿದೇ ॥ ೧೨೯ ॥

ವ ॥ ಅಂತು ವೈಶಾಖಸ್ಥಾನದೊಳಮಾಸ್ಥಾನಮಾನಸದೊಳಂ ನಿಂದು—

ಮ ॥ ಚಳನಾಘಾತದಿನಬ್ಧಿಯುಚ್ಚಳಿಸೆ ಮುಕ್ತಾಜಾಲಕಂಗಳ್ನಭ ।
ಸ್ಥಳದೊಳ್ತಾರಗೆಯಂತೆ ತೋಱಿದವು ತೋಳ್ಳೇಱಿನಿಂ ತಾರಕಾ ॥
ವಳಿಯಲ್ಲಿಂದುದಿರ್ದಬ್ಧಿಯಲ್ಲಿ ಪೊಸಮುತ್ತಂಬಂತಿರೊಪ್ಪಿರ್ದವಾ ।
ರಳವಾಖಂಡಳ ತಾಂಡವಂ ಬಗೆವೊಡತ್ಯಾಶ್ಚರ್ಯ ಸಂಪಾದಕಂ ॥ ೧೩೦ ॥

ಕಂ ॥ ಕರಣಂ ಸುಮನೋವಿಸ್ಮಯ ।
ಕರಣಂ ಚಕಮನೂನಸುಖಸೂಚಕಮು ॥
ಚ್ಚರಿಯನುಗುಳ್ವಂಗಹಾರಂ ।
ಸರಸ್ವತೀಹಾರಮೆನಿಸಿದಂ ಸುರರಾಜಂ ॥ ೧೩೧ ॥

ಸಕಲಜ್ಞಂ ಮಾಳ್ಪಂ ದಂ ।
ಡಕವಾಟಪ್ರತರಲೋಕಪೂರಣಮುಂ ಪೂ ॥
ರ್ಣ್ದ ಕಳಂಕನೆಂದು ಪೇೞ್ವಂ ।
ತೆ ಕಳಾಢ್ಯಂ ಕ್ರಮದೆ ಲೋಕಮಂ ವ್ಯಾಪಿಸಿದಂ ॥ ೧೩೨ ॥

ಎಳೆಯೊಳ್ತೋಱಿದ ರೂಪನೆ ।
ಗಳ ಗಗನದೊಳಾಗಳಂತೆ ತೋರ್ಪಂ ಕೃಶನಾ ॥
ಗಳೆ ಗಡ ದಿಗ್ವ್ಯಾಪಕನಾ ।
ರಳವಿಂದ್ರನ ವಿಕ್ರಿಯಾಬಳಂ ಚಿತ್ರತರಂ ॥ ೧೩೩ ॥

ಎಱಗಿದೊಡುನ್ನತಿಯೆಂಬುದ ।
ನಱಿಪುವವೊಲ್ಬಳೆವನಾಗಳರ್ಚಿಶುಗಂ ॥
ಕಿಱಿಯನೆನಿಸಿರ್ದು ಮುದದಿಂ ।
ನೆಱೆ ಕೊರ್ವುವ ತೆರದೆ ದೆಸೆಗಳಂ ವ್ಯಾಪಿಸುವಂ ॥ ೧೩೪ ॥

ವ ॥ ಅಂತತೀಂದ್ರನಿಂದ್ರಜಾಲಿಗನ ಲೀಲೆಯುಂ ಪಾಲಿಸುತ್ತಮಮಾನುಷಮಪ್ಪನೇಕ ನಾಟ್ಯಕಳಾಪರಿಣತಿಯಿಂ ಸುರನರಪರಿಷಜ್ಜನದ ಚಿತ್ತಭಿತ್ತಿಯೊಳ್ ವೈಚಿತ್ರ್ಯಮನುತ್ಪಾದಿಸುತ್ತಂ ವರ್ತಿಸುತ್ತಮಿರೆ—

ಮ ॥ ದಿವಿಜಸ್ತ್ರೀತತಿಗಳ್ತಗುಳ್ದು ರಗಳೊಳ್ ಸಲ್ಲೀಲೆಯಿಂದಾಡೆ ನಾ ।
ಡೆ ವಿಳಾಸಂ ಬಡೆದತ್ತು ಕಲ್ಪತರುಶಾಖಾನೀಕಮೊಳ್ನಾಟ್ಯವೈ ॥
ಭವಲಕ್ಷ್ಮೀತತಿ ತತ್ಸಭಾಸದರ ದೃಷ್ಟಿವ್ರಾತದಿಂ ಪುಟ್ಟಿತೆಂ ।
ಬವೊಲುತ್ಸಾಹರಸಪ್ರವಾಹಭರ ಶೃಂಗಾರಾಬ್ಧಿ ದೇವೇಂದ್ರನಾ ॥ ೧೩೫ ॥

ಮ ॥ ಕಳಕಾಂಚಿಧ್ವನಿನಾದಮಾಗೆ ಪದವಿನ್ಯಾಸಂ ಪದನ್ಯಾಸಮಾ ।
ಗೆ ಲಸತ್ಕಾಂತಿ ಜಲಂಗಳಿಂ ಭುಜಮೃಣಾಳಶ್ರೇಣಿಯಿಂದಾವಗಂ ॥
ಕೊಳನಂ ಪೋಲ್ವ ಸಹಸ್ರನೇತ್ರನ ತನುಶ್ರೀಯಲ್ಲಿ ನೇತ್ರಾಬ್ಜ ಸಂ ।
ಕುಳಮಂ ಹಂಸೆಗಳಂತೆ ಭಂಗಿಸಿ ಬೆಡಂಗಿಂದಾಡಿದರ್ ದೇವಿಯರ್ ॥ ೧೩೬ ॥

ಕಂ ॥ ಭೂಚಾರಿಗಳೊಳಮೊಪ್ಪುವ ।
ಖೇಚಾರಿಗಳೊಳಮಮರ್ಕೆವಡೆದಿರ್ಪಿನೆಗಂ ॥
ರೇಚಿಸಿಯುಂ ಪೂರಿಸಿ ಲೀ ।
ಲೋಚಿತ ಲಾವಣ್ಯರಸಮದೇಂ ಪಸರಿಸಿತೋ ॥ ೧೩೭ ॥

ಚಂ । ಪಯದ ಬೆಡಂಗು ಚಾಳಯದ ಚೆಲ್ವುರಚಲ್ಲಿಯ ಲೀಲೆ ಹಸ್ತಶಾ ।
ಖೆಯ ಲಲಿತತ್ವಮೀಕ್ಷಣದ ಕಾಂತತೆ ಪುರ್ವಿನೊಳಾದ ಜರ್ವಿವೆ ॥
ಲ್ಲಿಯುಮತಿದುರ್ಲಭಂ ಬಗೆವೊಡಿಲ್ಲಿಯೆ ತಾಣಕೆ ಬಂದುವೆಂದು ವಿ ।
ಸ್ಮಯದೊಳೆ ಕೂಡಿ ನೋಡೆ ಸಭೆ ನರ್ತಿಸಿದತ್ತಮರಾಂಗನಾಜನಂ ॥ ೧೩೮ ॥

ಕಂ ॥ ಕಡೆಗಣ್ಗಳ ಬೆಳ್ಪಿಂ ಕೇ ।
ಸಡಿಗಳ ಕೆಂಪಿಂದಮಳಕ ನೀಳಚ್ಛವಿಯುಂ ॥
ತುಡುಗೆಯ ಮಣಿಗಣಮಂ ನು ।
ಣ್ಪಿಡುತಂ ಸುರಸತಿಯರಾಡಿದರ್ ಸುರಪತಿಯಾ ॥ ೧೩೯ ॥

ಶಾ ॥ ತಾಳಂ ಮೇಳಿಸುವಂತು ಗೇಯದೊಳೊಡಂಬಟ್ಟತ್ತು ವಾದ್ಯಕ್ಕೆ ಸಾ ।
ಲ್ಯಾಲಂಬಂ ಸಮನಾಯ್ತು ಶಕ್ರನ ಮನಂ ತಾನೆಂಬಿನಂ ತಾಂಡವ ॥
ಕ್ಕೇ ಲಾಸ್ಯಂ ದೊರೆಯಾದುದೆಂದು ವಿಬುಧರ್ ಕೊಂಡಾಡೆ ಸರ್ವಾಂಗದೊಳ್ ।
ಥಾಳಂ ನೆಟ್ಟನೆ ಪುಟ್ಟೆ ನಾಟ್ಯರಸದೊಳ್ ತೇಂಕಾಡುವಂತಾಡಿದರ್ ॥ ೧೪೦ ॥

ಉ ॥ ಚಾರಿಗೆ ಚಾರಿ ಚಾಳಯಕೆ ಚಾಳಯಮೀಕ್ಷಣಕೀಕ್ಷಣಂ ಮನೋ ।
ಹಾರಪಯಂ ಪಯಕ್ಕೆ ಕರಣಂ ಕರಣಕ್ಕೆ ರಸಂ ರಸಕ್ಕೆ ವಿ ॥
ಸ್ತಾರಿಪ ಭಾವಸಂಗತಿಗೆ ಭಾವಮೊಡಂಬಡೆ ಸೌಕುಮಾರ್ಯಮಂ ।
ನಾರಿಯರುದ್ಧತತ್ವಮನೆ ತಾಳ್ದಿದರಿಂತು ವಿಚಿತ್ರ ವೃತ್ತಿಯಿಂ ॥ ೧೪೧ ॥

ಮ ॥ ಅಮರೇಂದ್ರಂ ನಿಜಪಾದಹಸ್ತಕಮಳಪ್ರಾಂತಂಗಳೊಳ್ ದೇವಿಯರ್ ।
ಭ್ರಮರೀವಿಭ್ರಮಮಂ ನಿಮಿರ್ಚುವುದದೆಂತುಂ ಯುಕ್ತವೆಂಬಂದದಿಂ ॥
ಭ್ರಮರೀವಿಭ್ರಮಮಂ ನಿಮಿರ್ಚುವುದುಮತ್ಯಾನಂದದಾನಂದ ನೃ ।
ತ್ಯಮನೊಲ್ದಾಡಿದನಲ್ಲಿ ತಳ್ತೆಸೆದು ಲಾಸ್ಯಂ ತಾಂಡವಂ ತೋರ್ಪಿನಂ ॥ ೧೪೨ ॥

ಕಂ ॥ ಸ್ವರ್ಗಾಧಿನಾಯಕಂ ಸ ।
ನ್ಮಾರ್ಗೋಚಿತ ಭಾವಶುದ್ಧಿಯಿಂದೆಸಗಲ್ಕಂ ॥
ತಾರ್ಗಮತಿಗಹನಮೆನಿಪಪ ।
ವರ್ಗಂ ಸಮನಿಪ ವಿಶುದ್ಧಿ ಸಮನಿಪುದುಚಿತಂ ॥ ೧೪೩ ॥

ಕಂ ॥ ಆನಂದನಾಟಕಂ ಪರ ।
ಮಾನಂದಮನಖಿಳ ದಕ್ಷಿಣೇಂದ್ರಶಚೀಶ ॥
ಕ್ಕಾನೇಕಪಕ್ಕಮೊದವಿವು ।
ದೇನೀವುದು ಪಿರಿದೆ ಸುರವರಂ ಗಾಯಕಿಯೊಳ್ ॥ ೧೪೪ ॥

ವ ॥ ಅಂತಗಣ್ಯಪುಣ್ಯಮಂ ನೆರಪಿ ಸ್ವಸಾದ್ಯ ಪ್ರಸಾದ್ಯ ನೃತ್ಯತಾಪ್ಯದೋಷಾಯೆಂಬ ನ್ಯಾಯಮಮಂ ಸ್ವಾಯತ್ತಂ ಮಾಡಿಯನಂತರಂ—

ಕಂ ॥ ವಿನುತ ಜ್ಞಾನಾದಿಗುಣಂ ।
ಜನನಾಂಬುಧಿತರಣಹೇತು ತೀರ್ಥವ್ರಾತಂ ॥
ಜಿನ ನಿನ್ನಪಾರ್ಶ್ವದೊಳ್ನಿ ।
ಟ್ಟನಿರ್ಪ ಕಾರಣದೆ ಪಾರ್ಶ್ವತೀರ್ಥೇಶ್ವರನೈ ॥ ೧೪೫ ॥

ವ ॥ ಎಂದು ತೀರ್ಥನಾಥಂಗನ್ವರ್ಥನಾಮಮನಿಟ್ಟೊಡನಾಡುವಂತಾರನ್ನರೆನಿಪ ಸುರಕುಮಾರಕರನಿರವೇೞ್ದು ಪರುಠವಿಸಿ—

ಕಂ ॥ ಮೊಲೆಯೂಡಲ್ ಮಣಿಮುಂಡನ ।
ಕುಳಮಂ ತುಡಿಸಲ್ಕೆ ಮಜ್ಜನಂಬುಗಿಸಲ್ಕೆಂ ॥
ದೊಲವಿಂದಂ ನಿಯಮಿಸಿ ಸುರ ।
ಲಲನೆಯರಂ ಶಕ್ರನಮರಲೋಕಕ್ಕೊಗೆದಂ ॥ ೧೪೬ ॥

ಸ್ರ ॥ ಇತ್ತಲ್ ತೀರ್ಥಾಧಿನಾಥಂ ನಿಜಪಿತೃಯುಗಳಕ್ಕಾವಗಂ ಹರ್ಷಮಂ ಮಾ ।
ಡುತ್ತಂ ಕೂಸಾಟದಿಂದಂ ನಯನಕುವಳಯಕ್ಕಾಸ್ಯಚಂದ್ರಾಂಶುವಂ ಬೀ ॥
ಱುತ್ತಂ ವಿದ್ಯಾಪ್ರಭಾವಂ ಬಳೆಯೆ ಬಳೆವುತಂ ತನ್ನ ಸತ್ಪುಣ್ಯಮಂ ತೋ ।
ಱುತ್ತಂ ಕಣ್ಗೊಪ್ಪುತಿರ್ದಂ ವಿಬುಧಜನಮನಃ ಪದ್ಮಿನೀಪದ್ಮಮಿತ್ರಂ ॥ ೧೪೭ ॥

॥ ಗದ್ಯಂ ॥

ಇದು

ವಿದಿತವಿಬುಧಲೋಕನಾಯಕಾಭಿಪೂಜ್ಯ ವಾಸುಪೂಜ್ಯ ಜಿನಮುನಿ
ಪ್ರಸಾದಾಸಾದಿತ ನಿರ್ಮಳಧರ್ಮವಿನುತ ವಿನಯಜನ
ವನಜವನವಿಳಸಿತ ಕವಿಕುಳತಿಲಕಪ್ರಣೀತಮಪ್ಪ
ಪಾರ್ಶ್ವನಾಥ ಪುರಾಣದೊಳ್ ಅಮ
ರೇಂದ್ರಾನಂದ ನೃತ್ಯವರ್ಣನಂ

**ಚತುರ್ದಶಾಶ್ವಾಸಂ ಸಮಾಪ್ತಂ**

---

॥ ಶ್ರೀಃ ॥

# ಪಂಚದಶಾಶ್ವಾಸಂ

ಕಂ ॥ ಶ್ರೀ ಸುಚರಿತ್ರಂ ಸೂಕ್ತಿವಿ ।
ಳಾಸಂ ಸುವೃತ್ತಹಂಸರಾಜಹಯನವೊಲಂ ॥
ತಾಸುರದಾರಕರೊಡನಿರೆ ।
ಭಾಸಿಸಿದಂ ಪುಣ್ಯಮೂರ್ತಿ ಕವಿಕುಲತಿಲಕಂ ॥ ೧ ॥

ಪಿತೃಯುಗದ ಕಿವಿಗೆ ವೀಣಾ ।
ರುತಿಯಿರೆಯುಂ ಸೊಗಯಿಸಲ್ತೊದಳ್ನುಡಿ ನುಡಿದಂ ॥
ನುತನೃತ್ಯಮಿರೆಯುಮಿೂಕ್ಷಣ ।
ಕತಿಹರ್ಷಮನೀಯೆ ಶಿಶು ತಳರ್ನಡೆ ನಡೆದಂ ॥ ॥ ೨ ॥

ವ ॥ ಅಂತುಮಲ್ಲದೆ—

ಕಂ ॥ ಶೈಶವಮುಂ ಸ್ಮಿತಬಂಧು ಕು ।
ಶೇಶಯನಿನನಂತಿರಿಂತು ಕಳೆದುರು ತೇಜೋ ॥
ರಾಶಿ ವಿರಾಜಿಸಿದಂ ಜಗ ।
ದಾಶಯ ಮಿಥ್ಯಾತಮೋಹರಂ ತೀರ್ಥಕರಂ ॥ ೩ ॥

ಕಳೆಗಳೊಡನೊಡನೆ ವೃತ್ತಂ ।
ವಿಳಾಸಮತ್ಯುನ್ನತ ಪ್ರಸನ್ನತೆ ತೇಜಂ ॥
ಬಳೆಯೆ ಕುವಳಯದ ಮುದಮುಂ ।
ಬಳಯಿಸುತಂ ಚಂದ್ರನಂದದಿಂದಂ ಬಳೆದಂ ॥ ೪ ॥

ವ ॥ ಮತ್ತಂ ಮುಕ್ತಿವನಿತಾಶಕ್ತಸಾತ್ವಿಕಭಾವನಾಗಿಯುಂ ನಿಃಸ್ವೇದನುಂ, ಮನುಷಾದಿಗ್ರಾಹಿಯಾಗಿಯುಮಮಳನುಂ, ಪ್ರವ್ಯಕ್ತಗುಣಾನುರಕ್ತನಾಗಿಯುಂ ಕ್ಷೀರಗೌರಕ್ಷತಜನುಂ, ಸದ್ವೃತ್ತನಾಗಿಯುಂ ಸಮಚತುರಸ್ರಸಂಸ್ಥಾನನುಂ ತ್ರಯೋವಿಂಶತಿ ತೀರ್ಥೇಶನಾಗಿಯುಮಾದಿಸಂಹನನನುಂ, ಸಕಳತ್ರನಾಗಿಯುಂ ನಿರ್ಜಿತ ಕುಸುಮಚಾಪರೂಪನುಂ, ಮಧುಪಸೇವಾವಿರಹಿತನಾಗಿಯುಂ ಸುರಭಿಸೌರಭನುಂ, ನಿಃಕಳಂಕನಾಗಿಯುಮಷ್ಟಸಹಸ್ರಲಕ್ಷಣಲಕ್ಷಿತನುಂ, ಸುಸ್ವರನಾಗಿಯುಂ ರಂಜಿತವ್ಯಂಜನನುಮನುಚಿತ ಕಾರ್ಯಾಸಕ್ತನಾಗಿಯುಮನಂತವೀರ್ಯನುಂ, ಸುದರ್ಶನಧರನಾಗಿಯುಂ ಸೂಕ್ತಿಸುಧಾವಿಸ್ತೀರ್ಣಕರ್ಣಸುಖನುಂ, ಕಲ್ಯಾಣಕಾಯನಾಗಿಯುಂ ಮರಕತವರ್ಣನುಂ, ಸುಗ್ರೀವನಾಗಿಯುಮಭಿರಾಮನುಂ, ಲೋಕೋನ್ನತನಾಗಿಯುಂ ನವರತ್ನಿಸಮುತ್ಸೇಧನುಮುಗ್ರವಂಶಾಗ್ರಣಿಯಾಗಿಯುಮತ್ಯಂತ ಶಾಂತನುಂ, ಸಕಲ ಕಳಾಧರನಾಗಿಯುಂ ಸಮುದಿತ ಸಹಸ್ರಕರತೇಜನುಮಾಗಿರೆ—

ಮ ॥ ವಿಳಸತ್ಸೂಕ್ತಿವಧೂಕಟಾಕ್ಷರುಚಿ ತಳ್ತಿರ್ಪಂತು ವಕ್ತ್ರಾಂಬುಜಂ ।
ತಳೆದತ್ತುಜ್ವಳವೃತ್ತಿಯಂ ನಿರುಪಮಂ ಸಿಂಹಾಸನಶ್ರೀ ವಿನಿ ॥
ಶ್ಚಳಮಿರ್ಪಂತು ಕಟೀತಟಂ [ಧೃಢತೆಯಂ] ತಾಳ್ದಿತ್ತು ವಿಸ್ತಾರಿಯಾ ।
ಯ್ತುಲಘುತ್ರೈಭುವನಾರ್ಚ್ಯಲಕ್ಷ್ಮಿಯೊದವಿಂದಿರ್ಪಂತು ವಕ್ಷಸ್ಥಳಂ ॥ ೫ ॥

ಕಂ ॥ ಲಲಿತಮುಖಕಮಳದೊಳ್ ಸ್ಮಿ ।
ತ್ರುಲೇಖೆಯುಂ ದಂತಪಙ್ತಿಯುಂ ಮುಖಲಕ್ಷ್ಮೀ ।
ಲಲನೆಯ ನೀಳದ ಮುಕ್ತಾ ।
ಫಳದೇಕಾವಳಿವೊಲೇಂ ಮನಂಗೊಳಿಸಿದುವೋ ॥ ೬ ॥

ಶ್ರೀವಧುವಕ್ಷಮನಪ್ಪೆ ವ ।
ಚೋವನಿತೆ ಮುಖಾಬ್ಜಮಂ ಜಯಶ್ರೀ ಭುಜಮಂ ॥
ಯೌವನಲಕ್ಷ್ಮಿ ಜಿನನ ಸಕ ।
ಲಾವಯವಮನಪ್ಪಿ ಚೆಲ್ವಿನೇನೊಪ್ಪಿದಳೋ ॥ ೭ ॥

ಚತುರತೆಯಂ ಕೀರ್ತಿಸುವೊಡ ।
ಮತಿಶ್ರುತಾವಧಿ ವಿಬೋಧಮೊಡವುಟ್ಟಿದವು ॥
ನ್ನತಿಯಂ ಪೇೞ್ವೊಡೆ ಭುವನ ।
ತ್ರಿತಯಂ ಜಿನಪತಿಯ ಪದಮನಾರಾಧಿಸುಗುಂ ॥ ೮ ॥

ಅಮರ್ದಪುರದಾರಕರ್ವು ।
ಲ್ಲಮೇಷ ಖಗವೃಷಭ ಮಹಿಷಯುಗಳಂಗಳ ರೂ ॥
ಪಮನಾಳ್ದು ಯುದ್ಧಮಂ ಜಿನ ।
ಕುಮಾರಕನ ಮುಂದೊಡರ್ಚಿ ಪಡೆದರ್ ಮುದಮಂ ॥ ೯ ॥

ಮುರಜ ಪಣವ ಕಳವೀಣಾ ।
ಪರಿವಾದನದಿಂದೆ ಶಬ್ದ ಷಟ್ತರ್ಕಾಗಂ ॥
ಕರಣನಯ ಕಾವ್ಯ ನಾಟಕ ।
ಭರತಾದಿಯನೋದಿ ವಿಬುಧರಾದರ್ ವಿಬುಧರ್ ॥ ೧೦ ॥

ವ ॥ ಇಂತಿವು ಮೊದಲಾದನೇಕ ಭೇದವಿನೋದಂಗಳಂ ನೆರೆಯೆ ಮೆಱೆದು ಮನಮಱೆದೋಲಗಿಸುತ್ತಮಿರ್ದೊಂದು ದೆವಸಂ ಪೊಱವೊೞಲ ಸಿರಿಯಂ ನಿರೀಕ್ಷಿಸಲ್ವೇೞ್ಕುಮೆಂದು ಬಿನ್ನವಿಸೆ ಸೇವಕಜನದ ಮನದಿಚ್ಛೆಯುಂ ಸಲಿಸುವುದೆ ತನಗೆ ಬಿನದಮಪ್ಪುದಱಿಂ ಮನದೆಗೊಂಡು—

ಕಂ ॥ ಸುರನಾಯಕನಟ್ಟಿದ ಸುರ ।
ತರು ಕುಸುಮಸುಗಂಧಮಣಿ ವಿಭೂಷಣವಸನೋ ॥
ತ್ಕರದಿಂದಮಳಂಕೃತನಾ ।
ಗಿರೆ ಕರಮೆಸೆದತ್ತು ಮೂರ್ತಿ ಜಿನಮನ್ಮಥನಾ ॥ ೧೧ ॥

ಕಂ ॥ ಎತ್ತಿದ ಬೆಳ್ಗೊಡೆಯೆಸೆದಿರೆ ।
ಮುತ್ತಿನ ಲಂಬಣದಿನವಱ ರುಚಿ ಪಸರಿಸೆ ಪ ॥
ರ್ವಿತ್ತೆನೆ ಪೆರ್ವಿಡಿಯೇಱೆ ಬ ।
ರುತ್ತುಂ ಚಮರಜಮನಿಕ್ಕೆ ಕಮಳಾನನೆಯರ್ ॥ ೧೨ ॥

ಏಱೆ ದಿವಿಜೇಂದ್ರಗಜಮಂ ।
ಮೀಱುವ ಮದಗಜಮನಣೆದು ನೂಂಕಿಯುಮಧಿಪಂ ॥
ಮೀಱಲಣಮೀಯದೆನಿಸಿಯೆ ।
ಮೀಱಿದನೋಜೆಯೊಳೆ ನೆಗಟ್ಟ ಭಗದತ್ತನುಮಂ ॥ ೧೩ ॥

ವ ॥ ಅಂತಖಿಳವಿಳಾಸಕಾವಾಸಮಾಗಿ ಪೌರನಾರೀಜನದ ಮನಮಂ ಮನಸಿಜ ಶಿಲೀಮುಖಕ್ಕೆ ಪಕ್ಕುಮಾಡುತ್ತಂ ಪೋದ ಜಿನಪಾದಪದ್ಮಮಂ—

ಉ ॥ ತೆಂಗಿನಕಾಯ ತೋಯದೊಳೆ ಚಂದನ ಗಂಧದೆ ಕುಂದಕುಟ್ಮಳೌ ।
ಘಂಗಳ ನಿರ್ಮಳಾಕ್ಷತದೆ ಜಾದಿಯ ಪುಷ್ಪದೆ ಗಂಧಶಾಳಿಯು ॥
ತ್ತುಂಗ ನಿವೇದ್ಯದುಜ್ವಳಿಪ ಚಂಪಕದೀಪದೆ ಗುಗ್ಗುಳ ಪ್ರಧೂ ।
ಪಂಗಳಿನಾಮ್ರಕಮ್ರಫಳದರ್ಚಿಪವೋಲಿರೆ ತದ್ಬಹಿಃಪುರಂ ॥ ೧೪ ॥

ವ ॥ ಅಂತು ಚೆಲ್ವನೊಳಕೆಯ್ದ ಪೂಜಮೊಟಲ ವಿಳಾಸಮಂ ಜಿನಕುಮಾರಕಂ ಸುರದಾರಕಸಮನ್ವಿತಂ ವಿಲೋಕಿಸುತ್ತಮಿರ್ಪುದುಮಾಪ್ರಸ್ತಾವದೊಳ್—

ಕಂ ॥ ನಡು ಪಗಲ ಸೂರ್ಯರಶ್ಮಿಯೆ ।
ಸುಡೆ ಸುಗಿಯುದರಿಲ್ಲ ಮತ್ತಮದಱೊಡಗೂಡಿ ॥
ರ್ದೆಡೆಯುಡುಗದೆ ನಾಲ್ದೆಸೆಯಿಂ ।
ಸುಡುವನಳಜ್ವಾಲೆಗಳ್ಕದಿರ್ದಪನೊರ್ವಂ ॥ ೧೫ ॥

ವ ॥ ಎಂದೊರ್ವಂ ತಪದ ಸಾರಾಸಾರತೆಯನಱಿಯದ ನಿರ್ಬುದ್ಧಿ ನಿರ್ವಂದದಿಂ ಬಿನ್ನವಿಸೆಯಲ್ಲಿವರಂ ಬಿಜಯಂಗೆಯ್ದು ದೇವರ್ ಬೋಧ್ಯಾವಹಮಾಗಿರ್ಪುದಂ ನೋಟ್ಪು ದೆಂದು ದುರಾಗ್ರಹಮಂ ಮಾಡೆ—

ಕಂ ॥ ಅಂತಸ್ತತ್ವಮನಱಿಯದ ।
ವಂ ತಳೆಗುಂ ದೋಷಮಂ ಬಹಿರ್ವಿಷಯದೊಳ ॥
ಭ್ಯಂತರದೊಳೆ ತೋಷಮನಾ ।
ಳ್ಗುಂ ತತ್ವವಿವೇಕಿ ವಿಗತ ಬಹಿರಾಶ್ಚರ್ಯಂ ॥ ೧೬ ॥

ವ ॥ ಎಂದಿಂತಗಾಧಬೋಧ ತರಂಗಿಣೀನಾಥ ಸಮುತ್ತರಂಗ ತರಂಗ ಸಂಗತ ಮಪ್ಪಂತರಂಗದೊಳ್ ಭಾವಿಸಿ ಮುಗುಳ್ನಗೆ ನಗುತ್ತಮಿಂತೆಂದಂ—

ಕಂ ॥ ದುರಿತೇಂಧನಮಂ ಸುಡುಗುಂ ।
ಪರಮಧ್ಯಾನಾಗ್ನಿಯುಱಿದ ಪಂಚಾಗ್ನಿ ವಪುಃ ॥
ಪರಿಪೀಡೆಯನೀಗುಮಿದಂ ।
ಪರಿಭಾವಿಸನಿಂತು ತಾಪಸಂ ಬಹಿರಾತ್ಮಂ ॥ ೧೭ ॥

ಕಂ ॥ ಎನಸುಮುಮಿಗುೞ್ತೆ ಕಯ್ಪುಗು ।
ಳನಾಂತುದೆಂಬಂತೆ ತತ್ತ್ವವಿದರಲ್ಲದರೊಂ ॥
ದು ನೆಗೞ್ತೆ ದುರಿತತರಮುಯ ।
ವಿನಾಶಕಂ ದಯೆಯನುೞಿದು ನೆಗೞ್ವುದಱಿಂದಂ ॥ ೧೯ ॥

ಸಸಿಯಂ ಬಿಸುೞ್ವು ಬೆಳೆಯಿಸಿ ।
ಕಸಮಂ ಸತ್ಫಳಮನಱಿಸುವವನೆಸಕಂ ತಾ ॥
ಪಸನೆಸಕಮಕಟ ಗುಣಮಂ ।
ಬಿಸುೞ್ವು ಪಾಪಮನನಾರತಂ ಪೊರೆವುದಱಿಂ ॥ ೨೦ ॥

ಅರಿದಾದೊಡಮೇಂ ಕೊಲ್ಲಟಿ ।
ಗರಾಟದಂತಪರಿಮಿತ ತಪಂ ಬಾರದು ಬ ॥
ಲ್ಲರ ಬಗೆಗುಚಿತಕಳಾಗಮ ।
ವಿರಹಿತಮಪ್ಪುದಱಿನೆಂದು ನುಡಿಯೆ ಕುಮಾರಂ ॥ ೨೧ ॥

ವ ॥ ಅಂತು ತನ್ನ ತಪಮಂ ಪ್ರಶಂಸೆ ಮಾೞ್ಪಿನನಜ್ಞನೆಂದವಜ್ಞೆಗೆಯ್ವುದುಮನತಿ ದೂರಮಾಗಿರ್ದಾ ತಾಪಸಪಾಶನಾಲಿಸೆ—

ಕಂ ॥ ಬಿಸುಟು ಪರರಣಕ ಚಿಂತೆಯ ।
ನಸಾರಮಂ ಖ್ಯಾತಿಲಾಭಪೂಜಾರಿಯನ ॥
ರ್ಥಿಸಿ ನೆಗೞ್ವಿಕುವಿಂಗೀಯುದೆ ।
ಕೈಸೇರಿಕುಂ ಶಿಖಿವೊಲುದ್ವಮುರಿವುತ್ತಿರ್ದಂ ॥ ೨೨ ॥

ವ ॥ ಅಂತನಳನಾರಾಧನೆಯಿಂ ತನಗಮುಳತೆಯಾದುದೆಂಬಂತೆ ಕಿಡಿಗಿಡಿವೋಗುತ್ತ ಮುತ್ತಮದಯಾಮೂಲಧರ್ಮಕುಜಕುಠಾರಮೆನಿಪ ಕುಠಾರಮಂ ನಾವಠರಂ ಭವಾಟವಿಯೊಳ್ತಾಂ ತಿರಿವುದನಭಿನಯಿಸುವಂತೆ ತಿರಿಪುತ್ತಂ ಪರಿತಂದು ಜಗದಾರಾಧ್ಯಂ ತನಗಸಾಧ್ಯಮೆಂಬುದಂ ಕಂಡು ನಿರಪರಾಧನಪ್ಪ ತಪೋಧನನಂ ವಧಿಯಿಸಿದನೆಂಬಪವಾದಮನಾದೊಡಂ ಪೊರ್ದಿಸಿ ಯಶೋವಧಮಂ ಮಾಡುವೆನೆಂದುದ್ದಂಡಮದವೆ ದಂಡಕ್ಕಡ್ಡ ಬಂದು ನಿಂದು—

ಕಂ ॥ ಅರಸರೆಮೊಂದಧಿಕರನಾ ।
ದರಿಸಿದೊಡಂ ಪೆಱರುಮೊಱಗುತಿರ್ದೊಡಮದುವುಂ ॥
ಪರಿಕಿಸದೆ ನುಡಿದು ಕಿಡಿಪುದು ।
ಪುರುಷಾರ್ಥಮೆ ತಪದೊಳಱಿಪೆಯುಳ್ಳೊಡೆ ದೋಷಂ ॥ ೨೩ ॥

ಎನೆ ದರಹಸಿತ ಮುಖಾಬ್ಜಂ ।
ಜಿನನಾಥಂ ತೋಱಿದಪ್ಪೆನೀಗಳೆ ಎನ್ನೊಂ ॥
ದನುಪಮ ತಪದುನ್ನತಿಯಂ ।
ನಿನಗೆಂದವನಾಶ್ರಮಕ್ಕೆ ತಡೆಯದೆ ನಡೆದಂ ॥ ೨೪ ॥

ವ ॥ ಅಂತು ಕರುಣಾಕ್ರಾಂತಸ್ವಾಂತಂ ನಡೆತಂದು ದಳ್ಳೆಂದುರಿವ ಪೊಱಲ ಪುಳ್ಳಿಯಂ ಬಾಳತಪಸ್ವಿಯಂ ತಿಳಿಸುವ ಬಗೆಯಿಂದಾಗಲೆ ತೆಗೆಸಿ ಸೀಳೆಂದು ಸೀಳಿಸೆ—

ಕಂ ॥ ಎರಡುಂ ದೆಸೆಯುರಿವಿಂಧನ ।
ದುರು ಕೋಟರದೊಳಗೆ ಸಿಲ್ಕಿ ಬೇವುರಗನುಮಾ ॥
ಯುರಗಿಯುಮಾ ತಪಸಿಗಿಹಃ ।
ಪರದೊಳವೊಗೆತಪ್ಪ ಪಾಪಮಂ ಪ್ರಕಟಿಸುತಂ ॥ ೨೫ ॥

ಇರೆ ಕಂಡು ತಪಸಿಯುಂ ದು ।
ರ್ಧರತರಮೆಂದಿರದೆ ಪೊಗೞ್ವ ಜನಮುಂ ಬೆಱಗಾ ॥
ಗಿರೆ ತೋಱ ತನ್ನ ಹೃದಯುದ ।
ಕರುಣಾರಸಮಂ ನಿಮಿರ್ಚಿ ತೋಱುವ ತೆಱದಿಂ ॥ ೨೬ ॥

ವ ॥ ಆಗಳ್ ಜಿನಾಗಮನಿಪುಣಂ ಭೋಗಿಮಿಥುನಂಗಳಂ ಪುಣ್ಯಭಾಗಿಗಳಂ ಮಾಡಲೆಂದು ಜಿನನಾಗಂ ನಾಗದಿಂದಮಿೞಿದು ಕಾರುಣ್ಯಾಮೃತಮಂ ನಯನ ಕುವಳಯ ದಳಂಗಳಿಂ ತಳಿದು—

ಕಂ ॥ ಪಂಚಪದಮಂ ದುರಿತ ಕರಿ ।
ಪಂಚಾನನಪದಮನಖಿಳಸುಖನಿಕರ ಸುಧಾ ॥
ಪಂಚಮ ಸಮುದ್ರಮಂ ಗುಣ ।
ಸಂಚಂಪುಮಣಿನಿವಹ ಜನನರೋಹಣನಗಮಂ ॥ ೨೭ ॥

ಸಂಗತಭುವನತ್ರಯ ರಾ ।
ಜ್ಯಾಂಗನೆಯಂ ನಿಮಿಷದಿಂ ವಶಂ ಮಾಡುವ ಮಂ ॥
ತ್ರಂಗಳನತಿಶಯ ಪಂಚಪ ।
ದಂಗಳನಹಿಗಳ್ಗೆ ಸಹಜ ಶುಭಮತಿ ಪೇೞ್ದಂ ॥ ೨೮ ॥

ವ ॥ ಅಂತು ಪಂಚನಮಸ್ಕಾರ ಸುಧಾರಸಮಂ ಶ್ರವಣಾಂಜಳಿಗಳಿಂದೀಂಟಿಸಿದುದೆ ತಮಗಮೃತಾಶನತ್ವಮಂ ಸಮರ್ಥಿಸಿತೆಂಬಂತೆ—

ಕಂ ॥ ವರಭವನಾಮರ ಲೋಕದೊ ।
ಳುರಗಂ ಧರಣೇಂದ್ರನಾಯ್ತು ಪದ್ಮಾವತಿಯಾ ॥
ಯುರಗಿ ಮಿಗೆ ಪಂಚಪದಮಂ ।
ಪರಿಭಾವಿಸಿ ಕೇಳ್ದು ಪಡೆದ ಪುಣ್ಯೋದಯದಿಂ ॥ ೨೯ ॥

ನಿಮಿಷದೊಳನಿಮಿಷಪದಮಂ ।
ಸಮರ್ಥಿಸಿತ್ತಹಿಗಮಱಿವು ನಂಬುಗೆ ಶುಭವೃ ॥
ತ್ತಮಿವಿಲ್ಲದಿರೆಯುಮಂತನಿ ।
ತುಮನಾಂತರ್ನೆರೆಯೆ ಪಂಚಪದಮೀಯುದುದೇಂ ॥ ೩೦ ॥

ಭವನಾಮರಪದಮಂ ಸುಖ ।
ಭವನಮನಹಿಮಿಥುನಮಂ ಸಮಂತೆಯ್ದಿಸಿಪೊ ॥
ಕ್ಕು ವಿಳಾಸದಿಂದೆ ಪುರಮಂ ।
ಭವನಮುಮಂ ಜಿನಕುಮಾರನಿರೆ ಸೊಗಯಿಸುತಂ ॥ ೩೧ ॥

ಕಂ ॥ ನವಯೌವನನಾದ ತನೂ ।
ಭವನಂ ಕಂಡಶ್ವಸೇನನರಪತಿ ಪರಮೋ ॥
ತ್ಸವದಿಂ ವಿವಾಹಮಂ ಮಾ ।
ಡುವೆನೆಂದು ನಿರೀಕ್ಷಿಸಲ್ಕೆ ನೃಪಕನ್ಯೆಯರಂ ॥ ೩೨ ॥

ವ ॥ ಅಂತು ಕನ್ಯಾರತ್ನಲಕ್ಷಣಪರೀಕ್ಷಣ ಪ್ರಯತ್ನಚಿತ್ತರಪ್ಪ ಮಹತ್ತರರಂ ರತ್ನೋಪಾಯನಪುರಸ್ಸರಂ ಕಳಿಪುವುದುಮವರ್ಕತಿಪಯ ಪ್ರಯಾಣಂಗಳಿಂ ಕ್ಷೋಣೀಪತಿಗಳನೆಯ್ದಿಯವರ ರಾಜಭವನಮಂ ನಿವೇದಿತ ನಿಜಾಗಮನವೃತ್ತಾಂತರಾಗಿ ಪೊಗಿ ಪೊಕ್ಕು ಪಾಗುಡಮಂ ಕೊಟ್ಟು ನೆಟ್ಟನವರ್ಗೆ ಬರವಱಿವಂತೆ ಬಂದ ತಸ್ಕು ಬರವಂ ಪೇೞೆ ಕೇಳ್ದವನೀಕಾಂತರೆಲ್ಲರುಮತ್ಯಂತ ಸಂತೋಷಮನಾಂತಿಂತೆಂದರ್—

ಮ ॥ ಒಡೆಯಂ ತ್ರೈಭುವನಕ್ಕೆನಿಪ್ಪನುಪಮಂ ಶ್ರೀಪಾರ್ಶ್ವನಾಥಂ ವಧೂ ।
ಗಡ ವಿಶ್ವಸ್ತುತರಶ್ವಸೇನನೃಪನುಂ ಶ್ರೀಬ್ರಹ್ಮದತ್ತಾಖ್ಯೆಯುಂ ॥
ಪಡೆಮಾತೇನವರ್ಗಪ್ಪ ನೆಂಟರೆನೆ ಮಾನ್ಯನರ್ಾಮೆ ದಲ್ ಧನ್ಯರೀ ।
ಯೆಡೆಯಿಂ ಕೊಳ್ಕೊಡೆಗುಂಟೆ ಮತ್ತಮುಚಿತಸ್ಥಾನಂ ಧರಿತ್ರೀನುತಂ ॥ ೩೩ ॥

ವ ॥ ಎಂದು ನಿಶ್ಚಯಿಸಿ—

ಕಂ ॥ ಕೆಲರಾಚಾರಕ್ಕೆ ಕೆಲ ।
ರ್ಕಳಾವಿಳಾಸಕ್ಕೆ ಕೆಲರುದಾರಕ್ಕೆ ಕೆಲ ॥
ರ್ಲಲಿತಾಕಾರಕ್ಕೆ ಕೆಲ ।
ರ್ಕುಲಕ್ರಮಕ್ಕೆಳಸಿ ನಿಖಿಳ ನರಪತಿ ಸುತೆಯರ್ ॥ ೩೪ ॥

ಕಿವಿವೇಟಂಗೊಂಡೊಡಮೇಂ ।
ಯುವತಿಯರ ವಿಳೋಕನಂ ಮನಂ ಹಸ್ತಮನೊ ॥
ಪ್ಪುವ ಜಿನನ ರೂಪನೀಕ್ಷಿಸ ।
ಲವಿಚಳಿತಂ ನೆನೆಯಲೆಸೆಯೆ ಬರೆಯಲ್ಪರಿಗುಂ ॥ ೩೫ ॥

ಕೆಂದಾವರೆಯಲರ್ಗಳರಜ ।
ದಿಂದಂ ಪೊರೆದಿರ್ದ ಪೂಗೊಳನನೀಕ್ಷಿಸಿದಪ ॥
ಳೆಂದುರಿವ ಮನ್ಮಥಾನಳ ।
ನಿಂದಗಿದರ್ವಿರಹವಿಧುರವನಜಾನನೆಯರ್ ॥ ೩೬ ॥

ವ ॥ ಅಂತು ಮುನ್ನಮೆ ಸಮುನ್ನತ ಪಾರ್ಶ್ವಜಿನಗುಣವರ್ಣನಾಕರ್ಣನದಿಂ ಕಂತುಶರಾಕ್ರಾಂತ ಸ್ವಾಂತೆಯರಾಗಿರ್ದುದನವರವರ ಪರಿಚಾರಕಿಯರಿಂ ಕೇಳ್ದು ನಾಮೆ ಮುನ್ನಂ ಕನ್ನೆಯರನೊಯ್ದು ಕೊಡುವಧ್ಯವಸಾಯದಿಂದಮಿರ್ದವನಿತಳಕ್ಕೆ ನಮ್ಮ ಪುಣ್ಯಪ್ರೇರಣೆಯಿನಿವರ್ ಬೇಡಿ ಬಂದರೆಂದಾ ನಮ್ಮನೊಳಕೊಂಡು ಮಂಡಳಾಧಿಪತಿಯರ್ ಬಳಿವೞಿಗೆ ತಂತಮ್ಮ ಸರ್ವಸ್ವಮಂ ಸಮುಕಟ್ಟಿ—

ಉ ॥ ಕೊಟ್ಟು ಕೃತಾರ್ಥರಪ್ಪೆವೆನುತಂ ಘನಮಂಗಳತೂರ್ಯನಿಸ್ವನಂ ।
ಮುಟ್ಟೆ ದಿಗಂತಮಂ ನಿಜಕುಮಾರಿಯರಂ ಮದನಂಗೆ ಪಟ್ಟಮಂ ॥
ಕಟ್ಟುವ ರೂಪಿನಿಂ ಸೊಬಗಿನಿಂ ಸೊಗಯಿಪ್ಪವರಂ ಸಮಂತು ಮುಂ ।
ದಿಟ್ಟು ಪುರಕ್ಕೆ ವಂದರೊಲವಿಂದವನೀಶ್ವರರಶ್ವಸೇನನಾ ॥ ೩೭ ॥

ಕಂ ॥ ಬರೆ ಪೋಗಿ ನೃಪಾಲಕರಂ ।
ಕೊರಳಪ್ಪಿ ಪುರಕ್ಕೆ ತಂದು ವಿವಿಧೋಚಿತಮಂ ॥
ಪರಿತೋಷಮನೆಯ್ದಿಸಿದಂ ।
ಪುರುಷಾರ್ಥನಿಧಾನನಶ್ವಸೇನನೃಪಾಳಂ ॥ ೩೮ ॥

ವ ॥ ಅಂತಾ ಮಹೀಕಾಂತರಂ ದಾನಸನ್ಮಾನಾದಿಗಳಂ ಬೀಱಿಯುಂ ವಿವಿಧ ವಿನೋದಂಗಳಂ ತೋಱಿಯುಂ ಸಂತೋಷಂ ಬಡಿಸಿಯುಂ ಪರಿಣಯನ ಪರಿಕರಮಂ ಪರಮೋತ್ಸವದಿಂ ಮನೆವೆರ್ಗಡೆಗಳವಡಿಸುವಂತು ನಿಯಮಮನಿತ್ತು—

ಚಂ ॥ ನವಯುವನಾದನೀ ಸಮಯದೊಳ್ಜಿನನಂ ವಶವರ್ತಿಯಾಗಿ ಮಾ ।
ಡುವೆನುಟಿದಂತು ತಾಳ್ದಿ ತಪಮಂ ನಿಜಯೋಗದಿನೆನ್ನನಾವಗಂ ॥
ತವಿಸುಗುಮೆಂದು ಮನ್ಮಥನೃಪಂ ನಿಜಮೋಹನ ಮಂತ್ರದೇವತಾ ।
ನಿವಹಮನಟ್ಟಿದಂದದೊಳೆ ಕಣ್ಗೆಸೆದರ್ ನರಪಾಳಪುತ್ರಿಯರ್ ॥ ೩೯ ॥

ವ ॥ ಅಂತು ವಿರಾಜಿಸುವ ರಾಜತನೂಜೆಯರಂ ಸೌಭಾಗ್ಯ ಭಾಗ್ಯಸಂಪನ್ನೆಯರಂ ನೋಡಿ ನಿಜತನಯನ ಮನಮನಿವರವಯವದಿನೆಱಗಿಸಲ್ ನೆರೆವರೆಂದಶ್ವಸೇನ ಮಹೀನಾಥನುಂ ಬ್ರಹ್ಮದತ್ತಾಮಹಾದೇವಿಯುಂ ರೋಮಾಂಚಕಂಚುಕಿತಗಾತ್ರರಾಗಿ ರಾಜಪುತ್ರಿಯರ ವೃತ್ತಾಂತಮನಱಿಪಲ್ನೆರೆವ ಚತುರ ವಚನ ಸಂಚಯ ಕಂಚುಕಿಯಂ ಕಳಿಪುವುದುಮಾಸೌವಿದಲ್ಲಂ ವಿಜಿತಾಂಗಜಾಕಾರಸುಕುಮಾರಕುಮಾರನಿರ್ದತಿಪ್ರಮೋದ ಸಂಪಾದಿಯಪ್ಪ ವಿನೋದಶಾಲೆಗೆ ಬಾಲೆಯರಂ ಮುಂದಿಟ್ಟೊಡಗೊಂಡು ಬಂದು ವಿನಯ ದಿಂದವರೆಱಗುವುದನಱಿಪುವಂದದಿಂ ತಾನೆಱಗಿ ಕುಮಾರಂಗೆ ಬಟಿಕ್ಕಿಂತೆಂದು ಬಿನ್ನವಿಸಿದನೀ ಕಂಕೆಲ್ಲಿಪಲ್ಲವೋಪಮ ಪದಪಲ್ಲವೆ ಪಲ್ಲವಮಹೀವಲ್ಲಭತನುಪ್ರಭವೆಯಿೞಸ್ಮರ ಶರಧಿಸಮಾನ ಜಾನುಪ್ರದೇಶೆ ಕೋಸಲ ದೇಶಾಧೀಶ ತನೂಸಂಭವೆಯಿೞ ರಂಭಾಸ್ತಂಭ ವಿಸ್ತಾರೋರುಸ್ತಂಭೆ ಕಾಶ್ಮೀರ ಕುಂಭಿನೀಪತಿ ಸುತೆಯಿೞ ಕಾಂಚನ ಕಾಂಚೀ ಸಮಂಚಿತ ಘನಜಘನೆ ಪಾಂಚಾಳರಾಜ ತನೂಜೆಯಿೞ ಗಂಭೀರ ಶೋಭಾನಾಭಿಮಂಡಳೆ ಪಾಂಡ್ಯ ಧಾತ್ರೀಪಾಳಪುತ್ರಿಯಿೞ ಲಾವಣ್ಯರಸ ರುಚಿರ ಕುಚಕಲಶೆ ಕಳಿಂಗ ನೃಪಾಂಗಭವೆಯಿೞ ಮೃಣಾಳನಾಳ ಲೀಲಾಲಂಕೃತ ಜಯ ಸಿರೀಷಧಾಮ ಸುಕುಮಾರ ಶೋಭಾವಹ ಬಾಹುಶಾಖೆ ಶಾಕಂಭರೀಶಾತ್ಮಜೆಯಿೞ ನಿಕಾಮಕೋಮಳ ಕಂಬುಕಂಧರೆಯಿಂದ್ರನರೇಂದ್ರ ನಂದನೆಯಿೞ ಪ್ರವಾಳ ಲೀಲಾಧರೆ ಚೋಳಧರಾರಮಣ ಸಮುತ್ಪನ್ನೆಯಿೞ ಕೈರವದಳಧವಳ ಲೋಚನೆ ಕೇರಳ ಮಹೀತಳ ಸಂರಕ್ಷಕ ಸಂಜಾತೆಯಿೞ ಮೃಣಾಳ ನಾಳ ಲೀಲಾಲಂಕೃತ ಕರ್ಣಪಾಳಿಕೆ ನೇಪಾಳ ಭೂಪಾಳ ಕುಮಾರಿಯಿೞಯಷ್ಟಮಿವಿಶಿಷ್ಟೇಂದುರಿವ ಲಲಾಟೆ ಲಾಟದೇಶಪ್ರಭುಪ್ರಭೂತೆಯಿೞ ಮಧುಕರಮಾಲಾನೀಳಕುಂತಳೆ ಕುಂತಳ ಮಹೀಕಾಂತ ಕನ್ಯಕೆಯಿೞ ಮರಾಳ ಲೀಲಾಲಸಯಾನೆ ಮಾಳ ನರಪಾಲ ಶರೀರೋದ್ಭವೆಯಿೞ ಮಾಲತೀ ಮಾಳ ಕೋಮಲೆ ಮಾಳವ ಮಹೀನಾಥ ಪ್ರಸೂತೆಯೆಂದು ಕನ್ನೆಯರಂ ಬೇಱವೇಱೆ ತೋಱೆ ಬಿನ್ನವಿಸುತ್ತಮಿರ್ಪುದುಮಾ ಪ್ರಸ್ತಾವದೊಳ್—

ಕಂ ॥ ಬಾಲೆಯರಪಾಂಗರೋಚಿ ।
ರ್ಮಾಳಾ ಮಾಲತಿಯನಿಕ್ಕಿ ಬಱಿಯಂ ಕೊರಳೊಳ್ ॥
ಮಾಲೆಯನಿಕ್ಕುವ ಮನದಿಂ ।
ಮೇಳಿಸೆ ಮನಮೊಲ್ದುದಿಲ್ಲ ಚಿತ್ರಜನವನಾ ॥ ೪೦ ॥

ಚಂ ॥ ಕುಸುಮಶರಕ್ಕೆ ಚಂದ್ರನನನೂನಕಳಾ ಪರಿಪೂರ್ಣನಂ ನಿರೀ ।
ಕ್ಷಿಸಿ ಗುಱಿಯಪ್ಪವೋಲಬಲೆಯರ್ಕಳ ವಂದಿತನೇನೊ ಚಂದ್ರನೀ ॥
ಕ್ಷಿಸಿ ಗುಱಿಯಕ್ಕುಮೋ ಜಿನನ ಮೂರ್ತಿಯುಮಂತೆ ಲತಾಂಗಿಯರ್ಕಳಂ ।
ಮಿಸುಗಿ ಮರುಳ್ಚಿತಲ್ಲದವರ್ಗೇನೆಱಗಿತ್ತೆ ವಿಳಾಸ ಭಾಸುರಂ ॥ ೪೧ ॥

ಕಂ ॥ ನೆರಪಿ ರುಚಿತಾರ್ಥ ತತಿಯಂ ।
ನಿರವಿಸೆ ಬಾಣಸಿಗನರುಚಿ ಪುಟ್ಟಿದಪಂಗಾ ॥
ದರಮಾಗದಂತೆ ಕಂಚುಕಿ ।
ನಿರವಿಸೆ ರುಚಿ ಪುಟ್ಟಿತಿಲ್ಲ ವಿಭುಗಬಲೆಯರೊಳ್ ॥ ೪೨ ॥

ವ ॥ ಆಗಳ್ತಮ್ಮುದ್ಯೋಗಿಸಿದುದ್ಯೋಗಂ ಸಫಲಮಾಗದಿರದೆಂದು ಮನೋರಾಗದಿಂ ಕಂಚುಕಿಯ ಬಱಿಯನೆ ಬಂದು ವಿವಾಹ ಸಂಬಂಧಮನನುಸಂಧಿಸಲೆಂದಶ್ವಸೇನ ನೃಪೋತ್ತಮನುಂ ಬ್ರಹ್ಮದತ್ತಾಮಹಾದೇವಿಯುಂ ದೇವದೇವೊತ್ತಮಂಗಿಂತೆಂದು ಬಿನ್ನಪಂಗೆಯ್ದರ್—

ಕಂ ॥ ನಯನ ಚಕೋರಂ ಲಲಿತಾಂ ।
ಗಿಯರ ಸರಸ ಹೃದಯ ಕುವಳಯಂ ಸಕಲ ಕಳೋ ॥
ದಯನಿಧಿ ನಿಜಪ್ರಸಾದ ।
ಪ್ರಿಯಂಗಳವನಿತ್ತಲರ್ಚುವುದು ಕುಳತಿಳಕಾ ॥ ೪೩ ॥

ವ ॥ ಅಂತುಮಲ್ಲದೆ—

ಮ ॥ ಜನನಾಥನ್ನಿನಗೀವೆಮೆಂಬ ಭರದಿಂದಂ ತಂದರೀ ಕನ್ನೆಯರ್ ।
ನಿನಗಿಷ್ಟಾಂಗನೆಯರ್ಕಳಪ್ಪೆವುಱಿದಂದೇ ಮಾತೊ ತಾಮುಂ ತಪೋ ॥
ವನಮಂ ಪೊರ್ದುವೆವೆಂದು ಪೂಣ್ದರದಱಿಂ ಕಾರುಣ್ಯವಾರಾಶಿ ನೆ ।
ಟ್ಟನೊಡಂಬಟ್ಟು ವಿವಾಹಮಂ ಪಡೆವುದೆಮ್ಮೆಲ್ಲರ್ಗಮುತ್ಸಾಹಮಂ ॥ ೪೪ ॥

ವ ॥ ಎಂದವರಭಿಪ್ರಾಯಮಂ ಮುಕ್ತಿಪ್ರಿಯಂಗರ್ಥಿದೋಷಂ ನಪಶ್ಯತಿಯೆಂಬ ಮಾತಂ ಮಾತಾಪಿತೃಗಳ್ಸನ್ನಿಮಾಡುತ್ತಮತ್ಯಾಗ್ರಹಮಂ ಮಾಡುತ್ತಮಿರೆ ಕುಮಾರಂ ತನ್ನಂತರಂಗದೊಳಿಂತೆಂದಂ—

ಕಂ ॥ ಮೃಗಲೋಚನೆಯರ್ಕಳಿವ ।
ರ್ಮೃಗದಂತೆವೊಲೆಳಸಿ ಬಳಸುತಿರ್ದಪರಾನುಂ ॥
ಮೃಗದಂತೆ ಗೋರಿಗೊಳಗಾ ।
ಗೆ ಗಡತನುವ್ಯಾಧ ಬಾಣಬಾಧೆಯದಕ್ಕುಂ ॥ ೪೫ ॥

ಮ ॥ ನೆಗಟ್ದೀ ರಾಜತನೂಜೆಯರ್ಕಳ ವಿವಾಹಂ ತಾತನೆಂದುಕ್ತಿಗಂ ।
ಬಗೆಗೆಟ್ಟೀ ಹಿತಸೇವೆಯೊಳ್ತೊಡರ್ದೊಡೀ ಕೈನೀರೆ ಸಂಸಾರವ ॥
ಲ್ಲಿಗೆ ಪೊಯ್ನೀರೆನಿಸಿರ್ಕುಮಿೂ ಮದುವೆಗಾನೇಗೊಂಡೊಡೇಮಾತೊ ನೆ ।
ಟ್ಟಗೆ ದುಷ್ಕರ್ಮಫಳಪ್ರಸೇವನೆಗಮಾನೇಗೊಂಡನೇನಾಗೆನೇ ॥ ೪೬ ॥

ಕಂ ॥ ಜನಕನತಿ ಮುಗ್ಧವಚನಂ ।
ಜನನಾಬ್ಧಿಯೊಳದ್ದುಗುಂ ದೃಷ್ಟದ್ರೋಣಿವೊಲೆಂ ॥
ತನುಚಿತಮನೊಡಂಬಟ್ಟಪೆ ।
ನೆನುತ್ತಮವಕರ್ಣಿಸಲ್ಕೆ ಬಗೆದಘದೂರಂ ॥ ೪೭

ವ ॥ ಅಂತು ಬಗೆದು ನಿಜಪಿತೃಯುಗದ ಮನದಾಗ್ರಹಮಂ ಮಾಣಿಸಲೆಂದಿಂತೆಂದಂ—

ಕಂ ॥ ಆಯತಿಗಹಿತಕರಾನ್ಯ ।
ಸ್ತ್ರೀಯರ ಮದುವೆಯೊಳದೇನೊ ನಿಶ್ಚಳಿತ ತಪಃ ॥
ಶ್ರೀಯೆ ಸುಖಮೂರ್ತಿ ಮುಕ್ತಿ ।
ಶ್ರೀಯ ವಿವಾಹಮೆ ವಿದಗ್ಧರಿಂ ಕರಣೀಯಂ ॥ ೪೮ ॥

ಏನಿದು ಕರಣಮೆ ಮುಕ್ತಿ ।
ಸ್ಥಾನಮನೆಯ್ದುವರ್ಗೆ ವೃತ್ತಮೋ ದರ್ಶನಮೋ ॥
ಜ್ಞಾನಮೊ ಮದುವೆಯಿದರ್ಕೆ ।
ಜ್ಞಾನಿಗಳದೇಕೆ ಮಾಟ್ಪಿರತ್ಯಾಗ್ರಹಮಂ ॥ ೪೯ ॥

ವ ॥ ಎಂದು ತನ್ನ ನಿಸರ್ಗವೈರಾಗ್ಯಮಂ ಪ್ರಕಟಿಸಿಯವರ ದುರಾಗ್ರಹವೃತ್ತಿಯಂ ವಿಘಟಿಸುವುದುಮಾಮಹೀವಲ್ಲಭಭವೆಯರೆಲ್ಲರುಂ ತನ್ನಾದುದನಪ್ಪೆಮೆಂದು ಪರಿಚ್ಛೇದಮನಪ್ಪುಕೆಯ್ದಿರ್ದರ್ಜಿನಕುಮಾರನುಂ ಕುಮಾರಕಾಲಂ ಮೂವತ್ತು ಬರಿಸಂ ಪೋಗೆ ವಿಷಯ ವಿರಾಗತಾಸಂಪನ್ನನಾಗಿರ್ಪುದುಂ ಮತ್ತೊಂದು ದೆವಸಂ—

ಕಂ ॥ ಜಾತಿತುರಂಗಮುಮಂ ಸಾ ।
ಕೇತದ ಜಯಸೇನ ಭೂಮಿಪತಿ ಪಾಗುಡಮಂ ॥
ಪ್ರೀತಿಯೊಳೆ ಕಳಿಪೆ ತಂದಭಿ ।
ಜಾತ ಮಹತ್ತರನನುಚಿತವಾಗ್ವಿಸ್ತರನಂ ॥ ೫೦ ॥

ವ ॥ ಸಮುಚಿತ ಸಮಯದೊಳ್ ಕಾಣಿಸಿಕೊಂಡಾ ಕ್ಷೋಣೀಪಾಳ ಕ್ಷೇಮಕುಶಲವಾರ್ತಾಪ್ರಶ್ನಾನಂತರಂ ನಿಜನಾಥಪುರಂ ಪುರುದೇವ ಜನನ ಪಾವನಗುಣಧಾಮಮುಂ ನಾಮತ್ರಯಾಭಿರಾಮುಮುಮಾಗಿರ್ಪುದದನೆಮಗೆ ಕೇಳಲರ್ಥಿಯಾದವುದು ಪೇಟಿನೆ ಮಹಾ ಪ್ರಸಾದಮೆಂದು ಹಸ್ತಕಮಲಮಂ ಮುಗಿದು ಮಹತ್ತರಂ ಸವಿಸ್ತರಮಿಂತೆಂದು ಬಿನ್ನವಿಸಿದಂ—

ಮ ॥ ಗುರುದೇವಾಂಘ್ರಿವಿನೀತ ಸಜ್ಜನರ ಚೆಲ್ವಿಂದಂ ವಿನೀತಾಖ್ಯೆಯುಂ ।
ಪರರಿಂದೆಂತುಮಯೋಧ್ಯೆಯಾದ ಗುಣದಿಂ ಸಂದಿರ್ದಯೋಧ್ಯಾಖ್ಯೆಯುಂ ॥
ಸ್ಫುರಿತೋದ್ಯನ್ಮಣಿಕೇತನ ಪ್ರಕರದಿಂ ಸಾಕೇತಮೆಂಬಾಖ್ಯೆಯುಂ ।
ನಿರುತಂ ತಾಳ್ದಿ ವಿರಾಜಿಕುಂ ಪುರುಜಿನಶ್ರೀಜನ್ಮಗೇಹಂ ಪುರಂ ॥ ೫೧ ॥

ಕಂ ॥ ದೇವ ನಿಜೋದಯದಿಂದಂ ।
ಪಾವನಮಿ ವಾರಣಾಸಿಯಾದವೊಲಾದಂ ॥
ಪಾವನಮಾದತ್ತದು ಪುರು ।
ದೇವೋದಯದಿಂದಯೋಧ್ಯೆ ಜಗದಾರಾಧ್ಯಾ ॥ ೫೨ ॥

ದೇವಪತಿ ಪೇೞೆ ಧನದಂ ।
ರೈವೃಷ್ಟಿಯನೆಸಗೆ ಮಾಡೆ ಪದ್ಮಾದಿಸರೋ ॥
ದೇವಿಯರುಂ ರುಚಕಾಚಳ ।
ದೇವಿಯರುಂ ತಾಯ್ಗೆ ಗರ್ಭಸಂಶೋಧನಮಂ ॥ ೫೩ ॥

ಮ ॥ ಜಯವರ್ಮೇತ ಮಹಾಬಳಾಖ್ಯ ಲಲಿತಾಂಗಂ ವಜ್ರಜಂಘಾರ್ಯತುಂ ।
ಗಯುತಃ ಶ್ರೀಧರ ನಾಕಜಂ ಸುವಿಧಿ ಭೂಪಾಲಾಚ್ಯುತಂ ವಜ್ರನಾ ॥
ಭಿಯಶೇಷಕ್ಷಿತಿಪಾಳ ಭಾಳತಿಳಕಂ ಸರ್ವಾರ್ಥಸಿದ್ಧೀಶನಾ ।
ಗಿಯುಗಾದ್ಯಂ ಮರುದೇವಿಗಂ ಪುರುಜಿನಂ ಶ್ರೀನಾಭಿಗಂ ಪುಟ್ಟಿದಂ ॥ ೫೪ ॥

ಕಂ ॥ ಪ್ರಿಯರತ್ನಮಯುಂ ಜಗದಾ ।
ಶಯಮಾದುದು ಮುನ್ನಮುದಯಿಸುತ್ತಿರೆ ರತ್ನ ॥
ತ್ರಯಮಯಮಾದುದು ಬೞಿಕಿಂ ।
ತಯನಯಸಂಪತ್ತಿ ವಿಸ್ಮಯಂ ವೃಷಪತಿಯಾ ॥ ೫೫ ॥

ವ ॥ ಅಂತುದಯಿಸುವುದುಂ ದೇವರಾಜಂ ದೇವರ್ಗೆಂತು ನಿಸರ್ಗಭಕ್ತಿಯಿಂ ಮಂದರ ಮಸ್ತಕದೊಳ್ ಸಮಸ್ತದೇವ ನಿಕಾಯಮಂ ಬೆರಸತಿಪ್ರಶಸ್ತಕ್ಷೀರ ನೀರಾಕರ ನೀರಂಗಳಿಂ ಜನ್ಮಾಭಿಷೇಕಮಂ ತೊಡರ್ಚಿದನಂತೆ ವೃಷಭಂಗಂ ಜನ್ಮಾಭಿಷೇಕಮನನಂತರಂ ರಾಜ್ಯಾಭಿಷೇಕಮಂ ಮಾಡೆ ಪಲವು ದೆವಸಂ ಪರೋಪಕಾರಶೀಲಂ ವರ್ಣಾಶ್ರಮಗುರು ಒಸೆದು ಕೃಷಿವಾಣಿಜ್ಯಾದಿ ಷಟ್ಕರ್ಮಮುಮಂ ನಿರ್ಮಳ ಧರ್ಮಮುಮನೈಹಿಕಾಮುಷ್ಮಿಕ ಸುಖ ಸಂಪಾದಿತಂಗಳಂ ಸಕಳಾಶ್ರಮಕ್ಕಂ ನಿವೇದಿಸಿ, ಪರಮಾಹ್ಲಾದಮನಾರಾಧಿಸುತ್ತಂ ಸಮಸ್ತ ಧಾತ್ರಿಯಂ ಪರಿಪಾಲಿಸುತ್ತಮಿರ್ದು ಸುಕವಿ ಜನಮನೋರಂಜನ ಲೀಲಾಂಜನಾ ನೃತ್ಯ ನಿರೀಕ್ಷಣ ವ್ಯತಿಕರ ಪ್ರಭೂತ ಭೋಗವೈರಾಗ್ಯ ಪರಂಪರಂ ಪುರುಷಾರ್ಥದತ್ತಚಿತ್ತ ನುತ್ತಮದೀಕ್ಷೆಯಂ ಕೈಕೊಂಡಖಂಡಿತ ಯೋಗನಿಯೋಗದಿಂ ಘಾತಿಗಳಂ ವಿಘಾತಿಸಿ ಸಮುದ್ಭೂತ ಕೇವಲಾವಲೋಕನಂ ತ್ರಿಲೋಕಪತಿಸಮರ್ಚಿತ ಸಮವಸರಣ ಸಂಪತ್ತಿಯಂ ಪಡೆದು ಕಡೆಯೊಳ್ ಕರ್ಮನಿರ್ಮೂಲನಮಂ ಮಾಡಿ ಮೋಕ್ಷ ಲಕ್ಷ್ಮೀಕುಚ ಕುಂಭಸ ಮುಲ್ಲಸಿತ ಪಲ್ಲವನಾದನೆಂದೆನಲಪರಿಮಿತ ವಚನಂಗಳಿಂ ತಿಳಿಪಿದ ಮಹತ್ತರನನುಚಿತ ಪ್ರತಿ ಪತ್ತಿಗಳಿಂ ಸಂತೋಷಂ ಬಡಿಸಿ ಕಳಿಪಿ ಬೞಿಯಂ ಪುರುಪರಮೇಶ್ವರ ಚರಮಾಚರಣ ಸ್ಮರಣಂ ಭವಸ್ಮರಣಕಾರಣಮುಂ ಸಂಸಾರಪಾರಾವಾರ ಸಮುತ್ತರಣಕಾರಣಮುಮಾಗೆ

ಕಂ ॥ ಪಂಚೇಂದ್ರಿಯವಶಗತನಘು ।
ಸಂಚಯಮಂ ಮಾಡಿ ಮಿಗೆ ಚತುರ್ಗತಿಗಳೊಳಂ ॥
ಪಂಚಪರಾವರ್ತನಮಂ ।
ಪಂಚಮಗತಿವಡೆಯದಿಂತು ತಿರಿಗುಂ ಜೀವಂ ॥ ೫೬ ॥

ಮ ॥ ಪುದಿದಜ್ಞಾನತೆಯಿಂ ಗೃಹೀತಮಗೃಹೀತಂ ಮಿಶ್ರಮೆಂಬೀವಿಭಂ ।
ಗದ ನಾನಾ ಪರಮಾಣುವಂ ಪಲವು ಸೂಱ್ ನೋಕರ್ಮದಂತಃ ಸ್ವರೂ ॥
ಪದವಂ ಸ್ವೀಕರಿಸುತ್ತನೇಕವಿಧದುಃಖಾನೀಕಮಂ ದ್ರವ್ಯನಾ ।
ಮದ ಸಂಸಾರ ಸಮುದ್ರದೊಳ್ ಮುೞುಗುತಂ ತಾಂ ಸೇವಿಕುಂ ಜೀವಿಕುಂ ॥ ೫೭ ॥

ನರಕಾದ್ಯಾದ್ಯವರಾಯುವಂ ಸಮಯುಮಂತೇಕೋತ್ತರಂ ವೃದ್ಧಿಯಾ ।
ಗಿರೆ ಮುನ್ನುಂಡವರಾಯುವಂ ಕ್ರಮದೆ ಮೂವತ್ತೊಂದು ವಾರಾಶಿಯಂ ॥
ನಿರುತಂ ಸೇವಿಸುಗುಂ ಜಿನೇಂದ್ರಪದಸೇವಾಭಾವಜೀವಂ ನಿರಂ ।
ತರದುಃಖಾನಳದುಗ್ರಮೂರ್ತಿ ಭವಸಂಸಾರಾಟವೀ ಮಧ್ಯದೊಳ್ ॥ ೫೮ ॥

ಭುವನಾಕಾಶದ ಮಧ್ಯದೇಶಮದೆ ಮಧ್ಯಂ ತನ್ನಜನ್ಮಕ್ಕೆ ನಿ ।
ಕ್ಕುವಮಾಗಾಂತವರಾವಗಾಹನೆಯನಾದಂ ತತ್ಪ್ರದೇಶಂಗಳ ॥
ಪ್ಪುವರೊಳ್ ತಪ್ಪದೆ ಪುಟ್ಟುಗುಂ ವಿವಿಧವಾರಂ ಕ್ಷೇತ್ರಸಂಸಾರಭೈ ।
ರವ ದುಃಖಾರ್ಣವದಲ್ಲಿ ಕೂಡೆ ಪರಿಗುಂ ಮೂಢಾತ್ಮನಪ್ರೌಢಿಯಿಂ ॥ ೫೯ ॥

ಕಂ ॥ ಎರಡುಂ ಕಲ್ಪದ ಸಮಯೋ ।
ತ್ಕರದೊಳನುಕ್ರಮದೆ ಸಂಕ್ರಮಿಸುಗುಂ ಮಡಿಗುಂ ॥
ಪರವಶತೆಯಿನಾತ್ಮಂ ಬಹು ।
ತರವಾರಮಪಾರ ಕಾಲ ಸಂಸಾರಸ್ಥಂ ॥ ೬೦ ॥

ಯೋಗ ವಿಶೇಷಸ್ಥಿತ್ಯನು ।
ಭಾಗ್ಯಾನುಬಂಧನ ಸ್ಥಿತಿಯು ಶ್ರೇಣಿಗಳೊಳ್ ॥
ರಾಗಾದಿಭಾವ ಪರಿವ ।
ರ್ತಾಗರ್ತಮೊಳಾತ್ಮನಜ್ಞನಕ್ಕಟ ತಿರಿಗುಂ ॥ ೬೧ ॥

ನರಕಗತಿ ಸಮಮೆ ತಿರ್ಯ ।
ಙ್ನರಸುರಗತಿಗಳುಮದಂತೆ ದಲ್ಲಾ ನರಕರ್ ॥
ಪರವಶತಾಯೆಂಬಿದು ಬಿ ।
ತ್ತರಿಸೆ ಪರಾಧೀನ ಸುಖಮವರೊಳುಳ್ಳುದಱಿಂ ॥ ೬೨ ॥

ಮ ॥ ಸುಕೃತಾರಂಭದೆ ಪಾಪದಿಂ ಸುಕೃತ ಪಾಪಾರಂಭದಿಂ ದೇವನಾ ।
ರಕತಿರ್ಯಙ್ನರಜನ್ಮಜಾಳದೊಳೆ ಸಿಲ್ಕಿರ್ದಿರ್ನ್ನೆಗಂ ಮುಕ್ತಿಸಾ ॥
ಧಕತತ್ವಾಮೃತಸೇವೆಯಂ ಪಡೆಯದಿರ್ದಂ ಮುಕ್ತಿ ಕೈಸಾರ್ವುದೈ ।
ಹಿಕದೀಯಲ್ಪ ಸುಖಕ್ಕೆ ನಿಂದೊಡಳಿಪಿಂದೆನ್ನಿಂದಮಿಂ ಗಾಂಪರಾರ್ ॥ ೬೩ ॥

ಮ ॥ ಅತಿದುಃಖಾತ್ಮಕಮಪ್ಪನಾರಕಭವಂ ತಾನಿರ್ಕೆ ತಿರ್ಯಗ್ಗತಿ ।
ಸ್ಥಿತಿ ವಿಜ್ಞಾನವಿಹೀನಮಿೂ ಮನುಜಜನ್ಮಂ ಸೌಖ್ಯಲೇಶಂ ಸಮೂ ॥
ರ್ಜಿತದುಃಖಂ ಸುರಜನ್ಮಮಂತ್ಯದೊಳಗೆಂತುಂ ದುಃಖಯುಕ್ತಂ ಚತು ।
ರ್ಗತಿಯೊಳ್ ಭಾವಿಪೊಡಿಲ್ಲ ಸೌಖ್ಯಮದಱಿಂ ಸಂಸಾರಮೇಂ ಸಾರಮೇ ॥ ೬೪ ॥

ಕಂ ॥ ಇಲ್ಲಧಿಕಸುಖಫಲಂ ಭವ ।
ವಲ್ಲಿಯೊಳಱಸುವೊಡದೆಲ್ಲಿಯುಂ ನಿರ್ವೃತಿ ದೋ ॥
ರ್ವಲ್ಲಿಯೊಳುಂಟದನೆಯ್ದಿಸು ।
ವಲ್ಲಿಗೆ ಜಿನದೀಕ್ಷೆ ದೂತಿವೇಱ್ ತೊದಳುಂಟೇ ॥ ೬೫ ॥

ವ ॥ ಎಂದಿಂತು ಚತುರ್ಗತಿಗಳುಮಂ ದುರ್ಗತಿಗಳೆಂದು ಭೋಗಂಗಳಂ ದುಃಖ ಭೋಗಮೆಂದು ಭಾವಿಸುತ್ತಮಿರೆ—

ಕಂ ॥ ಲೋಕಾಂತಿಕದೇವರ್ ಪರ ।
ಲೋಕಪ್ರಿಯರಲ್ಲದಂದು ಮುಂ ಬಾರದೆವೊ ॥
ಲ್ದೇಕೆ ಜಿನಂ ಪರಹಿತಮಂ ।
ಸ್ವೀಕರಿಪುದುಮದನೆ ನುಡಿದು ದೃಢಮೆನಿಸಿರ್ಪರ್ ॥ ೬೬ ॥

ವಿಷಯ ವಿರತರ್ಗೆ ನೀರುಮ ।
ವಿಷಯಂ ವಿಷದಂತಸೇವ್ಯಮಪ್ಪುದಱಿಂದಂ ॥
ಋಷಿಗಳೆನೆ ದಿವದೊಳಿರ್ಪ ।
ರ್ತೃಷೆಯಿಲ್ಲದೊಡುದಕವೊಳ್ಳಿತೆನೆ ಕುಡಿದಪರೇ ॥ ೬೭ ॥

ವ ॥ ಅಂತು ಮಹಿಮೆವೆತ್ತ ಸಾರಸ್ವತಾದಿಗಳಪ್ಪೆಣ್ಬರುಂ ಲೋಕಾಂತಿಕ ದೇವರ್ ಪರಮ ರಮಣಿ ಕಳಿಪಿದ ವಿವಾಹವಿಧಿವಿಹಿತ ಮಹತ್ತರರಂತೆ ಬಂದು ಪರಮನ ಚರಣ ಸರಸೀರುಹಕ್ಕೆ ನಿಜಮೌಳಿ ಕೀಳಿತ ಪದ್ಮರಾಗದಿಂ ಪರಮಾಗಮನಾಗಳೋಲಗಿಸಿ ಸುರತರು ಕುಸುಮ ಸಂಜನಿತ ಕುಸುಮ ಮಂಜರಿಯಿಂ ಜಿನರಾಜನಂ ಪೂಜಿಸಿ—

ಕಂ ॥ ಲೋಲತೆ ವಿಷಯದೊಳಕ್ಕುಮ ।
ನಾಲೋಚಿತ ಮತಿಗೆ ನಿನ್ನೊಳಾಗದದರ್ಕೀ ॥
ಕಾಲಮನೆ ಪಾರುತಿರ್ದ್ದೆ ।
ಕಾಲಂ ಪರಿಣಯನ ವಿಧಿಗೆ ಸುತಪಶ್ರೀಯುಂ ॥ ೬೮ ॥

ಎಮಗಿದು ನಿಯೋಗಮೆಂದು ಪ ।
ರಮ ಬಿನ್ನವಿಸದೆಮಗಲ್ಲದೊಡೆ ನಿಜವೈರಾ ॥
ಗ್ಯಮನಾರಾರೋಪರ್ ಮು ।
ಕ್ತಿಮನೋಹರ ತಾರಹಾರಮೆನೆ ಸೊಗಯಿಪುದುಂ ॥ ೬೯ ॥

ವ ॥ ಎಂದಿಂತಾಲೋಕಾಂತಿಕ ದೇವರ್ ದೈವಜ್ಞರಂತೆ ತಪೋಲಕ್ಷ್ಮಿಯ ವಿವಾಹೋತ್ಸಾಹಕ್ಕುತ್ಸುಕನಾಗಿರ್ದ ಶೀಲವತ್ಸಲನ ಮನಮಂ ಪ್ರೋತ್ಸಾಹಿಸಿ ಪೊಡೆವಟ್ಟು ಪೋದರಿತ್ತಲ್—

ಚಂ ॥ ಸುರಪತಿ ದೇವದೇವನ ವಿರಾಗತೆಯಂ ತಿಳಿದಾತ್ಮಬೋಧದಿಂ ।
ಪರಮ ತಪೋವಧೂಟಿಯ ವಿವಾಹದೊಳಾಗಲೆವೇಟ್ಟುಮೆಂದು ಬಿ ॥
ತ್ತರಿಸಿರೆ ಮಜ್ಜನಂ ಬುಗಿಪವೊಲ್ಪರಿನಿಷ್ಕ್ರಮಣಾಭಿಷೇಕಮಂ ।
ಸುರಪಟಹಂಗಳುಣ್ಮೆ ಸುರಸಿಂಧುಜಲಂಗಳಿನಂದು ಮಾಡಿದಂ ॥ ೭೦ ॥

ವ ॥ ಅಂತು ಚತುರ್ನಿಕಾಯನಾಕಿನಿಕಾಯಂ ಬೆರಸು ಪರಿನಿಷ್ಕ್ರಮಣಾಭಿಷವಣಾರ್ಚನೆಯಂ ನಿರ್ಮಿರ್ಚಿ ಸಮನಂತರಂ—

ಕಂ ॥ ತ್ರಿದಶಪತಿಜಿನಪತಿಯನಿಂ ।
ತಿದೆ ಶೃಂಗಾರಕ್ಕೆ ಸೀಮೆಯೆನೆ ಸುರತರುಗು ॥
ಣ್ಮಿದ ಕುಸುಮ ವಸನದಿಂದಂ ।
ಸದಮಳ ಮಣಿಭೂಷಣಂಗಳಿಂ ಭೂಷಿಸಿದಂ ॥ ೭೧ ॥

ವ ॥ ಅಂತಳಂಕರಿಸುವುದುಂ ಕಂತುಮಹೀಕಾಂತವಿಳಾಸವಿಜಯಮನಭಿನಯಿಸುವಂದದಿಂದಭಿನವ ಸೌಂದರ್ಯದೊಳೊಂದಿ—

ಕಂ ॥ ಇಂಧನಮಂ ಬಿಸುಡುವವೋ ।
ಲಿಂಧನಮಂ ಬಿಸುಟು ಸುಜನಸಖನಖಿಳೈನೋ ॥
ಬಂಧನಮಂ ಬಿಡಿಪಂತಿರೆ ।
ಬಂಧುಗಳಂ ಬಿಡಿಸಿ ತಪಕೆ ತರಿಸಂದಿರ್ದಂ ॥ ೭೨ ॥

ವ ॥ ಅಂತು ಕಷಾಯ ಸಹಾಯ ಸಮಗ್ರ ಪರಿಗ್ರಹಮಂ ತೊಱೆದು ಗುಣಶ್ರೇಣಿಯನೇಱುವಂತೆ—

ಚಂ ॥ ಬಿಡೆ ಮಣಿ ಶೋಭೆಯಂ ಸಿವಿಗೆಯಂ ಪರಮೇಶ್ವರನೇಱೆ ಚೆಲ್ವನೇ ।
ರ್ವಡೆ ನೃಪರೊಯ್ವರೇೞಡಿವರಂ ಖಚರಾಧಿಪರೊಯ್ದರತ್ತಲೇ ॥
ೞಡಿವರಮತ್ತಲೊಯ್ದರಮರೇಂದ್ರರನಿಂದಿತಭಕ್ತಿಯುಕ್ತರೆಂ ।
ದೊಡೆ ಜಿನಪಂಗೆ ಪೂಣ್ಬ ಬೆಸಕೆಯ್ಯದರಾರ್ವಸುಧಾವಿಭಾಗದೊಳ್ ॥ ೭೩

ಕಂ ॥ ಆ ತ್ರಿಭುವನಪತಿಯಂ ರ ।
ತ್ನತ್ರಯಮಂ ತಳೆವ ಮಾೞ್ಕೆಯಿಂ ತಳೆದಖಿಳ ॥
ಕ್ಷತ್ರಿಯರುಂ ಖೇಚರರುಂ ।
ಸುತ್ರಾಮರುಮತಿಪವಿತ್ರರಾದರುದಾತ್ತರ್ ॥ ೭೪ ॥

ವ ॥ ಅಂತು ಸಕಲಮಂಗಳಾನಕಂಗಳನಂಗವಿಜಯ ಪಟುಪಟಹರವದಂತೆ ದಿಕ್ತಟಮಂ ತೀವೆ ದೇವೇಂದ್ರರೊಯ್ಯ ದೇವಾಂಗ ವಸ್ತ್ರವಿಸ್ತೃತವಿತಾನವಿಲಸಿತ ನಭೋವಿಭಾಗದೊಳ್ ದೇವಾಂಗನಾಂಗುಳೀಸಂಚಯ ರಚಿತ ಪಂಚರತ್ನ ಚೂರ್ಣರಂಗವಲ್ಲೀಕಾಂತಪ್ರಾಂತದೇಶದೊಳಿಂದೀವರ ಗಂಧಬಂಧುರ ದೇವಸಿಂಧು ಸಲಿಲಸೇಚನ ಪಾವನ ದೇವದಾಮಾದ್ಯಾನಮದ್ಯಾಮಳಕವಿಶಾಳ ಶಿಳಾಪಟ್ಟದೊಳ್ ಮುಕ್ತಿಲಕ್ಷ್ಮೀಲಲಾಟಪಟ್ಟ ಮಳಯಜ ತಿಳಕನೆನಿಸಿದ ದೇವದೇವೋತ್ತಮನ ಚಿತ್ತವೃತ್ತಿಯನಱಿದು ತಂದಿೞಿಪಿ ಬೞಿಯುಮುಪಶಮಿತ ದಿವಿಜ ದನುಜ ಮನುಜ ಬಹಳ ಕೋಳಾಹಳ ಪ್ರತೀಹಾರ ಪ್ರತಿಪತ್ತಿಯೊಳ್ ಸುತ್ರಾಮರ್ ಪ್ರವರ್ತಿಸುತ್ತಮಿರೆ—

ಕಂ ॥ ಜಿನಪಂ ವಸನಾಭರಣಂ ।
ತನುಭೂಷಣಮೇವುವೆಂದವಂ ತೊಲಗಿಸಿ ನೆ ॥
ಟ್ಟನೆ ನಿಜಮೆನಿಸಿದ ಗುಣಮಣಿ ।
ವಿನೂತ ದಿಗ್ವಾಸದಿಂದಳಂಕೃತನಾದಂ ॥ ೭೫ ॥

ವ ॥ ಅಂತು ಬಾಹ್ಯಾಭ್ಯಂತರ ಪರಿಗ್ರಹ ನಿವೃತ್ತಿಗೆಯ್ದುತ್ತರಾಭಿಮುಖನುಮಂತರ್ಮುಖನುಂ ನಿಬಿಡನಿಬದ್ಧ ಪಲ್ಯಂಕಾಸನನುಂ ಪ್ರಕಟಿತ ಜಿನಶಾಸನನುಮಾಗಿರ್ದು—

ಕಂ ॥ ಸದ್ಧರ್ಮೋದ್ಧಾರಿ"ನಮು ।
ಸ್ಸಿದ್ಧೇಭ್ಯಃ"ಎನುತ್ತೆ ಕೇಶಪಾಶಮನಘ ಸಂ ॥
ಪದ್ಧಾತ್ರೀರುಹಮೂಲಮು ।
ನುದ್ಧರಿಸುವ ತೆಱದೆ ಪರಿದನಘವನದಹನಂ ॥ ೭೬ ॥

ವಿಪುಳೈನೋಬಳ ಮನಸಿಜ ।
ನೃಪನೂರ್ಜಿತ ರಾಜ್ಯಚಿಹ್ನ ಚಮರಜಮೆನೆ ಶೋ ॥
ಭಿಪ ಕೇಶಪಾಶಮಂ ಮೋ ।
ಹಪಾಶಮಂ ಪರಿವ ತೆಱದೆ ಪರಿದಂ ಪರಮಂ ॥ ೭೭ ॥

ಪರಿಯೆ ಕರಕಮಳ ಪರಿಮಳ ।
ಕೆಱಗಿದ ಮಱಿದುಂಬಿ ಬಿಡದೆ ಬಂದವುದೆಂಬೀ ॥
ತೆಱನನನುಕರಿಸಿ ಕರದೊಳ್ ।
ಮಿಱುಗಿದುವು ವಿನೀಳ ಕುಂತಳಂ ಜಿನಪತಿಯಾ ॥ ೭೮ ॥

ನಿರ್ವಾಣ ಕಾಮಿನೀಪ್ರಿಯು ।
ಸರ್ವಜ್ಞ ಶ್ರೀಯನೀವ ಜಿನದೀಕ್ಷೆಯನಂ ॥
ತುರ್ವೀಶರ್ ಸಾಸಿರದ ।
ಯ್ಯೂರ್ವರ್ತನ್ನೊಡನೆ ತಳೆಯೆ ತಳೆದನುದಾತ್ತಂ ॥ ೭೯ ॥

ಏನಂ ಪೇೞ್ವೆನೊ ಪರಮ ತ ।
ಪೋನಿಧಿಯ ವಿಶೋಧಿಯುಂ ಮನಃಪರ್ಯಯಸು ॥
ಜ್ಞಾನಂ ಸಪ್ತರ್ಧಿಸುದೀ ।
ಕ್ಷಾನಂತರದೊಗೆದು ನೆಗೞ್ದುವೆನೆ ಜನವಿನುತಂ ॥ ೮೦ ॥

ವ ॥ ಅಂತು ತಪೋಂಗನಾ ಪಾಣಿಗ್ರಹಣಮಂ ಪ್ರಶಸ್ತ ಪೌಷ್ಯ ಬಹುಳೈಕಾದಶೀಪೂರ್ವಾಹ್ಣದೊಳ್ ಮಾಡಿ ವಿಶಿಷ್ಟಾಷ್ಟಾದಶಕೋಟಿ ಶೀಳಾಳಂಕೃತನುಂ ಚತುರಶೀತಿಲಕ್ಷ ಗುಣಮಣಿಲಕ್ಷಿತನುಮಾಗೆ ಪರಮನಮರಪರಿವೃತನನೇಕನಾಕಲೋಕಾರ್ಚನೆಗಳಿನಮರ ಸಮಿತಿವೆರಸರ್ಚಿಸಿ ತ್ರಿಕರಣ ಶುದ್ಧಿಯಿಂ ತ್ರಿಪ್ರದಕ್ಷಿಣಂ ಗೆಯ್ದು—

ಕಂ ॥ ದಿವಿಜಪತಿ ಜಿನನ ಕುಂತಳ ।
ನಿವಹಮನಾಂತೊಯ್ದು ರತ್ನಪಟಳಕದೆ ಸುರಾ ॥
ರ್ಣವದೊಳ್ ಬಿಡೆ ಮಿಸುಗಿದವ ।
ರ್ಣವ ಲಕ್ಷ್ಮಿಯ ನೀಳರತ್ನದವತಂಸದವೋಲ್ ॥ ೮೧ ॥

ಜಿನನ ಪದರಜಮುಮಂ ತ್ರಿಭು ।
ವನಪತಿಗಳ್ ತಳೆವರುತ್ತಮಾಂಗದೊಳೆಂದಾ ॥
ವನಧಿ ಶಿರೋರುಹಮಂ ಶಿರ ।
ದಿನಾಂತವೊಲ್ ತೇಂಕುತಿರ್ದವಮೃತಾಂಬುಧಿಯೊಳ್ ॥ ೮೨ ॥

ವ ॥ ಅಂತು ಸಹಸ್ರನೇತ್ರಂ ಜಿನಸಮುತ್ಪಾಟಿತ ಪವಿತ್ರ ಸಹಸ್ರಕುಂತಳಂಗಳಂ ಜಳನಿಧಿತರಂಗಸಂಗತಂ ಮಾಡಿ ನಾಕಲೋಕಕ್ಕೆ ಪೋಪುದುಮಿತ್ತ ತೀರ್ಥನಾಥಂ ದೀಕ್ಷೋಪವಾಸಮಂ ಮಾಡಿ ಮಱುದೆವಸಮಕ್ಷೂಣ ಶೋಭಾಸದ್ಮಪದ್ಮ ಖೇಟಪುರಕ್ಕಭಿಮುಖನಾಗಿ—

ಉ ॥ ಪಾದನ್ಯಾಸ ವಿಳಾಸಮುರ್ವರೆಯ ಮಿಥ್ಯಾಧ್ವಾಂತಮಂ ತೂಳ್ದಿಯಾ ।
ಹ್ಲಾದಂ ಭವ್ಯ ಚಕೋರದೊಳ್ ನೆಲಸೆ ಸನ್ಮಾರ್ಗ ಪ್ರಕಾಶತ್ವದಿಂ ॥
ದಾದಂ ಚಂದ್ರಗತಿತ್ವಮೊಪ್ಪೆ ನೆಗಟ್ದೀಯರ್ಯಾಶುದ್ಧಿ ಹೃಚ್ಛುದ್ಧಿಗಂ ।
ಪ್ರಾದುರ್ಭಾವಮನೀಯೆ ಭಾವರಿಗೆ ವಂದಂ ಪಾರ್ಶ್ವಯೋಗೀಶ್ವರಂ ॥ ೮೩ ॥

ಮ ॥ ನಿಧಿಚಿಂತಾಮಣಿ ಕಾಮಧೇನು ದಿವಿಜೇಂದ್ರೋರ್ವೀಜಮೊಂದಾಗಿ ಸ ।
ನ್ನಿಧಿಗೆಯ್ದಿಂದುದಱಿಂದಮತ್ಯಧಿಕಮಾದತ್ತುತ್ಸವಂ ಶ್ರೀ ತಪೋ ॥
ನಿಧಿ ತನ್ನಿರ್ದ ಗೃಹಕ್ಕೆವಂದಡೆ ಸುಶರ್ಮಂಗಂತೆ ದೃಗ್ಗೋಚರ ವೃ ।
ತ್ತ ಧರಿತ್ರೀನುತರತ್ನಮಂ ಮುನಿಪನೀವಂತೇನವೊಲ್ದೀಗುಮೇ ॥ ೮೪ ॥

ವ ॥ ಅಂತು ಸಂಯಮಾನುವರ್ತಿ ಪುಣ್ಯಮೂರ್ತಿಯೆಯ್ತಿರುತಿರ್ಪುದುಂ ಗುಣಮಣಿ ಮಂಡನನಪ್ಪಾ ಮಂಡಳೇಶ್ವರಂ ಕಂಡು—

ಉ ॥ ಸಂಜನಿತಾನುರಾಗನಿದಿರ್ವೋಗಿ ಲಲಾಟದಿಶಾಪ್ರಶಸ್ತಹ ।
ಸ್ತಾಂಜಳಿಯರ್ಘ್ಯಪಾದ್ಯಮನೊಡರ್ಚಿ ವಿವೇಕ ವಿಳಾಸಿನೀಮನೋ ॥
ರಂಜನನಂ ಮನೋಜಮದಭಂಜನನಂ ಪ್ರವಿನಷ್ಟ ದುಷ್ಟಕ ।
ರ್ಮಾಂಜನನಂ × × × × ಸುಶರ್ಮದಾಂತಂಶಾಂತಂ × × × ॥ ೮೫ ॥

ವ ॥ ಅಂತು ಹರ್ಷೋತ್ಕರ್ಷಕ್ಕೆ ಪಕ್ಕಾಗಿ ಪರಮ ಮುನೀಶ್ವರನಂ ನಿಱಿಸಿ—

ಕಂ ॥ ನವಕೇವಲಲಬ್ಧಿಪ್ರದ ।
ನವವಿಧ ಪುಣ್ಯಂ ಪ್ರಸಿದ್ಧ ಸಪ್ತರ್ಧಿಕರ ॥
ಪ್ರವಿಮಳ ಸ್ವಪ್ನಗುಣಂ ತನ ।
ಗವಿಚಳಮೆನೆ ಯತಿಗೆ ಕುಡೆ ಸುಧಾನ್ನಮನೊಲವಿಂ ॥ ೮೬ ॥

ಕಂ ॥ ಏವೇಟ್ಟಿನಾಗಳೊಗೆದವು ।
ಪೂವಿನ ಮಟೆ ಸುರಭಿಗಂಧಬಂಧುರಪವನಂ ॥
ರೈವೃಷ್ಟಿ ದೇವ ದುಂದುಭಿ ।
ದೇವರಹೋದಾನಮೆಂಬ ಪಂಚಾಶ್ಚರ್ಯಂ ॥ ೮೭ ॥

ಉ ॥ ಮುನ್ನಱುದಿಂಗಳಂಬಿಕೆಯಗರ್ಭದೊಳಂ ನವಮಾಸಮಿರ್ಪಿನಂ ।
ರನ್ನದ ಜೊನ್ನ ಕಲ್ಪತರು ಪುಷ್ಪದ ಪೆರ್ಮಳೆ ಕೊಳ್ವುವೆಂದೊಡ ॥
ತ್ಯುನ್ನತ ತೀರ್ಥನಾಥನಖಿಳರ್ಥಿಯುತಂ ನಿಲೆ ರಾಜಗೇಹದೊಳ್ ।
ಸನ್ನುತಮಯ್ದುಮಚ್ಚರಿಯುಮಾದುದೆಟ್ಟಿಱಿಯೆ ಸುಶರ್ಮನಾ ॥ ೮೮ ॥

ವ ॥ ಅಂತು ಸುಶರ್ಮನಂ ಸುಶರ್ಮಕರ ಪುಣ್ಯಕರ್ಮಕ್ಕಾರ್ಮನಂ ಮಾಡಿ ಪರಸಿ ಪೋಗಿ ನಿರ್ಮಳ ದಶಧರ್ಮಧರಂ ದುಷ್ಕರ್ಮರಿಪುಗಳಂ ನಿರ್ಮೂಲನಂ ಮಾಡಲ್ವೇಡಿ ಪರಮಸಂಯಮೋದ್ಯುಕ್ತಚಿತ್ತನಾಗಿ—

ಕಂ ॥ ಮನಮಂ ಪ್ರಾಯಶ್ಚಿತ್ತೋ ।
ದ್ಯನುಪಮ ತಪದಲ್ಲಿಯನಶನಾಧಿಕ ತಪದೊಳ್ ॥
ತನುವಂ ನೆಟ್ಟಗೆ ಯೋಚಿಸಿ ।
ಮುನಿಪತಿ ಪನ್ನೆರಡು ತೆರದ ತಪದಿಂ ನೆರೆದಂ ॥ ೮೯ ॥

ಮ ॥ ನಿಯತಂಯೋಗ ನಿಯೋಗದಿಂದೆ ಯತಿಪಂ ಕಾಲತ್ರಯಜ್ಞಾನಿಯಾ ।
ಗಿಯುಮತ್ಯದ್ಭುತಮಾಗೆ ಮಾಗಿ ಮಟೆಗಾಲಂ ಗ್ರೀಷ್ಮಮೆಂಬೀ ಪ್ರಸಿ ॥
ದ್ಧಿಯ ಕಾಲತ್ರಯಮಂ ಸಮಂತಱಿಯದಂತಾ ಬೆಳ್ವಾಸಕ್ಕೆ ಶಾ ।
ಖಿಯ ಮೂಲಕ್ಕರಿದಪ್ಪ ಕಲ್ನೆಲೆಗೆ ಮೆಯ್ಯಂ ಸಾರ್ಚಿದಂ ನಿಶ್ಚಳಂ ॥ ೯೦ ॥

ಕಂ ॥ ಪರಮೋಪಶಾಂತರಸದೊಳ್ ।
ನಿರಂತರಂ ತೇಂಕುತಿರ್ಪ ಮುನಿಪತಿಯ ಮುಖಾಂ ॥
ಬುರುಹಮಲರ್ದಿಕ್ಕೆ ತನುಲತೆ ।
ಕೊರಗದೆ ಖರಕರನ ಕರಹತಿಯಿನತಿ ಚಿತ್ರಂ ॥ ೯೧ ॥

ಯತಿಪಂ ಚತುರ್ವಿಧಾಹಾ ।
ರತತಿಯುನನಶನದೊಳಾತ್ಮನಿಷ್ಠಂ ತೊಱೆಯು ॥
ತ್ತತಿಶಯಮೆ ನೆರೆಯೆ ತೊಱೆದಂ ।
ಚತುರ್ವಿಧಾಸ್ರವದ ಕಾರ್ಮಣಾಹಾರಮುಮಂ ॥ ೯೨ ॥

ಇಂತಿದು ಚಿತ್ರಂ ಪೂರ್ಣತೆ ।
ಯುಂ ತಳೆದತ್ತಂತರಂಗ ಬಹಿರಂಗದೊಳಂ ॥
ಶಾಂತರಸಸ್ವಾದನಮಿರೆ ।
ಯುಂ ತನ್ಮುನಿಯಲ್ಲಿ ರಸಪರಿತ್ಯಾಗತಪಂ ॥ ೯೩ ॥

ಕಂ ॥ ಯಮಿ ನಡೆವ ನುಡಿವ ನಿಜ ಸಂ ।
ಯಮಾರ್ಥಮುಣ್ಬುಚಿತ ವಸ್ತುವಂ ಕೊಳ್ವಿಡಿವಂ ॥
ಗಮುಳಮನುಗುವೆಡೆಯೊಳ್ ಜೀ ।
ವಮನೋವಿಯೆ ಪಂಚಸಮಿತಿಯಂ ಸಂಚಿಸಿದಂ ॥ ೯೪ ॥

ವ ॥ ಅಂತು ಪರಮಸಂಯಮಧಾರಿಯುಮೇಕವಿಹಾರಿಯುಮಾಗಿ ಗಿರಿದರಿಸರಿತ್ಪುಳಿನಕಾಂತಾರಾದಿ ನಿರ್ಜಂತುಕ ಪ್ರದೇಶಂಗಳೊಳ್ ನಿಂದಾತ್ಮಾಭ್ಯಾಸಮಂ ಮಾಡುತ್ತಂ ವಿಹಾರಿಸುತ್ತಂ ಬಂದು—

ಕಂ ॥ ಪ್ರಕಟಾಹಿಚ್ಛತ್ರ ಪುರೋ ।
ಪಕಂಠ ವಿಪುಳಾದ್ರಿ ಸಾನುಮಂಡನ ಶೋಭಾ ॥
ಧಿಕ ದೇವದಾರುವನರಂ ।
ಜಕ ಶಶಿಮಣಿ ಘನಶಿಳಾತಳದೊಳುನ್ನತದೊಳ್ ॥ ೯೫ ॥

ಎರಡುಂ ಮಡಂಗಳೆಡೆ ನಾ ।
ಲ್ವೆರಳಾರ್ಗೆಣೆರಡುಮುಂಗುಟಂಗಳ ತೆರಪಾ ॥
ಗಿರಿರಿಚ್ಛಾಗತದೊಳ್ ಚಿರ ।
ಸಿರೆ ತನ್ನಯೆ ನಿಲವು ಯೋಗಿಸಂಸ್ತವಯೋಗ್ಯಂ ॥ ೯೬ ॥

ಮ ॥ ಕರಣಂ ಕೂಡೆ ಕುನುಂಗಿಕೊಂಡಿರೆ ಮನಂ ಭಾಳಾಗ್ರದೊಳ್ ದಿಟ್ಟಿವೆ ।
ತ್ತಿರೆ ನೇತ್ರದ್ವಯಮುಳ್ಳರಲ್ದಿರೆ ಭುಜಾಕಾಂಡಂಗಳಾ ಜಾನುಗ ॥
ಳ್ವರೆಗಂ ನೀಳ್ದಿರೆ ದಂತಮೊಂದಿಯನಿತುಂ ತಮ್ಮೊಳ್ಸಮಾನಂಗಳಾ ।
ಗಿರೆ ಯೋಗಂ ಪರಭಾಗಮಂ ಪಡೆಯದಾಗಿರ್ಪಂದ ಯೋಗೀಂದ್ರನೊಳ್ ॥ ೯೭ ॥

ವ ॥ ಅಂತಂತರಂಗ ಬಹಿರಂಗ ಸಾಮಗ್ರಿ ಸಮಗ್ರನಾಗಿ—

ಕಂ ॥ ದೃಪ್ತಮನಸಿಜನನಜನಪ್ರ ।
ದೀಪ್ತ ಮಹಾ ಘೋರತಪ್ತತಪಮೆಸೆಯೆ ಶಮ ॥
ವ್ಯಾಪ್ತಂ ಪ್ರತಿಮಾಯೋಗದೆ ।
ಸಪ್ತದಿನಂಬರೆಗಮಿರೆ ಮುನೀಶ್ವರ ತಿಳಕಂ ॥ ೯೮ ॥

ಮುನಿಯೊರ್ವನ ಶಾಂತರಸಂ ।
ವನಮೃಗಸಂಕುಳದ ಮನದೊಳಂ ನೆಲಸಿದುದೊ ॥
ರ್ವನ ಪುಣ್ಯದ ಫಲವಂ ಪಲ ।
ರನುಭವಿಸುವರೆಂಬ ಮಾತು ಸಂಭವಿಸುವಿನಂ ॥ ೯೯ ॥

ಪುಲಿಗಳ್ ಪುಲ್ಲೆಯ ಮಱಿಯಂ ।
ಮೊಲೆಯೂಡಿದವಲ್ಲಿ ಸೊರ್ಕಿದಾನೆಯ ಕಟಿಯೊಳ್ ॥
ನೆಲಸಿದ ತಿಮಿರಂ ತುಱಿಸಿಯೆ ।
ತೊಲಗಿಸಿದವು ನಖಮುಖಂಗಳಿಂ ಸಿಂಹಂಗಳ್ ॥ ೧೦೦ ॥

ಕಂ ॥ ಸೋಗೆಯ ಸೋಗೆಯ ನೆಬಲೊಳ್ ।
ನಾಗಂಗಳ್ ನಲಿದವವಱ ಪೆಡೆಗಳ ನೆೞಲೊಳ್ ॥
ರಾಗದಿನಿರ್ದವು ದುರ್ಧರ ।
ಮಾ ಗುಣನಿಧಿಯಿರ್ದಗಣ್ಯಪುಣ್ಯಾಶ್ರಮದೊಳ್ ॥ ೧೦೧ ॥

ವ ॥ ಅಂತು ಶಾಂತರಸಮೆಂಬ ಪಾದಪರಸಮಂ ನಿಜಪ್ರಯೋಗ ಪ್ರಾವೀಣ್ಯದಿಂ ಧ್ಯಾನಾನಿಳಮುಖಕ್ಕೆ ನಿಲ್ವಂತು ಶುದ್ಧಾತ್ಮಂ ಬದ್ಧಂಮಾಡಿಯಪ್ರತಿಮಂ ಪ್ರತಿಮಾಯೋಗದೊಳಿರ್ಪುದುಂ ಪೂರ್ವಸೂಚಿತ ಪಂಚಾಗ್ನಿತಪಸ್ತಪ್ತ ತಾಪಸಂ ಜೀವಿತಾವಸಾನದೊಳ ಸುರಕುಲದೊಳ್ಸೂತಾನಂದನೆಂಬನಾಗಿ ಪುಟ್ಟಿ ಭೌಮವಿಹಾರಾರ್ಥಮಾಗಿ—

ಚಂ ॥ ಕಮರಚರಂ ಬರುತ್ತಮಸುರಂ ವಿಪುಳಾದ್ರಿಯೊಳಾತ್ಮಯೋಗದು ।
ದ್ಯಮದೊಳಗಿರ್ದ ಪಾರ್ಶ್ವಮುನಿನಾಥನ ಮೇಲೆ ವಿಮಾನವಾಗಳಾ ॥
ದಮೆ ನಭದಲ್ಲಿ ಕೀಲಿಸಿದವೊಲ್ ನಿಲೆ ಸತ್ವಥದಿಂದಗಲ್ದೊಡ ।
ಕ್ಕುಮೆ ದಲವಶ್ಯದಿಂ ಕುಗತಿಯೆಂಬವೊಲುರ್ವಿಗೆ ಪಾಯ್ದನುದ್ಧತಂ ॥ ೧೦೨ ॥

ಉ ॥ ಕ್ರೂರಮೃಗಂಗಳೀಂ ಮುನಿಪನಿರ್ದ ವನಾಂತರದೊಳ್ ನಿರಂತರಂ ।
ವೈರಮನೊಕ್ಕು ಶಾಂತರಸಮಂ ತಳೆದಿರ್ದವು ದೈತ್ಯನಂತಪ ॥
ಸ್ಕಾರಮನೂನ ವಾರಿಯನೆ ಕಂಡು ಕೆರಳ್ವವೊಲನ್ಯ ಜನ್ಮ ಸಂ ।
ಸ್ಕಾರದೆ ಕೋಪಮಂ ತಳೆದನೀಕ್ಷಿಸಿ ಶಾಂತರಸಾಂಬುರಾಶಿಯಂ ॥ ೧೦೩ ॥

ಚಂ ॥ ಅಸುರಕುಲಕ್ಕೆ ಮುಖ್ಯನೆನಿಪುನ್ನತಿಯಂ ವಿಭವಪ್ರಭಾವದಿಂ ।
ಪಸರಿಪನಲ್ಲಿ ದುಷ್ಟಮತಿ ರೋಷವಿಶೇಷದಿನಾಂತನೆಂಬಿನಂ ॥
ಮಿಸುಗುವಜಾತಶತ್ರುವಿನ ಸನ್ನಿಧಿಯೊಳ್ ಭವಬದ್ಧ ವೈರಮಂ ।
ಬಿಸುಟವು ಕೋಟಿಗಂ ತಳೆದವುಗ್ರತೆಯಂ ಕಿಡಿಸೂಸೆ ಕಣ್ಗಳಿಂ ॥ ೧೦೪ ॥

ಕಂ ॥ ಅವರಿವರೆನ್ನದೆ ಕೇಡಡ ।
ಸುವರ್ಗಕ್ಕುಂ ಪ್ರಕೃತಿವಿಕೃತಿಯೆಂಬಿದನುಸಿರ್ವಂ ॥
ತೆವೊಲಾಗಿನ್ನವನೊಳ್ ಪ್ರಕೃ ।
ತಿ ವಿಕೃತಿಯಾದತ್ತು ಕೋಪಲೋಹಿತ ಗುಣನೊಳ್ ॥ ೧೦೫ ॥

ಇಡುವಡಿಗಳವನಿ ತಳದೊಳ್ ।
ನಿಡಿದೋಳ್ದೆಶೆಯೊಳ್ಸಿರಂ ಮರುನ್ಮಾರ್ಗದೊಳಂ ॥
ದೆಡೆಗಿಱಿದಿರೆ ಕೋಪಾನಳ ।
ನೊಡನೊಡಲುಂ ಬಿಡದೆ ಬಳೆದುದಾ ದಾನವನಾ ॥ ೧೦೬ ॥

ಮ ॥ ಕಿಡಿಯಂ ಸೂಸುವ ಕಣ್ಗಳಿಂದೆ ಸಿಡಿಲಂ ದಂಷ್ಟ್ರಾಂಶುವಿಂ ಮಿಂಚನೆ ।
ಲ್ಲೆಡೆಯಿಂದಂ ಬಿಡುತಪ್ಪ ಘರ್ಮಜಳದಿಂದಂ ವೃಷ್ಟಿಯಂ ಕಾಳಿಮ ॥
ಕ್ಕೆಡೆಯಾದಂಗದ ಕಾಂತಿಸಂತತಿಗಳಿಂ ನೀಳಪ್ರಜಾಳಂಗಳಂ ।
ಪಡೆಯುತ್ತಂ ಪ್ರಳಯಾಂಬುದಾಗಮಮನಾಗಳ್ ದೈತ್ಯನೇಂ ಪೋಲ್ತನೋ
॥ ೧೦೭ ॥

ಕಂ ॥ ದನುಜಂ ಯಮಂಗಿವಂ ಸಂ ।
ದನುಜಂ ನಿರ್ದಯೆಯಿನೆಂಬಿನಂ ಪೀಡೆಯನಾ ॥
ಮುನಿಸನುೞಿದಂಗೆ ಮಾಣದೆ ।
ಮುನಿಸಮಿತಿನುತಂಗೆ ಮಾಡಲೊಡರಿಸೆ ಕಡುಪಿಂ ॥ ೧೦೮ ॥

ಮ ॥ ಹರಿಯುಂ ವ್ಯಾಘ್ರಮುಮಪ್ಪರುಗ್ರತರ ಕೋಪಾಟೋಪದಿಂ ಸತ್ತರು ।
ತ್ತರ ಜನ್ಮಂಗಳೊಳೆಂಬುದಚ್ಚರಿಯೆ ದೈತ್ಯಂ ಕ್ರೋಧದಿಂದಾಗಳಂ ॥
ತಿರೆ ತದ್ರೂಪಮನಾಂತನೆಂದು ನುಡಿದನ್ನಂ ಕೊರ್ವೆ ವೈಕುರ್ವಣಿಂ ।
ಭರದಿಂ ಪಾಯ್ದೊಡಮಳ್ಕದಿರ್ದನಚಳಂ ಶ್ರೀಪಾರ್ಶ್ವ ಯೋಗೀಶ್ವರಂ ॥೧೦೯॥

ಕಂ ॥ ಕಹಕಹರಾವಂ ರೋಧಃ ।
ಕುಹರಮನಾವರಿಸೆ ಸಿಂಹನಿಸ್ವನಮಾಶಾ ॥
ನಿಹಿತ ಗಜಮದಮನುಡುಗಿಸೆ ।
ಬಹುವಿಧವಾಯುಧದಿನಳ್ಕಿಸುತ್ತಾರುತ್ತಂ ॥ ೧೧೦ ॥

ಆ ದೊರೆಯುಪಸರ್ಗಮನು ।
ತ್ಪಾದಿಸಿಯುಂ ಮುನಿಯ ಮನದ ಧೈರ್ಯಮನೆನಸುಂ ॥
ಭೇದಿಸಲಾಱದೆ ನೆರಪಿದ ।
ನಾ ದನುಜಂ ಭೂತಮಂ ಪ್ರಭೂತಮನಾಗಳ್ ॥ ೧೧೧ ॥

ಉ ॥ ರೂಢಿವುದೊಂದು ಬೊಬ್ಬಿಱಿವುದೊಂದುರಿಗಣ್ಣನೆ ತೋರ್ಪುದೊಂದು ಕೂ ।
ರ್ದಾಡೆಯ ಕೂರ್ಪನೊಪ್ಪಿಸುವುದೊಂದಸಿಯಂ ತಿರಿಪುತ್ತೆ ಬರ್ಪುದೊಂ ॥
ದೇಡಿವುದೊಂದು ಪೆರ್ವಸಿಱಿೊಳಾನನಮಂ ಬಿಡೆ ತೋರ್ಪುದೊಂದು ಕೈ ।
ವಾಡಿನ ಕ್ರೀಡೆಗಾಡುವುದದೊಂದು ಮರುಳ್ನೆರೆದತ್ತು ದೈತ್ಯನಾ ॥ ೧೧೨ ॥

ಚಂ ॥ ಮುಸಗುವ ಮಾರಿ ಬೊಬ್ಬಿಱಿವ ಬೆಂತರದಿಂ ಸಿಡಿಲೇೞ್ಗೆಯೇೞ್ವಿರ ।
ಕ್ಕಸಿ ಕುಡುದಾಡೆಯಂ ಮಸೆವ ಡಾಕಿನಿ ಕೂರಸಿಯಿಂದೆ ಕೂಂಕಿ ಝುಂ ॥
ಕಿಸುವ ಕುಮಾರಿ ಮೂಂಕರಿಪ ಪೂತಿನಿ ಹೂಂಕೃತಿಗೆಯ್ವ ಭೈರವಂ ।
ನೊಸಲುರಿಗಣ್ಣನಾಟ್ವ ಚವುಡೇಶ್ವರಿ ಕೂಂಕಿರಿದಾರ್ವ ಕಾಟಿಯಿಂ ॥ ೧೧೩ ॥

ಕಂ ॥ ಬೆಟ್ಟಂ ತಿಱಿಕಲ್ಲಾಡುವ ।
ಝೊಟ್ಟಿಂಗಂ ಶೈಳಯುಗಳಮಂ ಬಿಡೆ ತಾಳಂ ॥
ಗುಟ್ಟುವ ಭೇತಾಳಂ ಬೊ ।
ಬ್ಬಿಟ್ಟಚಳಂಗಳನೆ ಚಳ್ಗಿಸುವ ಭೂತಕುಳಂ ॥ ೧೧೪ ॥

ಒದವಿದುದರಾಗ್ನಿಯಿಂ ಬೇ ।
ಗದೆ ಬಿದಱಿಸುವವಲ್ಲಿಗೆಯ್ದುಧಿಮುಖಮೆಂಬಂ ॥
ದದಿನುದರದೊಳಂ ಮುಖಮಂ ।
ಮದಯುತ ಭೂತಂಗಳಲ್ಲಿ ತಳೆದವು ಪಲವುಂ ॥ ೧೧೫ ॥

ಕಂ ॥ ಚಂಡತರ ಕೋಪ ಶಿಖಿಯಿಂ ।
ಖಂಡಂ ಕರಗಿದುದು ನೆತ್ತರಱತತ್ತೆನೆ ಮಾ ॥
ಕೊರ್ಗಂಡೇಂ ತ್ವಗಸ್ಥಿಮಾತ್ರಂ ।
ಚಂಡಿಕೆಯೊಡಲೇಟಿಸಿತ್ತೊ ಭೇತಾಳನುಮಂ ॥ ೧೧೬ ॥
ಕುಡುದಾಡೆಯ ಕಡುಗೂರ್ಪುಂ ।
ಪಿಡಿದ ಶುಭಂಕರಿಯ ಕೂರ್ಪುಮುರಿಗಣ್ಣುರಿಯುಂ ॥
ಕಿಡಿಯುಂ ಸೂಸುವ ಕಣ್ಣುಂ ।
ಬಿಡದರ್ವಿಸೆ ಸುತ್ತಿ ಮುತ್ತಿ ಭೂತವ್ರಾತಂ ॥ ೧೧೭ ॥

ಮ ॥ ಪುಲಿಪಾಯ್ವಂತು ಸಿಡಿಲ್ಕಡಂಗಿ ಪೊಡೆವಂತುಗ್ರಾಗ್ನಿಕೊಳ್ವಂತದೆ ।
ತ್ತಲುಮಂಭೋನಿಧಿ ಮೇರೆಪಪ್ಪಿ ಕವಿವಂತುದ್ದಂಡ ಶುಂಡಾಳಮಂ ॥
ಡಳಿ ಕೊಲ್ವಂತಹಿ ನುಂಗುವಂತೆ ಶರಭಂ ಸೀಳ್ವಂತೆ ಸಿಂಹಂ ನಖಾ ।
ವಳಿಯಿಂ ಖಂಡಿಸುವಂತೆ ಕೊರ್ವಿದುದಗುರ್ವಿಂದೈದೆ ವೈಕುರ್ವಣಂ ॥ ೧೧೮ ॥

ಚಂ ॥ ಮಿಸುಗುವ ದಾಡೆಯಿಂ ಪೆಣನನಿರ್ಬಗಿಯಾಗಿರೆ ಸೀಳ್ವ ಭಾಳದ ।
ರ್ವಿಸುವುರಿಗಣ್ಣ ಕಿಚ್ಚಿನೊಳೆ ಸುಟ್ಟಡಗಾಗಿರೆ ಲೋಕ ಚಿಕ್ಕಳಂ ॥
ಪಸಿಯ ಕಪಾಳದಾಂತು ರುಧಿರಾಸವಮಂ ಕುಡಿದಾರುತಿರ್ಪ ರಾ ।
ಕ್ಷಸಿಯರ ರೂಕ್ಷರಾಕ್ಷಸರತೀಕ್ಷ್ಣತೆಯಿಂ ಕ್ಷಣಕಾದುದದ್ಭುತಂ ॥ ೧೧೯ ॥

ಕಂ ॥ ಲೋಕಹಿತಾಚರಣ ಕಳಾ ।
ನೀಕಪ್ರಯುತಂಗೆ ಯತಿಗೆ ದಾನವನಿರದು ॥
ದ್ರೇಕಿಸಿ ಮಾಡುವ ಪೀಡೆ ಸು ।
ಧಾಕರನಂ ರಾಹು ಪಿಡಿವುದನ್ನನುಕರಿಕುಂ ॥ ೧೨೦ ॥
ನೆರೆದವು ಮರುಳ್ಗಳಾತಂ ।
ಮರುಳ್ಗೆಪತಿ ದೈತ್ಯನೆಂದೊಡಖಿಳರ್ಧಿಗುಣಾ ॥
ಭರಣನಬಾಧ್ಯನಸಾಧ್ಯಂ ।
ನಿರುತಂ ತಮಗೆಂದು ಬಗೆವುದದು ವಿಸ್ಮಯಮೇ ॥ ೧೨೧ ॥

ವ ॥ ಅಂತರಕ್ಷ್ಯಾನುಷ್ಠಾನಮಂ ದಾನವಂ ನಿಜಸೇನೆವೆರಸೆತ್ತಿಕೊಂಡು ಮಹೋಪಸರ್ಗಮಂ ನೀಡುಂ ಮಾಡುತ್ತಮಿರೆ

ಕಂ ॥ ವಿಗತಭಯನಿಂದ್ರ ಜಾ [ತಾ] ।
ರಿಗನೆಗೆತ್ತು ದಾನವನೀವಿಕೃತಿಯನೇನುಂ ॥
ಬಗೆಯದೆ ನಿಜಯೋಗದೊಳ ।
ತ್ಯಗಣಿತ ಗುಣನಿಳಯನಚಳಿತಂ ನಿಲೆ ಮುನಿಪಂ ॥ ೧೨೨ ॥
ಒಳಗೆ ನಿಜಧ್ಯಾನಾನಳ ।
ನಳುರೆ ಪೊಱಗೆ ದಾನವೋಪಸರ್ಗಮಹೋಗ್ರಾ ॥
ನಳನಳುರೆ ಕರ್ಮಬಂಧಂ ।
ಗಳನಿತುಮವು ದಗ್ಧರಜ್ಜುವೆನಿಸಿದವಾಗಳ್ ॥ ೧೨೩ ॥

ಮ ॥ ದನುಜಂ ಮಾಱ್ಪುಪಸರ್ಗಮುಗ್ರತೆಯೊಳಕ್ಷೋಭಂ ನಿಜಧ್ಯಾನದೊಳ್ ।
ಮುನಿಪಂ ಕೂಡಿರೆ ತತ್ತಪಂ ತ್ರಿಭುವನಕ್ಷೋಭಪ್ರದಂ ನಾಗರಾ ॥
ಜನ ಸಿಂಹಾಸನ ಕಂಪಮಂ ಪಡೆಯೆ ತತ್ಸಂಬಂಧಮಂ ಬೋಧದಿಂ ।
ದೆನಸುಂ ನಿಟ್ಟಿಸಿ ತನ್ನ ಕಾಂತೆಗುರಗೇಂದ್ರಂ ಪೇೞ್ದನೀಯಂದದಿಂ ॥ ೧೨೪ ॥

ಕಂ ॥ ಪರಹಿತ ಚರಿತಂಗೆ ಜಗ ।
ದ್ಗುರುಗೆ ಭವಾನಳ ವಿದಗ್ಧನಾಗಿಯುಮವಿದ ॥
ಗ್ಧರೆನಿಪ್ಪೆಮ್ಮುಮನೀಸುಖ ।
ಪರಿಕರದೊಳ್ ನೆಮ್ಮಿದಂಗೆ ಮುನಿದನೆ ಖಳನುಂ ॥ ೧೨೫ ॥

ಚಂ॥ ದನುಜನೊಡರ್ಚುವಂ ಗಡುಪಸರ್ಗಮನಾತನ ಕೋಪವಹ್ನಿಯಾ ।
ತನನೆ ಕರುತ್ತು ಸುಟ್ಟುದೆನೆ ದೃಷ್ಟಿವಿಷಪ್ರಭವಾಗ್ನಿಯಿಂದೆ ನೆ ॥
ಟ್ಟನೆ ಸುಡುವೆಂ ಮನೋರಮಣಿಯಲ್ಲದೊಡೇನೊ ಕೃತಘ್ನರಾಗೆವೇ ।
ಮೆನೆ ಲಲಿತಾಂಗಿಯುಂ ಮನದೆಗೊಂಡಿರದೀಗಳೆ ಪೋಗಿ ಬೇಗದಿಂ ॥ ೧೨೬ ॥

ವ ॥ ಮತ್ತಮತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಸ್ನುತೇಯೆಂಬ ನೀತಿಯನಾತನೊಳ್ ಗುರುದ್ರೋಹ ಸಂಜಾತ ಪಾತಕ ಪ್ರಧಾನ ದಾನವನೊಳ್ಪಿಟ್ಟಂ ಮಾಡಿಯವನಂ ಭಂಗಿಸಿ ಪರಮಗುರುವಿನುಪಸರ್ಗಮಂ ಪಿಂಗಿಸಿ ಬರ್ಪುದೇ ನಮಗೆ ಕರಣೀಯಮುಂ ಶ್ರೇಯಣೀಯಮುಮೆಂದ ತನ್ನಭಿಪ್ರಾಯಮಂ ನಿಜ ಪ್ರೇಯಸಿಯುಮೊಡಂಬಡೆ ನಿಶ್ಚಿತ ಕಾರ್ಯನುಂ ಸಮೂರ್ಜಿತ ಶೌರ್ಯನುಮಾಗಿ—

ಚಂ॥ ಧರೆ ಬಿರಿದತ್ತು ದೈತ್ಯಹೃದಯಂ ಬಿರಿವಂತು ಚತುಃಸಮುದ್ರಮಂ ।
ತಿರದೆ ಕಲಂಕಿದತ್ತು ದನುಜೇಂದ್ರನ ಸೇನೆ ಕಲಂಕುವಂತು ಕೇ ॥
ಸುರಿತಳರ್ದತ್ತು ದಾನವನ ಪೆಂಪನಿತುಂ ತಳರ್ವಂತಹೀಶ್ವರಂ ।
ಬರೆ ರವಿದೀಪ್ತಿಯಂ ನಿಜ ಫಣಾಮಣಿ ದೀಪ್ತಿಯದಿರ್ಪುತಿರ್ಪಿನಂ ॥ ೧೨೭ ॥

ವ ॥ ಅಂತು ಬಂದು ಮಂದರಾಚಳದಂತಚಳಿತಚಿತ್ತನಾಗಿರ್ದ ಪಾರ್ಶ್ವತೀರ್ಥೇಶ್ವರನಂ ನೋಡಿ—

ಮ॥ಸ್ರ॥ ಧೃತ ಶುದ್ಧಧ್ಯಾನದಿಂದಂ ಮತಿ ತೊಲಗಿದುದೇ ದೃಷ್ಟಿ ನಾಸಾಗ್ರದಿಂ ಸೂ ।
ಸಿತೆ ವಕ್ತ್ರಾಂಭೋರುಹಂ ಸ್ಮೇರದೆ ಬೆದಱಿದುದೇ ಕಾಯಮಾತ್ಮೀಯ ನಿರ್ವ್ಯ ॥
ಗ್ರತೆಯಿಂ ಬರ್ಚಿತ್ತೆ ಜಾನುಪ್ರಗತ ಭುಜಯುಗಂ ನಿಃಪ್ರಕಂಪತ್ವದಿಂ ಪಿಂ ।
ಗಿತೆ ಪೇೞೆಂದಾ ಮುನೀಂದ್ರ ಸ್ಥಿರತೆಗೆ ತಲೆಯಂ ತೂಗಿದಂ ನಾಗರಾಜಂ ॥ ೧೨೮ ॥

ವ ॥ ಅಂತು ನಾಗರಾಜಂ ಮುನಿರಾಜನ ಧೈರ್ಯಮನವಾರ್ಯಮಂ ಸಹಸ್ರ ಮುಖದಿಂ ತಾನುಂ ತನ್ನ ಮನೋನಯನವಲ್ಲಭೆಯುಂ ಮೆಚ್ಚಿ ಬಿಚ್ಚಳಿಸಿ ಬೞಿಯಂ ಮೂಱುಂ ಲೋಕದೊಡೆಯನಂ ಮೂಱು ಸೂೞ್ ಬಲವಂದು ನಿಜ ಕೋಟೀರ ಭಾಸ್ವನ್ನಾನಾರತ್ನ ರೋಚಿಃಪೂರನೀರಂಗಳಿಂ ನೀರಜನ ಚಾರುಚರಣ ನೀರಜಂಗಳಂ ತೊಳೆದು ಮುನೀಂದ್ರನಂ ಬಂದಿಸಿ ತಮ್ಮೊಳಿಂತೆಂದರ್—

ಕಂ ॥ ದನುಜವಧೆಯಿಂದಮಘು ಬಂ ।
ಧನಮೆನಗಂ ಮುನಿಗಮಕ್ಕುಮೆಂದದನುೞಿದಾ ॥
ದನುಜೇಂದ್ರನ ವಿದ್ಯಾಚ್ಛೇ ।
ದನಮುಂ ಮಾೞ್ಪುದನೆ ಮನದೊಳವಳಂಬಿಸಿದಂ ॥ ೧೨೯ ॥

ಮ ॥ ಘನವೈಕುರ್ವಣದಕ್ಷನಪ್ಪ ದನುಜಂಗಂ ಭೀತಿಯಪ್ಪಂತು ನೆ ।
ಟ್ಟನೆ ಲೋಕಾದ್ಭುತ ವಿಕ್ರಿಯಾಪರಿಣತಂ ನೀಚಂ ಭಯಕ್ಕಲ್ಲದಂ ॥
ಜನೆನುತ್ತಂ ಪಡೆದಂ ಸಹಸ್ರಫಣಸರ್ಪಾಕಾರಮಂ ನಾಗರಾ ।
ಜನದಂತಲ್ಲದೊಡಕ್ಷಿಸೌಖ್ಯಕರ ಸೌಖ್ಯಾಕಾರನೇನಲ್ಲನೇ ॥ ೧೩೦ ॥

ವ ॥ ಅಂತಗುರ್ವುಮದ್ಭುತಮುಮಪ್ಪಂತು ವಿಗುರ್ವಿಸಿ—

ಚಂ॥ ದನುಜಕೃತೋಪಸರ್ಗಮನಿತುಂ ಮುನಿರಾಜನೊಳೆಂತು ನಿಷ್ಫಳಂ ।
ಮುನಿಪತಿಗಾನುಮೆಯ್ದುಪುಪಕಾರಮುಮಂತೆದಲಾದೊಡಂ ಸಮಂ ॥
ತನುಮಿಕುಮಿೂ ಕೃತಜ್ಞತೆ ಕೃತಾರ್ಥತೆಯಂ ತನಗೀಯಲೆಂದಿದಂ ।
ನೆನೆದೊಸೆದೆತ್ತಿದಂ ನಿಜಫಣಾಮಣಿಮಂಡನಮಂ ಫಣೀಶ್ವರಂ ॥ ೧೩೧ ॥

ಕಂ ॥ ವಿಪುಳ ಫಣಾಮಂಡಳಮಂ ।
ಡಪಮಂ ಫಣಿರಾಜನೆತ್ತೆ ಬೋಧಶ್ರೀಯ ॥
ತ್ಯಪಗತಕಲ್ಮಷ ಪಾರ್ಶ್ವಾ ।
ಧಿಪತಿಯ ಸುವಿವಾಹಗೇಹಮೆನಿಸಿದುದಾಗಳ್ ॥ ೧೩೨ ॥

ಪಿಡಿದಳ್ ಪದ್ಮಾವತಿಯೊಳ್ ।
ಪಿಡಿದ ಫಣಾಮಣಿಯ ಮೇಲೆ ಜಿನಪಂ ಭುವನ ॥
ಕ್ಕೊಡೆಯಂ ದಲೆಂದು ವಜ್ರದ ।
ಕೊಡೆಯಂ ಪೇೞ್ವಂದದಿಂದೆ ಸೊಗಯಿಸುವಿನೆಗಂ ॥ ೧೩೩ ॥

ತನು ಕಾವಹಿಯ ಫಣಾ ಕುಂ ।
ಬೆನೆ ವಜ್ರಚ್ಛತ್ರಮೆಸೆಯೆ ಜಿನಪನಹಿಚ್ಛ ॥
ತ್ರನೆನಿಸಿ ನೆಗೞ್ದಿರೆ ತತ್ಪ ।
ತ್ತನದೊಳಹಿಚ್ಛತ್ರನಾಮಮಾಯ್ತನ್ವರ್ಥಂ ॥ ೧೩೪ ॥

ವ ॥ ಅಂತು ಭೀಷಣಾಕೃತಿಯುಂ ಫಣಿರಾಜಂ ಪಡೆವಂದು ಪೆಡೆವಣಿಯರುಣ ಕಿರಣದಿನುರಿಯನುಗುೞುತಮಿರ್ಪ ದಿಟ್ಟಿಗಳಿಂ ದಿಟ್ಟಿ ನುಂಗುವಂತು ದೆಸೆದೆಸೆಗವ್ವಳಿ ಸುತ್ತಮಿರೆ ಸುತ್ತಲುಂ ಮುತ್ತಿ ಸಮಸ್ತ ವಸ್ತುವೇದಿಯುಂ ವ್ಯಾಘ್ರಾದಿ ಕ್ರೂರಮೃಗಾ ಕಾರದಿಂ ಬಾಧಿಸುತ್ತಮಿರ್ದ—

ಕಂ ॥ ಭೂತಂಗಳ್ ಫಣಿಪತಿ ಪರಿ ।
ಭೂತಂಗಳ್ ಬೆದಱಿ ಪೋಗೆ ಪೋಗದೆ ಮತ್ತಂ ॥
ಭೂತಾನಂದಂತಾನಂ ।
ದಾತತ ಕೋಪಂ ಮಹೋಪಸರ್ಗೋದ್ಯುಕ್ತಂ ॥ ೧೩೫ ॥

ಚಂ ॥ ಒದವಿಸುವಶ್ಮವೃಷ್ಟಿ ನವಮೌಕ್ತಿಕವೃಷ್ಟಿ ಸಮಸ್ತ ಶಸ್ತ್ರಜಾ ।
ಳದ ಮಱೆ ಪುಷ್ಪವೃಷ್ಟಿ ವಿಷವೃಷ್ಟಿ ಸುಧಾರಸವೃಷ್ಟಿ ವಿಸ್ಫುಲಿಂ ॥
ಗದ ಮಱೆ ರತ್ನವೃಷ್ಟಿ ಜಳವೃಷ್ಟಿ ಸುಚಂದನ ವಾರಿವೃಷ್ಟಿ ರ ।
ಕ್ತದ ಮಱೆ ಕುಂಕುಮಾಂಬುವಿನ ವೃಷ್ಟಿದಲಾಯ್ತು ತಪಃ ಪ್ರಭಾವದಿಂ ॥ ೧೩೬ ॥

ವ ॥ ಅದಂ ಕಂಡು—

ಮ ॥ ಉರಿಯಂ ಕಾರುವ ಕೆಂಡಮಂ ಕಱೆವ ವಕ್ತ್ರಂ ನೇತ್ರಮದ್ರೀಂದ್ರಮಂ ।
ಭರದಿಂದೆತ್ತುವ ದೂರದಿಂ ಸುರಿವ ನಾನಾ ಬಾಹುಕಾಂಡಂ ವಸುಂ ॥
ಧರೆಗಾದಂಬರಕೊಂದು ದಾಡೆ ಬಳೆದೆತ್ತಂ ಭೇರಿಯಂ ಬೀಱೆ ಭೀ ।
ಕರ ರೂಪಂ ತಳೆದಂ ಪ್ರಕೋಪನಸದಾಲಾಪಂ ಯಮಾಟೋಪಮಂ ॥ ೧೩೭ ॥

ಕಂ ॥ ನಗಮನಗೆಯೆತ್ತಿ ತಂದಿ ।
ಕ್ಕೆಗಡೆತ್ತಿದ ತೊಡೆಯ ವಜ್ರಧಾರೆಗಳಿಂ ರೇ ॥
ಣುಗಳಾದವಾ ಮುನಿಯ ಧೃತಿ ।
ಗಗನಧೃತಿತುಷಮಾತ್ರಮೆಂದು ಪೇೞ್ವಿಂತಾಗಳ್ ॥ ೧೩೮ ॥

ದಾನವಕೃತೋಪಸರ್ಗಮ ।
ದಾನವ ದೇವವ್ರತ ಪ್ರಭಾವದೆ ಕಿಡೆ ಸಂ ॥
ತಾನ ಲತಾಂತಾಸಾರಂ ।
ತಾನಲಸದೆ ದೇವ ಬೃಂದದಿಂದಾಯ್ತೆತ್ತಂ ॥ ೧೩೯ ॥

ವ ॥ ಆಗಳಾ ಯೋಗೀಶ್ವರಂ—

ಕಂ ॥ ಜ್ಞಾಯತನೇನಖಿಳಾರ್ಥ ।
ಜ್ಞೇಯಂ ಪರಕೀಯಮುಂ ಸ್ವಕೀಯಮುಮಲ್ಲಿಂ ॥
ಬೀಯಱೆವಿಂ ಕಿಡಿಸಿದನಾ ।
ತ್ಮಾಯತ್ತಂ ಯೋಗಿ ರಾಗಮಂ ದ್ವೇಷಮುಮಂ ॥ ೧೪೦ ॥

ವ ॥ ಅಂತಾತ್ಮಾಯತ್ತ ಸಮಸ್ತವಸ್ತುಗತಮಧ್ಯಸ್ಥಚಿತ್ತನೈಕಾಗ್ರ್ಯಯೋಗ್ಯಬಾಹ್ಯಾಭ್ಯಂತರ ಸಾಮಗ್ರಿಸಮಗ್ರ ನವ್ಯಗ್ರ ಮನೋವಷ್ಟಂಭಿತ ವಿಶಿಷ್ಟಾಷ್ಟಗುಣ ಪ್ರಕೃಷ್ಟ ನಿರುಪಮ ನಿರವಧಿ ನಿರುಪಾಧಿ ನಿರಾಲಂಬ ನಿರಾಮಯ ನಿರವಯವ ನಿರತಿಶಯ ನಿಶ್ಚಿತ ನಿಶ್ಚಳಿತ ನಿಶ್ಶಬ್ದ ನಿರ್ದ್ವಂದ್ವ ನಿಃಕ್ರಿಯ ನಿಃಕರ್ಮ ನಿಃಕಳ ನಿಃಕಾರಣ ನಿರ್ಭಯ ನಿರ್ಭೇದ ನಿರ್ಭರ ನಿರ್ವರ್ಣ ನಿರ್ವಿಷಯ ನಿರ್ವಿಕಾರ ನಿರ್ವಿಕಲ್ಪಕ ನಿರ್ವಾದ ಬೋಧಾಮಯ ಪರಮಾನಂದ ಸ್ವಭಾವ ಸ್ವರೂಪ ವ್ಯಕ್ತಿ ಲಕ್ಷಣ ಸ್ವಸಾಧ್ಯ ಸಿದ್ಧಿ ಪ್ರಸಿದ್ಧಿ ಪ್ರತಿಚ್ಛಂದ ಸ್ಥಾನೀಯ ವಿಶುದ್ಧ ಸಿದ್ದಿ ಪರ್ಯಾಯವರ್ಯನನವರತಾಧ್ರುವಾದಿ ದ್ವಾದಶಾನುಪ್ರೇಕ್ಷಾ ಭಾವನಾನುಭಾವ ಸಂಭಾವಿತಾಶೇಷ ಭಾವಂ ದೂರ ನಿರಸ್ತಾಪಾರ ಸಂಸಾರ ಪಾರಾವಾರ ನಿವರ್ತವರ್ತನ ಸಮರ್ಥಾರ್ಥ ರೌದ್ರಧ್ಯಾನನಾತ್ಮೀಕೃತ ನಿತ್ಯ ನಿರತಿಶಯ ನಿರ್ವಾದ ನಿರ್ವಾಣ ಸುಖಸುಧಾರ್ಣವ ನಿಮಜ್ಜನ ನಿರ್ಮಾಪಣ ಪ್ರವಣ ಚತುರ್ವಿಧ ಧರ್ಮಶುಕ್ಲಧ್ಯಾನ ವಿಧಾನಂ—

ಕಂ ॥ ಜಿನನೆಂದ ತೆಱನೆ ವಸ್ತುಗ ।
ಳೆನಿತನಿತರ ತೆಱನನಱವನುಂ ನೆಱೆ ಮಧ್ಯ ॥
ಸ್ಥನುಮಪ್ಪುದಱಂದವಿಚಳ ।
ಮೆನಿಸಿರ್ದಾಜ್ಞಾವಿಚಯಮನನ್ವಿತಜಯಮಂ ॥ ೧೪೧ ॥

ತೊಲಗದೆ ಮಿಥ್ಯಾತ್ವದಿನಘು ।
ಫಲದಿಂ ಸುಖಫಲದಿನಮಳ ರತ್ನತ್ರಯದಿಂ ॥
ತೊಲಗಿದರೆಂತುದ್ಧತ ಭವ ।
ಜಳಧಿಯನುತ್ತರಿಕುಮೆಂಬಪಾಯವಿಚಯಮಂ ॥ ೧೪೨ ॥

ದುರಿತಯುತ ಸುಕೃತದಿಂದಂ ।
ದುರಿತದಿನಯುದಿಂದೆ ದುರಿತದೆಯ್ದುಗುಮಾತ್ಮಂ ॥
ನರನಾರಕ ಸುರತಿರ್ಯಕ್ ।
ಸ್ವರೂಪತೆಯನೆನಿಸುವೀವಿಪಾಕವಿಚಯಮಂ ॥ ೧೪೩ ॥

ಪದಿನಾಲ್ಕೆ ರಜ್ಜು ಮೂಜಗ ।
ಮದಱೊಳಶುಭ ಶುಭದೆ ದುಃಖಸುಖಜೀವಂ ಶು ॥
ದ್ಧದಿನಕ್ಷಯನೆನಿಸುಗುಮೆನಿ ।
ಸಿದುದಂ ಸಂಸ್ಥಾನವಿಚಯಮಂ ಯಮಿ ತಳೆದಂ ॥ ೧೪೪ ॥

ವ ॥ ಅಂತತಿ ಪ್ರಶಸ್ತಲೇಶ್ಯಾಪರಿಣತನುಂ ಚತುರ್ವಿಧ ಧರ್ಮಧ್ಯಾನಾಧೀನಮಾನಸನುಮಾಗಿಯಧಪ್ರವೃತ್ತಾಪೂರ್ವಾನಿವೃತ್ತ್ಯಭಿಧೇಯಕರಣತ್ರಯ ಚರಮ ಸಮಯದೊಳನಂತಾನುಬಂಧಿ ಕ್ರೋಧಮಾನಮಾಯಾಲೋಭಂಗಳನೊರ್ಮೊದಲೊಳಿತರ ದ್ವಾದಶ ಕಷಾಯ ಸ್ವರೂಪದಿಂ ವಿಸಂಯೋಜಿಸಿ ಮತ್ತಮಂತರ್ಮುಹೂರ್ತಂ ವಿಶ್ರಮಿಸಿ ತತ್ಪರಿಣಾಮತ್ರಯಪವಿತ್ರಂ ಕ್ರಮದಿಂ ಮಿಥ್ಯಾತ್ವ ಸಮ್ಯಗ್ಮಿಥ್ಯಾತ್ವ ಸಮ್ಯಕ್ತ್ವ ಪ್ರಕೃತಿಗಳೆಂಬ ದರ್ಶನ ಮೋಹನೀಯಂಗಳಂ ನಿರವಶೇಷಂ ಕ್ಷಪಿಯಿಸಿದನದೆಂತೆನೆ --

ಚಂ ॥ ಮೊದಲ ಚತುಃಕಷಾಯವೆಸರಗ್ಗದ ಗೋವಳಿಗರ್ಕಳಾಂತೊಡೊ ।
ರ್ಮೊದಲೊಳೆ ಬಂಧ ಮೋಕ್ಷವಿಧುರಂ ಕರಣತ್ರಯಮೆಂಬ ಗಾಯದಿಂ ॥
ದದಿರದನಂತವೀರ್ಯನದಱಂ ಮುಱದಾಗಳೆ ಮೋಕ್ಷಮಲ್ಲದೊ ।
ಡ್ಡಿದೊಡವರಂ ಕರುತ್ತು ಮುಱದಂ ಜಗಜಟ್ಟಿ ದಲಾ ಮುನೀಶ್ವರಂ ॥ ೧೪೫ ॥

ವ ॥ ಅಂತಾ ಮುನಿರಾಜ ಕುಂಜರಂ ಸಪ್ತ ಪ್ರಕೃತಿ ಸಪ್ತಚ್ಛದ ಪಾದಪ ಮೂಳಮಂ ನಿರ್ಮೂಳಿಸೆ ಮೋಕ್ಷಲಕ್ಷ್ಮೀಸಮಾಕೃಷ್ಟಿ ಕರಣದಕ್ಷಾಕ್ಷೂಣ ನಿರ್ಮಳ ಕ್ಷಾಯಿಕ ಸಮ್ಯಗ್ದೃಷ್ಟಿ ವಿಶಿಷ್ಟನಾಗಿ ಸಮನಂತರಂ ಮಂದಮಂದತರ ಕಷಾಯೋದಯ ಸ್ಥಾನರಾಗರಂಜಿತ ಪ್ರಮತ್ತಾಪ್ರಮತ್ತ ಪರಾವರ್ತಾ ಸಹಸ್ರಗರ್ಭಿತಾಂತರ್ಮುಹೂರ್ತ ಕಾಲಂ ವಿಶ್ರಮಿಸಿ—

ಕಂ ॥ ಕ್ಷಪಣಶ್ರೇಣಿಯೆ ನಿರ್ವೃತಿ ।
ವಿಪುಳ ಪ್ರಾಸಾದ ಸುಖಸಮಾರೋಹಣಕಂ ॥
ತುಪಯೋಗಿಯೆಂದು ಯೋಗಿ ತ ।
ದುಪಯೋಗದೊಳತುಳ ವಿದ್ಯನುದ್ಯತನಾದಂ ॥ ೧೪೬ ॥

ವ ॥ ಅಂತುಕ್ಷಪಣ ಶ್ರೇಣ್ಯಾರುರುಕ್ಷುವಪ್ಪ ಮುಮುಕ್ಷುಮುಖ್ಯಂ ನಿರ್ಮಳ ಧರ್ಮಧ್ಯಾನಮಕರಿಕಾರೂಢಪ್ರೌಢನಧಃಪ್ರವೃತ್ತಕರಣಪರಿಣತಾತಿಶಯಪ್ರಮತ್ತ ಗುಣ ಸ್ಥಾನ ನಿಷ್ಪಾದಿತ ಸ್ಥಿತಿ ಬಂಧಾಪಸರಣ ಸಹಸಂ ತದನಂತರ ಸಮಯ ಸಂಪ್ರಾಪ್ತಾ ಪೂರ್ವ ಕರಣ ಕ್ಷಪಣಗುಣಸ್ಥಾನನರ್ಥವ್ಯಂಜನ ಯೋಗಸಂಕ್ರಮಣ ಕ್ರಮಸಂಭವಾದ್ವಾಚತ್ವಾ ರಿಂಶದ್ಭಂಗಸಂಗತ ಪೃಥಕ್ತ್ವ ವಿತರ್ಕವಿಚಾರನಾಮಾಭಿಧಾಮ ಪ್ರಥಮಶುಕ್ಲಧ್ಯಾನಾ ಧೀನಂ ಪ್ರತಿಸಮಯಾನಂತಗುಣವೃದ್ಧಿಸ್ಥಿತಿಬಂಧಾಪಸರಣ ಸ್ಥಿತ್ಯನುಭಾಗ ಕಾಂಡಕ ಪೂತಗುಣಶ್ರೇಣಿ ಗುಣಗಳಂ ನಿಗ್ರಹಿಸುತ್ತಮಂತರ್ಮುಹೂರ್ತಮಾತ್ರ ನಿರ್ವರ್ತಿತಾ ಪೂರ್ವಕರಣನುಮನಂತರ ಸಮಯ ಸಮುದಿತ ಪ್ರತಿಕ್ಷಣಾನಂತಗುಣ ಪರಿಣಾಮ ಪರಿಣತಾ ನಿರ್ವೃತಿಕರಣಗುಣಸ್ಥಾನನುಮಾಗಿ ನಿಜಗುಣಸ್ಥಾನ ಪ್ರಥಮಾದಿ ನವಭಾಗ ಗಳೊಳತಿರೂಢ ಷೋಡಶ ಪ್ರಕೃತ್ಯಾದಿಗಳಂ ನಿರ್ಭೇದಿಸಿದನದೆಂತೆನೆ—

ಕಂ ॥ ನಿರಯಾದಿ ಷೋಡಶ ಪ್ರಕೃ ।
ತಿರಿಪುವನನಿವೃತ್ತಿಕರಣ ನಿಶಿತಾಸಿಯಿನಂ ॥
ತುರವಣೆಯಿಂ ವಿಚ್ಛೇದಿಸಿ ।
ಪರಾಕ್ರಮಶ್ರೀಗೆ ಯತಿವರಂ ವರನಾದಂ ॥ ೧೪೭ ॥

ಪ್ರತ್ಯರ್ಥಿಭಾವದಿರ್ದ ।
ಪ್ರತ್ಯಾಖ್ಯಾನಾಖ್ಯಮಂ ಕಷಾಯಮನದಟಿಂ ॥
ಪ್ರತ್ಯಾಖ್ಯಾನಕಷಾಯಮ ।
ನತ್ಯೂರ್ಜಿತಸತ್ವನೆಂಟುಮಂ ವಿಘಟಿಸಿದಂ ॥ ೧೪೮ ॥

ಜಿನಮುನಿರಾಜಂ ಕ್ರಮದಿಂ ।
ದೆ ನಪುಂಸಕ ಯುವತಿಪದತಮುಮಂ ಧ್ಯಾನಾಂ ॥
ಶುನಿಕಾಯದಿಂದೆ ನಿರ್ಮೂ ।
ಲನಮಂ ಮಾಡಿದನುದಾತ್ತ ನಿರ್ಮಳವೃತ್ತಂ ॥ ೧೪೯ ॥

ಪರೆಯಿಸಿದಂ ಪುಂವೇದದ ।
ಪುರಾಣ ಸತ್ಕರ್ಮದೊಡನೆ ನೋಕರ್ಮಮನ ॥
ಕ್ಷರ ಪರಿಣಾಮಯುತಂ ಹಾ ।
ಸ್ಯರತ್ಯರತಿ ಶೋಕಭಯ ಜಿಗುಪ್ಸಾಹ್ವಯಮಂ ॥ ೧೫೦ ॥

ಅಳರಿಸಿ ಸಮಯೋನದ್ವ್ಯಾ ।
ವಳಿ ಮಾತ್ರದೆ ಪುರುಷವೇದ ನವಬಂಧಮನಂ ॥
ತಳರೆಸೆದಂ ಕ್ರಮದಿಂ ಸಂ ।
ಜ್ವಲನಕ್ರೋಧಾದಿ ಸಾಂಪರಾಯತ್ರಯಮಂ ॥ ೧೫೧ ॥

ವ ॥ ಅಂತು ನಿಷ್ಠಾಪಿತ ಸಾಮಯಿಕಚ್ಛೇದೋಪಸ್ಥಾಪನಾಸಂಯಮಾಧಿಷ್ಠಾನನಾಗಿ ವೃತ್ತಿಕರಣಸ್ಥಾನಂ ಸಮನಂತರ ಸಮುಪಗತ ಸೂಕ್ಷ್ಮ ಸಾಂಪರಾಯ ಗುಣಸ್ಥಾನ ಸಂಯುತಮಾಗಿ—

ಕಂ ॥ ಶ್ರವಣೋತ್ತಮನವನತ ವೈ ।
ಶ್ರವಣಂ ಸಲೆ ಸರ್ವಗುಣವಿಲೋಪನಮಂ ಮಾ ॥
ಡುವ ಲೋಭಮಂ ವಿಭೇದಿಸೆ ।
ವಿವಿಧ ಗುಣಾಭರಣದಿಂ ವಿಭೂಷಿತನಾದಂ ॥ ೧೫೨ ॥

ವ ॥ ಅಂತತಿಕ್ರಾಂತ ಸೂಕ್ಷ್ಮಸಾಂಪರಾಯಾದವ್ಯವಸಾಯನತಿಖ್ಯಾತ ಯಥಾಖ್ಯಾತ ಚರಿತ್ರೋಪಲಕ್ಷಿತ ಕ್ಷೀಣಕಷಾಯಚ್ಛದ್ಮಸ್ಥ ವೀತರಾಗಸಂಯುತನುಮಾಗಿ ನಿಜ ಗುಣಸ್ಥಾನದ್ವಿಚರಮ ಚರಮ ಸಮಯದೊಳ್—

ಕಂ ॥ ಸಲೆ ನಿದ್ರಾದ್ವಯಮಂದಾ ।
ನಲಾಭ ಭೋಗೋಪಭೋಗ ವೀರ್ಯಮೆನಿಪ್ಪ ॥
ಸ್ಖಲಿತಾಂತರಾಯಮಯ್ದುವ ।
ನಲೆದುರು ಸುಖಸಂಪದಕ್ಕೆ ತಾಂ ಪತಿಯಾದಂ ॥ ೧೫೩ ॥

ನಿರುಪಮ ಮುನಿ ಚಕ್ಷುರಚ ।
ಕ್ಷುರವಧಿ ಕೇವಳಮೆನಿಪ್ಪ ದರ್ಶನ ಜನಿತಾ ॥
ವರಣ ಚತುಷ್ಟಯಮಂ ಸಂ ।
ಹರಿಸಿದನಘವನದವಾನಳಂ ಮುನಿತಿಳಕಂ ॥ ೧೫೪ ॥

ತರದಿಂ ಮತಿಶ್ರುತಾವಧಿ ।
ಪರಮ ಮನಃಪರ್ಯಯೋದ್ಧ ಕೇವಳಬೋಧಾ ॥
ವರಣಮನಯ್ದುಮನುಪಸಂ ।
ಹರಿಸಿದನತಿಶಯವಿಶುದ್ಧಭಾವಸಮೃದ್ಧಂ ॥ ೧೫೫ ॥

ಉ ॥ ಚೈತ್ರದ ಕೃಷ್ಣಪಕ್ಷದ ಚತುರ್ದಶಿಯೊಗೆಯೆ ವಿಶಾಖೆಗಂದು ಬಂ ।
ದತ್ರಿವಿಲೋಕನ ಪ್ರಭವನೊಪ್ಪಿರೆ ಕೇವಳಬೋಧಮುಣ್ಮಿದ ॥
ತ್ತ್ರೀತ್ರಿಜಗತ್ತ್ರಿಕಾಲ ವಿಷಯಾಖಿಳ ವಸ್ತುವಿಬೋಧಕಂ ಸುಖ ।
ಕ್ಷೇತ್ರಮತೀಂದ್ರಿಯಾಕ್ಷಯಮನಂತಮಪಕ್ರಮದಿಂದ್ರವಂದ್ಯನೊಳ್ ॥ ೧೫೬ ॥

ಧ್ಯಾನವಿಧಾನಳಂ ತವಿಸೆ ಘಾತಿ ಚತುಷ್ಟಯ ಕಿಟ್ಟಮಂ ನಿಜಾ ।
ಧೀನಮನಂತವೀರ್ಯ ಸುಖದರ್ಶನ ಬೋಧ ಚತುಷ್ಟಯಂ ತ್ರಿಲೋ ॥
ಕೀನುತಮಾತ್ಮ ಹೇಮದೊಳೆ ವರ್ಣವಿಶೇಷಮದಾಗೆ ಶೋಭಿಪಂ ।
ಮಾನಿತಶೀಲ ರತ್ನನಿಧಿ ಪಾರ್ಶ್ವಜಿನಂ ಭುವನೈಕ ಭೂಷಣಂ ॥ ೧೫೭ ॥

ವ ॥ ಅಂತುಮಲ್ಲದೆ—

ಉ ॥ ಧ್ಯಾನವಿಧಾನವೆಂಟೆಸೆವದದ್ಭುತದಿಂದೊಡೆದೆಯ್ದೆ ಘಾತಿಸಂ ।
ತಾನಶಿಲಾಚತುಷ್ಟಯಮನುದ್ಭವಬೋಧನಯೋಗಿ ಕೇವಳ ॥
ಜ್ಞಾನನಿಧಾನಮಂ ಪಡೆದು ವಿಶ್ವವಿಪಕ್ಷ ವಿಶುದ್ಧ ಲಕ್ಷ್ಮಿಯಿಂ ।
ದೇನೆಸೆದಿರ್ದನೋ ತ್ರಿಭುವನಪ್ರಭು ಪಾರ್ಶ್ವಜಿನೇಶ್ವರಂ ವರಂ ॥ ೧೫೮ ॥

ವ ॥ ಅದಲ್ಲದೆಯುಂ—

ಮ॥ ಸ್ರ ॥ ಪ್ರಿಯಭಾಷಾಸಿಂಧು ಸಂಭೂತಿಯಿನುದಿತ ಗುಣಶ್ರೇಣಿ ಮಾಣಿಕ್ಯದಿಂ ನಿ ।
ಶ್ಚಯ ನಿತ್ಯಾನ್ವತ್ವದಿಂ ಭೂನುತ ನಿಜಧೃತಿಯಿಂ ತ್ಯಕ್ತ ಸಮ್ಯಕ್ತ್ವ ಲೋಕ ॥
ತ್ರಯ ಮಿಥ್ಯಾಧ್ವಾಂತಮಂ ತೂಳ್ದುವ ವಿಭವಂ ಸತ್ಕೇವಲಜ್ಞಾನಭಾನೂ ।
ದಯದಿಂ ಪೂರ್ವಾದ್ರಿಯೆಂಬಂತಸದಳಮೆಸೆದಂ ಶಾಶ್ವತಂ ಪಾರ್ಶ್ವನಾಥಂ
॥ ೧೫೯ ॥

ಗಗನೋದ್ಯಧ್ಯಾನಪ್ರಾಣಿವಧನಖಿಳವಿದ್ಯೇಶ್ವರನಹೀನಭಾವಂ ।
ವಿಗತಚ್ಛಾಯಂ ವಿಪಕ್ಷ ಪ್ರಚಳನಪಹೃತಾಭೋಜನೇಚ್ಛಂ ಸುಭಿಕ್ಷಂ ॥
ಪ್ರಗುಣ ಶ್ರೀ ಸಿದ್ಧಕೇಶಪ್ರಣವಮತಿ ಚತುರ್ವಕ್ತ್ರನೆಂಬೀ ವಿಳಾಸ ।
ಕ್ಕೆಗಡಂತಾವಾಸಮಾದಂ ವಿಬುಧಜನಮನಃ ಪದ್ಮಿನೀಪದ್ಮಮಿತ್ರಂ ॥ ೧೬೦ ॥

॥ ಗದ್ಯಂ ॥

ಇದು

ವಿದಿತವಿಬುಧಲೋಕನಾಯಕಾಭಿಪೂಜ್ಯ ವಾಸುಪೂಜ್ಯ ಜಿನಮುನಿ
ಪ್ರಸಾದಾಸಾದಿತ ನಿರ್ಮಳಧರ್ಮವಿನುತ ವಿನಯಜನ
ವನಜವನವಿಳಸಿತ ಕವಿಕುಳತಿಳಕಪ್ರಣೀತಮಪ್ಪ
ಪಾರ್ಶ್ವನಾಥ ಪುರಾಣದೊಳ್ ಕೇವಲ
ಜ್ಞಾನೋದಯ ವರ್ಣನಂ

**ಪಂಚದಶಾಶ್ವಾಸಂ ಸಂಪೂರ್ಣಂ**

---

॥ ಶ್ರೀಃ ॥

# ಷೋಡಶಾಶ್ವಾಸಂ

ಕಂ ॥ ಶ್ರೀ ಪರಮೌದಾರಿಕತನು ।
ಪಾಪಹರಂ ಪುಣ್ಯರೂಪನೆಸೆದಿರೆ ಜಗತೀ ॥
ದೀಪಂ ಸತ್ಪಥದಲ್ಲಿ ಕ ।
ಳಾಪತಿ ಜಿನರಾಜನೆನಿಪ ಕವಿಕುಲತಿಲಕಂ ॥ ೧ ॥

ಹರಿಶಂಖಪಟಹ ಘಂಟಾ ।
ದ್ಧುರರವದಿಂ ಜ್ಯೋತಿರಮರ ಭವನ ಭವವ್ಯಂ ॥
ತರ ಕಲ್ಪವಾಸಿಗರ್ಭಾ ।
ಸುರ ಬೋಧೋದಯಮನಱಿದು ಬರೆ ಮುದದೊದವಿಂ ॥ ೨ ॥

ಮ॥ ಸ್ರ॥ ನುತಪೌಳೋಮಿಕಟಾಕ್ಷದ್ಯುತಿವಿಸರಸುಧಾಭೂತರೋಮಾಂಚಸಸ್ಯಂ ।
ಕ್ಷಿತಿಗಾತ್ರಂ ಶೋಣರತ್ನಾಭರಣಕಿರಣಸಿಂಧೂರಸಂಶೋಭಿತೈರಾ ॥
ವತ ನಾಗೇಂದ್ರಾದಿರೂಢಂ ಸುರಸಮಿತಿಯುತಂ ನಾಕಲೋಕಾಂಗನಾಸಂ ।
ಗತಿ ಗೀತಾತೋದ್ಯನೃತ್ಯ ಪ್ರಣಯಿ ಶತಮುಖಂ ಬಂದನಾನಂದದಿಂದಂ ॥ ೩ ॥

ವಿನುತಾಪಾಂಗ ಪ್ರಭಾಸಂಜನಿತ ಸುರನದೀಪೂರದೊಳ್ ಚಾರುವಕ್ತ್ರಂ ।
ವನಜಾತಂ ಸ್ಮೇರನೇತ್ರಂ ಧವಳಕುವಳಯಂ ಬಾಹುಜಾಳಂ ಮೃಣಾಳಂ ॥
ಸ್ತನಭಾರಂ ಚಕ್ರವಾಕಂ ಚಳದಳಕಚಯಂ ಚಂಚರೀಕಂ ಸಮಂತಾ ।
ಗೆ ನಿತಾಂತಂ ದೇವಕಾಂತಾಕುಳಮೆಸೆದು ನಭೋಭಾಗದೊಳ್
ಬಂದುದಾಗಳ್ ॥ ೪ ॥

ವ ॥ ಅಂತುಮಲ್ಲದೆ—

ಮ ॥ ಮೊಗದಿಂ ನಿರ್ಮಳ ಚಂದ್ರಮಂಡಳ ಸಹಸ್ರಾನೀಕಮಂ ಕೇಕರಾಂ ।
ಶುಗಳಿಂ ಚಂದ್ರಿಕೆಯಂ ತಳತ್ತಳಿಪ ಮುಕ್ತಾಹಾರದಿಂ ತೋರತಾ ॥
ರಗೆಯಂ ನಿರ್ಮಿಸುತಂ ಭ್ರಮದ್ಭ್ರಮರಮಾಳಾನಂದಿ ಮಂದಾರಮಾ ।
ಲೆಗಳಂ ಲೀಲೆಯಿನಾಂತು ಬಂದುದಮರೀಸಂದೋಹಮುತ್ಸಾಹದಿಂ ॥ ೫ ॥

ವ ॥ ಆಗಳಖಿಳಜನ ಮನೋಮಯೂರೀಲೋಚನಚಾತಕನಿಕಾಯಹರ್ಷೋ ತ್ಕರ್ಷ ವರ್ಷಕಾಲಲೀಲಾಭ್ರಮೈಕೇಂದ್ರನೀಳಮಣಿಮಯ ಸಮವಸರಣಭೂಮಂಡಳ ಮನನತಿದೂರದೊಳೆ ಕಂಡು ನಿಟಿಲತಟಘಟಿತ ಕರಕಮಲಯುಗಳರಾಗಿ—

ಮ ॥ ಇದು ದುಷ್ಕರ್ಮದವಾನಳಪ್ರಶಮನ ಪ್ರೋದ್ಭೂತನೀಳಾಭ್ರಮಿಂ ।
ತಿದು ಲೋಕತ್ರಯ ಚೈತ್ರಮೋಹಮಹಿಭೃದ್ದ್ವೋರ್ಗರ್ವಹೃದ್ದುರ್ಗಮಿಂ ॥
ತಿದು ಜನ್ಮಾಂಬುಧಿ ಪಾರತಾರಣ ಕರಂಡಂ ನೋಡಿಮೆಂದೆಯ್ದೆ ಸ ।
ಮ್ಮದದಿಂದಿಂತಭಿವರ್ಣಿಸಿತ್ತಮರಸಂತಾನಂ ಜಿನಾಸ್ಥಾನಮಂ ॥ ೬ ॥

ವ ॥ ಅಂತು ಪರಮಾನಂದದಿಂ ಪೊಗಟ್ಟಿ ಶತಮಖಶತಪರಿವೃತನುಂ ಚತುರ್ಣಿಕಾಯಸುಮನಸ್ಸಮೂಹಸಮನ್ವಿತನುಮಾಗಿ ಧರ್ಮಾನುರಾಗಸಾಗರೋತ್ತರಂಗ ಪ್ರೇರಿತಾಂತರಂಗಂ ಬಂದು ಮುನ್ನಮೆ ತನ್ನ ನಿಯಮದಿಂ ಧನದಂ ನಿರ್ಮಿಸಿದ ಸಮವಸರಣದ ಸಿರಿಯಂ ಮೆಚ್ಚಿ ಬಿಚ್ಚಳಿಸಿ ಸಹಸ್ರಾಕ್ಷಂ ನಿರೀಕ್ಷಿಸಿದನದೆಂತಿರ್ದುದೆಂದೊಡೆ—

ಕಂ ॥ ರವಿ ಕಣ್ಗೆ ಸೊಗಯಿಸಂ ನೋ ।
ಡುವೊಡತಿ ಹೀನಾಧಿಕಸ್ವಭಾವಂ ಶಶಿಯೆಂ ॥
ದವರನಿಱಿಯಿಪುದೆನೆ ಪೊಗ ।
ೞ್ವವನಾವಂ ಸಮವಸೃತಿಯ ಶೋಭಾಕೃತಿಯಂ ॥ ೭ ॥

ಭಾವಕರೀಯೆಡೆಗಿದು ಶೋ ।
ಭಾವಹಮೆಂಬಿನೆಗಮಿಂಬು ಮೆಯ್ವೆತ್ತಿರೆ ನಾ ॥
ನಾ ವಸ್ತುಗಳಂ ನೆಱಪಿ ಕ ।
ಳಾವಿದುರಂ ಧನದನೊಸೆದು ಸಮೆದಂ ಸಭೆಯಂ ॥ ೮ ॥

ಧರೆಗಯ್ಸಾಸಿರ ಬಿಲ್ಲಂ ।
ತರದಲ್ಲಿ ನಿರಂತರ ಪ್ರಶೋಭೆಗೆ ನೆಲೆಯಾ ॥
ಯ್ತಿರು ಸಮವಸರಣಮವನತ ।
ಶರಣಂ ಸುಖಕರಣಮವಹಿತಾಂತಃಕರಣಂ ॥ ೯ ॥

ಗುಣನಿಧಿಗೆಱಗೆ ಗುಣಾರೋ ।
ಹಣಮಿದೊ ತೆಱದಿಂದೆ ಸುಗಮಮೆಂದಱಿಪುವವಾ ॥
ಕ್ರ್ಮಣುತಪದೌಷಧನಿಧಿಗಳ್ ।
ಮಣಿಮಯ ವಿಂಶತಿ ಸಹಸ್ರ ಸೋಪಾನಂಗಳ್ ॥ ೧೦ ॥

ವ ॥ ಅಂತು ನಾಲ್ಕುಂ ದೆಸೆಯೊಳುಮೆಸೆವ ಸಮೀಚೀನ ಸೋಪಾನಂಗಳಿಂ ಮನಂಗೊಳಿಸಿ ಜಾತರೂಪ ಗೋಪುರಚತುಷ್ಟಯನೀಭುವನೈಕಮಲ್ಲಂ ಮೋಹಮಲ್ಲನೆಕ್ಕತುಳದಿಂದಕ್ಕುಳಿಸದೆ ಡೊಕ್ಕರಿಗೊಂಡು ನೆಟ್ಟನೆ ಮುಱಿದಿಕ್ಕಿ ಗೆಲ್ದ ವಿದ್ಯಾಧರಕಳನಿದೆನಿಸಿದ ಸಮವಸರಣದ—

ಕಂ ॥ ಲೋಕಾಕಾಶದ ತೆಱದಿಂ ।
ದೇಕೇಂದ್ರಿಯನೀಳ ಕುಟ್ಟಿಮಂ ಕಣ್ಗೊಳಿಕುಂ ॥
ವ್ಯಾಕೀರ್ಣ ನವಪದಾರ್ಥಾ ।
ನೀಕಮಖಂಡಿತ ವಿಳಾಸಮಂಡಿತಮೆಂತುಂ ॥ ೧೧ ॥

ಶಾಲಂ ವೇದಿದ್ವಿತಯಂ ।
ಶಾಲೋನ್ನತ ವೇದಿಶಾಲ ವೇದಿಕೆವಿಳಸ ॥
ಚ್ಛಾಲಂ ವೇದಿಕೆಯುವರವಿ ।
ಶಾಲಾಂತರವರೆಗಳೆಂದು ಸೊಗಯಿಸುತಿರ್ಕುಂ ॥ ೧೨ ॥

ವ ॥ ಮತ್ತಮವಱನ್ವರ್ಥನಾಮಾಭಿರಾಮತೆಯಂ ಪೇೞ್ವೊಡೆ—

× × × × × ×
ಪ್ರಕರದಿಂ ಪುಷ್ಪವಾಟದಿಂ ವನಗಳಿಂದು ।
ಚ್ಚಕೃತ ಧ್ವಜದಿಂ ಸುರಕುಜ ।
ನಿಕರದೆ ಸಂಗೀತಗೃಹ ಗಡಣದಿಂದೆಸೆಗುಂ ॥ ೧೩ ॥

ಬಳಸಿರ್ದ ಶಾಲವೇದಿಕೆ ।
ಗಳೆ ನೆಗೞ್ದಾಧಾರವಳಯವಾಗೆ ಸುವರ್ಣೋ ॥
ಜ್ವಳವಂ ಸಸಿದ್ಧ ಚಕ್ರಮು ।
ನಳವಡೆ ಬರೆದಂತೆ ಸಮವಸೃತಿ ಸೊಗಯಿಸುಗುಂ ॥ ೧೪ ॥

ವ ॥ ಮತ್ತಮುತ್ತಮ ಪುರುಷನಂತೆ ಸದ್ವೃತ್ತತೆಗೊಳಗಾದ ಸಮವಸರಣ ಮಂಡಳದ—

ಕಂ ॥ ಕಡೆವಿಡಿದು ಪಂಚರತ್ನದ ।
ಪುಡಿಯಿಂದಂ ಪಡೆದ ಧೂಳಿಶಾಳಂ ಚೆಲ್ವಂ ॥
ಪಡೆದಿಂದ್ರಚಾಪಮುಂ ಜಿನ ।
ನಡಿಗಳನೋಲಗಿಪ ಲೀಲೆಯಂ ಪಾಲಿಸುಗುಂ ॥ ೧೫ ॥

ಸುರಚಾಪದ ಸಿರಿವಡೆದುಂ ।
ಸ್ಥಿರವಿಭವಮನಾಳ್ದು ಬಗೆವೊಡಚ್ಚರಿ ಬಹಿರು ॥
ದ್ಧುರ ಪರಿಧಿ ಕಣ್ಗೆ ವಂದುದು ।
ವರಧೂಳೀಶಾಲಮೆನಿಸಿಯುಂ ನೋಟಕರಾ ॥ ೧೬ ॥

ವ ॥ ಅಂತು ಸೊಗಯಿಸುವ ಧೂಳೀಶಾಲಲಕ್ಷ್ಮೀಲಪನ ವಿಳಾಸಮನೊಳಕೊಂಡು—

ಕಂ ॥ ಘನಘಟಿತ ಪಂಚರತ್ನಾಂ ।
ಶುನಿಕಾಯ ವಿಚಿತ್ರಿತಾಂಬರ ಪ್ರಸರಂ ನೆ ॥
ಟ್ಟನೆ ಜಾತರೂಪಮಾಗಿಯು ।
ಮನುಪಮ ಗೋಪುರಚತುಷ್ಟಯಂ ಚಿತ್ರತರಂ ॥ ೧೭ ॥

ತ್ರಿದಶಶರಾಸನರುಚಿ ಮೊದ ।
ಲದು ಕನಕದವೆರಡು ರಕ್ತಕನಕದದೊಂದ ॥
ಗ್ಗದ ಕನಕ ರಜತಕಳಧೌ ।
ತದದೊಂದೊಂದುೞಿದವೆರಡು ರವಿಕಾಂತಂಗಳ್

ಮೊದಲದು ಕನಕಜವೆರಡನೆ ।
ಯದು ಮೊದಲಾದಾಱುಗೋಪುರಂ ರಜತಮಯಂ ॥
ವಿದಿತ ಹರಿನ್ಮಣಿಮಯಮೆರ ।
ಡೊದವಿದ ಜಿನಸಭೆಯ ಗೋಪುರಂಗಳ್ ಕ್ರಮದಿಂ ॥ ೧೮ ॥

ಕಂ ॥ ದ್ವಾರತ್ರಿತಯದೊಳಂ ಪ್ರತಿ ।
ಹಾರಜ್ಯೋತಿಷ್ಕರೆರಡರೊಳ್ ಯಕ್ಷರ್ ದೌ ॥
ವ್ವಾರಿಕರುೞಿದೆರಡರೊಳಂ ।
ತಾರಯೆ ಭವನ ಭವ ಕಲ್ಪಜಪ್ರತಿಹಾರರ್ ॥ ೧೯ ॥

ವಿಳಸಿತ ಗೋಪುರದಿರ್ಕೆಲ ।
ದೊಳವೊಂದೊಂದತುಳನೃತ್ಯನಿಳಯಂ ಕನಕೋ ॥
ಜ್ವಳಧೂಪಘುಟಮುಮಾತೆಱ ।
ದೊಳೆ ಕಣ್ಗೊಳಿಸಿರ್ಕುಮವರಮುಂತತಿಕಾಂತಂ ॥ ೨೦ ॥

ನಾಟಕಶಾಲೆಯೊಳಭಿನವ ।
ಹಾಟಕಮಣಿಘಟಿತ ಧೂಪಘುಟ ಧೂಮಚಯೋ ॥
ದ್ಘಾಟಿತ ಘನಕೆ ನಲಿವ ನವಿ ।
ಲಾಟಮನನುಕರಿಸೆ ವರ್ತಿಪರ್ ಸುರಸತಿಯರ್ ॥ ೨೧ ॥

ವ ॥ ಅಂತು ಕಾಂತಿಯಂ ತಳೆದ ಗೋಪುರಂಗಳ ಬಹಿರಂತರ್ಜಗತಿಗಳೊಳ್ ತ್ರಿಜಗತ್ಪೂಜ್ಯರಾಭಿಷವಣ ಪ್ರವಣಂಗಳುಮತೀತೋತ್ತರ ಸಪ್ತಜನ್ಮ ಪ್ರದರ್ಶನಕಂಗಳುಂ ದುರಂತ ದುಃಖಾಗಮ ನಿದಾಘ ನಿವಾರಣ ಪ್ರವೀಣಂಗಳುಮನೂನ ಜ್ಞಾನಭಾನೂದಯಾಚ್ಛಾದಕ ಮಿಥ್ಯಾತ್ವಾಂಭೋಧನಿರ್ಭೇದನ ಪ್ರಭಂಜನ ಜನಕಂಗಳುಂ ಸಂಸಾರ ಕಾಂತಾರಪರಿಭ್ರಮಣ ಶ್ರಮಹರಂಗಳುಂ ಪ್ರಗುಣಗುಣ ಸುಪ್ರತಿಷ್ಠಾಪ್ರದಂಗಳುಂ ಮೋಕ್ಷಲಕ್ಷ್ಮೀ ವಿವಾಹಗೇಹಾಲಂಕಾರಂಗಳುಂ ಮನಸಿಜ ವಿಜಯಜಾತಖ್ಯಾತಿ ವ್ಯಾಪಕಂಗಳುಮಪ್ಪ—

ಕಂ ॥ ಕಳಶೌಘ ಪತ್ರ ಛತ್ರಾ ।
ಮಳಚಾಮರ ತಾಳ ಸುಪ್ರತಿಷ್ಠಿತ ಭೃಂಗಾ ॥
ರಲಸದ್ಧ್ವಜಮೆನಿಸಿದ ಮಂ ।
ಗಳಮಿವು ನೂಱೆಂಟು ಸೊಗಯಿಕುಂ ಪ್ರತ್ಯೇಕಂ ॥ ೨೨ ॥

ಸುರಗಿರಿವೊಲ್ ಪಾಂಡುಕದಿಂ ।
ಶರನಿಧಿವೋಲಂಭದಿಂದೆ ಬಲಿಬಂಧನ ತ ॥
ತ್ಪರಹರಿವೊಲ್ ಮಾಣವಕ ।
ಸ್ಫುರಿತಾಕೃತಿಯಿಂದೆ ಪದ್ಮದಿಂ ಸುರನದಿವೋಲ್ ॥ ೨೩ ॥

ಪರಿಭಾವಿಸುವೊಡೆ ರೋಹಣ ।
ಗಿರಿಯಂತಿರೆ ಸರ್ವ ರತ್ನದಿಂದುಜ್ಜಯಿನೀ ॥
ಪುರದಂತೆ ಮಹಾಕಾಳದಿ ।
ನುರುದಕ್ಷಿಣ ದಿಕ್ಕಿನಂತೆ ಕಾಲಸ್ಥಿತಿಯಿಂ ॥ ೨೪ ॥

ಕಂ ॥ ಸೊಗಯಿಪ್ಪ ಗೋಪುರಂಗಳ್ ।
ಜಗತೀತಳಮೊಪ್ಪುತಿರ್ಪ ಸಂವತ್ಸರಮಾ ॥
ಲೆಗಳೆನೆ ಪಿಂಗಳದಿಂ ಕಾಂ ।
ತಿಗೆ ಸಖನ್ನೆತರ್ಪವಿಭವದಹಿಭವನದವೋಲ್ ॥ ೨೫ ॥

ಎನಿತೊಳವು ತೊಳಪ ಗೋಪುರ ।
ಮನಿತರೊಳಂ ನೂಱುನೂಱು ಮಣಿತೋರಣಮಂ ॥
ತುನಿಕಾಯದಿಂ ನಭೋಮಮಂ ।
ಡನಂ ಬೆರಸು ಶಕ್ರಚಾಪಮಂ ಪಡೆದೆಸೆಗುಂ ॥ ೨೬ ॥

ಪಳಿಕಿನ ಭಿತ್ತಿಗಳಿಕ್ಕೆಲ ।
ದೊಳಮಳವಡೆ ಧೂಳಿಶಾಲದಿಂ ಜಿನಪೀಠ ॥
ಸ್ಥಳಮಂ ಮುಟ್ಟುವಿನಂ ಕ ।
ಣ್ಗೊಳಿಸಿರ್ಪುವು ನಾಲ್ಕು ಬೀದಿ ನಾಲ್ಕುಂ ದೆಸೆಯೊಳ್ ॥ ೨೭ ॥

ಬೀದಿಗಳಮರನದೀ ಸಂ ।
ವಾದಿಗಳಮರೀಕೃತೋಪಹಾರ ಲತಾಂತಾ ॥
ಮೋದಿಗಳಘವಿಘಟನ ಸಂ ।
ಪಾದಿಗಳೆಯ್ದಿಪವು ಪರಮಪದಸಂಪದಮಂ ॥ ೨೮ ॥

ವ ॥ ಮತ್ತಮಾ ಚತುರ್ಗತಿನಿವಾರಣ ಚತುರ್ವೀಥಿಮಧ್ಯದೊಳ್ ದ್ವಾದಶ ಜಾತರೂಪ ಗೋಪುರಾಳಂಕೃತ ಶಾಲತ್ರಯದಿಂದೊಳಗೆ—

ಕಂ ॥ ಧನುವೆಂಟು ನಾಲ್ಕು ನಾಲ್ಕಂ ।
ತನುಕ್ರಮದಿನುದಯಮೆನಿಪ ಮೂಱುಂ ಪೀಠಂ ॥
ಘನವೈಡೂರ್ಯಮಯಂ ಭ ।
ರ್ಮನಿರ್ಮಿತಂ ಪಂಚರತ್ನಸಂಚಿತಮೆಸೆಗುಂ ॥ ೨೯ ॥

ನಂದಾಸರೋವರಮಲ ।
ದಿಂದೀವರದಿಂದಮಮರಿಯರ ಗತಪಕ್ಷಂ ॥
ಸ್ಯಂದನ ಧವಳವಿಳೋಕನ ।
ಸಂದೋಹದೊಳೊಂದಿದಾಸ್ಯದಂದದಿನೆಸೆಗುಂ ॥ ೩೦ ॥

ವ ॥ ಅಂತು ನೇತ್ರ ವಿಚಿತ್ರಂಗಳಾದ ಪೀಠತ್ರಯಂಗಳ ಮೇಲೆ—

ಮ ॥ ಸ್ರ॥ ದ್ವಿಸಹಸ್ರಾರಂಗಳಿಂದಂ ಕುಲಿಶಮಣಿ ಮೊದಲ್ಸಾಟಿಕಂ ವೃತ್ತಮಧ್ಯಂ ।
ನಿಸದಂ ವೈಡೂರ್ಯಪಿಂಡಂ ಧ್ವಜ ಚಮರರುಹಾಲಂಬಿ ಘಂಟಾಳಿಯಿಂ ನಾ ॥
ಲ್ದೆಸೆಯೊಳ್ಶೋಭಿಪ್ಪ ನಾಲ್ಕುಂ ಮಣಿಮಯ ಜಿನಬಿಂಬಂಗಳಿಂದಗ್ರಿಮಂ ಶೋ ।
ಭಿಸೆ ಮಾನಸ್ತಂಭ ಮಾನೋಹರಮೆನಿಸಿ ಚತುರ್ದಿಕ್ಕಿನೊಳ್
ನಾಲ್ಕುಮಿರ್ಕುಂ ॥ ೩೧ ॥

ಕಂ ॥ ಪುದಿದಯ್ದುಯ್ದು ಸುಧಾಹ ।
ರ್ಮ್ಯದ ನಡುವೊಂದೊಂದು ಜಿನಗೃಹಂ ಮಾನಸ್ತಂ ॥
ಭದಿನಂತಾ ಮಾನಸ್ತಂ।
ಭದ ಸೀಮೆವರಂ ವಿರಾಜಿಸಿರ್ಕುಂ ಕ್ರಮದಿಂ ॥ ೩೨ ॥

ಪ್ರಾಸಾದ ಚೈತ್ಯಭೂಮಿಸ ।
ಮಾಸಾದಿತ ನವಸುಧಾಂಶು ವಿಸ್ತಾರದೆ ಪು ॥
ಣ್ಯಾಸಾರ ಶಾರದಾಭ್ರವಿ ।
ಳಾಸಮನೊಳಕೆಯ್ದು ನಭದವೊಲ್ ಕಣ್ಗೊಳಿಕುಂ ॥ ೩೩ ॥

ವ ॥ ಪೂರ್ವ ವರ್ಣಿತ ವರ್ಣನಾಕೀರ್ಣ ರಜತರಚಿತ ಚತುಶ್ಚತುರ್ವಾರ ವಿಸ್ತಾರಕ್ಕಾಧಾರಮಾಗಿ—

ಕಂ ॥ ನಿರುಪಮ ಕನಕಾಬ್ಜರಜಂ ।
ತರಂಗತತಿ ನೂಂಕೆಯೇಱಿಗಟ್ಟಿದುದೆಂಬಂ ॥
ತಿರೆ ಪೊಸ ಪೊಂಗಳ ವೇದಿಕೆ ।
ಯೆರಡುಂ ಕಡೆಯಲ್ಲಿ ಕಣ್ಗೆ ಪಡೆದಿರೆ ಚೆಲ್ವಂ ॥ ೩೪ ॥

ಪಾವನತೆಗೆ ಬಯಸಿ ಜಗ ।
ತ್ಪಾವನನಂ ಗಂಗೆ ಪೊರ್ದಿ ಪೊಗಱ್ವಂದದಿನಿಂ ॥
ದೀವರ ಪರಿಮಳತರ ಮಧು ।
ಪಾವಳಿ ರವದೆಸೆವುದಮಳ ಪರಿಖಾವಳಯಂ ॥ ೩೫ ॥

ಲಲನೆಯರ ವದನವನಜಂ ।
ವಿಲಸಿತ ಲಾವಣ್ಯನದಿಯೊಳೆಸೆವಂದದೆ ನಿ ॥
ರ್ಮಳ ಜಳಖಾತಿಕೆಯೊಳಮು ।
ಜ್ಜ್ವಲದಂಬುಜಮೆಸೆದುವುಱಿದು ಪಂಕಜವೆಸರಂ ॥ ೩೬ ॥

ಕುಸುಮರಜಂ ಮಣಲಂಭ ।
ಸ್ತ್ರಸರಲಸತ್ಕೇಳಿ ಕಾಂತೆಯರ ಕುಚಲಿಪ್ತಂ ॥
ಘುಸೃಣ ಮಲಯರುಹ ಮೃಗಮದ ।
ರಸಪಂಕಮೆ ಪಂಕಮಮಳ ಜಳಖಾತಿಕೆಯೊಳ್ ॥ ೩೭ ॥

ಜಲಕೇಳಿಗೆಳಸಿದಮರಿಯ ।
ರಲಘುಸ್ತನದಮಳ ಮಳಯಜದ ಕುಂಕುಮದಾ ॥
ಗಳುಮೆಸೆವ ಪಂಕದಿಂ ಸಿತ ।
ಜಲಜಂ ಕೋಕನದಮೊಗೆದು ಸೊಗಯಿಕುಮದಱೊಳ್ ॥ ೩೮ ॥

ವ ॥ ಅಂತಮೃತಕ್ಕೆ ಲೀಲಾಲಯಮಾಗಿ ಸುಧಾಲೇಖೆಯಂತೆಸೆವ ಖಾತಿಕಾ ಲೇಖೆಯಿಂದೊಳಗೆ

ಕಂ ॥ ಅಂಕುರದಿಂ ಪಲ್ಲವದಿಂ ।
ದಂ ಕೋರಕದಿಂದೆ ಕುಸುಮದಿಂ ಫಲದಿಂ ಚೆ ॥
ಲ್ವಂ ಕುಡುವ ಚಾರುಲತಿಕಾ ।
ಸಂಕುಳದಿಂದೊಂದಿ ವಲ್ಲರೀವನಮೆಸೆಗುಂ ॥ ೪೮ ॥

ವ ॥ ಮತ್ತಂ ಫುಲ್ಲತರವಲ್ಲಭಾಧರಪಲ್ಲವ ಸಮುಲ್ಲಸಿತ ಪಲ್ಲವಾಶೋಕ ಲತೆಯ ನವ್ಯ ಸೌರಭ್ಯ ಸಂಪನ್ನ ಪುನ್ನಾಗಲತೆಯ ಮಂದ ಮಕರಂದ ಮಂದಿರಮಾದ ಮಾಕಂದ ಲತೆಯ ನಿರುಪಮಾಮೋದ ಪರಿಮಳಾದೇಯ ಘ್ರಾಣಪಾಪೇಯ ಚಾಂಪೇಯ ಲತೆಯ ಮಧುವ್ರತ ಬಂಧುಗಂಧ ಬಂಧುರ ಬಂಧೂಕಲತೆಯ ಸಾರಸೌರಭಪೂರ ಕರ್ಪೂರ ಲತೆಯ ಮಧುಕರ ಪ್ರಮೋದ ಮಾಧವೀಲತೆಯ ಸುರಭಿ ಪರಿಮಳಮಿಳಿತ ಸುರಭೀ ಲತೆಯ ಪರಿಮಳರತ್ನ × × ಲತೆಯ ಶಿಲೀಮುಖಮುಳ್ಳ ವಿಳಸನ ವಿಚಕ್ಷಣ ವಿಕಚ ವಿಚಕಿಳ ಲತೆಯ ಮದಾಳಿಮಾಲಾವೃತೋನ್ಮೀಳಿತಮಾಳತೀಲತೆಯ ನಿರುಪಮ ಪರಿ ಮಳ ಕಳಿತ ಕನಕ ಕೇತಕೀ ಲತೆಯ ಪುದುಪಿಂ ಚೆಲ್ವಂ ಪುದುಂಗೊಳಿಸಿ ಗಂಧವಹಗಂಧ ಸಿಂಧುರದ ನೀರಾಟಕ್ಕೆ ವಸಂತರಾಜಂ ವಿರಚಿಸಿದ ಪರಿಮಳ ಪ್ರವಾಹ ಸುಮನೋ ಮನೋಹರ ವಾಹಿನಿಯನನುಕರಿಸುವ ಪುಷ್ಪವಾಟದಿಂ ನೋಟಕ್ಕಡರ್ಪಾಗಿರ್ಪ ವಲ್ಲೀ ವನದಿಂದೊಳಗೆ—

ಕಂ ॥ ರನ್ನದ ತೆನೆಗಳ್ಮಣಿಗಳ್ ।
ಪೊನ್ನಟ್ಟಳೆ ರಜತ ಗೋಪುರಂ ನವ ಕೂಟಂ ॥
ತನ್ನೊಳೆಸೆ ನೆಗಳ್ದ್ವಿ ವಿಜಯಾ ।
ಧೋರ್ಣನ್ನತ ನಗದಂತೆ ಲೀಲೆವಡೆದುದು ಶಾಲಂ ॥ ೪೯ ॥

ವ ॥ ಅಂತು ಕಾಂತಮಾದ ವಿಶಾಲಶಾಲದಿಂದೊಳಗೆ—

ಕಂ ॥ ರಿತುವನಿತುಂ ನಿಜನಿಜ ಪರಿ ।
ಣತೆಯಂ ಬಿಸುಟ್ಟೈಕಮತ್ಯಮಂ ತಳೆದಂತಾ ॥
ವಿತತೋದ್ಯಾನಂಗಳೊಳುಪ ।
ಚಿತಪುಷ್ಪಫಲಂಗಳೆಸೆಗುಮಸದಳಮದರೊಳ್ ॥ ೫೦ ॥

ಪುದಿದ ಪೊಸದಳಿರ್ಗಳಿಂ ಗಜ ।
ಮದಗಂಧದಿನಲರ ತುರುಗಲಿಂ ಫಳದಿಂ ಮಾ ॥
ಣದೆ ಮಿಸುಪಶೋಕಸಪ್ತ ।
ಚ್ಛದ ಚಂಪಕ ಚೂತವನಮವೆಸೆಗುಂ ನಾಲ್ಕುಂ ॥ ೫೧ ॥

ಕಳನಾದಂ ಸುರಸತಿಯ ।
ರ್ಕಳನಾದಂ ಸೋಲಿಸುತ್ತುಮಿರೆ ಚೂತಲಸ ॥
ತ್ಕಳಿಕಾಸ್ವಾದನದಿಂ ಕಾ ।
ಕಳಿಕಾ ಪುರಮಾಗೆ ಕರೆವ ಕೋಗಿಲೆಯೆಸೆಗುಂ ॥ ೫೨ ॥

ಕಂ ॥ ಪಗೆಯಂ ಬಗೆಯನುೞಿದು ಸಂ ।
ಪಗೆಯಂ ಬಂದೆಳಸೆ ನಿಜ ಸುವರ್ಣಾತೆಯಂ ಭೂ ॥
ಮಿಗೆ ಪೊಸತೆನೆ ಕೊಟ್ಟಂತಿರೆ ।
ಮಿಗೆ ಪೊರೆದೆಸೆದತ್ತು ತುಂಬಿಯೊಳ್ ಪೊಂಬಣ್ಣಂ ॥ ೪೩ ॥

ಚೈತ್ಯಕುಜದ ಮೊದಲೊಳ್ ಜಿನ ।
ಚೈತ್ಯಂ ಮರಮೊದಲೊಳಿರ್ಪ ಜಿನಮುನಿವೋಲ ॥
ತ್ಯಂತಂ ಸೊಗಯಿಸಿ ನೆಗೞ್ದಾ ।
ದಿತ್ಯರ್ಪೂಜಿಸುವರೊಸೆದು ವಿವಿಧಾರ್ಚನೆಯಿಂ ॥ ೪೪ ॥

ಲಂಬಣದ ಮುತ್ತು ತಾರಗೆ ।
ಯಂ ಬೆಳ್ಗೊಡೆ ಚಂದ್ರಬಿಂಬಮಂ ಚಮರಜಮಾ ॥
ಬಿಂಬದ ರುಚಿಯಂ ಗೆಲೆ ಜಿನ ।
ಬಿಂಬಂ ಸೊಗಯಿಪುದು ಚೈತ್ಯವೃಕ್ಷದ ಮೊದಲೊಳ್ ॥ ೪೫ ॥

ಪುದಿದಿರ್ದಶೋಕವನ ಮ ।
ಧ್ಯದ ರಕ್ತಾಶೋಕ ವಿಪುಳವೃಕ್ಷದ ಮೊದಲೊಳ್ ॥
ಸದಮಳ ಜಿನಬಿಂಬಂ ಕನ ।
ಕದ ಪೀಠದ ಮೇಲೆ ಲೀಲೆವಡೆದೆಸೆದಿರ್ಕುಂ ॥ ೪೬ ॥

ಲಲಿತಾಶೋಕಂ ಭಾಮಂ ।
ಡಳಮಲರ್ವಳೆ ದಿವ್ಯ ಭಾಷಿಸುರಪಟಹಂ ಪೊಂ ॥
ಗಳ ಹರಿಪೀಠಂ ಬೆಳ್ಗೊಡೆ ।
ಚಳಚಮರಜಮೆಸೆಯೆ ರಂಜಿಕುಂ ಜಿನಬಿಂಬಂ ॥ ೪೭ ॥

ಸ್ಮರನುರವಣೆಯಿಲ್ಲದುದಂ ।
ನಿರವಿಸಿದುವು ತರುಣಿಯರ ಮುಖಾಸವ ಕುಚಕೇ ॥
ಕರ ಪದಹತಿಗೆಳಸದರ ।
ಲ್ವುರುವಕುಳಂ ಕುರವಕಾಮ್ರತಿಳಕಮಶೋಕಂ ॥ ೪೮ ॥

ಅಲರಂ ಮುಡಿವಲರ್ವಚ್ಚಮ ।
ನೊಲವಿಂ ಸಮೆವಮರಿಯರ್ಕಳಿಲ್ಲಲ್ಲಿ ಜಗ ॥
ತ್ತಿಲಕನ ಚರಣಮನರ್ಚಿಸು ।
ವಲಂಪು ಪೊಱಗಾಗಿ ರಾಗಮುದಯಿಸದುದಱಿಂ ॥ ೪೯ ॥

ದಿವಿಜವಧೂಟಿಯುರಧರ ।
ಚ್ಛವಿ ಕುಂಕುಮ ಪಂಕದಿಂದೆ ಕೇಕರರೋಚಿಃ ॥
ಪ್ರವಿಮಳ ಮಳಯರುಹಸ್ಮಿತ ।
ಧವಳಾಕ್ಷತಕುಸುಮವಿಸರದಿಂದರ್ಚಿಸುವರ್ ॥ ೫೦ ॥

ಕಂ ॥ ತರುಗಳ್ ನಿಜನಿಜ ಶಾಖಾ ।
ಕರದಿಂದಲ್ಲಾಡೆ ಪುಷ್ಪ ಫಳಸಂಕುಳದಿಂ ॥
ದರುಹನನಾರಾಧಿಪುವೆನೆ ।
ಸುರರೂರ್ಜಿತ ಬೋಧರೆಂತುಮಾರಾಧಿಸರೇ ॥ ೫೧ ॥

ವ ॥ ಅಂತು ಹೃದ್ಯಮುಂ ನಿರವದ್ಯಮುಮಾದುದ್ಯಾನವನದಿಂದೊಳಗೆ ಪೂರ್ವ ಸೂಚಿತ ವರ್ಣನೋಚಿತ ಚತುರ್ದ್ವಾರವಿಸ್ತಾರಕ್ಕೊಳಗಾದ ವೇದಿಕೆಯಿಂದೊಳಗೆ—

ಕಂ ॥ ಪರಿವಾರ ಧ್ವಜಮಷ್ಟೋ ।
ತ್ತರಶತಮೊಂದೊಂದು ನಾಯಕ ಧ್ವಜದೊಳ್ ತ ॥
ಳ್ತಿರೆ ದಶಭೇದ ಧ್ವಜಮೊ ।
ಪ್ಪಿ ರತ್ನಮಯಮಿರ್ಪುವನುಪಮಧ್ವಜ ಧರೆಯೊಳ್ ॥ ೫೨ ॥

ಹರಿ ಹಂಸಂ ವೃಷಭಂ ಶಿಖಿ ।
ಗರುಡಾಂಬುಜ ಚಕ್ರವೇಳಮಾಳಾಧ್ವಜಮಂ ॥
ತರುಹನ ಜಯಮಂ ಪೇೞ್ವಂ ।
ತಿರೆ ದಶವಿಧಮೆಸೆವುದಷ್ಟಶತಮೇಕ್ಕೈಕಂ ॥ ೫೩ ॥

ವ ॥ ಅಂತು ರತ್ನರೋಚಿವ್ರಜದಿಂ ಕಲ್ಪಕುಜದಂತೆ ರಂಜಿಸುವ ವಿಜಯಧ್ವಜ ಧರೆಯಿಂದೊಳಗೆ ಪೂರ್ವ ವರ್ಣನೋಪೇತ ಚತುರ್ಗೋಪುರ ವಿಶಾಲಶಾಲದಿಂ ಲೀಲೆ ವಡೆದು—

ಕಂ ॥ ಮಾಲ್ಯಾತೋದ್ಯಜ್ಯೋತಿ ।
ರ್ಮಾಲ್ಯಾಭರಣಪ್ರದೀಪವಸನಾಶನ ಸ ॥
ತ್ಕಲ್ಯಗೃಹಪಾತ್ರರಾ ತ್ರಿಗು ।
ಣಾಳ್ಯರ್ಚಿತ ದಶವಿಕಲ್ಪ ಕಲ್ಪಕುಜಂಗಳ್ ॥ ೫೪ ॥

ದೇವಕುರೂತ್ತರಕುರುಗ ।
ಳ್ದೇವಾರಣ್ಯಂ ಸಮಂತು ಭೂತಾರಣ್ಯಂ ॥
ದೇವನನಾರಾಧಿಸಿ ಧರೆ ।
ಗೀವಗುಣಂ ವಡೆಯಲೆಂದು ಬಂದವೊಲೆಸೆಗುಂ ॥ ೫೫ ॥

ಅಂಕುರಮುಂ ನವಪಲ್ಲವ ।
ಮುಂ ಕೋರಕಮುಂ ಪ್ರಸೂನಮುಂ ಫಳತತಿಯುಂ ॥
ತಾಂ ಕುಡುಗುಮೆನೆ ಸುರದ್ರುಮ ।
ಸಂಕುಲಮಭಿಲಷಿತ ಫಲವನೀವುದು ಪಿರಿದೇ ॥ ೫೬ ॥

ಎನಿಪ ದಶವಿಧ ಸುರದ್ರುಮ ।
ವನಮನುಪಮ ಜಿನಪದಾಬ್ಜ ಪೂಜಾರತರ ॥
ಪ್ಪನಿಮಿಷರ ವಾಂಛಿತಾರ್ಥಮ ।
ನನುದಿನಮಿತ್ತಿತ್ತುಮಾವಗಂ ಸೊಗಯಿಸುಗುಂ ॥ ೫೭ ॥

ವ ॥ ಅಂತನಲ್ಪಪ್ರಭಾತಲ್ಪಮಾದ ಕಲ್ಪಕುಜ ಮಹೀತಳದಿಂದೊಳಗೆ ಮುನ್ನಮಭಿವರ್ಣಿಸಿದ ಚೆಲ್ವಂ ತಱ್ಕೈಸಿದ ನಾಲ್ಕುಂ ಗೋಪುರಂಗಳಿಂ ಮನಂಗೊಳಿಸುವ ವೇದಿಕೆ ತಮ್ಮ ಚೆಲ್ವಂ ನಿವೇದಿಸೆ—

ಕಂ ॥ ನೃತ್ಯಗೃಹಂಗಳ್ ಕುಳನಗ ।
ಮತ್ಯುನ್ನತಿವಡೆಯಲೆಂದು ಯುವನೋನ್ನತನಂ ॥
ಸ್ತುತ್ಯನನೊಸೆದೋಲಗಿಪವೊ ।
ಲತ್ಯಾಯತಿವಡೆದು ಸುತ್ತಿ ಸೊಗಯಿಸುತಿರ್ಕುಂ ॥ ೫೮ ॥

ರಂಗಂ ಮೂವತ್ತೆರಡಾ ।
ರಂಗದೊಳೊಂದೊಂದಱಲ್ಲಿ ಮೂವತ್ತಿರ್ಬರ್ ॥
ಪಿಂಗದೆ ದೇವಾಂಗನೆಯರ ।
ನಂಗಂ ನಲಿದಾಡೆ ನರ್ತಿಪರ್ ಪಲತೆಱದಿಂ ॥ ೫೯ ॥

ಸವಗಾಣಂ ಗಾಯಕಿಯ ।
ರ್ಗೆ ವೀಣೆಸಮುವಾದಕಂ ಸುವಾದಕರ್ಗೆ ಮನೋ ॥
ಭವ ಚಾಪಜ್ಯಾರವಮೆನೆ ।
ವಿವೇಕಿಗಳ್ ಗೀತವಾದ್ಯಮೊಗೆವುವು ಹೃದ್ಯಂ ॥ ೬೦ ॥

ದಿವಿಜಾಂಗನೆಯರ್ ನರ್ತಿಪ ।
ರವೆರಡುಮುಮಳನರ್ತನದೆ ಪದಗತಿಯಿಂ ॥
ದವಿರಳಮಭಿನಯ್ಸುನೃತ್ತಂ ।
ನವ ನಾಟ್ಯರಸಾಧಿದೇವತೆಯರೆಂಬಿನೆಗಂ ॥ ೬೧ ॥

ವ ॥ ಮತ್ತಮಾನರ್ತನ ಧರಿತ್ರೀಪ್ರಣಿಧಿ ಪ್ರಣೂತ ಮಹಾವೀಥಿಮಧ್ಯಮನಳಂಕರಿಸಿ ಶತಶತನೂತ್ನ ರತ್ನ ತೋರಣಂಗಳಿಂ ನಯನೋತ್ಸವ ಕಾರಣಂಗಳಾಗಿ—

ಕಂ ॥ ಅಸ್ತಮಿತಮಂಗಳಾ ಭುವ ।
ನಸ್ತುತ ಮಹಿಮಾದಳಂಬಿಗಳ್ಪರಿವಿಡಿಯಿಂ ॥
ವಿಸ್ತಾರಿಸಿನವನವರ ।
ತ್ನ ಸ್ತೂಪಮುದೆಸೆಗುಮಭವನವಲಬ್ಧಿಯ ವೋಲ್ ॥ ೬೨ ॥

ಸ್ತೂಪವಿರಾಜಿತ ಜಿನಪ ।
ಶ್ರೀಪದಮಂ ಸುರಭಿಸಲಿಲ ಗಂಧಾಕ್ಷತನಾ ॥
ನಾ ಪುಷ್ಪ ಸುಧಾಶನ ಮಣಿ ।
ದೀಪಾಗುರುಧೂಪ ಫಳದಿನರ್ಚಿಪರಮರರ್ ॥ ೬೩ ॥

ವ ॥ ಅಂತು ಮನಂಗೊಳಿಸುವ ಸಂಗೀತ ಶಾಲೆಯಿಂದೊಳಗೆ—

ಕಂ ॥ ಗಾರುಡಮಣಿರಚಿತ ಚತು ।
ರ್ದ್ವಾರಂ ಚತುರಾನನಂ ರವಿಸ್ಫಟಿಕ ಪ್ರಾ ॥
ಕಾರಂ ಶ್ರೀಮಂಡಪಲ ।
ಕ್ಷ್ಮೀ ರಮೆ ತೆಗೆದುಟ್ಟ ದುಗಲಮೆನೆ ಸೊಗಯಿಸುಗುಂ ॥ ೬೪ ॥

ಕಂ ॥ ಪಚ್ಚೆಮಣಿಯ ಗೋಪುರದಿಂ ।
ದುಚ್ಚಳಿಪಂತುಗಳ ಮಂಡಳದ ಮಂಡಪಮಂ ॥
ಮೆಚ್ಚುವೆಳವುಲ್ಲೆನುತ್ತಂ ।
ನಚ್ಚಿಯೆ ಬಂದೆಳಸೆಯೆರಳೆ ಬೆಚ್ಚನೆ ಸುಯ್ಗುಂ ॥ ೬೫ ॥

ಮಂಗಳರತಿ ಭುವನಾಧಿಕ ।
ಮಂಗಳನನಂತ ಬೋಧಂ ನಿಧಿಯಂ ನಿಧಿಗಳ್ ॥
ಸಂಗಡದೋಲಗಿಸುವುದುಚಿ ।
ತಂ ಗಡಿವೆನೆ ನೆಲಸಿ ಗೋಪುರದೊಳೋಲಗಿಕುಂ ॥ ೬೬ ॥

ವ ॥ ಮತ್ತಮಪ್ರತಿಮ ಭಕ್ತಿಯುಕ್ತ ಕಲ್ಪಜ ಪ್ರತಿಹಾರಾಳಂಕೃತದ್ವಾರ ಚತುಷ್ಟಯ ವಿಶಿಷ್ಟ ಪ್ರಾಕಾರದಿಂದೊಳಗೆ—

ಕಂ ॥ ಗಗನ ಸ್ಫಟಿಕ ಘಟಿತ ಭಿ ।
ತ್ತಿಗಳೆಡೆಗೆಡೆಗೊಪ್ಪೆ ಪನ್ನೆರಡು ಕೋಷ್ಠಂಗಳ್ ॥
ಸೊಗಯಿಸಿ ದಳದಂತಿರೆ ದಿ ।
ಟ್ಟಿಗೆ ಲಕ್ಷ್ಮೀಮಂಡಪಂ ಸ್ಮಿತಾಂಬುಜಮೆಸಿಕುಂ ॥ ೬೭ ॥

ಶ್ರೀಮದ್ದ್ವಾದಶಕೋಷ್ಠ ।
ಸ್ತೋಮಂದಳಮಂ ವಿಶಿಷ್ಟರಂ ಕರ್ಣಿಕೆ ಪೊಂ ॥
ದಾಮರೆಯೊಂದೊಂದದೆ ಲ ।
ಕ್ಷ್ಮೀ ಮಂಡಪಮೆಸೆದುದಸಮುಗುಣ ಗಂಧಾರ್ಹಂ ॥ ೬೮ ॥

ವ ॥ ಅಂತು ವಿಶಿಷ್ಟಮಾದ ದ್ವಾದಶ ಕೋಷ್ಠಂಗಳೊಳ್—

ಮ ॥ ಸ್ರ ॥ ಮುನಿಪರ್ಮುಖ್ಯಕಲ್ಪಜಸ್ತ್ರೀಜನತತಿಗಣಿನೀ ಸಂಕುಳಂ ಜ್ಯೋತಿರಬ್ಜಾ ।
ನನೆಯರ್ಭೌಮಾಂಗನಾ ಸಂತತಿ ಭವನ ವಧೂ ಸಂಚಯಂ ಭಾವನಾಖ್ಯರ್ ॥
ವನಜಜ್ಯೋತಿರ್ಗಣಂ ಕಲ್ಪಜ ವಿತತಿ ಮನುಷ್ಯಾದಿತಿರ್ಯಗ್ವ್ರಜಂ ನೆ ।
ಟ್ಟನೆ ಬಾಹ್ಯಂ ಪೂರ್ವಮಾಗೋಲಗಿಸೆ ಜಿನಪನೊಪ್ಪಿರ್ಪನಾಸ್ಥಾನದೀಪಂ ॥ ೬೯ ॥

ವ ॥ ಅಂತು ಕಣ್ಗೊಳಿಸುವ ಲಕ್ಷ್ಮೀಮಂಡಪ ಮಧ್ಯದಲ್ಲಿ—

ಕಂ ॥ ಅಷ್ಟಧನು ನಾಲ್ಕುಧನುಮು ।
ತ್ರಷ್ಟಾರ್ಧ ಧನುಃಪ್ರಮಾಣದುದಯದ ಮೂಱುಂ ॥
ವಿಷ್ಟರಮುರು ವೈಡೂರ್ಯನು ।
ತಾಷ್ಟಾಪದ ಸರ್ವರತ್ನಮವು ಸೊಗಯಿಸುಗುಂ ॥ ೭೦ ॥

ನಿರ್ಮಳಿನಾದ್ಯಾಸನದ ಚ ।
ತುರ್ಮುಖ ತಳದಲ್ಲಿ ನೆಲಸಿ ಯಕ್ಷಕುಮಾರರ್ ॥
ಕೂರ್ಮೆಯೊಳೆ ಧರ್ಮ ಚಕ್ರಮ ।
ನೊರ್ಮೆಯುಮಾತ್ಮೀಯ ಮೌಳಿಯೊಳ್ ತಳೆದಿರ್ಪರ್ ॥ ೭೧ ॥

ಕಂ ॥ ಸರಸಿರುಹ ಚಕ್ರ ವೃಷಗಜ ।
ಗರುಡಾಂಬರ ಸಿಂಹಸುರಭಿಮಾಲಾ ಚಿಹ್ನ ॥
ಸ್ಫುರಿತಾಷ್ಟ ಮಣಿಧ್ವಜ ಪರಿ ।
ಕರದಿಂ ಕರಮೆಸೆವುದೆರಡನೆಯ ಪೀಠತಳಂ ॥ ೭೨ ॥

ವ ॥ ಮತ್ತಂ ಮೂಱನೆಯ ವಿಷ್ಟರಮಧಿಷ್ಠಾನಮಾಗೆ—

ಕಂ ॥ ವಾಸನೆಯಿಂದಮೆ ಸಮೆದ ವಿ ।
ಳಾಸಮನೊಳಕೊಂಡು ಗಂಧಕುಟಿ ಸೊಗಯಿಪುದಾ ॥
ವಾಸನೆ ಸೋಂಕಿದರಂ ಸುಖ ।
ವಾಸನೆವೆರಸಮೃತಪದಮನಿರದೆಯ್ದಿಸುಗುಂ ॥ ೭೩ ॥

ಸಿಂಧುರ ವಿರೋಧಿ ಪೀಠಂ ।
ಗಂಧಕುಟೀ ಮಧ್ಯದಲ್ಲಿ ಸಿರಿಯಂ ಪಡೆ ಮಾ ॥
ತೇಂ ಧರಿಯಿಸಿ ಕಮಲದ ತೆಱ ।
ದಿಂ ಧಾರ್ಮಿಕನಿಕರ ಮಧುಕರಮನೇನೆಱಗಿಸಿತೋ ॥ ೭೪ ॥

ಪರಿಹೃತಸಂಗಂ ತ್ರಿಭುವನ ।
ಪರಿವೃಢನೆಂದಱಿಪುಗುಂ ತ್ರಿಪೀಠಾಗ್ರದ ಭಾ ॥
ಸುರರತ್ನರುಚಿರ ಹರಿವಿ ।
ಷ್ಟರಮಂ ಮುಟ್ಟದೆ ವಿರಾಜಿಪಿರವಘಹರನಾ ॥ ೭೫ ॥

ನಿರುಪಮ ಪೀಠತ್ರಯ ಮಾ ।
ಗಿರೆ ಲೋಕತ್ರಿತಯಮಗ್ರಲೋಕಂ ಹರಿವಿ ॥
ಷ್ಟರಮಾಗೆ ಮೇಗೆ ವಿಭುನಾ ।
ಲ್ವೆರಲಂತರದಲ್ಲಿ ಸಿದ್ಧನಂತೆಸೆದಿರ್ಕುಂ ॥ ೭೬ ॥

ಉ ॥ ಶ್ರೀಮದಗಾಧಬೋಧವಿಭವಾಂಬುಧಿಸಂಭವ ಚಂದ್ರನಂದದು ।
ಗ್ಧಾಮಸಿತಾತಪತ್ರಮುದರಪ್ರತಿಮೋಜ್ವಲವೀಚಿಯಂದದಿಂ ॥
ಚಾಮರಮಿಂದ್ರಭೂಮಿರುಹದಂತಿರಶೋಕಮಹೀರುಹಂ ಸಮು ।
ಗ್ರಾಮಿತಘೋಷದಂತೆಸೆಯೆ ಭಾಷೆ ವಿರಾಜಿಸಿದಂ ಜಿನಾಧಿಪಂ ॥ ೭೭ ॥

ಕಂ ॥ ಸುರತೂರ್ಯಂ ತೂರ್ಯಂ ಸುರ ।
ತರು ಕುಸುಮಾಸಾರಮರ್ಘ್ಯದ ಲಲನೆ ಹರಿವಿ ॥
ಷ್ಟರದಿಂ ಮಂಡಳದಿಂ ದಿನ ।
ಕರನಿಂದುದಯಾಚಳಕ್ಕೆ ಜಿನನೆಣೆಯಾದಂ ॥ ೭೮ ॥

ಹರಿಪೀಠದ ನೆವದಿಂದಂ ।
ಸುರಗಿರಿ ಬೆಳ್ಗೊಡೆಯನೆವದಿನಮೃತದ್ಯುತಿ ಚಾ ॥
ಮರದ ನೆವದಿಂ ಸುಧಾಂಬುಧಿ ।
ತರಂಗ ಮಾಳಿಕೆಗಳೋಲಗಿಪ್ಪವೊಲೆಸೆಗುಂ ॥ ೭೯ ॥

ಕಂ ॥ ಅಲರ್ವಳಿಯ ನೆವದಿನಕ್ಷಯ ।
ಲಲನೆಯ ಕಡೆಗಣ್ಣ ಬೆಳಗಶೋಕೆಯ ನೆವದಿಂ ॥
ಫಳಿತಾಮರ ದ್ರುಮಂ ಭಾ ।
ವಳಯದ ನೆವದಿಂ ದಿನೇಶ ಬಿಂಬಮುಳುಂಬಂ ॥ ೮೦ ॥

ವರಭಾಷೆಯ ನೆವದಿಂದಂ ।
ಸರಸ್ವತೀದೇವಿ ಸರ್ವಭಾಷಾತ್ಮಿಕೆ ಕೂ ॥
ರ್ತರುಹನ ವಕ್ತ್ರಾಬ್ಜಮನಾ ।
ದರದಿಂದೋಲಗಿಸುವಂದದಿಂ ಸೊಗಯಿಸುಗುಂ ॥ ೮೧ ॥

ಮೃತಿ ಜನನಂ ಕ್ಷುಧಿ ತೃಷೆ ರುಜೆ ।
ರತಿದೋಷಂ ನಿದ್ರೆ ಸಾಧ್ವಸಂ ಬಧಿರತೆಯಂ ॥
ಧತೆ ಪಂಗುತೆಯಾಗದು ಜನ ।
ತತಿಗಾ ಜಿನಪತಿಯ ಮೈಮೆಯಿಂ ತತ್ಸಭೆಯೊಳ್ ॥ ೮೨ ॥

ಸಂಗಳಿಕುಂ ರತ್ನತ್ರಿತ ।
ಯಂಗಳ್ ಜಿನಸೇವೆಯಿಂದಮೆಂದಱಿಪುವವೊಲ್ ॥
ಪಿಂಗುವುದಂಧತೆ ಬಧಿರತೆ ।
ಪಂಗುತೆಯಿಂದಾದಿ ಜನ್ಮಿಗಭವನ ಸಭೆಯೊಳ್ ॥ ೮೩ ॥

ದರ್ಪಣಮಂ ನೋಡಿದೊಡಂ ।
ತೋರ್ಪುದು ಭವವಿತತಿ ಜಿನಸಭೆಯೊಳಿದೆ ಚಿತ್ರಂ ॥
ದರ್ಪಕಹತ ಜಿನಮುಖಮಣಿ ।
ದರ್ಪಣಮಂ ನೋಡೆ ತೋಱದೊಂದುಂ ಭವಮುಂ ॥ ೮೪ ॥

ಸ್ರ ॥ ನಾನಾ ಪ್ರಾಸಾದ ಚೈತ್ಯಾವನಿವನಿಖಿಲ ಸತ್ಪುಷ್ಪವಾಟಂ ನವೀನೋ ।
ದ್ಯಾನಂ ತುಂಗಧ್ವಜಂ ರಂಜಿಸೆ ಸುರತರು ಸಂಶೋಭಿ ಸಂಗೀತರಂಗ ॥
ಸ್ಥಾನಂ ಶ್ರೀ ಮಂಡಪಂ ದ್ವಾದಶಗಣಕೃತಪೀಠತ್ರಯಾಗ್ರಸ್ಥ ಸಿಂಹಾ ।
ಸನ ಶ್ರೀ ಪೀಠ ಪೂರ್ವಾಚಳದೊಳಘಹರಂ ಪಾರ್ಶ್ವನಾಥಾರ್ಕನಿರ್ದಂ ॥ ೮೫ ॥

ವ ॥ ಅಂತನಂತ ಚತುಷ್ಟಯ ಪ್ರಕೃಷ್ಟನುಂ ಪ್ರಾತಿಹಾರ್ಯಾಷ್ಟಕವಿಶಿಷ್ಟನುಮಪ್ಪ ಪಾರ್ಶ್ವನಾಥ ಸನಾಥಮಾದ ಸಮವಸರಣದ ಸಕಲ ಜನಮನೋನಯನ ಪ್ರಸಾದ ಪ್ರದ ಪ್ರಾಸಾದ ಚೈತ್ಯ ವಿಚಿತ್ರ ಧಾತ್ರಿಯುಮಂ ನಿಖಿಳಲೇಖಾಂಬಕ ಕದಂಬ ಕುವ ಳಯ ಸುಧಾಮಯೂಖಲೇಖೆಯೆನಿಸಿದಮಳಜಳವಿಳಸತ್ಖಾತಿಕಾಲೇಖೆಯುಮಂ ಸುರ ಸುಂದರೀ ಸಂದೋಹನಯನಷಂಡ ಸಮುಲ್ಲಸಿತಮಂ ಪಲ್ಲವಿಸುವುತ್ಫುಲ್ಲಫುಲ್ಲ ಮಲ್ಲಿಕಾ ಕಂಕೆಲ್ಲಿಪ್ರಮುಖವಲ್ಲೀವನಮುಮಂ ಶುಕಪಿಕ ಪ್ರಕರಪರೀತಚೂತಾದ್ಯನೋಕಹಾನೀತಾತಿ ಹೃದ್ಯಮೆನಿಸಿದುದ್ಯಾನಮುಮಂ ವಿಜಿತತ್ರಿಜಗದ್ವಿಜಯಿಯ ಮಕರಧ್ವಜ ವಿಜಯ ಧ್ವಜ ಮೆನಿಸಿದುತ್ತುಂಗ ಮಂಗಳಧ್ವಜ ವ್ರಜಾವನಿಯುಮನನಲ್ಪಜನೇತ್ರ ಪುತ್ರಿಕಾ ವಿಶ್ರವದರುಣ ರಮಣೀಯ ತಳ್ಪತಳಮೆನಿಸಿದ ಸತ್ಫಲಾಕಲ್ಪಕಲ್ಪಾವನಿಜ ಸಮಾಜಮುಮಂ ಸರಸ

ಸಾಮಾಜಿಕ ನಿಕರಹೃದಾತೋದ್ಯ ಸಂಸ್ತುತ್ಯ ನೃತ್ಯ ಸಂಗೀತಗೀತಸಂಗತಮೆನಿಸಿದಖಿಳ ಸುಖಪ್ರಸಂಗ ಸಂಗೀತ ರಮ್ಯಹರ್ಮ್ಯಂಗಳುಮಂ ಸಕಲ ಕಳಾವಿಚಕ್ಷಣಾಪಕ್ಷವೀಕ್ಷಿಪಣಾದಿರೂಪ ಲಕ್ಷ್ಮೀ ಲಕ್ಷಿತಮೆನಿಸಿದಕ್ಷೂಣಮೋಕ್ಷಲಕ್ಷ್ಮೀವಿವಾಹಮಂಡಪ ಲಕ್ಷ್ಮೀ ಮಂಡಪಮುಮನಮರಪತಿವೃಢಂ ಪರಿವಿಡಿಯಿಂ ವಿಸ್ಮಯಸ್ಮೇರಲೋಚನನಾಗಿ ನೀಡುಂ ನೋಡುತ್ತಂ ಮಾನಸ್ತಂಭಾದಿ ಸ್ತೂಪಾದ್ಯಚಿಂತ್ಯಂ ಮಹಿಮಾಸ್ಪದಾಭ್ಯರ್ಚ್ಯ ವಂದ್ಯಂಗಳಂ ಪಂಚಕಲ್ಯಾಣ ಪೂಜಾಪ್ರವೀಣೆಯೆನಿಸಿದಿಂದ್ರಾಣೀಸಂಯುಕ್ತಂ ನಿಖಿಳಜಿನಪೂಜಾಸಕ್ತಂ ಸ್ತುತಿಶತಸಹಸ್ರಂಗಳಿಂ ಸ್ತುತಿಯಿಸುತ್ತಂ ನವ್ಯದಿವ್ಯಾರ್ಚನಾದ್ರವ್ಯಂಗಳಿಂದರ್ಚಿಸುತ್ತಂ ಪರಮಾನಂದಸಂದೋಹದಿಂದಭಿವಂದಿಸುತ್ತಂ ಬಂದು ಜಗತ್ತಿಲಕ ಮುಖಕಮಲಾವಳೋಕಮಾತ್ರ ಸಂಜಾತಹರ್ಷೋತ್ಕರ್ಷ ಸರ್ವಾಂಗಪುಳಕಂ ನಿಜನಿಟಿಲತಟಘಟಿತ ಕರಕಮಲಯುಗಳಕನೊಳಗಂ ಪೊಕ್ಕು—

ಕಂ ॥ ಸರ್ವಜ್ಞ ಪಂದಾಂಬುರುಹಂ ।
ನಿರ್ವಾಣಶ್ರೀಯನೀವುದಂದುಚಿತಮನೋ ॥
ನಿರ್ವಹಣಂ ಮೂಱಿಡೆಯೊಳ್ ।
ಸರ್ವಾಂಗ ಪ್ರಣತನಾದನಂದಮರೇಂದ್ರಂ ॥ ೮೬ ॥

ಬಲವಪ್ಪ ತೆಱದೆ ತಾರಾ ।
ವಳಿ ಸಹಿತಂ ಚಂದ್ರನಮರಶೈಲಮನಿಂದ್ರಂ ॥
ಲಲನಾಸಮೂಹ ಸಹಿತಂ ।
ಬಲವಂದಂ ಗಂಧಕುಟಿಯನಕುಟಿಳಚಿತ್ತಂ ॥ ೮೭ ॥

ಗಂಧ ಕುಟಿಯಂ ಸು ಸೌರಭ ।
ಬಂಧುರಮಂ ತ್ರಿಪ್ರದಕ್ಷಿಣಂ ಬರುತೆ ಜಗ ॥
ದ್ಬಂಧುವನಶೇಷಗುಣಮಣಿ ।
ಸಿಂಧುವನಿಂತೆಂದು ಪೊಗೞ್ದನಮರವರೇಣ್ಯಂ ॥ ೮೮ ॥

ಚಂ ॥ ಜಯಜಯ ದೇವದೇವ ನಿರವದ್ಯನಿರಾಮಯ ಶುದ್ಧ ಬುದ್ಧ ಚಿ ।
ನ್ಮಯ ಮದದೂರ ಧೀರ ಜಿನನಿತ್ಯ ನಿರಂಜನ ಪುಣ್ಯ ಪುಂಜನಿ ॥
ರ್ಭಯ ಪರಮೇಶ ಪಾಪಹರರೂಪದಯಾಮೃತ ರೂಪ ನಿನ್ನಮೈ ।
ಮೆಯನದನಂತುಟಿಂತುಟೆನಲಾರ್ನೆರೆವರ್ಭುವನೈಕಬಾಂಧವಾ ॥ ೮೯ ॥

ವ ॥ ಅಂತಾ ತ್ರಿಲೋಕ ರಕ್ಷಾಮಣಿಯಂ ತ್ರಿಪ್ರದಕ್ಷಿಣಂ ಬಂದು ತ್ರಿಕರಣ ಶುದ್ಧಿಯಿಂ—

ಮ ॥ ನಿಧಿಚಿಂತಾಮಣಿ ಕಾಮಧೇನು ಸುರಭೂಜಂ ಸ್ಪರ್ಶಮೊಂದಾಗಿ ಬಂ ।
ದು ಧರಿತ್ರೀಸ್ತುತಸಾರ ವಸ್ತುಗಳನೀವುತ್ತಿರ್ದುವೆಂಬಿಂತೆ ವಾ ॥
ಙ್ನಿಧಿಪಾರ್ಶ್ವಾಧಿಪ ಪಾದಪೀಠಮನಲಂಪಿಂದಿಂದ್ರನಿಂದ್ರಾಣಿಪು ।
ಣ್ಯಧನಪೂಜಿಸಿದರ್ಶತೇಂದ್ರಸಹಿತಂ ದಿವ್ಯಾರ್ಚನಾದ್ರವ್ಯದಿಂ ॥ ೯೦ ॥

ಚಂ ॥ ಎನಿತು ಸುರತ್ನದರ್ಪಣ ಸಿತಾತಪ ವಾರಣ ಚಾಮರ ಧ್ವಜಾ ।
ದ್ಯನುಪಮ ಮಂಗಳಂಗಳೆನಿತುತ್ತಮ ಪುಷ್ಪ ಫಲಪ್ರತಾನಮಂ ॥
ತನಿತರಿನಿಂದ್ರನಿಂದ್ರಸತಿಯಿಂದ್ರಶತಂ ದಿವಿಜಾಳಿದೇವ ಕಾ ।
ಮಿನಿಯರನಿಂದ್ಯರರ್ಚಿಸಿದರಂದು ಜಿನೇಂದ್ರಪದಾರವಿಂದಮಂ ॥ ೯೧ ॥

ಕಂ ॥ ಸಹಜಾಕೃತಿಯಂ ಶಕ್ರಂ ।
ಮಹಮಂ ಜಿನನೊಳ್ಪನೀಕ್ಷಿ ಪೆಸಪುಸಿರ್ವೊಂದಾ ॥
ಗ್ರಹದೆ ಸಹಸ್ರೇಕ್ಷಣನುಂ ।
ಸಹಸ್ರಭುಜನುಂ ಸಹಸ್ರಜಿಹ್ವನುಮಾದಂ ॥ ೯೨ ॥

ವ ॥ ಮತ್ತಮನವರತ ಜಿನಪದಪಯೋಜ ಸೇವಾಸಕ್ತ ಚಿತ್ತಂ ಶುಭಪೃತ್ತ ಮುನಿಕೋಷ್ಠಾಧಿಷ್ಠಿತರುಂ ಸರ್ವಜ್ಞ ಸಾಮ್ರಾಜ್ಯಪದ ಯೌವರಾಜ್ಯ ಪದಪ್ರತಿಷ್ಠಿತರುಂ ಚತುಜ್ಞಾನ ನಿಧಾನರುಂ ಸಪ್ತರ್ಧಿವಾರ್ಧಿಗಳುಮಪ್ಪ ಸ್ವಯಂಭು ನಾಮಾದಿ ಗುಣಧರ ಗಣಧರ ಪ್ರಮುಖ ನಿಖಿಳ ಮುನಿಜನ ಚರಣ ಸರಸೀರುಹಂಗಳಂ ನಿಜ ಮಕುಟಮಣಿಕಿರಣ ವಾರಿಧಾರಾಸಹಿತಂ ಸುರತರು ಪ್ರಸೂನಾದಿ ದಿವ್ಯಾರ್ಚನಾ ಪ್ರತಾನದಿಂ ಪ್ರತ್ಯೇಕಮರ್ಚಿಸಿ ಪರಮಾನಂದದಿಂದಭಿವಂದಿಸಿ ಸಮನಂತರಂ ನಿರಂತರ ಶೋಭಾವಿಶಿಷ್ಟಾಶೇಷಕೋಷ್ಠ ನಿರೀಕ್ಷಣಸಂತುಷಮರಶ್ರೇಷ್ಠ ನಿಜಕೋಷ್ಠಮನಳಂಕರಿಸಿರೆ—

ಕಂ ॥ ಕೇವಲ ಬೋಧಂ ದೇವರ ।
ದೇವಂಗುದಯಿಸಿದ ವಾರ್ತೆಯಂ ನಿಜಚರರಿಂ ॥
ಭೂವಿಶ್ರುತಾಶ್ವಸೇನಮ ।
ಹೀವರನುಂ ಬ್ರಹ್ಮದತ್ತೆಯುಂ ಕೇಳಲೊಡಂ ॥ ೯೩ ॥

ಹರಿವಿಷ್ಟರದಿಂದಿೞಿದಾ ।
ದರದಿಂದೇೞಡಿಯ ದೆಸೆಗೆ ನಡೆನಡೆದು ಜಗ ॥
ದ್ಗುರು ಚರಣಕ್ಕೆಱಗಿದುದಾ ।
ಗುರು ಯುಗಳಂ ಗುಣದ ನೆಱವಿಯೆಱಗಿಸದಾರಂ ॥ ೯೪ ॥

ನೆಗೆದವು ಪುಳಕಂ ಬಾಷ್ಪಂ ।
ಬುಗಳೊಗೆದವುವನನುಭೂತಹರ್ಷೋತ್ಕರ್ಷಂ ॥
ಬಗೆಯೊಳ್ ಬಳೆದತ್ತಾಪಿತೃ ।
ಯುಗಳಕಮದು ತಕ್ಕುದಲ್ತೆ ಬಗೆವೊಡೆ ಜಗದೊಳ್ ॥ ೯೫ ॥

ಅಕ್ಕುಂ ತಾಯ್ತುಂದೆಗೆ ನಾ ।
ಲ್ಕಕ್ಕರದೞಿವಾಯ್ತು ಸುತನೊಳೆನೆಯುಂ ಹರ್ಷಂ ॥
ಮಿಕ್ಕಖಿಳಬೋಧಮಾಯ್ತೆನೆ ।
ಮೊಕ್ಕಳಮವಗಾರ್ಯು ಹರ್ಷಮೆನೆ ಕೌತುಕಮೇಂ ॥ ೯೬ ॥

ವ ॥ ಅಂತು ಸಂತೋಷದಂತಮನೆಯ್ದಿ ತದನಂತರಂ—

ಕಂ ॥ ಇತ್ತ್ರಂಗಚಿತ್ತ್ರಮುಂ ಭೂ ।
ಪೋತ್ತ್ರಮನಾವಾರ್ತೆವೇಟ್ಟಿ ಮನುಜಂಗತ್ತಾ ॥
ಯತ್ತ್ರ ಪುಳಕಕ್ಕೆ ಭಕ್ತಿಗೆ ।
ಮತ್ತೊಸೆದಿತ್ತ್ರಂಗಚಿತ್ತ್ರಮುಂ ಶುಭವೃತ್ತ್ರಂ ॥ ೯೭ ॥

ಮ ॥ ಸ್ರ॥ ಪುಳಕಂಗಳ್ಪೊಣ್ಮೆ ಪುಣ್ಯಾಂಕುರನಿಕರದವೊಲ್ ಕ್ಷೇತ್ರಸುಕ್ಷೇತ್ರದೊಳ್ಮಂ ।
ಗಳ ತೂರ್ಯಧ್ವಾನಮಷ್ಟಾಶೆಯೊಳೆಸೆಯೆ ಪೊಱಲ್ಗಷ್ಟಶೋಭಾವಿಳಾಸಂ ॥
ಬಳೆವನ್ನಂ ಸ್ವರ್ಣರತ್ನೋಜ್ವಳ ವಸನಫಳಾದ್ಯರ್ಚನಾ ದ್ರವ್ಯಮುಂ ಕೋ ।
ಮಳೆಯರ್ಕಳ್ತಾಳ್ದಿ ಸುತ್ತಂಬರೆ ವಿಭುಪೊಱಮಟ್ಟಂ ಮಹೋತ್ಸಾಹಗೇಹಂ ॥ ೯೮ ॥

ವ ॥ ಆ ಸಮಯದೊಳ್—

ಕಂ ॥ ಗುಡಿಗೃಹ ದೇವತೆಯರ್ ನಿಜೆ ।
ವಿಡಿದುಟ್ಟವೊಲೊಪ್ಪೆ ರತ್ನ ತೋರಣ ತತಿಯೊಳ್ ॥
ಪಿಡಿದಾ ದೇವತೆಯರ ತಲೆ ।
ದುಡುಗೆವೊಲಿರೆ ವಾರಣಾಸಿಯೇಂ ರಾಜಿಸಿತೋ ॥ ೯೯ ॥
ಮೃದು ಪವನಹತ ಪತಾಕಾ ।
ಸ್ಪದ ಕೇತುಕರಂಗಳಿಂದೆ ಜಿನಪೂಜೆಗೆ ಬೇ ॥
ಗದೆ ಪೋಗಿಮೆಂದು ಪೇೞ್ವಂ ।
ದದಿನೆಸೆದುದು ವಾರಣಾಸಿ ನಿಜ ಪುರಜನಮುಂ ॥ ೧೦೦ ॥

ವ ॥ ಅಂತು ವಿರಾಜಿಸುವ ವಾರಣಾಸಿಯಿಂದಶ್ವಸೇನಂ ವಿಶ್ವವಿನೇಯ ನಿಕಾಯಂ ವೆರಸುಪೊಱಮಟ್ಟು ದುರಿತಾರಿವಾರಣಾಸಿಯೆನಿಸಿದ ಜಿನೇಶನ ಸಭೆಗೆ ಬರೆವರೆ—

ಮ ॥ ವನಜಾಮೋದಮುನಾಂತು ಕೈರವದ ಕಂಪಂಪೇಱೆ ಮಂದಾರಜಂ ।
ದನ ಸಂತಾನಕ ಪಾರಿಜಾತ ವಿಬುಧೋರ್ವೀಜಾತ ಸಂಜಾತಸೂ ॥
ತನ ಸೌಗಂಧ್ಯದೊಳೊಂದಿಬಂದೆಲರಮಂದಾನಂದದಿಂ ತನ್ನೃಪಾ ।
ಳನನಾಲಿಂಗಿಸುವಂದದಿಂ ಸಮವಸೃತ್ಯುಜ್ಜೀವನಂ ಪಾವನಂ ॥ ೧೦೧ ॥

ವ ಅಂತಾ ಪಾವನ ಸ್ಪರ್ಶನದಿಂ ಪವಿತ್ರಗಾತ್ರನಾಗುತ್ತಂ ಬಂದು ತನ್ನಾಸನ್ನ ಭವ್ಯತೆಯಂ ಪ್ರಕಟಿಸುವಂತೆ ವಿನಯಜನಶರಣಸಮವಸರಣಾಸನ್ನ ಪ್ರದೇಶದೊಳ್ ನಿಜ ಗಜಸ್ಕಂಧದಿಂದಿೞಿದು ನಿಸರ್ಗಭಕ್ತಿಯೊಳೆಪಾದಮಾರ್ಗದಿಂ ನಡೆತಂದು—

ಕಂ ॥ ಉನ್ನತರ್ಗೆ ಮಾಡ್ಪ ವಿನಯಮು ।
ದುನ್ನತಿಯನೆ ಮಾಡ್ಕುಮೆಂಬುದಂ ಸೂಚಿಪವೊಲ್ ॥
ಸನ್ನುತ ಸೋಪಾನಂಗಳಿ ।
ನುನ್ನತಮುಂ ಸಮವಸರಣಮುಂ ಪುಗುತಂದಂ ॥ ೧೦೨ ॥
ನಿರತಿಶಯ ಸಮವಸರಣದ ।
ಪರಿಶೋಭೆಯೊಳಿರದೆ ನೃಪನ ಕಣ್ಣುಂ ಮನಮುಂ ॥
ಪರಿದವು ಜಿನನಿರ್ದೆಡೆಗೆನೆ ।
ಪರಮೇಶನ ಮೂರ್ತಿ ವಿಭವಮೇನಚ್ಚರಿಯೋ ॥ ೧೦೩ ॥

ವ ॥ ಅಂತು ಸಮುದ್ಭೂತ ಭಕ್ತಿ ಪ್ರೇರಿತಚಿತ್ತಂ ಬಂದು ಗಂಧಕುಟಿಯಂ ತ್ರಿಪ್ರದಕ್ಷಿಣಂ ಬಂದು—

ಕಂ ॥ ನೃಪನರ್ಚಿಸಿದಂ ಭಕ್ತಿಯಿ ।
ನುಪಾಂತ್ಯಜಿನಪತಿ ಪದಾಂತಿಕಮನಬ್ಜಸುಗಂ ॥
ಧ ಪದಾಂಬು ಸುಗಂಧಾಕ್ಷತ ।
ಸುಪುಷ್ಪಚರುದೀಪಧೂಪಫಳ ಮಣಿಗಣದಿಂ ॥ ೧೦೪ ॥

ಮ ॥ ಕಮಠಂಗುಗ್ರತೆ ನಿನ್ನೊಳತ್ಯುಪಶಮಂ ದುಶ್ಚಿಂತೆಯಿಂ ಕರ್ಮಬಂ ।
ಧಮುಪಂಗಸ್ಖಳಿತಾತ್ಮ ಚಿಂತೆಯೊಳೆ ನಿನ್ನೊಳ್ ಬಂಧವಿಚ್ಛಿತ್ತಿದು ॥
ರ್ದಮ ಮಿಥ್ಯಾತ್ವಮಹತ್ವದಿಂದವನೊಳಜ್ಞಾನಂ ಸುದೃಷ್ಟಿತ್ವಮು ।
ತ್ತಮ ಬೋಧಂ ನಿನಗಾಗೆ ಲೋಕಗುರುವಾದೈ ಪಾರ್ಶ್ವ ತೀರ್ಥೇಶ್ವರಾ ॥ ೧೦೫ ॥
ಗಿರಿಗಳ್ ವಜ್ರತರೀರನಂ ವಿವಿಧಭೂತಂ ಲೋಕರಕ್ಷಾ ಗುಣಾ ।
ಕರನಂ ಕ್ರೂರ ಮೃಗೋತ್ಕರಂ ದೃಢತರ ಧ್ಯಾನಾಗ್ನಿ ಸಂಭೂತಿ ಭೂ ॥
ಧರನಂ ಕೆಂಡದಖಂಡವೃಷ್ಟಿವಿಭವಂ ಶಾಂತಾಮೃತಾಂಬೋಧಿಯಂ ।
ಪಿರಿದುಂ ಬಾಧಿಸವೆಂಬವೋಲದಿರದಿರ್ದೈಪಾರ್ಶ್ವತೀರ್ಥೇಶ್ವರಾ ॥ ೧೦೬ ॥
ಕರಣಗ್ರಾಮ ನಿಯಾಮಕಾ ಚರಣಮುಷ್ಟಿವ್ರಾಜಿಯಂ ಭೇದತ ।
ತ್ಪರ ವಿಜ್ಞಾನಿ ವಿಶೇಷಣ ಸ್ಖಳಿತದಾರಾಶ್ರೀಪ್ರಶಂಶೋಭಿಯಿಂ ॥
ವರ ವೈರಾಗ್ಯ ಗುಣಪ್ರತೇಜಿತನಿಜಧ್ಯಾನಾಸಿಯಿಂ ದುಷ್ಟದು ।
ರ್ಧರ ಕರ್ಮಾರಿಯನಾರ್ದುಗೆಲ್ದಘುಟನಾದೈ ಪಾರ್ಶ್ವತೀರ್ಥೇಶ್ವರಾ ॥ ೧೦೭ ॥
ನರನಾಥಂ ನಿರುತಂ ಸ್ವತಂತ್ರನೆನಿಪಂ ನಾವತ್ಸರಂ ಮಿಕ್ಕಭೂ ।
ವರದಂ ಗೆಲ್ವವೊಲಾತರಂಗದಘುಮಂ ಬಾಹ್ಯೋಪಸರ್ಗಂಗಳಂ ॥
ಸ್ಥಿರಯೋಗೋನ್ನತಿಯಿಂ ಸ್ವತಂತ್ರನೆನಿಸಿರ್ದೆಟ್ಟಿಟ್ಟಿನಿರ್ಬಂಧದಿಂ ।
ಪರಮಾರ್ಹಂತ್ಯಪದಕ್ಕೆ ನೀನಧಿಪನಾದೈ ಪಾರ್ಶ್ವತೀರ್ಥೇಶ್ವರಾ ॥ ೧೦೮ ॥
ಉಪಸರ್ಗಂ ಕಿಡುಗುಂ ನಿಜಾಂಘ್ರಿಯುಗಮಂ ಸಂಪ್ರೀತಿಯಿಂ ಪೂಣ್ದು ಭಾ ।
ವಿಪ ಭವ್ಯರ್ಗೆನೆ ನೀನವಂ ನಿರವಶೇಷಂಘಾತಿಯೊಳ್ಕಾಡಿ ಘಾ ॥
ತಿಪುದೇನಚ್ಚರಿ ಬಲ್ಲಿವರ್ಗೆಡರೆ ಮೂಲೋಚ್ಛಿತ್ತಿ ತದ್ವೈರಿಗೆಂ ।
ಬುಪದೇಶಂ ಪುಸಿಯಾಗದಂತೆಸಗಿದೈ ಶ್ರೀಪಾರ್ಶ್ವತೀರ್ಥೇಶ್ವರಾ ॥ ೧೦೯ ॥
ನೆಗಟ್ದಿರ್ದಾತ್ಮನೊಳೊಲ್ದು ಯೋಚಿಸಿ ಮನೋವಾಕ್ಕಾಯಮಂ ಸೌಖ್ಯಘಾ ।
ತಿಗಳಂ ಸಂಯಮದಿಂ ವಿಘಾತಿಪೆಡೆಯೊಳ್ತದ್ಭೃತ್ಯನೆಂಬಂತೆಮಾ ॥
ಡೆ ಗಡೋರಂತುಪಸರ್ಗಮಂ ಕಮಠನಾರ್ಪಿಂದಾಳ್ದನಂ ಗೆಲ್ವಸಾ ।
ಸಿಗನಾಳ್ಗಳ್ಕನದೆಂಬವೋಲುರದೆ ಗೆಲ್ದೈ ಪಾರ್ಶ್ವತೀರ್ಥೇಶ್ವರಾ ॥ ೧೧೦ ॥

ಶಾ ॥ ಉಗ್ರಾಹೀಂದ್ರ ಮದಾಂಧ ಸಿಂಧುರ ತರಕ್ಷು ಕ್ರೂರ ಕಂಠೀರವೋ ।
ಪಗ್ರವ್ಯಾಘ್ರದವಾಗ್ನಿ ವಜ್ರಪವನವ್ಯಾಮಿಶ್ರಿತಾಶ್ರಾಂತ ವೃ ॥
ಷ್ಟಿಗ್ರಾಹಾದ್ಯಸುರ ಪ್ರಸೂತ ಭಯಕೃದ್ವೈಕುರ್ವಣಾವ್ಯಾಹದೈ ।
ಕಾಗ್ರ ಧ್ಯಾನ ವಿಧಾನದಿಂದೆ ಜಿನನಾದೈ ಪಾರ್ಶ್ವತೀರ್ಥೇಶ್ವರಾ ॥ ೧೧೧ ॥

ವ ॥ ಎಂದಿಂತಷ್ಟಮಹಾಪ್ರಾತಿಹಾರ್ಯವರ್ಯನಂ ವಿಶಿಷ್ಟಾಷ್ಟಕದಿಂ ಸ್ತುತಿಯಿಸಿ ಸಾಷ್ಟಾಂಗ ಪ್ರಣತನಾಗಿ ಬೞಿಯಂ ಭವ್ಯಜನ ಶರಣ್ಯರಂ ಗಣಧರಾಗ್ರಗಣ್ಯರಂ ಗುರು ಭಕ್ತಿಪೂರ್ವಕಮಭಿವಂದಿಸಿ ತದನಂತರಂ ನಿಜೋಚಿತಸ್ಥಾನದೊಳ್ ಕುಳ್ಳಿರ್ದು ಕರ ಕಮಳಯುಗಳಮಂ ಮುಗಿದು—

ಕಂ ॥ ಜೀವಾಜೀವಸ್ಥಿತಿಯನ ।
ದಾವುದುಪಾದೇಯವವಱೊಳಾವುದು ಹೇಯಂ ॥
ಭಾವಿಸೆ ಬೆಸಸುವುದು ಜಗ ।
ತ್ಪಾವನ ವಿಮಳಾವಬೋಧ ನೀಂ ದಯೆಯಿಂದಂ ॥ ೧೧೨ ॥

ವ ॥ ಎನಲೊಡಂ—

ಮಿಸಿಸಿದಪನಮೃತ ವರ್ಷದಿ ।
ನಸದಳಮವನಿಪನನೆಂಬವೋಲ್ದಂತ ರುಚಿ ॥
ಪ್ರಸರಂ ಪ್ರಸರಿಸೆ ಬೆಸಸಿದ ।
ನಸದೃಶ ಮಹಿಮಾವಳಂಬನೀ ತೆಱದಿಂದಂ ॥ ೧೧೩ ॥

ಪರಿಕಿಪೊಡುಪಯೋಗಮಯಂ ।
ಶರೀರಮಿಾತನತನುಕರ್ತೃಭೋಕ್ತೃ ದಿಟಸಂ ॥
ಸ್ಮರಣಸ್ಥನೂರ್ಧ್ವಗಮನಂ ।
ವರಸಿದ್ಧಂ ಜೀವನೆನಿಕುಮರ್ಹನ್ಮತದೊಳ್ ॥ ೧೧೪ ॥

ಎರಡುಂ ತೆಱನಕ್ಕುಂ ಜೀ ।
ವರಾಶಿ ಮುಕ್ತರ್ಸಮಂತು ಸಂಸಾರಿಗಳೆಂ ॥
ದಿರದೇಕವಿಧಂ ಮುಕ್ತರ್ ।
ಪರಿಕಿಸೆ ಸಂಸಾರಿಜೀವಮದು ಪಲವುತೆಱಂ ॥ ೧೧೫ ॥

ನಿಸದಂ ಪದಿನಾಲ್ಕುಂಜೀ ।
ವಸಮಾಸೆಯೊಳನಿತೆ ಮಾರ್ಗಣಾಸ್ಥಾನದೊಳೀ ॥
ಕ್ಷಿಸುವುದನಿತ್ತೆ ಗುಣಸ್ಥಾ ।
ನ ಸಮಿತಿಯೊಳ್ ಬೇಱೆವೇಱೆ ಸಂಸಾರಿಗಳಂ ॥ ೧೧೬ ॥

ವ ॥ ಅವಲ್ಲದೆಯುಂ—

ಕಂ ॥ ನಿರುತಂ ಪುದ್ಗಲಮೆಂದುಂ ।
ವರಧರ್ಮಾಧರ್ಮ ಗಗನಕಾಲಂಗಳುಮೆಂ ॥
ದಿರದಯ್ದು ತೆಱದೆ ನೆಗೞ್ಗುಂ ।
ಪರಮಾಗಮದೊಳ್ ಸಮಂತಜೀವದ್ರವ್ಯಂ ॥ ೧೧೭ ॥

ಪರಿಕಿಸೆ ಜೀವದ್ರವ್ಯಂ ।
ಬೆರಸಿರೆ ಷಡ್ದ್ರವ್ಯಮೆನಿಕುಮವಱೊಳ್ಕಾಲಂ ॥
ಪರಿಹೀನಮಾಗೆ ಪಡೆಗುಂ ।
ನಿರುತಂ ಪಂಚಾಸ್ತಿಕಾಯಮೆಂಬೀ ಪೆಸರಂ ॥ ೧೧೮ ॥

ಕಂ ॥ ಪರಿಭಾವಿಸೆ ಪಡೆಗುಂ ಬಂ ।
ಧುರ ಜೀವಮಜೀವಮಾಸ್ರವ ಬಂಧಂ ಸಂ ॥
ವರೆನಿರ್ಜರೆ ಮುಕ್ತಿಗಳಿವೆ ।
ಪರಮಾರ್ಥಂ ಸಪ್ತತತ್ವಮೆಂಬೀ ಪೆಸರಂ ॥ ೧೧೯ ॥

ಇವೆ ಪುಣ್ಯಪಾಪದೊಳ್ಪೆರ ।
ಸಿ ವಿಕಲ್ಪಿಸೆ ನವಪದಾರ್ಥಮೆನಿಸುಗುಮೊಂದೊಂ ॥
ದು ವಿಚಾರಿಪಂದು ಬಹು ಭೇ ।
ದ ವಿಧಾಯಿಗಳೆನಿಸುಗುಂ ಜಿನಪ್ರವಚನದೊಳ್ ॥ ೧೨೦ ॥

ವ ॥ ಅದಲ್ಲದೆಯುಂ—

ಚಂ ॥ ಜಿನಜಿನ ಸೂಕ್ತಿ ಸೂಕ್ತಿ ಕವಿತಾರ್ಥಚಯಂಗಳೊಳಾದ ನಚ್ಚುದ ।
ರ್ಶನಮಱಿತಂ ವಿಬೋಧಮತುಳಾಚರಣಂ ಸುಚರಿತ್ರಮಕ್ಕುಮಾ ॥
ಮನಮುಮನಾಕುಳಂ ನಿಜಪರಾತ್ಮನೊಳಿರ್ದೊಡೆ ಶುದ್ಧ ದೃಗ್ವಿಬೋ ।
ಧನುತಚರಿತ್ರಮೆಂದೆನಿಕುಮಿಂತಿವೆ ಮುಕ್ತಿಗೆ ಮುಖ್ಯ ಕಾರಣಂ ॥ ೧೨೧ ॥

ಕಂ ॥ ವ್ಯವಹಾರ ನಯಾಶ್ರಿತ ಶು ।
ದ್ಧ ವಿನಿಶ್ಚಯನಯ ವಿಶಿಷ್ಟ ರತ್ನತ್ರಯಮೆಂ ॥
ಬಿವು ಮುಕ್ತಿಗೆ ಕಾರಣಮು ।
ಪ್ಪುವು ವಿಮಳಧ್ಯಾನಮಂತದರ್ಕೆ ನಿಮಿತ್ತಂ ॥ ೧೨೨ ॥

ಉಪಶಾಂತಂ ಧ್ವಾಂತಂ ಸಂ ।
ದುಪೇಕ್ಷಕಂ ಸಲೆ ತಿತಿಕ್ಷು ನಿಃಕಾಂಕ್ಷಮನಃ ॥
ಕ್ಷಪಿತದುರಿತಾರಿ ಪಕ್ಷಂ ।
ವ್ಯಪೇತದೋಷಂ ನಿರಸ್ತರಾಗ ದ್ವೇಷಂ ॥ ೧೨೩ ॥

ನಿರುತಂ ಬಹಿರಾತ್ಮನುಮಂ ।
ತರಾತ್ಮನುಂ ಭಾವಿಪಂದು ಪರಮಾತ್ಮನುಮೆಂ ॥
ದಿರದಕ್ಕುಂ ಮೂಱು ತೆಱಂ ।
ಪರಿಕಿಪೊಡೆ ದಶಾವಿಭೇದಮಂ ಜೀವಚಯಂ ॥ ೧೨೪ ॥

ಮಾನಿತ ಪರಮಾತ್ಮ ಶ್ರ ।
ದ್ಧಾನಾನುಷ್ಠಾನ ವಿಶ್ರುತ ಧ್ಯಾನ ಸಮಾ ॥
ಧಾನ ನಿರದಂತರಾತ್ಮಂ ।
ತಾನಕ್ಕುಂ ತದ್ಗುಣೇತರಂ ಬಹಿರಾತ್ಮಂ ॥ ೧೨೫ ॥

ಪರಮ ವಿಶುದ್ಧ ಜ್ಞಾನ ।
ಸ್ವರೂಪನತಿವಿಶದ ದರ್ಶನಂ ನಿರ್ಲೇಪಂ ॥
ನಿರತಿಶಯ ಸೌಖ್ಯನಮಳಂ ।
ಪರಮಾತ್ಮನೆನಿಕ್ಕುಮಪಗತಾಘಪ್ರಕರಂ ॥ ೧೨೬ ॥

ಕಂ ॥ ತೊಱೆವುದು ಬಹಿರಾತ್ಮನನೇ ।
ತೆಱದೊಳಮಾರಯ್ದೊಡಂತರಾತ್ಮನ ದೆಶೆಯಿಂ ॥
ದಱೆವುದು ನೆರೆ ಪರಮಾತ್ಮನ ।
ತೆಱನಂ ಮೋಕ್ಷಾರ್ಥಿಯೆನಿಪ ಭವ್ಯಂ ಮನದೊಳ್ ॥ ೧೨೭ ॥

ವ ॥ ಎನಿಸಿದವ್ಯಗ್ರಚಿತ್ತನೇಕಾಂತಪರಮಪಾವನ ಪ್ರದೇಶದೊಳ್ ನಿಬಿಡಪಲ್ಯಂಕಾಸೀನನುಂ ನಾಭೀತಟ ವಿನ್ಯಸ್ತೋತ್ತಾನ ಹಸ್ತಸ್ವಸ್ತಿಕನುಂ ನಿಷ್ಪಂದಮಂದಿಭೂತಲೋಚನನುಂ ಪಂಚಗುರುಚರಣಸ್ಮರಣ ಪರಿಣತಾಂತಃಕರಣನುಮಾಗಿರ್ದ ಮುನಿವರಂಗೆ—

ಮ ॥ ಪರಮ ಸ್ವಾಶ್ರಿತ ದಿಗ್ವಿಬೋಧ ಚರಿತಂ ಸ್ವಾತ್ಮೈಕ ನಿಷ್ಠಂ ದಲಾ ।
ಗಿರೆ ಬಾಹ್ಯಕ್ರಿಯೆಯಾನ್ತರಕ್ರಿಯೆಯೊಳೆಲ್ಲಂ ಪಿಂಗೆ ಶಚ್ಛುದ್ಧ ಭಾ ॥
ಸ್ವರರತ್ನತ್ರಯ ಭಾವನಾ ಬಳೆದೆ ಸಾರ್ಗುಂ ಸ್ವಾತ್ಮಸಂವಿತ್ತಿದ ।
ಧ್ವರ ಸಂಪತ್ತಿಯಿನಕ್ಕುಮಕ್ಷಯಸುಖಂ ನಿರ್ವಾಣಲಕ್ಷ್ಮೀಸಖಂ ॥ ೧೨೮ ॥

ಕಂ ॥ ಅದಱಿಂದೆಯ್ದುವ ಫಲಮಾ ।
ವುದೆಂದೊಡವ್ಯಗ್ರ ನಿರುಪಮಾನನ ಸುಖಕಾ ॥
ಸ್ಪದಮಪ್ಪ ಮುಕ್ತಿಪದ ಮಿ ।
ರ್ಪುದದೀ ಭುವನತ್ರಯಾಗ್ರದೊಳ್ ಭುವನಪತೀ ॥ ೧೨೯ ॥

ಮ ॥ ಸ್ರ ॥ ವಿತತಶ್ರೀ ಪಾರ್ಶ್ವತೀರ್ಥೇಶ್ವರ ವಚನಸುಧಾವಾರ್ಧಿ ಕಲ್ಲೋಲ ಮಾಲಾ ।
ಪ್ರತಿಮೋದ್ಯದ್ದ್ವಾದಶಾಂಗ ಶ್ರುತಗದಿತ ಪದಾರ್ಥಂಗಳೊಳ್ ಜೀವಕರ್ಮ ॥
ಸ್ಥಿತಿಯಂ ಸುವ್ಯಕ್ತಮಪ್ಪಂತಿರೆ ಗಣಧರ ಯೋಗೀಶ್ವರರ್ ಪೇೞೆ ಕೇಳ್ದು ।
ಜ್ಝಿತದೋಷಂ ಸೂತ್ರರತ್ನ ತ್ರಯಮುಮಂ ವಿಳಸದ್ಭೂಷಣೋಪೇತನಾದಂ ॥ ೧೩೦ ॥

ಕಂ ॥ ಕಿವಿಗುಡುತೆಗಳಿಂ ಜಿನ ದಿ ।
ವ್ಯ ವಚನ ಸುಧೆಯಂ ನಮಂತು ಕಣ್ಗುಡುತೆಗಳಿಂ ॥
ದವಿರಳ ಸೌಂದರ್ಯಸುಧಾ ।
ಪ್ರವಾಹಮಂ ತೆಗೆದು ತುಂಬಿದಂ ಹೃತ್ಸರಮಂ ॥ ೧೩೧ ॥

ಎಂತಾನುಂ ಬೀೞ್ಕೊಂಡನ ।
ನಂತರಮರ್ಹತ್ಪದಾಬ್ಜಮಂ ಶ್ರಾಂತ ನಿಜ ॥
ಸ್ವಾಂತಂ ಜಿನನಂ ಗಣಧರ ।
ರಂತರದಿಂ [ಭಜಿಸಿ ತೀರು] ಗುಮೆ ಸತ್ಸಂಗಂ ॥ ೧೩೨ ॥

ಚಂ ॥ ನೆನೆಯಲೊಡಂ ಕೃತಾರ್ಥತೆಯನಾಗಿಪ ದೇವರ ದೇವನೆನ್ನನಂ ।
ದನನೆನಿಸಿರ್ದನೆಂದು ಭವಬಂಧನದಿಂದಮುಗಲ್ದನೆಂದು ಸಂ ॥
ದನುಪಮ ಪುಣ್ಯಸಂತತಿಗೆ ಭಾವಿಸೆ ಭಾಜನನಾದೆನೆಂದು ತ ।
ಣ್ಣನೆ ತಣಿದಂ ಸ್ವಚಿತ್ತದೊಳುದಾತ್ತಗುಣಪ್ರವರಂ ಮಹೀವರಂ ॥ ೧೩೩ ॥

ವ ॥ ಅಲ್ಲದೆಯುಂ—

ಮ ॥ ಮನದೊಳ್ತಜ್ಜಿನನಾಥ ಚಿಂತೆ ಸುಡಿಯೊಳ್ತದುದ್ಯದ್ಗುಣೌಘುಪ್ರಶಂ ।
ಸನಮಾತ್ಮ ಕ್ರಿಯೆಯೊಳ್ ತದರ್ಚನಮಣಂ ಮತ್ತಲ್ಲದಿನ್ನೇನುಮಂ ॥
ಮನದೊಳ್ ಮಾತಿನೊಳೊಲ್ದು ಮಾಡುವೆಡೆಯೊಳ್ ಭವ್ಯಾವತಂಸಂ ದಿಟಂ ।
ನೆನೆದಂತಾಯತಿಯಂ ಸಮಂತುನೆಗಳ್ಬಂ ಭೂಪಾಳನೇಂ ಧನ್ಯನೋ ॥ ೧೩೪ ॥

ಕಂ ॥ ಪರಮ ಪುರುಷಾರ್ಥ ಲಕ್ಷ್ಮೀ ।
ವಿರಾಜಿತಂ ನೆಗಳ್ದ ವಾರಣಾಸಿಯುಂ ಪೊಕ್ಕು ॥
ನಿರಂತರ ಸೌಖ್ಯ × × × ।
× × × × ನೃಪನೆಸೆದಿರ್ದಂ ॥ ೧೩೫ ॥

ಕಮಠನನಿಮಿತ್ತ ರೋಷಾ ।
ತ್ತಮನಂ ಪಲವುಂ ಭವಂಗಳೊಳ್ ಕೊಲುತಂ ಸಂ ॥
ದಮಳ ಗುಣ ನಿಳಯನಂ ವಿ ।
ಶ್ವ ಮಹಿತ ಮರುಭೂತಿಯಂ ಜಗದ್ಧಿತ ಮತಿಯಂ ॥ ೧೩೬ ॥

ತಾನೆಯ್ದಿದ ನಾರಕ ದುಃ
ಖಾನೀಕದ ಪವಣನುಸಿರಲಾರೆತ್ತರಿವರ್ ॥
ತಾನೆ ದಿಟಮಱವನೆನಿಸಿಯು ।
ನೂನಂಕೇಶಾಗ್ನಿ ತಪ್ತನಾಗಿ ಬಱಕ್ಕಂ ॥ ೧೩೭ ॥

ಹತನುಂ ಮನುಷ್ಯಗತಿವಡೆ ।
ದು ತಾಪಸತ್ವಕ್ಕೆ ಸಾರ್ದು ರಾಕ್ಷಸವಂಶೋ ॥
ದ್ಗತನಾಗಿ ಭರದಿನುಪಸ ।
ರ್ಗತತಿಯನಾ ತೀರ್ಥ ವಿಭುಗೆ ಬಿಡದೊಡರಿಸಿದಂ ॥ ೧೩೮ ॥

ವ ॥ ಅಂತು ತ್ರಿಭುವನಕ್ಷೋಭ ಕಾರಿಯಾದ ತತ್ಪುಣ್ಯಾತಿಶಯಕ್ಕೆ ಭೂತಾನಂದಂ ಪರಮಾನಂದಮನೆಯ್ದಿ ಜಿನಚರಣಮಂ ಶರಣ್ಬೊಕ್ಕುಮಿಥ್ಯಾತ್ವಮನೊಕ್ಕು ವಿಮಳರತ್ನ ತ್ರಯ ವಿಭೂಷಿತಂ ಸಮುಚಿತಕೋಷ್ಠದೊಳ್ ಕುಳ್ಳಿರ್ಪುದುಂ ಮತ್ತಂ—

ಚಂ ॥ ಪರಮನನಿಸರ್ಗ ಜನಿತೋದ್ಧುರ ಘಾತಿಕ್ಷಯ × × × × ।
× × × × × × × ॥
× × × × × ಸಮುತ್ತ ಸುರಪತಿಕೃತಿ ಬಂ ।
ಧುರ ಮಹಿಮಾತಿಶಯೋಕ್ಷಣದಾಂತರ್ವಂದ್ಯ ಬುದ್ಧಿಯಂ ಸ್ವಾತ್ರ್ಯಮದೊಳ್ ॥ ೧೩೯ ॥

ಕಂ ॥ ಅಂತಯ್ನೂರ್ವರ್ತಾಪಸ ।
ರಾಂತರ್ಜಿನ ದೀಕ್ಷೆಯುಂ ಜಿನೇಶ್ವರ ಚರಣೋ ॥
ಪಾಂತದೊಳಂತುಟೆ ವಿಧು ವಿಧು ।
ಕಾಂತದೊಳೊಂದಿಸನೆ ಸಾಂದ್ರಹೃದಯು ಸ್ಥಿತಿಯಂ ॥ ೧೪೦ ॥

ವ ॥ ತದನಂತರಂ—

ಕಂ ॥ ಸುರರಾಜನವಧಿಯಿಂದಂ ।
ಪರದೇವೇಶನ ವಿಹಾರಕಾಲಮನಱಿದಾ ॥
ದರದಿಂ ಮುಕುಳಿತಕರಸರ ।
ಸಿರುಹಂ ನಿಜವಿಭುಗೆ ವಿನಯದಿಂದಿಂತೆಂದಂ ॥ ೧೪೧ ॥

ಉ ॥ ದೇವರದೇವ ನಿನ್ನ ಚರಣಾಂಬುರುಹದ್ವಯ ಸೇವೆಯಿಂದೆ ಭ ।
ವ್ಯಾವಳಿ ತಾಳ್ದು ನಿಂದು ಕೃತಕೃತ್ಯತೆಯಂ ನಿಖಿಳಾವನೀತಳಂ ॥
ಪಾವನಮಕ್ಕೆ ಮಿಕ್ಕ ಕುಮತಪ್ರಕರಂ ಪೆಱಪಿಂಗಿ ಪೋಕೆ ಸೌ ।
ಖ್ಯಾವಹಮಕ್ಕೆ ಕೂಡೆ ಸಚರಾಚರಮೊತ ಭವದ್ವಿಹಾರದಿಂ ॥ ೧೪೨ ॥

ಚಂ ॥ ದೆಸೆದೆಸೆಯಂ ಪಳಂಚೆ ಜಯಜೀಯರವಂ ವಿವಿಧಾನಕಂ ಸಮು ।
ರ್ಘಿಸೆ ದುರಿತಾರಿಪಕ್ಷ ವಿಜಯೋತ್ಥಿತ ಮಂಗಳನಿಸ್ವನಂಗಳಂ ॥
ಪಸರಿಸೆ ದೇವಭಾವನ ವಿಯಚ್ಚರ ಕಿನ್ನರ ಮರ್ತ್ಯ ಭೂಷಣ ।
ಪ್ರಸರಮಣಿ ಪ್ರಭಾವಿಸರಮೇನೆಸೆದತ್ತೊ ಸಭಾವಿಜೃಂಭಣಂ ॥ ೧೪೩ ॥

× × × × × × × × × × ×

ಕಂ ॥ ಸಲೆಪಿಂತೆ ಮುಂತೆ ಮತ್ತಿ ।
ಕ್ಕೆಲಗಳೊಳಂತೋಱುವಂಬುಜಂಗಳನೆಱೆತಂ ॥
ದೊಲವಿಂ ನಿರವಿಸಿದಂ ಜಿನ ।
ಲಲಿತ ಪದನ್ಯಾಸದೆಡೆಯೊಳಮರಾಧೀಶಂ ॥ ೧೫೧ ॥

ಎನಿತನುರಾಗತೆಯಂ ತಾ ।
ಳ್ದಿ ನಿಜ ಶ್ರೀಚರಣ ಸೇವೆಗಳ ಸಿರಿಯಂ ಮು ॥
ಟ್ಟಿನೆ ವೀತರಾಗನಂಭೋ ।
ಜನಿಕರಮಂ ತೊಱೆದಪಸ್ತುಗೆಳಸುಗುಮೆ ಬುಧಂ ॥ ೧೫೨ ॥

ಪರುಷಗ್ರಾವಚಯಂ ತ ।
ರ್ಕರೋಘಳಂ ಕೀಟಕಂಟಕ ಪ್ರಕರಂ ತ ॥
ದ್ಧರೆಯೊಳಿನಿತ್ತಿಲ್ಲದ ಪೋಲ್ ।
ಮರುದಮರರ್ಸಮರಿ ಭಕ್ತಿಯಂ ನೆಱೆ ಮೆಱೆದರ್ ॥ ೧೫೩ ॥

ಸ್ತನಿತ ಕುಮಾರರ್ಚ್ಚಳಿಯಂ ।
ವಿನೂತ ಕರ್ಪೂರ ಕುಂಕುಮಾಗರು ಘನ ಚಂ ॥
ದನ ಬಂಧುರಾಂಬುವರ್ಷಮ ।
ನನಿಶಂ ಸಮೆದರ್ಜಿನೇಂದ್ರ ಸೇವಾನಿರತರ್ ॥ ೧೫೪ ॥

ಉ ॥ ಕಾಲಹರಂ ಜಿನಂ ಬರುತಮಿರ್ದಪನಿನ್ನೆಮಗುಂಟೆ ಪಾರಲಾ ।
ಕಾಲಮನೀ ತ್ರಿಕಾಲ ವಿಷಯಜ್ಞನಕಾಲನೆ ಬಲ್ಲಿತಾಗಿ ನಾ ॥
ಮೋಲಗಿಪಂ ದಲೆಂದು ನಿಜಶಾಖೆಗಳೆಂಬ ಕರಂಗಳಿಂ ಪ್ರಸೂ ।
ನಾಳಿ ಫಲಂಗಳಂಪಿಡಿದು ಬಂದವೊಲಿರ್ದವು ನಂದನೋತ್ಕರಂ ॥ ೧೫೫ ॥

ಕಂ ॥ ಕರಮೆಸೆದಿರ್ದುವು ತಮ್ಮೊಳ್ ।
ಸುರರೊರ್ವರನೊರ್ವರಿರದೆ ಸಂಭ್ರಮದಿಂದಂ ॥
ಕರೆದುರುವೆಸನಂ ಪೇೞ್ವು ।
ಚ್ಚರವಂ ಬಧಿರಿತ ದಿಗಂತರೋರ್ವೀವಳಯಂ ॥ ೧೫೬ ॥

ಧರಣಿರಜೋ ದೂಷಿತೆಯಿಂ ।
ದಿರದೆಳಸಿದೊ ಬಂದು ನೆಲಸಿದಂ ವಿಶ್ವಜಗ ॥
ದ್ಗುರುವೆನ್ನೊಳೆಂಬ ಮುದದಂ ।
ಬರಂ ಪ್ರಸನ್ನತೆಯನಾಂತವೊಲ್ ಸೊಗಯಿಸುಗುಂ ॥ ೧೫೭ ॥

ಮ ॥ ಅನುಕೂಲಂ ಪವನಂ ವಿನೂತಫಳ ಭಾರಾನಮ್ರ ವೃಕ್ಷಾಳಿ ಸ ।
ಸ್ಯನಿಕಾಯಂ ಮುಕುರಪ್ರಭಂ ವಿಮಳರತ್ನಭ್ರಾಜಿತಂ ವಿಶ್ರುತಾ ॥
ವನಿಯಾಶಾವಳಯಂ ನಿರಸ್ತತಿಮಿರಂ ಸಾನಂದನಿರ್ಪಂದ ಮಾ ।
ಯ್ತೆನುತೋರ್ವೀ ಜನಮಾವಗಂ ಜಿನಲಸದ್ಯಾತ್ರೋತ್ಸವ ಪ್ರೀತಿಯಿಂ ॥ ೧೫೮ ॥

ತಲೆಯೊಳ್ ಪೊತ್ತು ಸುವರ್ಣರತ್ನಮಯಭಾಸ್ವತ್‌ಛತ್ರಮಂ ಯಕ್ಷಸಂ ।
ಕುಳಮಾದಗ್ರಿಮ ಭಾಗದೊಳ್ ನಡೆದರಿಂದ್ರರ್ದತ್ತಮಂ ಚಾಂದ್ರ ನಿ ॥
ರ್ಮಳ ಬಿಂಬತ್ರಯ ಮೊಳ್ಪಿನಿಂದಮಡಕಿಲ್ಗೊಂಡಂತೆ ಚೆಲ್ವಾದುದಂ ।
ನಲವಿಂದೆತ್ತಿದರಿಕ್ಕಿದರ್ ಚಮರಮಂ ಮಿಕ್ಕಿಂದ್ರರಾನಂದದಿಂ ॥ ೧೫೯ ॥

ಕಂ ॥ ಎತ್ತಿದರಾರತಿಗಳನು ।
ದ್ವೃತ್ತಸ್ತನಭರವಿನಮ್ರಮತ್ಯಾಮರಿಯ ॥
ರ್ಪತ್ತಿದವು ಬೆನ್ನನಿರದು ।
ನ್ಮತ್ತಾಳಿಗಳಧಿಕ ಗಂಧಲುಬ್ಧತೆಯಿಂದಂ ॥ ೧೬೦ ॥

ನಡೆವೆಡೆಗಗನತಳಂ ಬಿಡೆ ।
ನಡೆವುದಸಂಖ್ಯಾತ ಮನುಜ ತಿರ್ಯಗ್ಗಣಮುಂ ॥
ದೊಡೆ ಬೋಧ್ಯಮಲ್ತು ಮುನ್ನೆಡೆ ।
ಯುಡುಗದುಪಾರ್ಜಿಸಿದ ಜಿನನ ಪುಣ್ಯಂ ಕಿಱಿದೇ ॥ ೧೬೧ ॥

ವ ॥ ಅಂತು ಚತುರ್ನಿಕಾಯಾಮರ ಪರಿಕಲ್ಪಿತಾತಿಶಯ ವಿರಾಜಮಾನಪದ್ಮ ಯಾನದಿಂ ನಡೆಯೆ—

ಮ ॥ ಸ್ರ ॥ ನೆರೆದೆತ್ತಂಭೋವನಂವಂದಿರೆ ಮುದದಿನಧೋಲೋಕಮಾಕಲ್ಯಜರ್ವಂ ।
ದಿರೆ ನೋೞ್ಪಿಂದೂರ್ಧ್ವಲೋಕಂ ಮೃಗಮನುಜಗಣಂ ಕೂಡಿ ಸದ್ಭಕ್ತಿಯಿಂ ಬಂ ।
ದಿರೆ ತಿರ್ಯಗ್ಲೋಕಮೆಂಬಂತೆಸೆದುದಸದಳಂ ಯಾತ್ರೆಯೇನಿಲ್ಲಿ ಚಿತ್ರಂ ।
ಗುರುನಾಥಂ ಮೂಱು ಲೋಕಕ್ಕೆನಿಸಿದ ಜಿನನಿರ್ದಲ್ಲಿ ಗಾರ್ವಾರರೆನ್ನಲ್ ॥ ೧೬೨ ॥

ಮ ॥ ಭರತಕ್ಷೇತ್ರದಶೇಷ ದೇಶನಿವಸದ್ಭವ್ಯಾಶಯೋದ್ಯದ್ಗುಹಾಂ ।
ತರ ಸಂಸುಪ್ತವಿಬೋಧ ಸಿಂಹತತಿಯಿಂ ಸ್ವಾತ್ಮಾಯ ಗಂಭೀರದಿ ॥
ವ್ಯರವಂ ಬೋಧಿಸಿದತ್ತು ಸರ್ವಜನತಾ ಮಿತ್ರತ್ವ ಭಾವಂ ನಿರಂ ।
ತರಸಂಸಾರ ದುರಂತ ದುಃಖ ನಿಚಯಂ ತೂಳ್ದಿತ್ತು ಜೀವಂಗಳಂ ॥ ೧೬೩ ॥

ಮ ॥ ಸ್ರ ॥ ಜಿನಚೇತಃ ಕ್ಷೇತ್ರದೊಳ್ ಸಂದಣಿಸಿ ಬಳೆದ ಮಿಥ್ಯಾಕುಜವ್ರಾತಮಂ ದಿ ।
ವ್ಯ ನಿನಾದೋದ್ಯತ್ಕುಠಾರಂ ತವಿಸೆ ಪರಮ ಕಾರುಣ್ಯ ಪೀಯೂಷ ವಾಕ್ಸೇ ॥
ಚನಮಂ ಮುಂ ಮಾಡಿ ಸದ್ಧರ್ಮಮನತಿಶಯದಿಂ ಬಿತ್ತಿ ನಿಶ್ಶ್ರೇಯಸಾಂದ್ರಾ ।
ವನಿಜಾತಾರಾಮಮಂ ಬಿತ್ತರಿಸಿದನಖಿಳಾರಂಭಮಂ ಬಿಟ್ಟುವಿಶಂ ॥ ೧೬೩ ॥

ವ ॥ ಅಂತು ಸ್ವಯಂಭೂಪ್ರವೃತ್ತಿಯಿಂ ನವಗಣಧರರುಂ ಷಷ್ಟ್ಯುತ್ತರ ಪಂಚಶತ ಪೂರ್ವಧರರುಂ ನವಶತೋತ್ತರ ಸಹಸ್ರಶಿಕ್ಷಕರುಂ ಚತುಶ್ಶತೋತ್ತರ ಪಂಚಸಹಸ್ರಾವಧಿ ಜ್ಞಾನಿಗಳುಂ ಏಕಸಹಸ್ರ ಕೇವಳಿಗಳುಮನಿತೆ ವಿಕ್ರಿಯಾಋದ್ಧಿ ಪ್ರಾಪ್ತರುಂ ಪಂಚವಿಂಶಾದುತ್ತರ ಸಪ್ತಶತ ಮನಃಪರ್ಯಾಯ ಜ್ಞಾನಿಗಳುಂ ಷಷ್ಠಶತವಾದಿಗಳುಂ ಸುಲೋಚನಾ ಪ್ರಭೃತಿ ಪಂಚತ್ರಿಂಶತ್ಸಹಸ್ರಾರ್ಯಿಕೆಯರುಂ ಏಕಲಕ್ಷ ಶ್ರಾವಕರುಂ ತ್ರಿಲಕ್ಷ ಶ್ರಾವಕಿಯರುಂ ಅಸಂಖ್ಯಾತ ದೇವನಿಕಾಯಮುಮನಿತೆ ತಿರ್ಯಕ್ಸಮೂಹಮುಂಬೆರಸು ಚತುರ್ಮಾಸೌನ ಸಪ್ತತಿ ವರ್ಷ ಕೇವಳಿ ಕಾಲಂ ಮಾಸಾದಶೇಷಮಾದುದೆಂಬನ್ನೆವರಂ—

ಮ ॥ ಕರಹಾಟಾಂಧ್ರ ಕಳಿಂಗ ವಂಗ ಮಗಧಾ ಗಾಂಧಾರ ಸೌವೀರಘೂ ।
ರ್ಜರ ಕರ್ಣಾಟ ವರಾಟ ಮಾಳವ ಮಹಾರಾಷ್ಟ್ರಾದಿ ದೇಶಸ್ಥ ಸಿಂ ॥
ಧುರಭವ್ಯೋತ್ತಮ ಪೂರ್ವಜನ್ಮ ಕೃತಪುಣ್ಯಪ್ರೇರ್ಯಮಾಣಂಜಿನೇ ।
ಶ್ವರನಾಸ್ಥಾನಮನಿಂದಿತಂ ವಿಹರಿಸುತ್ತಂ ಬಂದು ಸಮ್ಮೇದಮಂ ॥ ೧೬೪ ॥

ವ ॥ ಸಾರ್ದುದಾ ಮಹೀಧರದ ಮಹಿಮಾತಿಶಯಮಂ ಪೇೞ್ವೊಡೆ—

ಮ ॥ ಎನಗಿಂದ್ರೋದಿತಮದ್ರಿಗಾಂ ಸರಿವಲಂ ನಿರ್ವಾಣ ಕಲ್ಯಾಣಮಿಂ ।
ದ್ರನುತರ್ಗೆನ್ನೊಳುದಾತ್ತ ಜನ್ಮಸವನಂ ತದ್ಭೂದದೊಳ್ ನೋೞ್ವೊಡೆಂ ॥
ದೆನಿಪೇಂಪೆಂಪು ಪೃಥೋನ್ನತಾದ್ರಿ ನಿಕರಕ್ಕೇನುಂಟೆ ಪೇೞೆಂದುನೆ ।
ಟ್ಟನೆ ಸಮ್ಮೇದ ಮಹೀಧರಂ ನಗುವುದುದ್ಯತ್ಕೋಕಿಳಾರಾವದಿಂ ॥ ೧೬೫ ॥

ಪರಿನಿರ್ವಾಣಮನೆಯ್ದಿದರ್ಮದದೆ ಪತ್ತೊಂಬತ್ತುಮುಂ ತೀರ್ಥಕೃ ।
ದ್ವರರೆನ್ನೊಳ್ಕಡೆಯೆಯ್ದಿಸಲ್ಸಲಿಗೆಯಿಂ ಪಾರ್ಶ್ವೇಶ್ವರಂ ಬಂದನೆಂ ॥
ಬುರುರಾಗಂ ಗಿರಿಯಿಂ ಬಯಲ್ಪರಿದವೊಲ್ ಕಣ್ಗಂ ಮನಕ್ಕಂ ಮನೋ ।
ಹರಮಾಗಿರ್ದುದು ಧಾತುರಾಗ ಮಿಳಿತಂ ತನ್ನಿರ್ಜರಾಂಬುಪ್ಲವಂ ॥ ೧೬೬ ॥

ವ ॥ ತದ್ಗಿರೀಂದ್ರಪಾವನೈಕದೇಶದೊಳ್—

ಕಂ ॥ ವಿನುತಗುಣಧರಮುಖಾಖಿಳ ।
ಮುನಿಜನ ವೃತನುತ್ತರಾಭಿಮುಖನೆನನುಂ ಮೋ ॥
ಹನಿರೋಧದಿಂದಮಿರ್ದಂ ।
ವಿನೇಯ ಜನ ಬಂಧುಮಾಸವೊಂದಪ್ಪಿನೆಗಂ ॥ ೧೬೭ ॥

ವ ॥ ಅನಂತರಂ ಸೂಕ್ಷ್ಮಕ್ರಿಯಾಪ್ರತಿಪತ್ತಿಯೆಂಬ ತೃತೀಯ ಶುಕ್ಲಧ್ಯಾನಮನೊಳಕೊಂಡಂತರ್ಮುಹೂರ್ತದಿಂ ಶರೀರ ತ್ರಿಗುಣ ಬಹುಳತೆಯಿನೊಂದು ಸಮಯದೊಳ್ ಚತುರ್ದಶ ರಜ್ಜೂತ್ಸೇಧ ಜೀವ ಪ್ರದೇಶ ಪ್ರಸರ್ಪಣಮಪ್ಪದಂಡ ಸಮುದ್ಘಾತಮುಮನೆರಡನೆಯ ಸಮಯದೊಳ್ ಪೂರ್ವೋಕ್ತ ಬಾಹಾಲ್ಯಾಯಾಮದಿಂದಿರ್ಕೆಲಂ

ಗಳೊಳಮಮಳ್ವಡಿಯ ತೆಱದಿಂ ಬಳೆದ ಜೀವಪ್ರದೇಶ ಪ್ರಸರ್ಪಣಮಪ್ಪ ಕವಾಟ ಸಮುದ್ಘಾತಮುಮಂ ಮೂಱನೆಯ ಸಮಯದೊಳ್ವಾಯುತ್ರಯಮುೞಿಯೆ ಲೋಕಾಕಾಶ ಪ್ರದೇಶ ಪ್ರಸರ್ಪಣಮಪ್ಪ ಪ್ರತರಣಸಮುದ್ಘಾತಮುಮಂ ನಾಲ್ಕನೆಯ ಸಮಯದೊಳ್ ನಿಖಿಳ ಲೋಕವ್ಯಾಪ್ತಿ ಜೀವಪ್ರದೇಶ ಪ್ರಸರ್ಪಣಮಪ್ಪ ಲೋಕಪೂರಣ ಸಮುದ್ಘಾತಮುಮಂ ನಿರ್ವರ್ತಿಸಿ ಮತ್ತಂ ಪ್ರತಿಲೋಕಮಮಾರ್ಗದಿಂದೊಂದು ಸಮಯದೊಳ್ ಪ್ರೇತರ ಕವಾಟದಂಡ ಸಮುದ್ಘಾತಂಗಳಂ ಮಾಡಿ ಎಂಟನೆಯ ಸಮಯದೊಳ್ ಮೂಲ ಶರೀರ ಪ್ರಮಾಣನಾಗಿಯಘಾತಿ × × × ತತಿಯಂ ಪಡೆದಾಯುಸ್ಥಿತಿಯೊಳುೞಿದ ಘಾತಿ ಸ್ಥಿತಿಯಂ ಸಮಾನಂ ಮಾಡಿ ಮತ್ತಮಂತರ್ಮುಹೂರ್ತ ಬಿಂಬಾಧರಮನೋವಚನೋಚ್ಛ್ವಾಸಂ ಬಾದರ ಕಾಯಯೋಗ ಸೂಕ್ಷ್ಮ ಮನೋವಚನೋಚ್ಛ್ವಾಸಂಗಳುಮಂ ನಿರೋಧಿಸಿ ಸೂಕ್ಷ್ಮಕಾಯಯೋಗನಾಗಿ ನಿರೋಧಂಗೆಯ್ದು—

ಕಂ ॥ ಎನಸುಂ ತಾನುಚ್ಚರಿಸುವ ।
ನನಿತೆ ಪೊೞ್ತು ತನಗವಧಿಸಮಂ . . . . . . ॥
ನೆನೆ ನೆಗೞ್ದ ಯೋಗ ಕೇವಳ ।
ವಿನುತಗುಣನೆನಿಸಿ ಸುಸ್ಥಿರಂ ತಾನಾದಂ ॥ ೧೬೮ ॥

ವ ॥ ಅಲ್ಲಿಂ ಬೞಿಯಂ ಸಮುಚ್ಛಿನ್ನ ಪ್ರಾಣಾಪಾನ ಪ್ರಚಾರ ಸರ್ವಕಾಯವಾಙ್ಮನೋಯೋಗ ಪರಿಸ್ಪಂದ ಕ್ರಿಯಾವ್ಯಾಪಾರಮಪ್ಪ ಸಮುಚ್ಛಿನ್ನ ಕ್ರಿಯಾನಿವೃತ್ತಿಯೆಂಬ ಚತುರ್ಥ ಶುಕ್ಲಸಂರುದ್ಧ ಸಮಸ್ತಾಸ್ರವಂ ಪರಿಪೂರ್ಣ ನಿಖಿಲಶೀಲಗುಣಗಣಂ ನಿಜದ್ವಿಚರಮ ಸಮಯದೊಳನನ್ಯತರ ವೇದನೀಯ ದೇವಗತಿ ತತ್ಪ್ರಾಯೋಗ್ಯಾನುಪೂರ್ವ ಶರೀರಬಂಧನ ಸಂಘಾತ ವರ್ಣರಸ ಪ್ರತ್ಯೇಕಪಂಚಕ ಸಂಹನನ ಸಂಸ್ಥಾನ ಷಟ್ಕಾಂಗೋಪಾಂಗದ್ವಿತಸುಧಗಂಧದ್ವಿತ ವಿಹಾಯದ್ವಿತಸ್ಪರ್ಶಾ × × × × × × × × × × ಚತುಷ್ಕಸ್ಥಿರಾಸ್ಥಿರ ಶುಭಾಶುಭ. ಸುಸ್ವರ ದುಸ್ವರ ಸುಭಗ ದುರ್ಭಗ ಪ್ರತ್ಯೇಕ ಶರೀರ ಯಶಸ್ಸಿತ್ಯನಾದೇಯ ನಿರ್ಮಾಣ ಪರ್ಯಾಪ್ತ ನೀಚೈರ್ಗೋತ್ರಂಗಳೆಂಬೆಪ್ಪತ್ತೆರಡು ಪ್ರಕೃತಿಗಳಂ ನಿರ್ಮೂಲಂಗೆಯ್ದು ಕಡೆಯ ಸಮಯದೊಳವಶಿಷ್ಟಾನ್ಯತರ ವೇದನೀಯ ಮನುಷ್ಯಾಯುರ್ಗತಿ ತತ್ಪ್ರಾಯೋಗ್ಯಾನುಪೂರ್ವ ಜಾತಿತ್ರಸನಾಮ ಸುಭಗಾದೇಯ ಪರ್ಯಾಪ್ತ ಬಾದರ ಯಶಸ್ಕೀತ್ರ್ಯುಚ್ಚೈರ್ಗೋತ್ರ ತೀರ್ಥಕರನಾಮಂಗಳೆಂಬ ಪದಿಮೂಱುಂ ಪ್ರಕೃತಿಗಳಂ ನಿರವಶೇಷಂ ಕಿಡಿಸಿ—

ಮ ॥ ಸ್ರ ॥ ವರಸಮ್ಯಕ್ತ್ವಾವಬೋಧ ಪ್ರಥಿತ ವಿಮಳ ಸದ್ದರ್ಶನಾನಂತ ವೀರ್ಯೋ ।
ದ್ಧುರ ಸೂಕ್ಷ್ಮತ್ವಾವಗಾಹಾಗುರುಲಘು ಕವಿಬಂಧಂಗಳಿಂದಿಂತಿವೆಂಟುಂ ॥
[ತರದಿಂದೊಂದಾಗಿತನ್ನೊ] ಳ್ಪಲಸಿರೆ ನಿಜದಿಂದಷ್ಟಮೋರ್ವೀಶನಾದಂ ।
ಪರಮೇಶಂ ನಿರ್ಜಿತಾಶಂ ದಳಿತ ದುರಿತಯೂಥಂ ಲಸತ್ಪಾರ್ಶ್ವನಾಥಂ ॥ ೧೬೯ ॥

ಕಂ ॥ ತನ್ನಂ ತಾಂ ತನ್ನಿಂದಂ ।
ತನ್ನತ್ತಣಿನಱಿದು ತನಗೆ ಸೌಖ್ಯೋನ್ನತಿಯಂ ॥
ತನ್ನೊಳ್ ನಿಜಮೆನಿಸಿದಾರ್ ।
ತನ್ನಗುಣಂ ಪ್ರಕಟಮಾಗಿ ಕುಡೆ ನುತಿವಡೆದಂ ॥ ೧೭೦ ॥

ಮ ॥ ನಿರವದ್ಯಂ ನಿರುಪಾಧಿಕಂ ನಿರುಪಮಂ ನಿಶ್ಚಿಂತ ರೂ × × × × × × ।
× × × × × ತಂ ನಿಶ್ಚಳಿತಂ ನಿಜಾತ್ಮಜನಿತಂ ನಿರ್ಧೂತದೋಷಂ ನಿರಾ ॥
ದರಣಂ ನಿರ್ಮಳಿನಂ ನಿರಸ್ತ ದುರಿತಂ ನಿರ್ವ್ಯಗ್ರ ನಿರ್ವಾದ ಬಂ ।
ಧುರಮಾಗಿರ್ದ ಸುಖಕ್ಕೆ ತಾಂ ನಿಳಯಮಾದಂ ವಿಶ್ವಬೋಧಾಸ್ಪದಂ ॥ ೧೭೧ ॥

ವ॥ ಅಂತಾ ನಿರತಿಶಯ ಸುಖಾಶ್ರಯಮಾದ ನಿಶ್ರೇಯಸ ನಿಳಯಮೆಂತುಟೆಂದೊಡೆ-

ಮ ॥ ಇಳೆ ಚಂಚನ್ಮಣಿ ಕುಟ್ಟಿಮಂ ಕುಳನಗೌಘಂ ಸ್ತ × × × × ।
ವಳಯಂ ಕುಡ್ಯ ಚಯಂ ಸುರೋತ್ಕರ ವಿಮಾನಾನೀಕಮಾ ಭೂಮಿಕಾ ॥
ವಳಿತಾವಾಗಳವಟ್ಟ ವಿಸ್ತೃತ ಜಗಚ್ಚೈತ್ಯಕ್ಕೆ ಚೆಲ್ವಾಗಿರಿ × × × ।
ಟ್ಟಲಸನ್ಮೌಕ್ತಿಕ ರಾಜಮಾನ ಕಲಶಂ ತಾನಾಯ್ತು ಮುಕ್ತ್ಯಾಲಯಂ ॥ ೧೭೨ ॥

ಕಂ ॥ ಸುಲಲಿತಮೊಶತ್ವಾಗ್ಭಾ ।
ರಲಕ್ಷಣಾಖಂಡ ಚಂದ್ರಕಾಂತಮಯಂ ನಿ ॥
ರ್ಮಳ ಸಮುವೃತ್ತಂ ಪವಣಿಂ ।
ಸಲೆ ನಾಲ್ವತ್ತೈಯ್ದು ಲಕ್ಷಯೋಜನದಗಲಂ ॥ ॥ ೧೭೩ ॥

ನಿಲದೆಂಟು ಯೋಜನಂ ವಿ ।
ಶ್ವಲೋಕ ಚೂಡಾಮತಂ ಸಮವ್ಯಾಬಾಧಂ ॥
ಮಳದೋಷ ದೂಷಣಾಕುಳ ।
ವಿಳಯ ವಿಹೀನಂ ಸಮಂತು ಸಿದ್ಧಕ್ಷೇತ್ರಂ ॥ ೧೭೪ ॥

ವ ॥ ಅಲ್ಲಿ—

ಉ ॥ ಅಂತಪವರ್ಗ ಸೌಖ್ಯನಿಳಯೈಕ ಸಮಾಶ್ರಯನಾಗಿಯುಂ ಜನಾ ।
ಸ್ವಾಂತದೊಳೊರ್ಮೆಯುಂ ನೆಲಸಿ ತನ್ನ ಮಹತ್ವ ಗುಣಪ್ರಕರ್ಷಮಾ ॥
ಶಾಂತರಮಂ ಸಮಂತು ಬೆಳಗುತ್ತಿರೆ ಪಾರ್ಶ್ವಜಿನೇಶನಾದನ ।
ತ್ಯಂತ ವಿಶುದ್ಧದರ್ಶನ ವಿಬೋಧ ಚರಿತ್ರ ವಿಚಿತ್ರ ಭೂಷಣಂ ॥ ೧೭೫ ॥

ವ ॥ ಅನ್ನೆಗಮಿತ್ತಲ್—

ಮ ॥ ಪರಿನಿರ್ವಾಣ ಮಹಾಮಹಕ್ಕೆ ನೆರೆದೆತ್ತಂ ಬರ್ಪ ದಿವ್ಯಾಂಗನೋ ।
ತ್ಕರದಿಂ ವ್ಯಂತರ ಸುಂದರೀ ನಿಕರದಿಂ ಜ್ಯೋತಿಷ್ಕ ಕಾಂತಾಳಿಯಿಂ ॥
ನಿರತಂ ಭಾವನ ಭಾಮಿನೀ ಪ್ರಕರದಿಂ ಚೆಲ್ವಾಯ್ತು ತತ್ತನ್ಮನೋ ।
ಹರ × × × × × × × ತಳಂ ॥ ೧೭೬ ॥

ಕಂ ॥ ಕಡುಗಿಱಿದು ಗಗನ ತಳಮೆಂ ।
ದೆಡೆಯುಡುಗದೆ ನಡೆವ ಸುರಸಮಾಜಕ್ಕೆನೆ ದಾಂ ॥
ಗುಡಿವಿಡೆ ವಿಳಾಸದೆಸಕಂ ।
ಬಿಡೌಜನೆಯ್ತಂದನಾ ಶತೇಂದ್ರ ಸಮೇತಂ ॥ ೧೭೭ ॥

ವ ॥ ಅಂತು ಬಂದು—

ಕಂ ॥ ಸಾಮಜದಿನಿೞಿದು ಸುರ ಚೂ।
ಡಾಮಣಿ ಇಂದ್ರಾಣಿವೆರಸು ಸವಿನಯದಿಂದಂ ॥
ಮೂಮೆ ಬಲಗೊಂಡನದ್ರಿ ಶಿ।
ಖಾಮಣಿಯಂ ನಿರ್ವೃತಿ ಪ್ರಸಿದ್ಧಾವನಿಯಂ ॥ ೧೭೮ ॥

ಮ ॥ ಅತಿಪೂತಾಮಳವಾರಿಯಿಂ ಮಳಯಜಕ್ಷೋದಂಗಳಿಂ ಮೌಕ್ತಿಕಾ।
ಕ್ಷತ ಪುಂಜಂಗಳಿನಿಂದ್ರಭೂಜ ಸುಮನೋಧಾಮಂಗಳಿಂ ಸಂಗತಾ ॥
ಮೃತಸನ್ನಾಹ ನಿಕಾಯದಿಂ ಮಣಿಲಸದ್ದೀಪಂಗಳಿಂ ಧೂಪಸಂ।
ತತಿಯಿಂ ಸತ್ಫಳರಾಜಿಯಿಂದೆ ಸಮೆದಂ ಪೂಜಾವಿಶೇಷಂಗಳಂ ॥ ೧೭೯ ॥

ವ ॥ ತದನಂತರಂ—

ಕಂ ॥ ಸುರವಾದಕರಿರ್ಕೆಲದೊಳ।
ಗಿರೆ ಸುರ ಗಾಯಕೀಜನಂ ತಾಂ ಪಿಂತಿರೆ ತ ॥
ತ್ಸುರ ನರ್ತಕಿಯರ್ಕೂಡಿರೆ।
ಸುರಪತಿಯಾನಂದ ನಾಟ್ಯಕುದ್ಯತನಾದಂ ॥ ೧೮೦ ॥

ಮ ॥ ಅನಿತಂ ತೋಱಿದನಿಂದ್ರನಾಡುವೆಡೆಯೊಳ್ ತಜ್ಜನ್ಮವೃತ್ತಪ್ರಶಂ।
ಸನದಿಂ ತತ್ಪದ ನಿರ್ಭರ ಪ್ರಣಯದಿಂ ತತ್ತದ್ರಸೋತ್ಕರ್ಷ ದ ॥
ರ್ಶನದಿಂ ತತ್ಸಮಯೋಚಿತ ಪ್ರಚುರ ಭಾಷಾವೇಶ ಸಾದೃಶ್ಯದಿಂ।
ದೆನಸುಂ ವಾಚಿಕ ಸಾತ್ವಿಕಾಂಗಿಕವಿನೂತಾಹಾರ್ಯದೊಂದೋಜೆಯಂ ॥ ೧೮೧ ॥

ಮ ॥ ಸ್ರ ॥ × × × × × × × × ×
× × × × × × × × ×
× × ತ್ಸವದೊಳ್ ನೆಗೞ್ದಿರ್ದನ್ನ ಪುಣ್ಯಕ್ಕೆ ಪೇೞಾರ್
ಸಮಮೆಂದಿಂದ್ರಂ ಶತೇಂದ್ರರ್ವೆರಸು ನಲಿದನಾನಂದದಿಂದೀಕ್ಷಿತಾತ್ಮಂ ॥ ೧೮೨ ॥

ನಲವಿಂ ವಕ್ತ್ರಾಂಬುಜಕ್ಕೋಲಗಿಸೆ ವಿಕಸನ ಶ್ರೀಯನುತ್ಕರ್ಷ ಹರ್ಷಂ।
ವಿಳಸತ್ಸೌಂದರ್ಯಮಂ ಕೊರ್ವಿಸೆ ಪುಳಕಚಯಂ ಹಾರಮಂ ಮತ್ತೆವಕ್ಷ ॥
ಸ್ಥಳದೊಳ್ಸಾನಂದಬಾಷ್ಪಪ್ರತತಿ ಪಡೆಯೆ ತನ್ನಾಟ್ಯಮಂತಾಲಯುಕ್ತಾ।
ಕುಳಿಶಾಸ್ತ್ರಂ ಪೋದನಾಗಳ್ ಸುಕವಿಜನ ಮನೋಹರ್ಷಸಸ್ಯ ಪ್ರವರ್ಷಂ ॥ ೧೮೩ ॥

ಮ ॥ ಅರವಿಂದೋದ್ಭವಸೂನುಭಾನುಮನತತ್ಪುತ್ರಂ ತದೀಯೋದ್ಭವಂ।
ಸ್ಥಿರನಿಕ್ಷ್ವಾಕುಮಹೀಶನಾಕ್ಷಿತಿಪನಿಕ್ಷು ಗ್ರಾಮದೆಣ್ಬತ್ತನಾ ॥
ಲ್ವರನಾಚಾರಯುತಂ ಪ್ರತಿಷ್ಠಿಸಿದನೆಂದಂದಾದ್ಯರುಂ ಹೃದ್ಯವಿ।
ದ್ಯರುಮಾಚಾರವಿಶುದ್ಧರುಂ ಪರರದಾ × × × ಳ್ ॥ ೧೮೪ ॥

ಕಂ ॥ ಎನೆ ನೆಗೞ್ದ ವಿಪ್ರಕುಲಮಂ।
ಡನ ಚರಣಾಂಭೋಜಭೃಂಗನಖಿಳಸಿತಾಮಂ ॥
ಡನಕೀರ್ತಿಕಾಂತ ಪಂಡಿತ।
ಜನವನರುಹಷಂಡ ಚಂಡಕರಮಾರ್ತಂಡಂ ॥ ೧೮೫ ॥

ಶಾ ॥ ವೀರಶ್ರೀನಿಧಿ ಕಾರ್ತವೀರ್ಯತನಯಂ ಶ್ರೀಲಕ್ಷ್ಮಣ ಕ್ಷೋಣಿಪಂ ।
ಕ್ಷೀರಾಂಭೋನಿಧಿ × × × ಶ್ರೀಕಾರ್ತವೀರ್ಯಂ ಕಳಾ ॥
ಧಾರಂ ಸಜ್ಜನಸೌಖ್ಯಕಾರಿ ಸುಚರಿತ್ರಂ ಲೋಕನೇತ್ರಂ ಶುಭಾ ।
ಕಾರಂ × × × ಸೊಗಯಿಪಂ ಶ್ರೀಚಂದ್ರಿಕಾನಂದನಂ ॥ ೧೮೬ ॥

ಮ ॥ ಪೊಗರಂಭೋರುಹಸಂಭವಂ ಬರೆದತಿಸ್ಪಷ್ಟಾಕ್ಷರ ಶ್ರೇಣಿ ಸಾ ।
ಕ್ಷಿಗಳಾಶಾಧಿಪರಾರೆ ರಾಜಿಸುವುದಂ ವಾಚಾಳಭೂಪಾಳಕ ॥
ರ್ಜಗದೊಳ್ಪರ್ಕುಡಿ ಮಾಡದಂತಸಿಲತೋದ್ಯತ್ಪತ್ರಮಂ ತೋಱೆ ನೆ ।
ಟ್ಟಗೆ ಱಟ್ಟಾನ್ವಯ ಕಾರ್ತವೀರ್ಯನಖಿಳೋರ್ವೀಭಾಗಮಂ ಭೋಗಿಪಂ ॥ ೧೮೭ ॥

ಕಂ ॥ ಶ್ರೀಕಾರ್ತವೀರ್ಯ ನೃಪಲ ।
ಕ್ಷ್ಮೀಕವಿ × × × ವಿನೇಯಾ ॥
ನೀಕ ಶಿರೋಮಣಿ ನೆಗೞ್ದಂ ।
ಲೋಕಪ್ರಿಯಜಾತಕೀರ್ತಿ ಕವಿಕುಲತಿಲಕಂ ॥ ೧೮೮ ॥

ಮ ॥ ಶಕವರ್ಷಂ ಚತುರಬ್ಧಿಚಂದ್ರ ಶಶಿಸಂಖ್ಯಂ ಚಿತ್ರಭಾನೂತ್ಥ ಕಾ ।
ರ್ತಿಕ ಶುದ್ಧೋದಿತ ಪಂಚಮಿೀಧಿಷಣವಾರಂ ಪೂರ್ಸ್ಕೆ ಸಂಪೂರ್ಣಮಾ ॥
ಯ್ತು ಕವಿಪ್ರಸ್ತುತ ಪಾರ್ಶ್ವನಾಥಚರಿತಂ ಪಾಶ್ವೋರ್ದಿತಂ ಕೂಡೆ ನ ।
ರ್ತಿಕೆ ತತ್ಕೀರ್ತಿವೊಲೂರ್ಜಿತಾರ್ಥ × × × ಳಂ ॥ ೧೮೯ ॥

ಕಂ ॥ ಮಿಗೆ ಸಾದ್ರ್ರ ಹೃದಯರಂಗದೊ ।
ಳೊಗೆಯುತ್ತಿರೆ ಪುಳಕಸಸ್ಯತತಿ ಮತ್ತ್ರಜ್ಞಾ ॥
ನಘುನಿಕಟಜನಿತಮಂ ತಿ ।
ರ್ದುಗೆ ಕಾವ್ಯರಸಪ್ರವಾಹಮಂ ಬುಧನಿವಹಂ ॥ ೧೯೦ ॥

ಮ ॥ ಇದು ಸದ್ಧರ್ಮಸುಕಾವ್ಯ ಧರ್ಮವಿಭವಕ್ಕಘ್ರ್ಯಂದಲೆಂದೊರ್ಮೆಯುಂ ।
ಮುದದಿಂದಂ ಬರೆವಟ್ಕಿಱಿಂ ಬರೆಯಿಪತ್ಯಾನಂದದಿಂ ಪೇೞ್ವ ಸಂ ।
ಮುದದಿಂ [ಪೇೞಿಪ ಭಕ್ತಿಯಿಂ ಸ್ತುತಿಸುತತ್ಯುತ್ಸಾಹದಿಂ] ಭಾವಿಪ ।
ಗ್ಗದ ಕಾವ್ಯಪ್ರಿಯ ಭವ್ಯಕೋಟಿಗೆ ಜಯಂ ಭದ್ರಂ ಶುಭಂ ಮಂಗಳಂ ॥ ೧೯೧ ॥

॥ ಗದ್ಯಂ ॥

ಇದು
ವಿದಿತವಿಬುಧಲೋಕನಾಯಕಾಭಿಪೂಜ್ಯ ವಾಸುಪೂಜ್ಯ ಜಿನಮುನಿ
ಪ್ರಸಾದಾಸಾದಿತ ನಿರ್ಮಳಧರ್ಮವಿನುತ ವಿನಯಜನ
ವನಜವನವಿಳಸಿತ ಕವಿಕುಳತಿಲಕ ಪ್ರಣೀತಮಪ್ಪ
ಪಾರ್ಶ್ವನಾಥ ಪುರಾಣದೊಳ್ ಪಾರ್ಶ್ವನಾಥ
[ಸಮವಸರ]ಣ ವರ್ಣನಂ

**ಷೋಡಶಾಶ್ವಾಸಂ ಸಮಾಪ್ತಂ**

॥ ಶ್ರೀಃ ॥

**॥ ಪಾರ್ಶ್ವನಾಥ ಪುರಾಣಂ ಸಮಾಪ್ತಂ ॥**

# ಅನುಬಂಧ ೧

## ಚಾವುಂಡರಾಯಕೃತ ಪಾರ್ಶ್ವನಾಥ ಪುರಾಣಂ

[ಚಾವುಂಡರಾಯಕೃತ 'ತ್ರಿಷಷ್ಟಿ ಲಕ್ಷಣ ಮಹಾಪುರಾಣ'ದಲ್ಲಿರುವ ಪಾರ್ಶ್ವಜಿನನ ಕಥೆಯನ್ನು ಈ ಗ್ರಂಥದ ಕಥೆಯೊಡನೆ ಹೋಲಿಸಿ ನೋಡುವವರಿಗೆ ಅನುಕೂಲವಾಗುವಂತೆ ಇಲ್ಲಿ ಕೊಡಲಾಗಿದೆ:]

ಕಂ ॥ ಶ್ರೀಮದುರಗೇಂದ್ರ ರಚಿತ [ಸ ।
ಭಾ] ಮಂಟಪದೊಡನೆ ಸಮವಸೃತಿ ಮಂಡಲ ಲ ॥
ಕ್ಷ್ಮೀ ಮಂಟಪಮೆಸೆದಿರೆ ಸಕ ।
ಲಾಮರನತ ನಾಥನೊಸೆಗೆ ಪಾರ್ಶ್ವಜಿನೇಂದ್ರಂ ॥

ಜಂಬೂದ್ವೀಪದ ಭರತದ ಸುರಮ್ಯವಿಷಯದ ಪೌದನಪುರಮನಾಳ್ವನರವಿಂದನೆಂಬರಸಂ ತತ್ಪುರದ ವಿಶ್ವಭೂತಿಯೆಂಬ ಬ್ರಾಹ್ಮಣಂಗಮನುಂದರಿಗಂ ಕಮಠನುಂ ಮರುಭೂತಿಯುಮೆಂಬರಿರ್ವರುಮರಸಂಗೆ ಮಂತ್ರಿಗಳಾದರಲ್ಲಿ ಕಮಠಂಗೆ ವರುಣಿಯೆಂಬಳ್ ಮರುಭೂತಿಗೆ ವಸುಂಧರೆಯೆಂಬಳ್ ಭಾ(ರ್ಯೆ)ಯರಾಗೆ ವಸುಂಧರೆಯ ಕಾರಣದಿಂ ಕಮಠಂ ಮರುಭೂತಿಯುಂ ಕೊಲೆ ಸತ್ತು ಮರುಭೂತಿ ಮಲಯಪರ್ವತದ ಕುಬ್ಜಕಮೆಂಬ ಸಲ್ಲಕೀವನದೊಳ್ ವಜ್ರಘೋಷಮೆಂಬ ಕರಿಪತಿಯಾಗೆ ವರುಣಿಯುಮಾಬನದೊಳ್ ಪಿಡಿಯಾಗಿ ಪುಟ್ಟಿದಳ್—

ಇತ್ತಲರವಿಂದಮಹಾರಾಜಂ ರಾಜ್ಯಪರಿತ್ಯಾಗಂಗೆಯ್ದು ಸಂಯತನಾಗಿ ಸಾರ್ಥರೊಡನೆ ಸಮ್ಮೇದಗಿರಿಯ ತೀರ್ಥಮಂ ವಂದಿಸಲೆಂದು ಬಂದು ಪ್ರತಿಮಾಯೋಗದೊಳಿರೆ ವಜ್ರಘೋಷಗಂಧಹಸ್ತಿ ಸಲ್ಲಕೀವನದೊಳ್ ವಿಹಾರಿಸುತ್ತೆ ಅವರಂ ಕಂಡು ಕೊಲಲ್ ಪರಿದು ಅವರ ವಕ್ಷಸ್ಥಲದ ಶ್ರೀವತ್ಸಲಾಂಛನಮಂ ಕಾಣಲೊಡಂ ಪೂರ್ವಭವಮಂ ನೆನೆದು ಮುನ್ನಿನ ಸ್ನೇಹದಿಂ ಕೊಲೆಯಂ ಮಱೆದು ಯೋಗಾವಸಾನದೊಳವರಲ್ಲಿ ಧರ್ಮಮಂ ಕೇಳ್ದು ಸಮ್ಯಗ್ದರ್ಶನಮುಂ ಶ್ರಾವಕವ್ರತಮುಂ ಪ್ರೋಷಧುಪವಾಸಮುಮಂ ಕೆಯ್ಕೊಂಡು ಪೆಱವಾಸ ಪುಟ್ಟಿಸಿದ ಕಡಿಕೊಂಬುಗಳಂ ತಿಂದುಮುವರಿಂ ಸಂಘಟ್ಟಮಾದ ನೀರನುಂಡುಮಿಂತುಂ ಪಾಪಭೀರುವಾಗಿರ್ದೊರ್ಮೆ ವೇಗಾವತಿಯೆಂಬ ತೊಱೆಯ ತಡಿಯೊಳ್ ಬಿಟ್ಟು ಪೊಱಮಡಲಾಱದೆ ಕಮಠಂ ಕುಕ್ಕುಟಸರ್ಪನಾಗಿ ಕೊಲೆ ಸತ್ತು ಸಹಸ್ರಾರಕಲ್ಪದೊಳ್ ಪುಟ್ಟಿ ಷೋಡಶಸಾಗರೋಪಮಾಂತದೊಳ್ ಅಲ್ಲಿಂ ಬಂದು ಜಂಬೂದ್ವೀಪದ ಪೂರ್ವವಿದೇಹದ ಪುಷ್ಕಳಾವತೀವಿಷಯದ ವಿಜಯಾರ್ಧದ ತ್ರಿಲೋಕೋತ್ತಮನಗರಮನಾಳ್ವ ವಿದ್ಯುದ್ಗತಿಗಂ ವಿದ್ಯುನ್ಮಾಲೆಗಂ ರಶ್ಮಿವೇಗನೆಂಬ ಮಗನಾಗಿ ಯೌವನಪ್ರಾರಂಭದೊಳ್ ಸಮಾಧಿಗುಪ್ತಮುನಿಯ ಪಕ್ಕದೆ ದೀಕ್ಷೆಗೊಂಡು ಸರ್ವತೋಭದ್ರಂ ಮೊದಲಾಗೆ ನೋಂಪಿಯುಂ ನೋಂತೊಂದು ದೆವಸಂ ಹಿಮಗಿರಿಗುಹೆಯೊಳ್ ಪ್ರತಿಮಾಯೋಗದೊಳಿರೆ ಕುಕ್ಕುಟಸರ್ಪಂ ಸತ್ತು ಪಂಚಮನರಕದೊಳ್ ಪುಟ್ಟಿ ಬಂದಜಗರನಾಗಿ ನುಂಗುವುದುಮಚ್ಯುತಕಲ್ಪದ ಪುಷ್ಪಕವಿಮಾನದೊಳ್ ಪುಟ್ಟಿ ದ್ವಾವಿಂಶತಿಸಾಗರೋಪ

ಮಾಂತದೊಳ್ ಬಂದು ಜಂಬೂದ್ವೀಪದಪರವಿದೇಹದ ಪದ್ಮವಿಷಯದ ವಿಶ್ವಪುರಮನಾಳ್ವ ವಜ್ರವೀರ್ಯಂಗಂ ವಿಜಯೆಗಂ ವಜ್ರನಾಭಿಯೆಂಬ ಮಗನಾಗಿ ಚಕ್ರವರ್ತಿಪದದೊಳ್ ನಿಂದು ಕ್ಷೇಮಂಕರ ಭಟ್ಟಾರಕರಲ್ಲಿ ಧರ್ಮಮಂ ಕೇಳ್ದು ನಿರ್ವೇಗದಿಂ ಮಗಂಗೆ ರಾಜ್ಯಮಂ ಕೊಟ್ಟು ಪಲರುಂಬೆರಸು ಸಂಯಮಧಾರಿಯಾಗಿ ತ್ರಿಕಾಲಯೋಗದೊಳಾತಪಯೋಗ ದೊಳ್ ನಿಲ್ವುದುಂ ಮುಂ ಪೇಟ್ದಜಗರನಾಱನೆಯ ನರಕದೊಳ್ ಇಪ್ಪತ್ತೆರಡುಸಾಗರೋ ಪಮಕಾಲಂ ದುಃಖಮನುಂಡು ಬಂದು ಕುರಂಗನೆಂಬ ಬೇಡನಾಗಿ ಬಂದಾತಪೋಧ ನರ್ಗೆ ವಿವಿಧೋಪ[ಚಾರ] ಮಂ ಮಾಡಿ ಸಮಾಜಸಮಾಧಿಯಿಂ ಮಧ್ಯಮಗ್ರೈವೇಯಕದ ಮಧ್ಯಮ ಸುಭದ್ರದೊಳಹಮಿಂದ್ರನಾಗಿ ಸಪ್ತವಿಂಶತಿಸಾಗರೋಪಮಾಂತದೊಳ್ ಅಲ್ಲಿಂ ಬಂದು ಜಂಬೂದ್ವೀಪದ ಕೌಶಲಪುರದ ವಿನೀತಾಪುರಮನಾಳ್ವ ಇಕ್ಷ್ವಾಕುವಂಶದ ಕಾಶ್ಯಪಗೋತ್ರದ ವಜ್ರಬಾಹು ಮಹೀಪತಿಗಂ ಪ್ರಭಂಕರಿಮಹಾದೇವಿಗಮಾನಂದನೆಂಬ ಮಗನಾಗಿ ಮಹಾಮಂಡಳಿಕ ಪದವಿಯೊಳ್ ನಿಂದು ಮತ್ತೊಂದು ದೆವಸಂ ಸ್ವಾಮಿಹಿತ ನೆಂಬ ಮಹಾಮಂತ್ರಿ ಪೇಳೆ ಫಾಲ್ಗುನದ ನಂದೀಶ್ವರದ ಯಾತ್ರಾದಿನದೊಳ್ ಜಿನಪೂಜೆಯುಂ ಮಾಡಿ ತತ್ಪೂಜೆಯಂ ನೋಡಲೆಂದು ಬಂದ ವಿಪುಲಮತಿಗಳೆಂಬ ಗಣಧರರಂ ವಿನಯದಿಂ ವಂದಿಸಿ ಧರ್ಮಮಂ ಕೇಳ್ದು ತದನಂತರಂ ಅರಸನೆಂದಂ—ಪ್ರತಿಕೃತಿಗಳಚೇತನಂಗಳ್ ನಿಗ್ರಹಾನುಗ್ರಹಪರಾಙ್ಮುಖಂಗಳ್ ಅವರ್ಕೆ ಪೂಜೆಯುಂ ಮಾಡೆ ಭಾಕ್ತಿಕರಪ್ಪರೆಂತು ಪೂಜಾಫಲಮನೆಯ್ದಿದರಪ್ಪರದಂ ಬೆಸಸಿಮೆನೆ ಮುನಿಗಳೆಂದರ್—ಈ ಪೊಱಲೊಳ್ ತಪಮುಮುಭಯದಾನಮುಂ ಶಾಸ್ತ್ರದಾನಮುಂ [ಮುಂ]ನ ಮಾಡಿ ದೇವನಿಂದ್ರಕೀರ್ತಿತ ಮಾಗೆ ಭರತರಾಜಂ ಜಿನಭವನಪೂಜಾದಿ ಶ್ರಾವಕವ್ರತಮಂ ತೋಱಿದಂ. ಹಸ್ತಿನಾಪುರ ದೊಳ್ ಶ್ರೇಯಾಂಸನಾಹಾರದಾನಮಂ ಮಾಡಿ ನೆಗೞ್ದೊನದಱಿಂ ಭರತನಂತೆ ನೀನು ಮೀಜಿನಪೂಜಾಫಲಮನನುಭವಿಸುವೆ. ಕಲ್ಪವೃಕ್ಷಮುಂ ಚಿಂತಾಮಣಿಯುಮೆಂತಚೇತ ನಂಗಳಾಗಿಯುಂ ಮನೋಭಿಲಷಿತಫಲಪ್ರದಂಗಳಂತೆ ಜಿನಭವನಪ್ರತಿಮೆಗಳ್ ಅಚೇತ ನಂಗಳಾಗಿಯುಂ ಸಾಕ್ಷಾತ್ಪುಣ್ಯಬಂಧಂಗಳುಂ ಶುಭಪರಿಣಾಮೋತ್ಪತ್ತಿಕಾರಣಂಗಳು ಮಕ್ಕುಂ. ರಾಗದ್ವೇಷಮೋಹಮಿಲ್ಲದುದಱಿಂ ಆಭರಣಾಯುಧಾದಿ ವಿಮುಖನುಂ ನಿರತಿ ಶಯಾನಿಂದ್ರಿಯಬೋಧನಾಗಿ ಕೃತಾರ್ಥನಪ್ಪುದಱಿಂ ಜಟಾದಿ ವೇಷರಹಿತನುಮಪ್ಪ ಜಿನ ಪತಿಯ ಪ್ರತಿಬಿಂಬದರ್ಶನದಿಂದಲ್ಲದೆ ಶುಭಪರಿಣಾಮಪ್ರಕರ್ಷಮಾಗದು. ಪುಣ್ಯಪಾಪ ಬಂಧಕ್ಕೆ ಬಾಹ್ಯಾಭ್ಯಂತರ ಸನ್ನಿಧಾನಂ ಕಾರಣಮೆಂದಱಿಪಿ ಜಿನಪ್ರತಿಬಿಂಬಕಥಾಪ್ರಸಂಗದಿಂ ತ್ರಿಭುವನ ಚೈತ್ಯಾಲಯವರ್ಣನಾಭಿಪ್ರಾಯದೊಳ್ ಮುನ್ನಂ ಜ್ಯೋತಿರ್ಲೋಕದೊಳ್ ಆದಿತ್ಯವಿಮಾನಗತ ಜಿನಭವನವಿಭೂತಿಯನಸಾಧಾರಣಂ ಮಾಡಿ ಮುನಿಪತಿ ಪೇೞೆ ಪಿರಿದು ರುಚಿಯಾಗಿ ಜಿನಭವನಂಗಳಂ ಮಾಡಿ ಸೂರ್ಯೋದಯಾಸ್ತಮಾನ ಸಮಯ ದೊಳ್ ಆದಿತ್ಯಬಿಂಬಮರ್ಹದ್ಭಟ್ಟಾರಕಂಗೆ ಶಾಸ್ತ್ರೋಕ್ತ ಕ್ರಮದಿಂ ನಿತ್ಯಪೂಜೆಯುಂ, ಅಷ್ಟಾಹ್ನಿಕಮುಂ, ಚತುರ್ಮುಖಮುಂ, ಕಲ್ಪವೃಕ್ಷಮುಂ, ರಥಾವರ್ತಮುಂ, ಸರ್ವತೋ ಭದ್ರಮುಮೆಂಬ ಪೂಜೆಗಳಂ ಮಾಡುತ್ತುಂ, ಜಿನಬಿಂಬಂಗಳಂ ತ್ರಿಕಾಲಮರ್ಚಿಸುತ್ತುಂ, ಆನಂದನರಪತಿ ರವಿಬಿಂಬದ ಜಿನಭವನಕ್ಕೆ ಪೊಱಮಡುವುದನೆ ಕಂಡದನೆ ಪ್ರಮಾಣಂ ಮಾಡಿ ತತ್ವಮಱಿದವರುಮಱಿಯದವರುಮಂದಿಂ ಬೞಿಯುಮಾದಿತ್ಯ ಬಿಂಬಮನೆ ಪೂಜಿ ಸಲ್ ತಗುಳ್ದರ್—

ಮತ್ತೊಂದುದೆವಸಮಾನಂದಂ ತನ್ನ ತಲೆಯ ನರೆಯಂ ಕಂಡು ನಿರ್ವೇಗಮಾಗಿ ಮಗಂಗೆ ರಾಜ್ಯಮನಿತ್ತು ಸಮುದ್ರಗುಪ್ತ ಯತಿಯರ ಪಕ್ಕದೆ ಪಲರುಂಬೆರಸು ಸಂಯಮಮಂ ಕೆಯ್ಕೊಂಡು ಸಮ್ಯಗ್ದರ್ಶನಜ್ಞಾನಚಾರಿತ್ರಮೆಂಬವಱೊಳ್ ನೆಗೞ್ದು ಏಕಾದಶಾಂಗಧರಂ ಷೋಡಶಭಾವನೆಗಳಿಂ ತೀರ್ಥಕರಪುಣ್ಯಮುಂ ಕಟ್ಟಿ ಕ್ಷೀರವನದೊಳ್ ಪ್ರಾಯೋಪಗಮನವಿಧಿಯಿಂ ಪ್ರತಿಮಾಯೋಗದೊಳಿರೆ ಮುಂ ಪೇೞ್ದ ವ್ಯಾಧನೇೞನೆಯ ನರಕದಿಂ ಬಂದು ಸಿಂಹಮಾಗಿ ಪಾಯೆ ಸೈರಿಸಿ ಚತುರ್ವಿಧಾರಾಧನಾವಿಧಿಯಿಂದಾನತ ಕಲ್ಪದೊಳ್ ಪ್ರಾಣತವಿಮಾನದೊಳ್ ದೇವೇಂದ್ರನಾಗಿ ವಿಂಶತಿಸಾಗರೋಪಮಾಯುಷ್ಯನುಂ ಮೂಱುವರೆ ಮೊೞಂ ನಿಡಿಯನುಂ ಶುಕ್ಲಲೇಶ್ಯಾಪರಿಣಾಮನುಂ ವಿಂಶತಿಸಹಸ್ರ ವರ್ಷ ಮಾನಸಾಮೃತಾಹಾರನುಂ ಮನಃಪ್ರವೀಚಾರ ಸುಖನುಂ ಪಂಚಮಪೃಥ್ವೀಗತಾವಧಿಜ್ಞಾನನುಂ ಸಾವಧಿಕ್ಷೇತ್ರಪ್ರಮಾಣ ಬಲಪ್ರಕಾಶವಿಕ್ರಿಯಾಸಮರ್ಥನುಮೆನಿಸಿ ಸಾಮಾನಿಕಾದಿ ನವವಿಧಾಮರಾನೇಕದೇವೀಸಹಸ್ರಪರಿವೃತಂ ದಿವ್ಯಸುಖಮನನುಭವಿಸುತ್ತಿರ್ದನಂ -

ಇತ್ತ ಜಂಬೂದ್ವೀಪದ ಭರತದ ಕಾಶೀವಿಷಯದ ವಾರಣಾಶಿಪುರಮನಾಳ್ವುಗ್ರವಂಶದ ವಿಶ್ವಸೇನಮಹಾರಾಜನರಸಿ ಬ್ರಾಹ್ಮಿಲಾದೇವಿ ವೈಶಾಖ ಬಹುಳ ಬಿದಿಗೆಯ ಬೆಳಗಪ್ಪ ಜಾವದೊಳ್ ವಿಶಾಖಾನಕ್ಷತ್ರದೊಳ್ ಷೋಡಶಶುಭಸ್ವಪ್ನಮುಮಂ ನಿಜಮುಖಪ್ರವೇಶಿ ಗಜರೂಪುಮಂ ಕಂಡವಧಿಜ್ಞಾನಿಯಪ್ಪ ನಿಜೇಶನಿಂ ತತ್ಫಲಮನಱಿದು ಸುಖಮಿರ್ದನಮಾನತೇಂದ್ರಂ ಸ್ವರ್ಗಾವತರಣಪೂಜಾಪೂರ್ವಕಂ ಆ ದೇವಿಯ ಗರ್ಭಕ್ಕವತರಿಸಿ ನೇಮಿಭಟ್ಟಾರಕ ತೀರ್ಥಸಂತಾನಮೆಣ್ಬತ್ತುಮೂಱುಸಾಸಿರದೇೞ್ನೂರಯ್ವತ್ತುವರ್ಷಂ ಪ್ರವರ್ತಿಸುವಂದಾ ಕಾಲದೊಳ್ ಪುಷ್ಯಬಹುಳೈಕಾದಶಿಯೊಳ್ ತ್ರಿಜ್ಞಾನಧರಂ ಪುಟ್ಟೆ ದಿವಿಜನಾಥಂ ಜನ್ಮಾಭಿಷೇಕಕಲ್ಯಾಣಾನಂತರಂ ಪಾರ್ಶ್ವನೆಂಬುದು ತ್ರಿಲೋಕಪೂಜಿತಮಪ್ಪ ಧರ್ಮಂ ಅದಕ್ಕಾಶ್ರಯಮಪ್ಪುದಱಿಂ ಪಾರ್ಶ್ವನೆಂದು ಪೆಸರನಿಟ್ಟು ಪೋಗೆ ಶತವರ್ಷ ಪರಮಾಯುಷ್ಯನುಂ, ಅಪಕ್ವಶಾಲಿ ವರ್ಣನುಂ ನವರತ್ನ ಪ್ರಮಾಣೋತ್ಸೇಧನುಂ ಎನಿಸಿ ಬಳೆದು ಪದಿನಾಱುವರ್ಷಂ ಪೋಗೆ ಮತ್ತೊಂದು ದೆವಸಂ ಚತುರಂಗ ಬಲಸಹಿತಮೋಲಗಂ ಪೊಱಮಟ್ಟು ಬರುತುಮಾತ್ರವಮೆಂಬ ವನದೊಳ್ ತಮ್ಮಬ್ಬೆಗಳಣ್ಣಂ ಮಹೀಪಾಳನಗರಮನಾಳ್ವ ಮಹೀಪಾಳನೆಂಬರಸಂ ಮಹಾದೇವಿಯ ವಿಯೋಗದೊಳ್ ತಾಪಸದೀಕ್ಷೆಯಂ ಕೊಂಡು ಪಂಚಾಗ್ನಿತಪದೊಳ್ ನಿಂದನಂ ಕಂಡು ಕೆಲಕ್ಕೆ ವಂದು ಸಿರದೆ ಕುಳ್ಳಿರ್ಪುದುಮಾತಂಗೆ ಮಾವನೆಂ ಕುಲೀನನೆಂ ತಪೋವೃದ್ಧನೆಂ ಎನಗೆ ವಿನಯಂಗೆಯ್ಯದುಸಿರದಿರ್ದನೆಂದು ಕುಮಾರಂಗೆ ಮುಳಿದು ಕೋಪಕಲುಷಿತಹೃದಯನಾಗಿ ಕಿಚ್ಚು ನಂದಿದೊಡೆ ಮತ್ತೆ ಇಂಧನಮನಿಕ್ಕಲೆಂದು ಕೊಡಲಿಗೊಂಡು ಪುಳ್ಳಿಯಂ ಪೋೞ್ಮಾೞ್ಪಾಗಳ್ ಕುಮಾರನದಂ ಕಂಡೀಯಲೆತ್ತ ಪುಳ್ಳಿಯೊಳ್ ಪ್ರಾಣಿಯಿರ್ಪುದಱಿಂ ಪಾಪಕಾರಣಮೆಂದು ಬೋಧಿಸೆ ತೋಱಿಮೆನೆ ಕಡಿದು ಪುಳ್ಳಿಯೊಳಗಿರ್ದ ನಾಗನುಂ ನಾಗಿಣಿಯುಮೆರಡುಂ ನಾಲ್ಕು ಖಂಡಮಾಗೆ ಸುಭೌಮನೆಂಬ ರಾಜಕುಮಾರನೆಲೆ ಘೋರ ನೀಂ ತಪಸ್ವಿಯೆಂದು ಸಗರ್ವಮಂ ನುಡಿದೆಯ್ಯೆ ಪಾಪಾಶ್ರವ ನಿಷ್ಕಾರಣಂ ಸಂಭವಿಸುಗುಮೆಂದಱಿಯೆಯಲ್ಲೆ ನಿನ್ನಜ್ಞಾನದೊಳಪ್ಪ ತಪದ ಫಲಮೆನೆ ಗೊರವನೆಂದನೆನ್ನನವಜ್ಞೆಗೆಯ್ದೆನ್ನ ಮಾಹಾತ್ಮ್ಯಮನಱಿಯದೆ ನುಡಿದೆಯಾನಪ್ಪೊಡೆ ಪಂಚಾಗ್ನಿ ಮಧ್ಯದೊಳೂರ್ಧ್ವಬಾಹುವುಮೇಕಪಾದಸ್ಥಿತನುಮಾಗಿ ಗಾಳಿಯುಮಂ ಪತಿತ ಪರ್ಣಂಗಳು

ಮನಾಹಾರಂಗೊಂಡು ದುರ್ಧರಮಪ್ಪ ಕಾಯಕ್ಲೇಶದೊಳ್ ನೆಗೞ್ವೆನದಱಿಂದಗ್ಗಳ ಮಪ್ಪ ತಪಮಾವುದೆಂಬುದುಂ ಸುಭೌಮಂ ಮುಗುಳ್ನಗೆ ನಕ್ಕು ನಿಮ್ಮ ಹಿರಿಯರನವಜ್ಞೆ ಗೆಯ್ದೆನಲ್ಲೆಂ. ನೀಮುಮಾಪ್ತಾಗಮ ಪದಾರ್ಥತತ್ವಂಗಳನಱಿಯದೆ ಮಿಥ್ಯಾದರ್ಶನಾ ಸಂಯಮ ಕಷಾಯ ಪ್ರಮಾದಾ ಶುಭಯೋಗದಿಂ ಪೃಥಿವ್ಯಪ್ತೇಜೋವಾಯುವಪ್ಪ ತಿತ್ರಸಕಾಯಂಗಳೊಳ್ ಸಂರಂಭಸಮಾರಂಭಾರಂಭದೊಳಂ ಕೃತಕಾರಿತಾನುಮೋದ ದೊಳಂ ಸಾವದ್ಯಕರ್ಮದೊಳ್ ನಡೆವ ಪಾಷಂಡಿಗಳ್ ದುರಾತ್ಮಪರಿಕಲ್ಪಿತ ಮತಾವ ಲಂಬಿಗಳುಕ್ತಿಯೊಳ್ ಮುಕ್ತಿಯಂ ಬಯಸುವಂದಂ ನೀರೊಳ್ ಬೆಣ್ಣೆಯನಱಸುವಂದಂ ಪಾಷಾಣದೊಳ್ ಪೊನ್ನನರಸುವಂತಕ್ಕುಮದಱಿನಜ್ಞಾನಪೂರ್ವಕಂ ನೆಗೞ್ವ ತನ್ನ ಕಾಯಕ್ಲೇಶಂ ದುಃಖಕಾರಣಮಕ್ಕುಮೆಂಬುದುಮಾಗೊರವಂ ಸ್ವಪಕ್ಷಾನುರಾಗ ಮೂಢ ತ್ವದಿಂ ಕಮಠಜನ್ಮವೈರಸಂಸಾರ ಪರಿಭ್ರಮಣಂ ಗೆಯ್ದು ಬಂದು ಗೊರವನಾಗಿರ್ದುದಱಿಂ ಸುಭೌಮನನೆಂದಂ ನೀಂ ನಗೆಗೆಯ್ವೆ ಯೆನ್ನನೀ ಪಾರ್ಶ್ವಕುಮಾರಂ ಪರಿಭವಿಸಿದನೆಂದು ಕುಮಾರನೊಳಪ್ಪ ಹೃಚ್ಛಲ್ಯದಿಂ ಸತ್ತು ಜ್ಯೋತಿರ್ಲೋಕದೊಳ್ ಶಂಭವರನೆಂಬ ದೇವ ನಾದೊಂ. ನಾಗನುಂ ನಾಗಿ(ಣಿ)ಯುಂ ಉಪಶಮನಭಾವನೆಯಿಂ ನಾಗೇಂದ್ರನುಂ ನಾಗಿ ಣಿಯುಮಾಗಿ ಪುಟ್ಟಿ ಪಾರ್ಶ್ವನಾಥಂಗೆ ಮೂವತ್ತು ವರ್ಷಂ ಕುಮಾರ ಕಾಲಂ ಸಲೆ ಮತ್ತೊಂದು ದೆವಸಂ ಸಾಕೇತಮನಾಳ್ವ ವಿಜಯಸೇನ ಮಹಾರಾಜಂ ಬಗಳಿ ದೇಶದೊಳ್ ಪುಟ್ಟಿದ ಕುದುರೆಗಳ್ವೆರಸು ಪಾಗುಡಮಂ ತನ್ನ ಮಂತ್ರಿಯ ಕೆಯ್ಯೊಳಟ್ಟುವುದುಂ ಪಾರ್ಶ್ವ ಕುಮಾರಂ ಬಂದ ಮಂತ್ರಿಯಂ ಮನ್ನಿಸಿ ಸಾಕೇತವಿಭೂತಿಯಂ ಬೆಸಕೊಳೆ ಸವಿಸ್ತರಂ ತನ್ನ ಕೇಳ್ದಂದದಿಂ ವರ್ಣನಂಗೆಯ್ದುಲಿಪುದಾದಿದೇವನಾದ್ಯಪ್ರಜಾಪತಿ ಮುನ್ನೆ ಷೋಡಶ ಭಾವನೆಗಳಿಂ ತೀರ್ಥಕರ ಪುಣ್ಯಮಂ ಕಟ್ಟಿ ಬಂದು ಮುಕ್ತಿಗೆ ಸಂದನೆಂಬುದುಂ ಅದಂ ಕೇಳ್ದು ಪಾರ್ಶ್ವಕುಮಾರನಾನಂದ ನೃಪತಿಯಾದ ಭವದೊಳ್ ತಾನುಮಾಪೊೞಲೊಳ್ ಬಾಹ್ಯಾಭ್ಯಂತರ ಪರಿಗ್ರಹ ಪರಿತ್ಯಾಗಂಗೆಯ್ದು ಭಾವಿಕಾದ್ಯಷ್ಟಗುಣಮಾದುದಱಿಂ ತನ್ನಿ ಮಿತ್ತ ಪ್ರವಿಜೃಂಭಿತಾಭಿನಿಬೋಧಿಕ ಜ್ಞಾನಪ್ರಕರ್ಷಕ್ಷಯೋಪಶಮದಿಂ ತನ್ನ ಪೂರ್ವಭವ ಸಂತತಿಯಂ ನೆನೆದು ಲೋಕಾಂತಿಕದೇವರಿಂ ಬೋಧಿಸೆ ಪರಿನಿಷ್ಕ್ರಮಣಕಲ್ಯಾಣಾಭಿ ಷೇಕಪೂರ್ವಕಂ ಸ್ಫುಟಹಿತೋಪದೇಶಯುಕ್ತಿಮೃದ್ವಚನಂಗಳಿಂ ಬಂಧುಜನವಿಸರ್ಜನಂ ಗೆಯ್ದು ವಿಮಳೆಯೆಂಬ ಶಿಬಿಕೆಯೊಳಷ್ಟೋಪವಾಸದಿನಶ್ವವನಕ್ಕೆ ಪೋಗಿ ಮಣಿಶಿಲಾ ತಳದೊಳ್ ಉತ್ತರಾಭಿಮುಖಮಾಗಿರ್ದು ಪುಷ್ಯಬಹುಳೈಕಾದಶಿಯ ಪೂರ್ವಾಹ್ಣದೊಳ್ ವಿಶಾಖಾನಕ್ಷತ್ರದೊಳ್ ಮೂನೂರ್ವರರಸುಗಳ್ವೆರಸು ಸಿದ್ಧನಮಸ್ಕಾರ ಪೂರ್ವಕಂ ದೀಕ್ಷೆಯಂ ಕೊಂಡು ಚತುರ್ಜ್ಞಾನಧರಂ ಪಾರಣಾದಿನದೊಳ್ ಗುಲ್ಮಖೇಟಪುರದ ಶ್ಯಾಮವರ್ಣನಪ್ಪ ಧನ್ಯನೆಂಬರಸನ ಮನೆಯೊಳ್ ನಿಲ್ತು ಪಂಚಾಶ್ಚರ್ಯಂ ನೆಗೞೆ ನಾಲ್ಕು ತಿಂಗಳ್ ಛದ್ಮಸ್ಥಕಾಲಂ ಸಲೆ ದೀಕ್ಷೆಗೊಂಡ ಬನದೊಳ್ ದೇವದಾರು ದ್ರುಮ ದಡಿಯೊಳ್ ಅಷ್ಟೋಪವಾಸದಿಂದತ್ಯಂತ ಶುದ್ಧ ಪರಿಣಾಮದಿಂದೇೞುದೆವಸಂ ಪ್ರತಿಮಾ ಯೋಗದೊಳಿರ್ಪುದುಂ ಜ್ಯೋತಿರ್ಲೋಕದದೇವಂ ಶಂಬರನಂಬರದೊಳ್ ಪೋಗುತ್ತುಂ ತನ್ನ ವಿಮಾನಸ್ಖಲನಮಾಗೆ ವಿಭಂಗಜ್ಞಾನದಿಂ ಪೂರ್ವಭವವೈರಮಂ ನೆನೆದು ಮುಳಿದು ಮಹಾಘೋರಮಪ್ಪ ಕಲ್ಲಿಂ ಮೞೆಯಂ ಮಾಡೆ ಧರಣೇಂದ್ರನವಧಿಜ್ಞಾನದಿನಱಿದು ಬಂದು ನಿಜ ಫಣಾಮಂಡಪಮಂ ಭಟ್ಟಾರಕರ ಮೇಲೆ ಮಱಿಮಾಡೆ ನಾಗಕನ್ನೆಯುಂ ತತ್ಫ

ಣಾಮಂಡಪದ ಮೇಗೆ ವಜ್ರಮಯಮಪ್ಪಾತಪತ್ರಮಂ ಪಿಡಿಯೆ ಶಂಬರಂ ಚಾಳಿಸ ಲಾಱದಿರೆ ಮಹೋಪಸರ್ಗಮಂ ಕ್ಷಮೆಯೆಂಬಾಯುಧದಿಂ ಗೆಲ್ದು ಚೈತ್ರ ಬಹುಳ ಚತುರ್ದಶಿಯ ಪೂರ್ವಾಹ್ಣದೊಳ್ ವಿಶಾಖಾನಕ್ಷತ್ರದೊಳ್ ಕೇವಲಜ್ಞಾನೋತ್ಪತ್ತಿ ಯಾಗೆ ದೇವೇಂದ್ರ ಕೃತಕಲ್ಯಾಣನಾಗಿರ್ಪುದುಂ ಶಂಬರನುಪಶಮಭಾವನೆಯಿಂ ಸಮ್ಯಕ್ತ್ವ ಮಂ ಕೆಯ್ಕೊಳ್ವುದುಂ ಅದಂ ಕಂಡು ತದ್ವನವಾಸಿಗಳಪ್ಪೆಯೇೞ್ನೂರ್ವರ್ತಾಪಸರುಂ ಮಿಥ್ಯಾದರ್ಶನಾಸಂಯಮಕಷಾಯಶುಭಯೋಗಮಂ ಪತ್ತುವಿಟ್ಟು ಸಮ್ಯಗ್ದರ್ಶನ ತತ್ವಮಂ ಕೆಯ್ಕೊಂಡಿದುವೆ ಮೋಕ್ಷಮಾರ್ಗಮೆಂದು ಭಟ್ಟಾರಕರಂ ಪ್ರದಕ್ಷಿಣಮಂ ಗೆಯ್ದು ಸಂಯಮಮುಮಂ ಕೆಯ್ಕೊಂಡರ್—

ಪಾರ್ಶ್ವಭಟ್ಟಾರಕರ್ ಸಹಸ್ರಾಷ್ಟನಾಮಧರರುಂ, ಸ್ವಯಂಭು ಮೊದಲಾಗೆ ಪದಿಂಬರ್ ಗಣಧರರುಂ, ಮೂನೂಱಯ್ವದಿಂಬರ್ ಪೂರ್ವಧರರುಂ, ನಾಸಿರದೊಂಬ ಯ್ನೂರ್ವರ್ ಶಿಕ್ಷಕರುಂ, ನಾಸಿರದ ನಾನೂರ್ವರವಧಿಜ್ಞಾನಿಗಳುಂ, ಸಾಸಿರ್ವರ್ ಕೇವಲ ಜ್ಞಾನಿಗಳುಂ, ಅನಿಬರೆ ವಿಕ್ರಿಯರ್ದ್ಧಿ ಪ್ರಾಪ್ತರುಂ ಏೞ್ನೂಱಯ್ವದಿಂಬರ್ ಮನಃ ಪರ್ಯಾಯಜ್ಞಾನಿಗಳುಂ, ಅಱುನೂರ್ವರ್ ವಾದಿಗಳುಂ, ಮೂವತ್ತಾಱುಸಾಸಿರ್ವರಜ್ಜಿ ಯರುಂ, ಒಂದುಲಕ್ಕೆ ಶ್ರಾವಕರುಂ, ಮೂಱುಲಕ್ಕೆಶ್ರಾವಕಿಯರುಂ, ಅಸಂಖ್ಯಾತ ದೇವರುಂ ದೇವಿಯರುಂ, ಅಸಂಖ್ಯಾತತಿರ್ಯಗ್ಜಾತಿಗಳುಂ ಬೆರಸು ಧರ್ಮೋಪದೇಶಂ ಗೆಯ್ಯುತ್ತುಮಱುವತ್ತೊಂಬತ್ತು ವರ್ಷಮೊಂಬತ್ತು ತಿಂಗಳುಂ ವಿಹಾರಿಸಿ ಸಮ್ಮೇದ ಗಿರಿಯೊಳೊಂದು ತಿಂಗಳ್ ವಿಹರಣಮುೞಿದು ಮೂವತ್ತಱುವರ್ ಮುನಿಗಳ್ವೆರಸು ಪ್ರತಿಮಾಯೋಗದೊಳ್ ಶ್ರಾವಣಶುದ್ಧಸಪ್ತಮಿಯ ಪೂರ್ವರಾತ್ರದೊಳ್ ವಿಶಾಖಾ ನಕ್ಷತ್ರದೊಳ್ ಪಾರ್ಶ್ವಭಟ್ಟಾರಕರ್ ಮುಕ್ತಿಗೆ ಸಂದರ್—

ಸೌಧರ್ಮೇಂದ್ರನುಂ ಪರಿನಿರ್ವಾಣಮಹಾಕಲ್ಯಾಣಮಂ ಮಾಡಿ ಪೋದಂ.

ಇದು

ಸಕಲಶಾಸ್ತ್ರಸಂಯಮಸಂಪನ್ನ ಶ್ರೀಮದಜಿತಸೇನಭಟ್ಟಾರಕ ಚರಣಕಮಲಚಂಚರೀಕಂ
ಧರ್ಮವಿಜಯಿ ಶ್ರೀಮಚ್ಚಾಮುಂಡರಾಯವಿರಚಿತ
ತ್ರಿಷಷ್ಟಿಲಕ್ಷಣ ಮಹಾಪುರಾಣದೊಳ್
ಪಾರ್ಶ್ವನಾಥ ಪುರಾಣಂ.

# ಅನುಬಂಧ ೨

## ಪಾರ್ಶ್ವಪಂಡಿತ ವಿರಚಿತ ಶಾಸನಂ*

॥ ಓಂ ನಮಃ ಸಿದ್ಧೇಭ್ಯಃ ॥

ಶ್ರೀಮತ್ಪರಮಗಂಭೀರಸ್ಯಾದ್ವಾದಾಮೋಘಲಾಂಛನಂ ।
ಜೀಯಾತ್ತ್ರೈಲೋಕನಾಥಸ್ಯ ಶಾಸನಂ ಜಿನಶಾಸನಂ ॥

ಕಂ ॥ ಶ್ರೀ ಜನ್ಮಭೂಮಿ ವರಸುರ ।
ಭೂಜಂ ಕ್ಷೀರಾಂಬುರಾಶಿಯಂತೆ ಗಭೀರಂ ॥
ಶ್ರೀಜೈನ ಶಾಸನಂ ಸಲೆ ।
ರಾಜಿಸುತಿರ್ಕೆಮಳರಾಜಪೂಜಿತಮಹಿಮಂ ॥ ೧ ॥

ವಿಳಸಿತವಿಪುಳಾಮೃತಗೋ ।
ಕುಲದಿಂದಂ ಸಕಳಸಸ್ಯಸಂಪದದಿಂ ನಿ ॥
ರ್ಮಳವರ್ಣದಿಂದೆ ವಿಧುಮಂ ।
ಡಳದಂತಿರೆ ಕೂಂಡಿಮಂಡಳಂ ಕಣ್ಗೊಳಿಕುಂ ॥ ೨ ॥

ವ ॥ ಅದನಾಳ್ವಂ—

ಶಾ ॥ ಸೇನಂ ಸಾಹಸಭೀಮಸೇನನಸಕೃದ್ವಿದ್ಯಾವಿಳಾಸೇನನಾ ।
ಜ್ಞಾನಾರೀಪ್ರಿಯವಲ್ಲಭಂ ಪೃಥುಸಭಂ ತೀವ್ರಾಂಶುತೇಜಃಪ್ರಭಂ ॥
ನಾನಾದಾನಿ ದೃಢಾಭಿಮಾನಿ ರಣಭೂಸೇನಾನಿ ರಟ್ಟಾನ್ವಯ ।
ಶ್ರೀನೇತ್ರಂ ಬುಧಮಿತ್ರನುಜ್ಜ್ವಳಯಶಃಪಾತ್ರಂ ನೃಪಂ ರಂಜಿಪಂ ॥ ೩ ॥

ಆ ಸೇನಾವನಿಪಂಗಮಪ್ರತಿಮ ಲಕ್ಷ್ಮೀದೇವಿಗಂ ಪುಟ್ಟಿದಂ ।
ಭೂಸಂರಕ್ಷಣದಕ್ಷದಕ್ಷಿಣಭುಜಂ ವಿಧ್ವಸ್ತ ಶತ್ರುವ್ರಜಂ ॥
ತ್ರಾಸಾನಮ್ರನೃಪಾಳ ಪಾಳಿತ ಜಯಶ್ರೀಕೇಳಿ ಶಸ್ತ್ರಾನ್ವಿತಾ ।
ಭ್ಯಾಸಂ ಸೂನೃತವಾಗ್ವಿಳಾಸನವನೀನಾಥೋತ್ತಮಂ ಕತ್ತಮಂ ॥ ೪ ॥

ಕಂ ॥ ಆ ವಿಭುವಿನವಧು ಪದ್ಮಲ ।
ದೇವಿ ಕಳಾರೂಪ ವಿಭವ ಜಿನಮತದೊಳ್ವಾ ॥
ಗ್ದೇವಿ ರತಿದೇವಿ ಲಕ್ಷ್ಮೀ ।
ದೇವಿಶಚಿದೇವಿಯೆನಿಸಿ ಮಿಗೆ ಸೊಗಯಿಸುವಳ್ ॥ ೫ ॥

ಶ್ರೀಪತಿ ನಾ ವಿಷ್ಣುಃ ಪೃಥು ।
ವೀಪತಿಯೆನೆ ಲಕ್ಷ್ಮಿದೇವನೊಗೆದಂ ವಸುದೇ ॥
ವೋಪಮ ಕತ್ತಮವಿಭುಗಂ ।
ಶ್ರೀಪದ್ಮಲದೇವಿಯೆಂಬ ನುತದೇವಕಿಗಂ ॥ ೬ ॥

* Journal of the Bombay Branch of the Royal Asiatic Society. Vol. X, Pp. 220—228.

ಚಂ॥ ಪ್ರಕಟಿತ ತೇಜನನ್ವಯ ಸರೋಜಸಮೂಹವಿಕಾಸಿ ಸಜ್ಜನ ।
ಪ್ರಕರರಥಾಂಗ ಸಮ್ಮದಕರಂ ನಿಯತಾಭ್ಯುದಯಪ್ರಶೋಭಿತಾ ॥
ಧಿಕನಿಜಮಂಡಳಂ ಜಿತ ಕಳಂಕ ಪವಿತ್ರ ಚರಿತ್ರನಾಗಿ ಚಂ ।
ದ್ರಿಕೆಗಧಿನಾಥನಾದನಿದು ವಿಸ್ಮಯನಾ ಪ್ರಭು ಲಕ್ಷ್ಮಿಭೂಭುಜಂ ॥ ೭ ॥

ಉ॥ ಶ್ರೀಯುವತೀಶ ಹೇಮಗರುಡಧ್ವಜಮಂಡಿತಮಂಡಳೇಶನಾ ।
ರಾಯಣ ಲಕ್ಷ್ಮಣಂಗೆ ತನುಜರ್ಭುಜದಂತೆ ಧರೋರುಭಾರಧೌ ॥
ರೇಯರಸೂನದಾನಜಯ ಧರ್ಮಧರರ್ವಿಭು ಕಾರ್ತವೀರ್ಯಲ ।
ಕ್ಷ್ಮೀಯುತ ಮಲ್ಲಿಕಾರ್ಜುನ ಮಹೀಶ್ವರರಾದರತರ್ಕ್ಯವಿಕ್ರಮರ್ ॥ ೮ ॥

ಮ॥ ಪರಚಕ್ರಂ ನಿಜ ವಿಕ್ರಮಕ್ಕಗಿದು ತೇಜಃಚಕ್ರಮಂ ಬಿಟ್ಟು ಕೋ ।
ವರ ಚಕ್ರಕ್ಕೆಣೆಯಪ್ಪಿನಂತಿರಿವಿನಂ ದಿಕ್ಚಕ್ರಮಂ ವ್ಯಾಪಿಸು ॥
ತ್ತಿರೆ ಕೀರ್ತ್ಯಂಗನೆ ಕಾರ್ತವೀರ್ಯನಖಿಳೋರ್ವೀ ಚಕ್ರಮಂ ಚಕ್ರಿಯಂ ।
ತಿರೆ ದೋರ್ದಂಡದೊಳಾಂತನಚ್ಯುತಗುಣಂ ಶ್ರೀರಟ್ಟನಾರಾಯಣಂ ॥ ೯ ॥

ಉ॥ ಮೇರು ನಭಸ್ತಳಂ ಜಳಧಿ ಮತ್ಪತಿಯುನ್ನತಿಸನ್ಮಹತ್ತ್ವಗಂ ।
ಭೀರಗುಣಕ್ಕೆ ಮಚ್ಚರಿಪುವೆಂದಮರಾದ್ರಿಯನಿಕ್ಕೆಮೆಟ್ಟಿಯಾ ॥
ನೀರದ ಮಾರ್ಗಮಂ ಪುದಿದು ವಾರಿಧಿಯಂ ಮಿಗೆ ದಾಂಟಿ ಕೀರ್ತಿಯಾ ।
ಶಾರಮಣರ್ಗೆ ಬಣ್ಣಿಪುದು ಪೆಂಪಿನಲಂಪಿನೆ ಕಾರ್ತವೀರ್ಯನಾ ॥ ೧೦ ॥

ಊರ್ಜಿತತೇಜನಿರ್ಜಿತಯಶಂ ಪರಿತರ್ಜಿತ ರಾಷ್ಟ್ರಕಂಟಕಂ ।
ನಿರ್ಜಿತ ದುರ್ಜಯಾರಿನಿವಹಂ ಕಮಳಾಧಿಪನಂತೆ ದಾನಿನಾ ॥
ಗಾರ್ಜುನನಂತೆ ರಾವಣವಿದಾರಣ ಕಾರಣ ರಾಮನಂತೆ ಮಿ ।
ಕ್ಕರ್ಜುನನಂತೆ ರಂಜಿಪನಿಳೇಶಶಿಖಾಮಣಿ ಮಲ್ಲಿಕಾರ್ಜುನಂ ॥ ೧೧ ॥

ಕಂ॥ ಶ್ರೀಚಕ್ರವರ್ತಿತನುಜೆ ಕ ।
ಳಾಚತುರೆ ವಿಶಾಳಲೋಳಲೋಚನೆಯೆನಿಸಿ ॥
ದೇಚಲ ದೇವಿ ಸತೀತ್ವ ಸು ।
ಲೋಚನೆಯೆನೆ ಕಾರ್ತವೀರ್ಯವಧು ಪೆಸರ್ವಡೆದಳ್ ॥ ೧೨ ॥

ವ॥ ಸ್ವಸ್ತಿ ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರಂ ಲತ್ತನೂರ್ಪುರವರಾಧೀಶ್ವರಂ ತ್ರಿವಳೀ ತೂರ್ಯನಿರ್ಘೋಷಣಂ ರಟ್ಟ ಕುಲಭೂಷಣಂ ಸಿಂದೂರ ಲಾಂಛನಂ ಸಫಳೀಕೃತ ವಿದ್ವಜ್ಜನಾಭಿ ವಾಂಛನಂ ವೀರಕಥಾಕರ್ಣನಜಾತರೋಮಾಂಚಂ ಸಾಹಿತ್ಯವಿದ್ಯಾವಿರಿಂಚಂ ಸುವರ್ಣಗರುಡಧ್ವಜಂ ಸಹಜಮಕರಧ್ವಜಂ ಸಂಗ್ರಾಮ ಕೌತೂಹಳೀಕೃತ ಗದಾದಂಡಂ ಕದನಪ್ರಚಂಡಂ ಸಿಂಧುರಾರಾತಿ ಬಂಧುರಕಬಂಧ ನರ್ತನ ಸೂತ್ರಧಾರಂ ವೈರಿಮಂಡಳಿಕ ಗಂಡತಳಪ್ರಹಾರಂ ಪರವಧೂನಂದನಂ ವಿಭವ ಸಂಕ್ರಂದನಂ ಸಾಹಸೋತ್ತುಂಗಂ ಸಮಾರಾಧಿತ ಮಹಾಲಿಂಗನಿದು ಮೊದಲಾದನೇಕ ನಾಮಾವಳಿವಿರಾಜಿತಂ ಶ್ರೀಕಾರ್ತವೀರ್ಯದೇವಂ ನಿಜಾನುಜಯುವರಾಜ ವೀರಮಲ್ಲಿಕಾರ್ಜುನದೇವಂ ಬೆರಸು ವೇಣುಗ್ರಾಮಸ್ಕಂಧಾವಾರದೊಳ್ ಸುಖದಿಂ ಸಾಮ್ರಾಜ್ಯ ಲಕ್ಷ್ಮಿಯನನುಭವಿಸುತ್ತಮಿರೆ—

ಕಂ ॥ ಶ್ರೀಕವಿವಿಬುಧಸ್ತ್ರೀರ ।
ತ್ನಾಕಳಿತಂ ಜಳಧಿಯಂದದಿಂ ಯದುಕುಳಲ ॥
ಕ್ಷ್ಮೀಕಾಂತಂ ಶ್ರಿತಕಮಳಾ ।
ನೀಕಂ ಹಗರಟಗೆ ನಾಡು ಜಗದೊಳಗೆಸೆಗುಂ ॥ ೧೩ ॥

ವ ॥ ಆ ನಾಡನಾಳ್ವಂ—

ಮ ॥ ಯದುವಂಶಂ ಶ್ರಿತರಾಜಹಂಸವೆಸೆದಿರ್ಕುಂ ವ್ಯೋಮದಂತಲ್ಲಿಯು ।
ಭ್ಯುದಯಂ ಬೆತ್ತನುದಾತ್ತವೃತ್ತನುರುತೇಜಂ ಕೀರ್ತಿಭಾಜಂ ಸಮು ॥
ದ್ಯದಿಳೇಜ್ಯಂ ಸುಮನಃಪ್ರಪೂಜ್ಯನಮಳಸ್ವಾಂತಂ ಜಿತದ್ವಾಂತನೊ ।
ಪ್ಪಿದನಾದಂ ಕಮಳಾಧಿಪ ಪ್ರಭುತೆಯಿಂ ಶ್ರೀರೆಬ್ಬನುರ್ವೀಶ್ವರಂ ॥ ೧೪ ॥

ಶಾ ॥ ಆ ರೆಬ್ಬಪ್ರಭುವಿಂಗಮಗ್ರವಧು ಹೋಲಾದೇವಿಗಂ ಸ್ವಾನ್ವಯೋ ।
ದ್ಧಾರಂ ಧೀರನುದಾರನುದ್ಧಗುಣಸಾರಂ ಶುಂಭದಂಭೋದಿಗಂ ॥
ಭೀರಂ ವಾಗ್ವನಿತಾಸ್ತನಸ್ಥಗಿತಹಾರಂ ಸೌಖ್ಯಸಂಪಾದಕಾ ।
ಚಾರಂ ಬ್ರಹ್ಮನವೋಲತರ್ಕ್ಯಮಹಿಮಂ ಬ್ರಹ್ಮಾಹ್ವಯಂ ಪುಟ್ಟಿದಂ ॥ ೧೫ ॥

ಕಂ ॥ ಜಳನಿಧಿಗಭೀರಭೃತ ಭೂ ।
ವಳಯಬ್ರಹ್ಮಂಗಮುಚಿತವೇಳೋಪಮ ಚಂ ॥
ದಲದೇವಿಗವೊಗೆದಂ ಮಂ ।
ಡಳನಾಥಂ ರಾಜನಂದದಿಂ ರಾಜರಸಂ ॥ ॥ ೧೬ ॥

ಚಂ ॥ ಪುದಿದಿರೆ ರಾಗದಿಂ ಸಕಳ ಮಂಡಳಮಪ್ರತಿಮಪ್ರಸಾದ ಸಂ ।
ಪದಮಖಿಳಾಶೆಯಂ ನೆಱೆಯೆ ಪೂರಿಸಿ ಜೈನಮತಾಮೃತಾರ್ಣವಂ ॥
ಪದೆದಭಿವೃದ್ಧಿಯಂ ತಳೆಯೆ ತನ್ನ ಪೆಸರ್ಗನುರೂಪಮಾಗೆಯು ।
ಭ್ಯುದಯಮನೆಯ್ದಿಪ್ಪದಂ ವಿಮಳವೃತ್ತವಿರಾಜಿತರಾಜಭೂಭುಜಂ ॥ ॥ ೧೭ ॥

ಕ್ಷಿತಿಪತಿರಾಜರಾಜನ ಮನೋರಮೆ ಮೈಳಲದೇವಿತಾಂ ಯಶ ।
ಶ್ವತಿ ನುತಿಯೋಗ್ಯ ಭಾಗ್ಯವತಿ ದಾನದಯಾವತಿ ಸತ್ಕಳಾಸರ ॥
ಸ್ವತಿಯಭಿರೂಪರೂಪ ಮಳಯಾವತಿ ಜೈನಪದಾಂಬುಜಾರ್ಚನಾ ।
ವತಿ ಪುರುಪುಣ್ಯೆ ಪುತ್ರವತಿ ರಂಜಿಸುವಳ್ಸುವಿಶಾಳ ಶೀಳದಿಂ ॥ ॥ ೧೮ ॥

ಮ ॥ ಕುಳವಿಸ್ತಾರಕ ರಾಜರಾಜ ವಿಭುಗಂ ಶ್ರೀರೋಹಿಣೀಮೂರ್ತಿಮೈ ।
ಳಲಮಾದೇವಿಗಮಾತ್ಮಜರ್ಪತಿಹಿತ ಶ್ರೀಚಂದ್ರಿಕಾದೇವಿನಿ ॥
ರ್ಮಳರುಕ್ಚಂದ್ರಿಕೆಯಂತೆ ಸಿಂಹಮಹಿಪಂ ಸೌಮ್ಯಂ ಬೊಲಾದರ್ಮಹೀ ।
ತಳಪೂಜ್ಯರ್ವಿಭುಧೇಜ್ಯರುಜ್ವಳಗುಣ ಶ್ರೀಕಾಂತರಾತ್ಯಂತಿಕಂ ॥ ೧೯ ॥

ಚಂ ॥ ಅನುಪಮ ಶೌರ್ಯಶಾಳಿಯದುವಂಶ ಶಿರೋಮಣಿರಾಜರಾಜನಂ ।
ದನೆ ವಿಬುಧಾಭಿನಂದನೆ ಘಟೋದರ ಸುಸ್ಥಿತ ಸರ್ಪದರ್ಪ ಭಂ ॥
ಜನೆ ಪತಿಚಿತ್ತರಂಜನೆ ಜಗನ್ನುತ ಜೈನಮತಾಮೃತಾಬ್ಧಿ ವ ।
ರ್ಧನಕರಚಾರುಚಂದ್ರಿಕೆ ಮಹಾಸತಿಚಂದ್ರಿಕೆ ಧನ್ಯೆಧಾತ್ರಿಯೊಳ್ ॥ ೨೦ ॥

ಉ ॥ ಶ್ರೀಪತಿ ಲಕ್ಷ್ಮಿದೇವಮಹಿವಲ್ಲಭವಲ್ಲಭೆ ಕಾರ್ತವೀರ್ಯಧಾ ।
ತ್ರೀಪತಿ ಮಲ್ಲಿಕಾರ್ಜುನ ಮಹೀಶರ ಮಾತೃ ಮಹಾಸತೀತ್ವಸೀ ॥
ತೋಪಮೆ ಜೈನಪೂಜನಸುರೇಂದ್ರ ವಧೂಪಮೆ ರೂಪಕಂತುಕಾಂ ।
ತೋಪಮೆ ರಂಜಿಪಳ್ಳಿಗಟ್ಟಿ ಚಂದಲದೇವಿ ಸಮಸ್ತಧಾತ್ರಿಯೊಳ್ ॥ ೨೧ ॥

ಮ ॥ ಸ್ಫುರಿತಾನರ್ಘ್ಯಮಣಿ ಪ್ರಣೂತ ಕಟಿತ ಪ್ರಖ್ಯಾತದಾನೇಂದ್ರ ಭೂ ।
ಮಿರುಹೋರ್ವೀತಳಧಾರಿ ತುಂಗಶಿಖರ ಶ್ರೀಮದ್ಭುಜಾದಂಡಮಂ ॥
ದರದಿಂ ವೈರಿಬಳಾಬ್ಧಿಯಂ ಮಥಿಯಿಸುತ್ತುದ್ಯಜ್ಜಯಶ್ರೀವಧೂ ।
ವರನಾದಂ ಯದುವಂಶಭಾಳತಿಳಕಂ ಸಿಂಹಾವನೀಪಾಳಕಂ ॥ ೨೨ ॥

ಸಬಳಂಗೊಂಡು ಸಮಗ್ರ ಸಿಂಹಮಹಿಪಂ ಮೇಲ್ವಾಯಿಸಲ್ವಾಜಿಯುಂ ।
ಸಬಳಂ ವೈರಿಬಲಂ ಜಪಂಗೆ ಕಬಳಂ ಬೇತಾಳ ಜಾಳಕ್ಕೆ ಕೊ ।
ಟ್ಟ ಪಿರಿ ಶ್ರೋಣಿಬಳಾರಿಗಿತ್ತ ಬಡಿನಂ ಹಾರ್ದಿರ್ದ ಹರ್ದಂಗೆ ಬೇ ।
ರ್ದಾವೃತಕ್ಕೆತ್ತಿದ ಬುತ್ತಿಯೆಂದೊಡಹಿತಮ್ರ್ಕಯ್ದ್ವೀಜಿಮಾಜಾಂಪರೇ॥೨೪॥(?)

ಚಂ ॥ ಜನಪತಿಸಿಂಗಿದೇವನ ಮನಃಪ್ರಿಯೆ ಭಾಗಲದೇವಿ ಭಾಗ್ಯವೋ ।
ದಿನಿ ಗುಣಯೂಥನಾಥ ಮುನಿದಾನವಿನೋದಿನಿ ಸಂಶ್ರಿತಾರ್ತಿಭೇ ॥
ದಿನಿ ವಿಬುಧಪ್ರಮೋದಿನಿ ಕಳಾಗಮವೇದಿನಿ ನಿತ್ಯಸತ್ಯವಾ ॥
ದಿನಿ ದುರಿತಾಪನೋದಿನಿ ಪತಿವ್ರತೆ ಪೂಜಿತರೂಪೆ ರಂಜಿಪಳ್ ॥ ೨೪ ॥

ಉ ॥ ಭೋಗ ಪುರಂದರಪ್ರತಿಮ ಸಿಂಹಮಹೀಪತಿಗಂ ಜಿನಾರ್ಚನೋ ।
ದ್ಯೋಗಸಚೀಚರಿತ್ರವತಿ ಭಾಗಲದೇವಿಗಮಾದನಾತ್ಮಜಂ ॥
ರಾಗಸಮಾಗಮಪ್ರದಸುಮೂರ್ತಿ ಜಯಂತನತಿಪ್ರಸಿದ್ಧ ಜೈ ।
ನಾಗಮವಾರ್ಧಿವರ್ಧನ ಕಳಾನಿಧಿ ರಾಜರಸಂ ಸಮಂಜಸಂ ॥ ೨೫ ॥

ಮ ॥ ಜಿನಪೂಜಾವಿಬುಧಾಧಿಪಂ ವಿಪುಳತೇಜಂ ಪ್ರಾಪ್ತಧರ್ಮಪ್ರಭಾ ।
ವನಯಂ ಪುಣ್ಯಜನೋತ್ತಮಂ ಗುಣಗಣಾಂಭೋರಾಸಿ ವೈರಿಪ್ರಭಂ ॥
ಜನನುರ್ವೀಧನದಂ ಮಹೀಶ್ವರನೆನಿಪ್ಪೀಪೆಂಪಿನಿಂ ಲೋಕಪಾ ।
ಳನಿವಂ ರಾಜರಸಂ ಜಗದ್ವಳಯಮಂ ಪಾಳಿಪ್ಪುದೇನೊಪ್ಪದೇ ॥ ೨೬ ॥

ಚಂ ॥ ಕ್ಷಿತಿಸಲೆಕೂರ್ತು ಕೀರ್ತಿಪುದು ಮೂರ್ತಿ ಮನೋಭವರಾಜನಂ ಸಮ ।
ರ್ಚಿತಜಿನರಾಜನಂ ಯದುಕುಳಾಮೃತವಾರಿಧಿ ರಾಜನಂ ಸಮು ॥
ನ್ನತಿ ಗಿರಿರಾಜನಂ ಗುಣವಿರಾಜಿತರಾಜಿತನೂಜ ಸಿಂಹಭೂ ।
ಪತಿ ಸುತರಾಜನಂ ವಿಷಮವಾಜಿ ಸುಶಿಕ್ಷಣ ವತ್ಸರಾಜನಂ ॥ ೨೭ ॥

ಉ ॥ ಪಿಂಗದವಾರ್ಯಕಾರ್ಯಮಸುಹೃನ್ನರಲೋಕಜಗದ್ವಳಂಗೆರಾ ।
ಜಂಗೆ ಜಗತ್ಪ್ರವೇದ ಜನಕಾಭ್ಯುದಯಂ ಯದುವಂಶ ಸಂಭವೋ ॥
ತ್ತುಂಗ ಗುಣಾಚ್ಯುತಂಗೆ ವಿಜಯಪ್ರಿಯವೃತ್ತಿ ನೃಪಾಳಸಿಂಹಜಾ ।
ತಂಗೆ ಪರಾಕ್ರಮಂ ಪೊಸತೆ ಬಣ್ಣಿಸುವಂದು ಸಮಸ್ತ ಧಾತ್ರಿಯೊಳ್ ॥ ೨೮ ॥

ಉ ॥ ದ್ಯೂತಮೃಗವ್ಯಿ ಮಾಂಸಗಣಿಕಾ ಪರದಾರ ಖಳಪ್ರಸಂಗಚೌ ।
ರ್ಯಾತುಳ ಮಲ್ಲಮೇಷಖಗಯುದ್ಧನಿಷಿದ್ಧ ವಿನೋದನೋದ್ಯತ ॥
ಭೂರ್ತಳನಾಥರಪ್ಪರದು ಮಾಣ್ದು ಜಿನಸ್ತವನಾರ್ಚನಾಮಹೀ ।
ಖ್ಯಾತಮುನೀಂದ್ರದಾನರತರಪ್ಪರೆ ರಾಜನೃಪಾಳ ನಿನ್ನವೋಲ್ ॥ ೨೯ ॥

ಕಂ ॥ ಸತಿ ಚಂದಲದೇವಿ ಪತಿ ।
ವ್ರತೆ ಲಕ್ಷ್ಮೀದೇವಿಯೆಂಬರೀರ್ವರುಮವನೀ ॥
ಪತಿರಾಜ ನೃಪನ ರಾಣಿಯು ।
ರತಿಶಯ ಗುಣಯುತೆಯರೆನಿಸಿನೆಗಟ್ದರ್ಜಗದೊಳ್ ॥ ೩೦ ॥

ವ ॥ ಸ್ವಸ್ತಿ ಸಮಸ್ತ ಪ್ರಶಸ್ತಿಸಹಿತ ಶ್ರೀಮನ್ಮಹಾಮಂಡಳೇಶ್ವರಂ ಕುಪಣಪುರ ವರಾಧೀಶ್ವರಂ ಯದುಕುಳಾಂಬರದ್ಯುಮಣಿ ಬುಧಜನಚಿಂತಾಮಣಿ ನಿಜಭುಜಾಸಿನಿರ್ದಳಿತ ರಿಪುನೃಪಕಂಟಕದಳಂ ನರಲೋಕ ಜಗದ್ದಳಂ ಅನವರತ ಜಿನಸವನಸುರಭಿ ಸಲಿಲಪವಿತ್ರೀ ಕೃತೋತ್ತಮಾಂಗಂ ಧರ್ಮಕಥಾಪ್ರಸಂಗಂ ಜಿನಸಮಯ ಸುಧಾರ್ಣವ ಸುಧಾಕರಂ ಸಮ್ಯಕ್ತ್ವರತ್ನಾಕರನೆನಿಸಿ ನೆಗಟ್ದ—

ಉ ॥ ಕ್ಷತ್ರಿಯಮಸ್ತಕಾಭರಣ ರಾಜನೃಪಂ ವಿಭುಸಿಂಹಸೂನು ರ ।
ತ್ನತ್ರಯ ಮೂರ್ತಿ ನಿರ್ಮಳಿನ ಧರ್ಮಮೆನುತ್ತದನೊಲ್ದು ಪೇಟ್ದವೋ ॥
ಲ್ಥಾತ್ರಿಗೆ ಮಿಕ್ಕ ಕಲ್ಪೊಳೆಯೊಳೆತ್ತಿಸಿದಂ ಜಿನಶಾಂತಿಗೇಹಮಂ ।
ನೇತ್ರವಿಚಿತ್ರಮಂ ಮಹಿಕಿರೀಟಮನಪ್ರತಿಮತ್ರಿಕೂಟಮಂ ॥ ೩೧ ॥

ವ ॥ ಅಂತನಂತಸುಖಶ್ರೀಕಾಂತಂ ಶಾಂತಿನಾಥ ಸಮುತ್ತುಂಗ ಭೃತ್ಯನಿಧಾನಮಂ ಕನಕಕಳಶಮಕರತೋರಣಮಾನಸ್ತಂಭವಿರಾಜಮಾನಮಂ ರಾಜರಸಂ ಸಿಂದನ ಕಲ್ಪೊಳೆಯಲ್ಲಿ ಮಾಡಿಸಿ ತನ್ನ ಗುರುಗಳುಂ ಜಗದ್ಗುರುಗಳುಮೆನಿಸಿದ ಶುಭಚಂದ್ರ ಭಟ್ಟಾರಕ ದೇವರ್ಗೆ ಕೊಟ್ಟನವರ ಗುರುಕುಳಕ್ರಮಮೆಂತೆನೆ—

ಕಂ ॥ ಜಯನಿಳಯ ಕುಂದ ಕುಂದಾ ।
ನ್ವಯ ವಿಶ್ರುತಮೂಲಸಂಘದೇಶಿಕ ಪೂರ್ಣೋ ॥
ದಯ ಪುಸ್ತಕಗಚ್ಛದೊಳತಿ ।
ಶಯಮೆನೆ ಹನಸೋಗೆಯೆಂಬ ಬಟಿ ಬಗೆಗೊಳಿಕುಂ ॥ ೩೨ ॥

ಗುರುಕುಳತಿಳಕಪಾರ್ವನ ।
ಚರಿತಗುರ್ಣಭರಿತರಲ್ಲಿ ನೆಗಟ್ದರ್ವಿಜಿತ ॥
ಸ್ಮರಮಲಧಾರಿಮುನೀಂದ್ರ ।
ರ್ಚರಣಾಂಬುಜನತನರೇಂದ್ರರಪಗತತಂದ್ರರ್ ॥ ೩೩ ॥

ಚ ॥ ಪದನಖಸಂಕುಳಂ ವಿಷಮಬಾಣ ವಿಷಾಹಿಮಹಾವಿಷಾಪಹಾ ।
ರದಮಣಿ ನಾಮದಕ್ಕರಮೆ ಮೋಹಪಟುಗ್ರಹಭೇದಿ ಮಂತ್ರಮಂ ॥
ಗದ ಮಳಮಾಜವಂ ಜವರುಜಾಹರಣೌಷಧಮೆಂದೊಡೇನನೆಂ ।
ಬುದೊ ಮಲಧಾರಿದೇವಮುನಿಪೋತ್ತಮ ಭಾವತಪಃಪ್ರಭಾವಮಂ ॥ ೩೪ ॥

ಉ ॥ ಶಾಂತರಸಾವತಾರ ಮಲಧಾರಿ ಮುನೀಶ್ವರರಗ್ರಶಿಷ್ಯ ಸೈ ।
ದ್ಧಾಂತಿಕ ನೇಮಿಚಂದ್ರನುರುಧರ್ಮರಥ ಶ್ರುತವಾರ್ಧಿ ನೇಮಿಚಂ ॥
ದ್ರಂ ತಮಮಂ ನಿವಾರಿಪ ಕಳಾಗುಣಭದ್ರನಮಾನುಷಾಮೃತ ।
ಸ್ವಾಂತ ಸಮಂತಭದ್ರನೆನೆ ಬಣ್ಣಿಪರಾರಕಳಂಕವೃತ್ತನಂ ॥ ೩೫ ॥

ಶಾ ॥ ಆ ಸೈದ್ಧಾಂತಿಕ ನೇಮಿಚಂದ್ರಯತಿವರ್ಯಾಚಾರ್ಯ ಶಿಷ್ಯರ್ಗುಣಾ ।
ವಾಸ ಶ್ರೀಶುಭಚಂದ್ರಭಾಸುರಯಶೋಭಟ್ಟಾರಕರ್ವಿಶ್ವಧಾ ॥
ತ್ರೀ ಸಂಪೂಜಿತ ಶೀಳಧಾರಕರುದಗ್ರಾನಂಗ ಸಂಹಾರಕ ।
ಶ್ರೀಸದ್ದರ್ಶನ ಬೋಧವೃತ್ತ ಪದವೀ ವಿಸ್ತಾರನಿಸ್ತಾರಕರ್ ॥ ೩೬ ॥

ಮ ॥ ಶುಭಚಂದ್ರಂ ಸ್ವಗುಣೋಲ್ಲಸತ್ಕುವಳಯಂ ಶ್ರೀಚಂದ್ರಿಕಾ ಶುದ್ಧವೃ ।
ತ್ತಿಭವ ಪ್ರಾಭವದಿಂ ದಿಗಂಬರಕುಳ ಶ್ರೀವೃದ್ಧಿಯಂ ಮಂಡಳ ॥
ಪ್ರಭು ಸಂಪೂಜಿತ ಪಾದನುಜ್ವಳ ಗುಣಾಢ್ಯಂ ಶಾಂತರೂಪಂ ಕಳಾ ।
ವಿಭವಾತ್ಯುನ್ನತವೃತ್ತನಭ್ಯುದಯಯುಕ್ತಂ ಮಾಱ್ಪುದೇನೊಪ್ಪದೇ ॥ ೩೭ ॥

ಉ ॥ ಮಾರಮದಾಪಹಾರಿ ಪರಮೋಗ್ರತಪಶ್ಶುಭಚಂದ್ರದೇವಭ ।
ಟ್ಟಾರಕಶಿಷ್ಯರೀ ಲಲಿತಕೀರ್ತಿ ಸಮುನ್ನತ ನಾಮಧೇಯಭ ॥
ಟ್ಟಾರಕರಿಂದು ಸಲ್ಲಲಿತಕೀರ್ತಿಗಳನ್ವಿತಶಾಂತಮೂರ್ತಿಗಳ್ ।
ಸಾರಚತುಷ್ಟಯಾರ್ಥಚಯವೇದಿಗಳುತ್ತಮ ಸತ್ಯವಾದಿಗಳ್ ॥ ೩೮ ॥

ವ ॥ ಸ್ವಸ್ತಿ ಸಮಸ್ತಗುಣಸಂಪನ್ನರುಂ ಭವ್ಯಪ್ರಸನ್ನರುಂ ಚಂದಲದೇವೀವಂದಿತ ಪದಾರವಿಂದರುಂ ನಿಜಾತ್ಮಭಾವನಾಗೀಱ್ಪಿಂಡರುಂ ಶ್ರೀರಾಜನೃಪಾಳ ಸುಪ್ರತಿಷ್ಠಿತ ಶಾಂತಿನಾಥದೇವರ ಬಸದಿಯಾಚಾರ್ಯರುಂ ಮಂಡಳಾಚಾರ್ಯರುಮಪ್ಪ ಶುಭಚಂದ್ರ ಭಟ್ಟಾರಕದೇವರ್ಗೆ ಶ್ರೀಕಾರ್ತವೀರ್ಯದೇವಂ ಆ ಶಾಂತಿನಾಥದೇವರಂಗಭೋಗಕ್ಕಂ ರಂಗಭೋಗಕ್ಕಮಾ ಬಸದಿಯ ಖಂಡಸ್ಫುಟಿತ ಜೀರ್ಣೋದ್ಧರಣಕ್ಕಮಲ್ಲಿರ್ಪ ಮುನಿಜನಂಗಳಾಹಾರಾಭಯಭೈಷಜ್ಯಶಾಸ್ತ್ರದಾನಕಂ ಶಕವರ್ಷಂ ೧೧೨೭ನೆಯ ರಕ್ತಾಕ್ಷಿ ಸಂವತ್ಸರದ ಪೌಷ್ಯಶುದ್ಧ ಬಿದಿಗೆ ಶನಿವಾರದಂದುತ್ತರಾಯಣ ಸಂಕ್ರಮಣದಲ್ಲಿ ಕೂಂಡಿ ಮೂಱುಸಾಸಿರದ ಬಟಿಯ ಕುಱುಂಬೆಟ್ಟ ಗಂಪಣದೊಳಗಣಸಿಂದನ ಕಲ್ಪೊಳೆಯಲ್ಲಿಯ ಕಳಗಡಿಯರ ಸಿಂದಗಾಂವುಂಡಂ ಮುಖ್ಯವಾಗಿ ಹನ್ನಿೇರ್ಬಗಾರ್ವುಂಡುಗಳಱಿಯೆ ಹನ್ನೆರಡು ತಪ್ಪಡಿಯ ಕುಱುಂಬೆಟ್ಟ ಗೋಲಿಂದೆರಡು ಸಹಸ್ರ ಕಂಬಕೆಯ್ಯಂ ಧಾರಾಪೂರ್ವಕಂ ಸರ್ವನಮಸ್ಯವಾಗಿ ಕೊಟ್ಟನಾಕೆಯ್ಯ ಸೀಮೆ [।] ಊರಿಂ ಬಡಗಲ್ ಕಂಕಣನೂರ ಹೆದ್ದಾರಿಯಿಂ ಮೂಡಲವಿಲ್ಕಹಳ್ಳದ ಮುರುವಿನಲ್ಲಿ ನೈರೃತ್ಯದ ಕೋಣೊಳ್ನಟ್ಟ ಕಲ್ಲಲ್ಲಿಂ ಬಡಗಮುಖಂ ಬಿಳಿಯ ಬಾವಿಯಿಂ ಮೂಡಲಾಗಿ ಪಡುವಣ ಸೀಮೆ ನಡಿಯಲ್ಕೆಂ ಮೊರಡಿಯಲ್ಲಿ ವಾಯುವ್ಯದ ಕೋಣೊಳ್ನಟ್ಟ ಕಲ್ಲಲ್ಲಿಂ ಮೂಡಮುಖಂ ಬಡಗಣ ಸೀಮೆ ನಡಿಯಲೀಶಾನ್ಯದ ಕೋಣೊಳ್ನಟ್ಟ ಕಲ್ಲಲ್ಲಿಂ ತೆಂಕಮುಖಂ ಪಂಚವಸದಿಯ ಮಾನ್ಯದಿಂ ಪಡುವಲಾಗಿ ಮೂಡಣ ಸೀಮೆ ನಡಿಯಲ್ ನವಿಲ ಹಳ್ಳದಲ್ಲಿ ಆಗ್ನೇಯ ಕೋಣೊಳ್ನಟ್ಟ ಕಲ್ಲಲ್ಲಿಂ ಪಡುಮುಖಂ ತೆಂಕಣಸೀಮೆ ನವಿಲ ಹಳ್ಳಂ [॥] ಆ ಬಸದಿಯ ಸಂಬ(ಮ)ಂಧದ ಮನೆಯ ನಿವೇಶನವಿಂಮೊಳನುಂ ಗೇಣು [।] ಬಾಚೆಯ

ವಿಡಿಯ ರಾಜಹಸ್ತದಲ್ ಬಸದಿಯಿಂ ಬಡಗಲ್ ರಾಜವೀಥಿಯಿಂ ಮೂಡಲ್ ಪಡುವೆಣೆಕ್ಕೆಯ ಹಸ್ತಂ ನಾಲ್ವತ್ತು ಸಿರಿವಾಗಿಲ ಕಲ್ಲಿಂಮೂಡಲ್ ಪಂಚವಸದಿಯ ಕೇರಿಯಲ್ಲಿಗೆ ಬಡಗಣೆಕ್ಕೆಯ ಹಸ್ತವಿಪತ್ತಾಱು ಆಕೇರಿಯಿಂ ಪಡುವಣಭಾಗಂ ಬಿಡಿದು ಮೂಡಣೆಕ್ಕೆಯ ಹಸ್ತ ನಾಲ್ವತ್ತು ತೆಂಕಣೆಕ್ಕೆಯ ಹಸ್ತ ಐವತ್ತೆರಡಾ ಮಾನ್ಯದೊಳಗಣಂಗಡಿ ನಾಲ್ಕು ಗಾಣವೊಂದಾ ಬಸದಿಯ ಬಣಬೆಯ ನಿವೇಶನವಯ್ದು [ । ] ಊರಿಂ ಪಡುವಲ್ ಹೂದೋಂಟದ ಕಂಬಂ ಮೂವತ್ತು [ ॥ ] ಮತ್ತಮೂವೂರ ಸಂತೆಯಂ ಮೂಡಲ್ ವೇಡಿ ಬೆಳಗಲೆ ಮುಖ್ಯವಾಗಿ ನಾಲ್ಕುಂ ಪಟ್ಟಣದ ಸೆಟ್ಟಿಯರುಂ ಮಹಾನಾಡಾಗಿ ನೆರೆದಿರ್ದಲ್ಲಿ ಆಶಾಂತಿನಾಥದೇವರ ನಿತ್ಯಾಭಿಷೇಕಕ್ಕಮಷ್ಟವಿಧಾರ್ಚನೆಗಂ ಸರ್ವಬಾಧಾಪರಿಹಾರವಾಗಿ ಬಿಟ್ಟ ಎತ್ತು ಕತ್ತೆ ಕೋಣಂ ಮೊದಲಾದಇಱುವತ್ತು ೬೦ ॥ ಮತ್ತಮೋಱುವರೆ ಹಂನೊಂದು ವರೆಯ ಸಮಸ್ತ ಮುಂಮುರಿದಂಡಂ ಮುಖ್ಯವಾಗಿ ನಾಡುಗಳ್ ಬಿಟ್ಟಾಯದ ಕ್ರಮಮೆಂತೆಂದೊಡೆ [ । ] ಸಕಳ ಧಾನ್ಯಮಾವುದು ಬಂದಡಂ ಹೇಱಿಂ ಗೊಂಮನಂ [ । ] ಭಂಡಿಗೆ ಬಳ್ಳವೆರಡು [ । ] ಹಸರಕ್ಕಡಕೆ ಅಯ್ದು [ । ] ಹೇಱಿಂಗೆಲೆ ನೂಱು [ । ] ಹೊತ್ತಳ ಕಯ್ಪತ್ತು [ । ] ಹಾಡರ್ಕೆಸೊಲ್ಲಿಗೆ ಎಂಣೆ [ । ] ಒಲೆಯ ಹೊಣೆ ಮಾಱಿತಕ್ಕೆ ಒಂದು ಕಟ್ಟೊಲೆ [ । ] ಕಿಱುಕುಳವೇನು ಮಾಱಿದಡಂ ಸಟ್ಟುಗಾಯಂ ಹಿಡಿವತ್ತಿ [ । ] ಕಂಪೆಗೆ ಮಡಿಕೆ ಒಂದು ॥

ಶಾ ॥ ಶ್ರೀಜನ್ಮಾಯತ ಮೂರ್ತಿ ತೀರ್ಥಮಹಿಮಾವಿಸ್ತಾರಿ ಧಾತ್ರಿಸ್ಫುರ ।
ತ್ತೇಜಶ್ಚಕ್ರಧರಂ ಜಗಂನುತಯಶಂ ತಂನಂದದಿಂದೆಂದುರಾ ॥
ರಾಜಿಪ್ಪೀ ಜಿನಶಾಂತಿನಾಥನವನೀನಾಥ ಪ್ರಣೂತೋದಯಂ ।
ರಾಜಕ್ಷ್ಮಾಪತಿಗೀಗೆ ಬೇಲ್ಪ ವರವಂ ಚಂದ್ರಾರ್ಕತಾರಂಬರಂ ॥ ೩೯ ॥

ಕಂ ॥ ಲಲಿತ ಪದಾರ್ಥಾಳಂಕೃತಿ ।
ಗಳಿನೊಸರ್ವ ರಸಂಗಳಿಂದೆ ಬುಧರೊಳ್ಪುಳಕಾ ॥
ವಳಿ ಸಸ್ಯಮೊಗೆಯೆ ಕವಿಕುಳ ।
ತಿಳಕಂ ಶಾಸನಮನೊಲ್ದು ಪೇಲ್ದಿಂ ಪಾರ್ಶ್ವಂ ॥ ೪೦ ॥

ಬಹುಭಿರ್ವಸುಧಾದತ್ತಾ ರಾಜಭಿಸ್ಸಗರಾದಿಭಿ: [ । ] ಯಸ್ಯಯಸ್ಯಯದಾ ಭೂಮಿಃ ತಸ್ಯ ತಸ್ಯ ತದಾಫಲಂ ॥ ಗಣ್ಯಂತೇ ಪಾಂಸವೋ ಭೂಮೇರ್ಗ್ಗಣ್ಯಂತೇ ವೃಷ್ಟಿ ಬಿಂದವಃ [ । ] ನಗಣ್ಯತೇ ವಿಧಾತ್ರಾಪಿ ಧರ್ಮಸಂರಕ್ಷಣೇ ಫಲಂ ॥ ಸ್ವದತ್ತಾಂ ಪರದತ್ತಾಂವಾ ಯೊ ಹರೇತವಸುಂಧರಾಂ [ । ] ಷಷ್ಟಿರ್ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿ: [ ॥ ] ಸಾಮಾನ್ಯೋಯಂ ಧರ್ಮಸೇತುರ್ನೃಪಾಣಾಂ ಕಾಲೇಕಾಲೇ ಪಾಲನೀಯೋ ಭವದ್ಭಿಃ[ । ] ಸರ್ವಾನೇತಾನ್ಭಾವಿನಃ ಪಾರ್ಥಿವೇಂದ್ರಾ ನ್ಭೂಯೋ ಭೂಯೋ ಯಾಚತೇ ರಾಮಚಂದ್ರಃ॥ ಮದ್ವಂಶಜಾಃ ಪರಮಹೀಪತಿವಂಶಜಾ ವಾ ಪಾಪಾದಪ್ರೇತಮನಸಾ ಭುವಿ ಭೂಮಿಪಾಲಾ ಯೇ ಪಾಳಯನ್ತಿಮಮ ಧರ್ಮಮಿಮಂ ಸಮಗ್ರಂ ತೇಭ್ಯೋ ಮಯಾ ವಿರಚಿತಾಂ (ತೋಂ) ಜಳಿರೇಷಮೂರ್ದ್ಧ್ನಿ ॥ ಮಂಗಳ ಮಹಾಶ್ರೀಶ್ರೀ [ ॥ ] ಅರ್ಹತೇ ನಮಃ ॥